# ಘನತ್ಯಾಜ್ಯ ನಿರ್ವಹಣೆಯ ಆರ್ಥಿಕತೆ

## (ದಕ್ಷಿಣ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

ಪುರುಷೋತ್ತಮ ಕೆ.ವಿ.

ಮಾರ್ಗದರ್ಶಕರು

ಡಾ. ಜನಾರ್ದನ

ಸಹಾಯಕ ಪ್ರಾಧ್ಯಾಪಕರು

ಅಭಿವೃದ್ಧಿ ಅಧ್ಯಯನ ವಿಭಾಗ






ಅಭಿವೃದ್ಧಿ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೮

# ಘನತ್ಯಾಜ್ಯ ನಿರ್ವಹಣೆಯ ಆರ್ಥಿಕತೆ

## (ದಕ್ಷಿಣ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
**ಪುರುಷೋತ್ತಮ ಕೆ.ವಿ.**

ಮಾರ್ಗದರ್ಶಕರು
**ಡಾ. ಜನಾರ್ದನ**
ಸಹಾಯಕ ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ





ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩ ೨೭೬

೨೦೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

**ಪುರುಷೋತ್ತಮ** ಕೆ.ವಿ. ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಘನತ್ಯಾಜ್ಯ ನಿರ್ವಹಣೆಯ ಆರ್ಥಿಕತೆ (ದಕ್ಷಿಣ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

100818

**ಡಾ. ಜನಾರ್ದನ**
ಸಹಾಯಕ ಪ್ರಾಧ್ಯಾಪಕರು
**ಅಭಿವೃದ್ಧಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** 10.08.2018

## ಸಂಶೋಧಕರ ಘೋಷಣಾ ಪತ್ರ

**ಘನತ್ಯಾಜ್ಯ ನಿರ್ವಹಣೆಯ ಆರ್ಥಿಕತೆ (ದಕ್ಷಿಣ ಕನ್ನಡ ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ **ಡಾ. ಜನಾರ್ದನ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ಪುರುಷೋತ್ತಮ ಕೆ.ವಿ.**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
**ಅಭಿವೃದ್ಧಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ** : ವಿದ್ಯಾರಣ್ಯ
**ದಿನಾಂಕ** : 10.8.2018

# ಪರಿವಿಡಿ


**ಅಧ್ಯಾಯ: ಒಂದು**

**ವಿಷಯ ಪ್ರವೇಶ** **1–32**

1.1 ಸಮಸ್ಯೀಕರಣ ಮತ್ತು ಸಂಶೋಧನಾ ಪ್ರಶ್ನೆಗಳು

1.2 ಅಧ್ಯಯನದ ಉದ್ದೇಶಗಳು

1.3 ಅಧ್ಯಯನದ ವಿಧಾನಗಳು

1.4 ಅಧ್ಯಯನದ ವ್ಯಾಪ್ತಿ

1.5 ಅಧ್ಯಯನದ ಪ್ರಾಮುಖ್ಯತೆ

1.6 ಅಧ್ಯಯನದ ಮಿತಿಗಳು

1.7 ಅಧ್ಯಾಯಗಳ ವಿನ್ಯಾಸ

**ಅಧ್ಯಾಯ: ಎರಡು**

**ಸಾಹಿತ್ಯ ಪರಾಮರ್ಶನ** **33–86**

2.1. ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನಕ್ಕೆ ಸಂಬಂಧಿಸಿದ ಸಾಹಿತ್ಯ ವಿಮರ್ಶೆ

2.2. ತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳ ಕುರಿತಾದ ಸಾಹಿತ್ಯ ವಿಮರ್ಶೆ

2.3. ತ್ಯಾಜ್ಯ ನಿರ್ವಹಣೆಯ ನೀತಿ ನಿಯಮಾವಳಿಗಳ ಬಗೆಗಿನ ಸಾಹಿತ್ಯ ವಿಮರ್ಶೆ

**ಅಧ್ಯಾಯ: ಮೂರು**

**ಅಧ್ಯಯನದ ಪ್ರದೇಶ ಪರಿಚಯ** **87–115**

3.1. ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ

3.2. ಭೌಗೋಳಿಕ ಪರಿಚಯ

3.3. ಜನಸಂಖ್ಯಾ ಚಿತ್ರಣ

3.4. ಆರ್ಥಿಕತೆ ಮತ್ತು ಮೂಲ ಸೌಲಭ್ಯಗಳು

3.5. ಮಾನವ ಅಭಿವೃದ್ಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ

**ಅಧ್ಯಾಯ: ನಾಲ್ಕು**

**ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ**
**ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನ** **116–189**

4.1 ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನ

4.2 ಗ್ರಾಮೀಣ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನ.

4.3 ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ವಿಶ್ಲೇಷಣೆ.

4.4 ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ಬಗ್ಗೆ ಜನರ ಪ್ರತಿಕ್ರಿಯೆ

**ಅಧ್ಯಾಯ: ಐದು**

**ಘನತ್ಯಾಜ್ಯ ನಿರ್ವಹಣೆಯ ಸಾಮಾಜಿಕ**
**ಮತ್ತು ಆರ್ಥಿಕ ಆಯಾಮಗಳು** **190–219**

5.1. ಘನತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಆಯಾಮಗಳು

5.2. ಘನತ್ಯಾಜ್ಯ ನಿರ್ವಹಣೆಯ ಆರ್ಥಿಕ ಆಯಾಮಗಳು

**ಅಧ್ಯಾಯ: ಆರು**

**ತ್ಯಾಜ್ಯ ನಿರ್ವಹಣಾ ನೀತಿ** **220–261**

6.1. ಅಂತಾರಾಷ್ಟ್ರೀಯ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

6.2. ಭಾರತದಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

6.3. ಕರ್ನಾಟಕದಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

6.4. ಅಧ್ಯಯನ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

6.5. ಅಧ್ಯಯನ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳಿಗೆ ಸಂಬಂಧಿಸಿದ ವಿಶ್ಲೇಷಣೆ

**ಅಧ್ಯಾಯ: ಏಳು**

**ಅಧ್ಯಯನದ ಫಲಿತಗಳು** **262–284**

7.1 ಅಧ್ಯಯನದ ಫಲಿತಗಳು

7.2 ಸಲಹೆ ಸೂಚನೆಗಳು

7.3 ಸಂಶೋಧನಾ ಅವಕಾಶಗಳು

7.4 ಕೊನೆ ಮಾತು

**ಅನುಬಂಧಗಳು** **285–319**

1. ಪ್ರಶ್ನಾವಳಿಗಳು

2. ಪರಾಮರ್ಶನ ಗ್ರಂಥಗಳು

# ಕೋಷ್ಟಕಗಳು


| ಅಧ್ಯಾಯ ಸಂಖ್ಯೆ | ಕೋಷ್ಟಕ ಸಂಖ್ಯೆ | ಕೋಷ್ಟಕದ ಹೆಸರು | ಪುಟ ಸಂಖ್ಯೆ |
|---|---|---|---|
| 3 | 3.1 | ತಾಲೂಕುವಾರು ಭೌಗೋಳಿಕ ವಿಸ್ತೀರ್ಣ | 99 |
| | 3.2 | ದ.ಕ.ಜಿಲ್ಲೆಯ ಸಾಮಾನ್ಯ ಅಂಕಿ-ಅಂಶಗಳ ವಿವರಗಳು | 101 |
| | 3.3 | ದ.ಕ.ಜಿಲ್ಲೆಯ 2001-2011ರ ಜನಸಂಖ್ಯಾ ಅಂಕಿ-ಅಂಶಗಳ ವಿವರ | 102 |
| | 3.4 | ದ.ಕ.ಜಿಲ್ಲೆಯ ಗ್ರಾಮೀಣ-ನಗರ ಜನಸಂಖ್ಯೆ 2011ರ ವಿವರ | 103 |
| 4 | 4.1 | ದ.ಕ.ಜಿಲ್ಲೆಯ ತಾಲೂಕುವಾರು ನಗರ ಸ್ಥಳೀಯ ಸಂಸ್ಥೆಗಳ ವಿವರ | 120 |
| | 4.2 | ದ.ಕ.ಜಿಲ್ಲೆಯ ತಾಲೂಕುಗಳ ಹಾಗೂ ಗ್ರಾಮ ಪಂಚಾಯತ್‌ಗಳ ಅಂಕಿ-ಅಂಶ ಮತ್ತು ಭೌಗೋಳಿಕ ವಿಸ್ತೀರ್ಣ | 133 |
| | 4.3 | ಅಧ್ಯಯನಕ್ಕೆ ಒಳಪಡಿಸಿದ ಪಂಚಾಯತ್‌ಗಳ ವಿವರ | 134 |
| | 4.4 | ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ವಿಭಜನೆ ಮಾಡುವ ಪ್ರತಿಕ್ರಿಯೆದಾರರ ಪ್ರಮಾಣ | 168 |
| | 4.5 | ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ಸಂಗ್ರಹಕಾರರು | 170 |
| | 4.6 | ದಂಡ ವಿಧಿಸುವ ಸ್ಥಳೀಯ ಸಂಸ್ಥೆಗಳು | 171 |
| | 4.7 | ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ರಾಶಿ ಹಾಕುವ ಜಾಗದ ಒಡೆತನ | 172 |
| | 4.8 | ತ್ಯಾಜ್ಯದಿಂದ ಗೊಬ್ಬರ ತಯಾರಿಸುವ ಘಟಕ ಹೊಂದಿರುವ ಸ್ಥಳೀಯ ಸಂಸ್ಥೆಗಳು | 173 |
| | 4.9 | ಸ್ಥಳೀಯ ಸಂಸ್ಥೆಗಳಲ್ಲಿ ಒಟ್ಟು ತ್ಯಾಜ್ಯದಲ್ಲಿ ಗೊಬ್ಬರಕ್ಕಾಗಿ ಉಪಯೋಗವಾಗುವ ಅಂದಾಜು ಘನತ್ಯಾಜ್ಯ ಪ್ರಮಾಣ | 175 |
| | 4.10 | ತ್ಯಾಜ್ಯ ವಿಲೇವಾರಿ ಬಗ್ಗೆ ಸ್ಥಳೀಯ ಸಂಸ್ಥೆಗಳು ಮಾಡುತ್ತಿರುವ ಕೆಲಸದ ಬಗ್ಗೆ ಮಾಹಿತಿ ಹೊಂದಿರುವ ಪ್ರತಿಕ್ರಿಯೆದಾರರು | 176 |
| | 4.11 | ತ್ಯಾಜ್ಯ ಸಂಗ್ರಹ ಮಾಡುವ ಬಕೆಟ್ ಅಥವಾ ಡಬ್ಬಿಯನ್ನು ಸ್ಥಳೀಯ ಸಂಸ್ಥೆ ಒದಗಿಸಬೇಕೆಂದು ಬಯಸುವ ಪ್ರತಿಕ್ರಿಯೆದಾರರು | 178 |
| | 4.12 | ಮನೆ ಬಾಗಿಲಿಗೆ ಬಂದು ತ್ಯಾಜ್ಯ ಸಂಗ್ರಹಿಸುವ ಪ್ರಮಾಣ ಮತ್ತು ಮನೆ ಬಾಗಿಲಿಗೆ ಬಂದು ತ್ಯಾಜ್ಯ ಸಂಗ್ರಹಿಸುವವರಲ್ಲಿ ತ್ಯಾಜ್ಯವನ್ನು ವಿಭಜಿಸಿ ಕೊಡಲು ಹೇಳುವವರು | 1798 |

| | | | |
|---|---|---|---|
| | 4.13 | ತ್ಯಾಜ್ಯ ಎಸೆಯುವುದಕ್ಕೆ ಸಂಬಂಧಿಸಿ ಸ್ಥಳೀಯ ಸಂಸ್ಥೆಗಳು ಹಾಕಿದ ಎಚ್ಚರಿಕೆ ಫಲಕಗಳನ್ನು ಗಮನಿಸಿರುವವರು | 180 |
| | 4.14 | ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯವನ್ನು ಸಂಗ್ರಹಿಸುವವರು | 182 |
| | 4.15 | ತ್ಯಾಜ್ಯ ನಿರ್ವಹಣೆಯಲ್ಲಿ ಸ್ಥಳೀಯ ಸರಕಾರಗಳು ನಿರ್ವಹಿಸುವ ಕೆಲಸದ ಬಗ್ಗೆ ನಾಗರಿಕರ ಪ್ರತಿಕ್ರಿಯೆ | 183 |
| | 4.16 | ತ್ಯಾಜ್ಯ ಸಾಗಾಟ ಮಾಡುವಾಗ ತ್ಯಾಜ್ಯವನ್ನು ಮುಚ್ಚಿ ಸಾಗಾಟ ಮಾಡುತ್ತಾರೆಯೇ ಎನ್ನುವ ಬಗ್ಗೆ ಪ್ರತಿಕ್ರಿಯೆದಾರರ ಅಭಿಪ್ರಾಯ | 184 |
| | 4.17 | ತ್ಯಾಜ್ಯ ನಿರ್ವಹಣೆ ಬಗ್ಗೆ ಜನಪ್ರತಿನಿಧಿಗಳು ಗಮನಹರಿಸುತ್ತಾರೆಯೇ ಎನ್ನುವ ಬಗ್ಗೆ ಪ್ರತಿಕ್ರಿಯೆದಾರರ ಅಭಿಪ್ರಾಯ | 185 |
| | 4.18 | ಸ್ಥಳೀಯ ಸರಕಾರಗಳು ಜನಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿ ಕೊಳ್ಳುವುದು ಉಪಯುಕ್ತವೇ ಎನ್ನುವ ಬಗ್ಗೆ ಪ್ರತಿಕ್ರಿಯೆದಾರರ ಅಭಿಪ್ರಾಯ | 186 |
| | 5.1 | ದ.ಕ.ಜಿಲ್ಲೆಯ ಗ್ರಾಮೀಣ–ನಗರ ಜನಸಂಖ್ಯೆ ವಿವರ: 2011ರ ಪ್ರಕಾರ ಜನಗಣತಿ ಪ್ರಕಾರ | 192 |
| | 5.2 | ಅಧ್ಯಯನಕ್ಕೆ ಒಳಪಡಿಸಿದ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ ಕುಟುಂಬಗಳ ವಿವರ | 193 |
| | 5.3 | ಅಧ್ಯಯನಕ್ಕೆ ಒಳಪಡಿಸಿದ ದ.ಕ.ಜಿಲ್ಲೆಯ ಗ್ರಾಮೀಣ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ ಒಟ್ಟು ಕುಟುಂಬಗಳ ವಿವರ | 194 |
| | 5.4 | ದ.ಕ.ಜಿಲ್ಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಮಾಹಿತಿದಾರರ ಸಂಕ್ಷಿಪ್ತ ಸಾಮಾಜಿಕ ವಿವರಗಳು | 195 |
| 5 | 5.5 | ವಿವಿಧ ವರ್ಗಗಳ ಪ್ರತಿಕ್ರಿಯೆದಾರರ ಮನೆಯಲ್ಲಿ ತ್ಯಾಜ್ಯ ವಿಭಜನೆಯನ್ನು ಅನುಸರಿಸುವವರು | 198 |
| | 5.6 | ವಿವಿಧ ಧರ್ಮಗಳ ಒಟ್ಟು ಪ್ರತಿಕ್ರಿಯೆದಾರ ಮನೆಯಲ್ಲಿ ತ್ಯಾಜ್ಯ ವಿಭಜನೆಯನ್ನು ಅನುಸರಿಸುವವರು | 199 |
| | 5.7 | ಒಟ್ಟು ಮಾಹಿತಿದಾರರಲ್ಲಿ ವಿವಿಧ ಶೈಕ್ಷಣಿಕ ಅರ್ಹತೆ ಹೊಂದಿರುವವರ ಮನೆಯಲ್ಲಿ ತ್ಯಾಜ್ಯ ವಿಭಜನೆಯನ್ನು ಅನುಸರಿಸುವವರು | 199 |
| | 5.8 | ತ್ಯಾಜ್ಯ ನಿರ್ವಹಣಾ ಅಭಿಯಾನದಲ್ಲಿ ವಿವಿಧ ಕಾರಣಕ್ಕಾಗಿ ಭಾಗವಹಿಸಿರುವ ಪುರುಷರು ಹಾಗೂ ಮಹಿಳೆಯರು | 200 |
| | 5.9 | ವಿವಿಧ ಶೈಕ್ಷಣಿಕ ಅರ್ಹತೆ ಹೊಂದಿದವರು ತಮ್ಮ ಮನೆಯ ತ್ಯಾಜ್ಯವನ್ನು ಹೊರಹಾಕುವ ವಿಧಾನದ ವಿವರ | 202 |

| | | | |
|---|---|---|---|
| | 5.10 | ವಿವಿಧ ಶೈಕ್ಷಣಿಕ ಅರ್ಹತೆ ಹೊಂದಿದವರು ತ್ಯಾಜ್ಯ ನಿರ್ವಹಣಾ ಅಭಿಯಾನದಲ್ಲಿ ಭಾಗವಹಿಸಿರುವುದಕ್ಕೆ ನೀಡಿದ ಕಾರಣಗಳು | 203 |
| | 5.11 | ವಿವಿಧ ಶೈಕ್ಷಣಿಕ ಅರ್ಹತೆ ಹೊಂದಿದವರು ಅಭಿಪ್ರಾಯಪಡುವ ಅತ್ಯುತ್ತಮ ವಿಲೇವಾರಿ ವಿಧಾನದ ವಿವರ | 204 |
| | 5.12 | ಒಟ್ಟು ಮಾಹಿತಿದಾರರಲ್ಲಿ ಆಹಾರ ಪದ್ಧತಿ ಮತ್ತು ತ್ಯಾಜ್ಯ ಉತ್ಪಾದನಾ ಪ್ರಮಾಣದ ವಿವರ | 206 |
| | 5.13 | ಒಟ್ಟು ಪ್ರತಿಕ್ರಿಯೆದಾರರ ಸಂಕ್ಷಿಪ್ತ ಆರ್ಥಿಕ ಮಟ್ಟದ ವಿವರಗಳು | 207 |
| | 5.14 | ಕುಟುಂಬದ ವಾರ್ಷಿಕ ಆದಾಯ ಮತ್ತು ತ್ಯಾಜ್ಯ ನಿರ್ವಹಣೆಗಾಗಿ ವ್ಯಯಿಸುವ ವಾರ್ಷಿಕ ವೆಚ್ಚದ ವಿವರ | 208 |
| | 5.15 | ವಿವಿಧ ಉದ್ಯೋಗ ಮಾಡುತ್ತಿರುವ ಒಟ್ಟು ಪ್ರತಿಕ್ರಿಯೆದಾರರಲ್ಲಿ ತ್ಯಾಜ್ಯ ಸಂಗ್ರಹಕಾರರಿಗೆ/ಸ್ಥಳೀಯ ಸಂಸ್ಥೆಗಳಿಗೆ ಶುಲ್ಕ ನೀಡಲು ಸಿದ್ಧವಿರುವವರ ಪ್ರಮಾಣ | 210 |
| | 5.16 | ತ್ಯಾಜ್ಯ ನಿರ್ವಹಣೆಗೆ ಸ್ಥಳೀಯ ಸರಕಾರಗಳು ಖರ್ಚು ಮಾಡುವ ಒಟ್ಟು ಆದಾಯ | 211 |
| | 5.17 | ತ್ಯಾಜ್ಯ ನಿರ್ವಹಣೆಗೆ ವಿಶೇಷ ತೆರಿಗೆ ವಿಧಿಸುವ ಸ್ಥಳೀಯ ಸಂಸ್ಥೆಗಳ ವಿವರ | 213 |
| | 5.18 | ತ್ಯಾಜ್ಯ ನಿರ್ವಹಣಾ ವೆಚ್ಚ ಭರಿಸಲು ಸ್ಥಳೀಯ ಸಂಸ್ಥೆಗಳಿಗೆ ಶುಲ್ಕ ನೀಡಲು ಸಿದ್ಧರಿರುವವರ ಪ್ರಮಾಣ | 214 |
| | 5.19 | ಒಟ್ಟು ಪ್ರತಿಕ್ರಿಯೆದಾರರಲ್ಲಿ ತ್ಯಾಜ್ಯ ಸಂಗ್ರಹಕಾರರಿಗೆ/ಸ್ಥಳೀಯ ಸಂಸ್ಥೆಗೆ ನೀಡುವ ಶುಲ್ಕದ ಅವಧಿ, ದರ ಮತ್ತು ವಾರ್ಷಿಕ ವೆಚ್ಚ | 215 |
| 6 | 6.1 | ವಯಸ್ಸಿಗನುಗುಣವಾಗಿ ನಿಯಮಾವಳಿಗಳ ಅರಿವು ಹೊಂದಿರುವವರು ಮತ್ತು ಹೊಂದಿಲ್ಲದವರ ವಿವರ | 246 |
| | 6.2 | ಒಟ್ಟು ಮಾಹಿತಿದಾರರಲ್ಲಿ ನಿಯಮಾವಳಿಗಳ ಅರಿವನ್ನು ಹೊಂದಿರುವ ಮತ್ತು ಹೊಂದಿಲ್ಲದ ಪುರುಷರು ಹಾಗೂ ಮಹಿಳೆಯರ ವಿವರ | 247 |
| | 6.3 | ಒಟ್ಟು ಮಾಹಿತಿದಾರರಲಿ ನಿಯಮಾವಳಿಗಳ ಅರಿವು ಹೊಂದಿರುವ ಮತ್ತು ಹೊಂದಿಲ್ಲದಿರುವ ವಿವಿಧ ವರ್ಗಗಳು | 248 |
| | 6.4 | ವಿವಿಧ ಶೈಕ್ಷಣಿಕ ಮಟ್ಟದ ಜನರಲ್ಲಿ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ನಿಯಮಾವಳಿಗಳ ಅರಿವು ಹೊಂದಿರುವವರು ಮತ್ತು ಹೊಂದಿಲ್ಲದಿರುವವರು | 249 |
| | 6.5 | ಒಟ್ಟು ಮಾಹಿತಿದಾರರಲ್ಲಿ ವಿವಿಧ ಧರ್ಮಗಳ ಜನರಲ್ಲಿ ನಿಯಮಾವಳಿಗಳ ಅರಿವಿರುವವರು ಮತ್ತು ಇಲ್ಲದವರು | 250 |
| | 6.6 | ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣೆಯ ನಿಯಮಾವಳಿಗಳ ಅರಿವನ್ನು ಹೊಂದಿರುವ ಒಟ್ಟು ಮಾಹಿತಿದಾರರ ಪ್ರಮಾಣ | 251 |

| | 6.7 | ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ಕಾನೂನು/ನಿಯಾಮವಳಿಗಳ ಬಗ್ಗೆ ಗ್ರಾಮೀಣ ಮತ್ತು ನಗರದ ಒಟ್ಟು ಮಾಹಿತಿದಾರರ ಪ್ರತಿಕ್ರಿಯೆ | 252 |
|---|---|---|---|
| | 6.8 | ಹೊಸ ಕಠಿಣ ಕಾನೂನು/ನಿಯಮಾವಳಿಗಳ ಅಗತ್ಯತೆ ಬಗ್ಗೆ ಗ್ರಾಮೀಣ ಮತ್ತು ನಗರದ ಒಟ್ಟು ಪ್ರತಿಕ್ರಿಯೆದಾರರ ಅಭಿಪ್ರಾಯ | 253 |
| | 6.9 | ಜಾರಿಯಲ್ಲಿರುವ ಕಾನೂನು/ನಿಯಮಾವಳಿಗಳ ಸಮರ್ಪಕ ಅನುಷ್ಠಾನದ ಮೂಲಕ ಉತ್ತಮ ತ್ಯಾಜ್ಯ ನಿರ್ವಹಣೆ ಸಾಧ್ಯವೇ ಎಂಬುವುದರ ಬಗ್ಗೆ ಒಟ್ಟು ಮಾಹಿತಿದಾರರ ಅಭಿಪ್ರಾಯ | 254 |
| | 6.10 | ವಯಸ್ಸಿಗನುಗುಣವಾಗಿ ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ಅರಿವು ಹೊಂದಿರುವ ಪ್ರತಿಕ್ರಿಯೆದಾರರು | 254 |
| | 6.11 | ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ಅರಿವಿರುವ ಪುರುಷ ಮತ್ತು ಮಹಿಳಾ ಮಾಹಿತಿದಾರರು | 255 |
| | 6.12 | ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ಅರಿವಿರುವ ಗ್ರಾಮೀಣ ಮತ್ತು ನಗರ ಪ್ರತಿಕ್ರಿಯೆದಾರರು | 256 |
| | 6.13 | ಇಲೆಕ್ಟ್ರಾನಿಕ್ ತ್ಯಾಜ್ಯಗಳ ಬಗ್ಗೆ ಮಾಹಿತಿ ಹೊಂದಿರುವ ಪುರುಷ ಮತ್ತು ಮಹಿಳಾ ಪ್ರತಿಕ್ರಿಯೆದಾರರು | 257 |
| | 6.14 | ಮನೆಯಲ್ಲಿ ತ್ಯಾಜ್ಯ ವಿಭಜನೆ ಮಾಡುವ/ಮಾಡದಿರುವ ವಿವಿಧ ವರ್ಗಗಳ ಮಾಹಿತಿದಾರರು | 259 |

## ಅಧ್ಯಾಯ: ಒಂದು

# ವಿಷಯ ಪ್ರವೇಶ

1.1 ಸಮಸ್ಯೀಕರಣ ಮತ್ತು ಸಂಶೋಧನಾ ಪ್ರಶ್ನೆಗಳು

1.2 ಅಧ್ಯಯನದ ಉದ್ದೇಶಗಳು

1.3 ಅಧ್ಯಯನದ ವಿಧಾನಗಳು

1.4 ಅಧ್ಯಯನದ ವ್ಯಾಪ್ತಿ

1.5 ಅಧ್ಯಯನದ ಪ್ರಾಮುಖ್ಯತೆ

1.6 ಅಧ್ಯಯನದ ಮಿತಿಗಳು

1.7 ಅಧ್ಯಾಯಗಳ ವಿನ್ಯಾಸ

## ಅಧ್ಯಾಯ: ಒಂದು

# ವಿಷಯ ಪ್ರವೇಶ

### ಪೀಠಿಕೆ

ಜಗತ್ತಿನಾದ್ಯಂತ ಎಲ್ಲಾ ರಾಷ್ಟ್ರಗಳು ಎದುರಿಸುತ್ತಿರುವ ಗಂಭೀರವಾದ ಸಮಸ್ಯೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯೂ ಒಂದು. ಭಾರತದಲ್ಲಿ ಘನತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದಂತೆ ಕೇಂದ್ರ, ರಾಜ್ಯ ಸರ್ಕಾರಗಳು ಹಾಗೂ ಸ್ಥಳೀಯ ಸಂಸ್ಥೆಗಳು ಅನೇಕ ನಿಯಮಾವಳಿಗಳನ್ನು ಜಾರಿಗೆ ತಂದಿವೆ. ಸ್ವಯಂಸೇವಾ ಸಂಸ್ಥೆಗಳು, ನಾಗರಿಕರು ಹಾಗೂ ಇತರೆ ಭಾಗೀದಾರರು ಆರೋಗ್ಯ, ಸ್ವಚ್ಛತೆ, ಸ್ವಚ್ಛ ಪರಿಸರ, ಅಭಿವೃದ್ಧಿ ಮುಂತಾದ ಕಾರಣಗಳಿಗೋಸ್ಕರ ತ್ಯಾಜ್ಯ ನಿರ್ವಹಣೆಯ ಅಭಿಯಾನದಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಹೀಗಿದ್ದರೂ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗೆ ಹೋಲಿಸಿದಾಗ ತ್ಯಾಜ್ಯ ನಿರ್ವಹಣೆಯಲ್ಲಿ ಭಾರತವು ಹೆಚ್ಚಿನ ಪ್ರಗತಿ ಸಾಧಿಸದಿರುವುದನ್ನು ಅಧ್ಯಯನಗಳು ಗುರುತಿಸಿವೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಮಾನವ ಅಭಿವೃದ್ಧಿ ವರದಿ 2014ರ ಪ್ರಕಾರ ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಪ್ರಗತಿಯನ್ನು ಸಾಧಿಸಿರುವ ಕರ್ನಾಟಕ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 'ಘನತ್ಯಾಜ್ಯ ನಿರ್ವಹಣೆಯ ಆರ್ಥಿಕತೆ'ಯನ್ನು ಅಧ್ಯಯನ ಮಾಡಲಾಗಿದೆ.

ಈ ಅಧ್ಯಯನವನ್ನು ಮೂರು ಪ್ರಮುಖ ಉದ್ದೇಶಗಳನ್ನಿಟ್ಟುಕೊಂಡು ಕೈಗೊಳ್ಳಲಾಗಿದೆ. ಈ ಮಹಾಪ್ರಬಂಧದ ಮೊದಲ ಅಧ್ಯಾಯದಲ್ಲಿ ಒಟ್ಟು ಏಳು ಅಂಶಗಳನ್ನು ವಿವರಿಸಲಾಗಿದೆ. ಮೊದಲನೇ ಭಾಗದಲ್ಲಿ ಅಧ್ಯಯನದ ಸಮಸ್ಯೀಕರಣ ಮತ್ತು ಸಂಶೋಧನಾ ಪ್ರಶ್ನೆಗಳನ್ನು ಚರ್ಚಿಸಲಾಗಿದೆ. ಎರಡನೇ ಭಾಗದಲ್ಲಿ ಅಧ್ಯಯನದ ಉದ್ದೇಶಗಳನ್ನು ನೀಡಲಾಗಿದೆ. ಮೂರನೇ ಭಾಗದಲ್ಲಿ ಅಧ್ಯಯನ ನಡೆಸಿದ ವಿಧಾನವನ್ನು ಪರಿಚಯಿಸಲಾಗಿದೆ. ನಾಲ್ಕನೇ ಭಾಗವು ಅಧ್ಯಯನದ ವ್ಯಾಪ್ತಿ ಬಗ್ಗೆ ತಿಳಿಸುತ್ತದೆ. ಅಧ್ಯಯನದ ಪ್ರಾಮುಖ್ಯತೆಯನ್ನು ಐದನೇ ಭಾಗವು ವಿವರಿಸುತ್ತದೆ. ಆರನೇ ಭಾಗದಲ್ಲಿ ಅಧ್ಯಯನದ ಮಿತಿಗಳ ಬಗ್ಗೆ ವಿವರಣೆ ನೀಡಲಾಗಿದ್ದು, ಕೊನೆಯ ಏಳನೇ

ಭಾಗವು ಅಧ್ಯಯನದ ವಿನ್ಯಾಸದ ಚಿತ್ರಣ ನೀಡುತ್ತದೆ.

ಜನಸಂಖ್ಯಾ ಬೆಳವಣಿಗೆ, ವಿಜ್ಞಾನದ ಚಮತ್ಕಾರಗಳು, ವೇಗದ ನಗರೀಕರಣ, ಹೆಚ್ಚುತ್ತಿರುವ ಆದಾಯ ಹಾಗೂ ಬದಲಾಗುತ್ತಿರುವ ಅನುಭೋಗ ಶೈಲಿಗಳಿಂದಾಗಿ ಮೂಲಭೂತ ಸೌಕರ್ಯಗಳಾದ ರಸ್ತೆ, ಆಸ್ಪತ್ರೆ, ಕುಡಿಯುವ ನೀರು, ವಿದ್ಯುತ್, ಸಾರಿಗೆ-ಸಂಪರ್ಕ, ಒಳಚರಂಡಿ, ಶಿಕ್ಷಣ, ಇತ್ಯಾದಿಗಳನ್ನು ಪೂರೈಸುವುದು ಕಠಿಣ ಸವಾಲಾಗಿದೆ. ಅನುಭೋಗಶಾಹಿತ್ವದ ಪ್ರಮಾಣವೂ ಇದರೊಂದಿಗೆ ಹೆಚ್ಚುತ್ತಿದ್ದು, ಮುಗಿದು ಹೋಗುವ ಪ್ರಾಕೃತಿಕ ಸಂಪನ್ಮೂಲಗಳ ಬಳಕೆ ಹೆಚ್ಚಾಗುತ್ತಿದೆ. ಬಳಕೆ ಹೆಚ್ಚಾದಷ್ಟು ಘನ, ದ್ರವ ಮತ್ತು ಅನಿಲ ತ್ಯಾಜ್ಯಗಳ ಉತ್ಪಾದನಾ ಪ್ರಮಾಣವೂ ಏರುತ್ತಿದೆ. ಇದರಿಂದ ಜೀವ ಜಗತ್ತಿಗೆ ಅತೀ ಅಗತ್ಯವಿರುವ ನವೀಕರಣಗೊಳ್ಳುವ ಪ್ರಾಕೃತಿಕ ಸಂಪನ್ಮೂಲಗಳಾದ ಗಾಳಿ, ನೀರು, ಬೆಳಕು, ಭೂಮಿ ಮಲಿನಗೊಳ್ಳುತ್ತಿವೆ. ನಗರ ಪ್ರದೇಶಗಳಲ್ಲಿ ತ್ಯಾಜ್ಯ ಉತ್ಪಾದನಾ ಪ್ರಮಾಣವು ಹತೋಟಿ ಮೀರಿ ಬೆಳೆಯುತ್ತಿದೆ. ಪ್ರಪಂಚದ ಶೇಕಡ 20ರಷ್ಟು ಜನರು ಕೈಗಾರಿಕೆಯಲ್ಲಿ ಮುಂದುವರಿದ ದೇಶಗಳಲ್ಲಿ ವಾಸವಾಗಿದ್ದಾರೆ. ಆಶ್ಚರ್ಯವೆಂದರೆ ಅವರ ಒಟ್ಟು ಅನುಭೋಗ ಪ್ರಮಾಣ ವಿಶ್ವದ ಶೇಕಡ 80ರಷ್ಟು ಹಾಗೂ ಅವರು ಉಂಟುಮಾಡುವ ತ್ಯಾಜ್ಯ ಪ್ರಮಾಣವೂ ಶೇಕಡ 80 ರಷ್ಟಾಗಿದೆ. ಹೆಚ್ಚುತ್ತಿರುವ ತ್ಯಾಜ್ಯ ಪ್ರಮಾಣವು ಪರಿಸರ ಮಾಲಿನ್ಯಕ್ಕೆ ಕಾರಣವಾಗಿದೆ. ಆದ್ದರಿಂದ ಪರಿಸರ ಮಾಲಿನ್ಯ ಅಭಿವೃದ್ಧಿಯೊಂದಿಗೆ ಸಾಗುವ ಗುಣವಾಗದ ಕಾಯಿಲೆಯಾಗಿದೆ. "ಗಣಿಗಾರಿಕೆ ಹಾಗೂ ಅರಣ್ಯನಾಶದ ಹಾಗೆ ತ್ಯಾಜ್ಯ ವಿಲೇವಾರಿ ಸಮಸ್ಯೆಯೂ ಪರಿಸರ ಮಾಲಿನ್ಯಕ್ಕೆ ಸಂಬಂಧಿಸಿದೆ. ಕೈಗಾರಿಕೀಕರಣ ಮತ್ತು ನಗರೀಕರಣ ಮಾನವ ಹಾಗೂ ಪರಿಸರದ ಆರೋಗ್ಯಕ್ಕೆ ಬೆದರಿಕೆಯಾಗಿದೆ" (ಹ್ಯಾನ್ಸ್ ಮತ್ತು ಜಯಶೀಲ 2007).[1] ಜಲಮಾಲಿನ್ಯ, ವಾಯುಮಾಲಿನ್ಯ ಮತ್ತು ಶಬ್ದಮಾಲಿನ್ಯದ ಜೊತೆಗೆ ಇನ್ನಿತರ ಅನೇಕ ರೀತಿಯ ವಿಕಿರಣ ಮಾಲಿನ್ಯಗಳು ಜನರ ಮಾನಸಿಕ ಹಾಗೂ ದೈಹಿಕ ಆರೋಗ್ಯವನ್ನು ಕುಗ್ಗಿಸುತ್ತಿವೆ. ಜಾಗತಿಕ ಪರಿಸರ ಸಮಸ್ಯೆಗಳಾದ ಆಮ್ಲಮಳೆ, ಜಾಗತಿಕ ತಾಪಮಾನ, ಓಜೋನ್ ಪದರದ ಶಿಥಿಲತೆ, ಹಸಿರುಮನೆ ಪರಿಣಾಮ ಇತ್ಯಾದಿಗಳು ದಿನದಿಂದ ದಿನಕ್ಕೆ ಹೆಚ್ಚುತ್ತಲೇ ಇವೆ. ಅಸಮರ್ಪಕ ತ್ಯಾಜ್ಯ ನಿರ್ವಹಣೆ, ಜನರ ಅಸಹಕಾರ ಮುಂತಾದ ಕಾರಣಗಳಿಂದ ಜೊತೆಗೆ ತಮ್ಮ ಉತ್ಕೃಷ್ಟ ಪ್ರತಿಬಂಧಕ ಗುಣದಿಂದ ಪ್ಲಾಸ್ಟಿಕ್, ಪಾಲಿಮರ್, ಪ್ಲಾಸ್ಟಿಸಿಜರ್ ಮೊದಲಾದುವುಗಳನ್ನು ಒಳಗೊಂಡ ಘನ ತ್ಯಾಜ್ಯಗಳು ಸಮಸ್ಯೆಯಾಗಿ ಕಾಡುತ್ತಿವೆ. ಇದರಲ್ಲಿ ಬಹುಪಾಲು ತ್ಯಾಜ್ಯಗಳು ಸುದೀರ್ಘವಾಗಿ ಪರಿಸರದಲ್ಲಿ ಉಳಿದುಬಿಡುತ್ತವೆ. ಮಣ್ಣಿನೊಳಗೆ ಆಳವಾಗಿ ಹೂತಿಟ್ಟರೂ 20 ರಿಂದ 30 ವರ್ಷಗಳವರೆಗೆ ಇವು ಕೊಳೆಯದೆ ಉಳಿಯಬಲ್ಲವು. ಘನ ತ್ಯಾಜ್ಯಗಳ ಈ ಸ್ವಭಾವದಿಂದಾಗಿ ಇವು ಪರಿಸರದ ಮೇಲೆ ಮತ್ತು ಮನುಷ್ಯರ ಮೇಲೆ ಕೂಡಾ ಪರಿಣಾಮ ಬೀರುತ್ತವೆ. ಇದಕ್ಕೆ ಹೆಚ್ಚುತ್ತಿರುವ ತ್ಯಾಜ್ಯ

ಮತ್ತು ಅವುಗಳ ಅವೈಜ್ಞಾನಿಕ ನಿರ್ವಹಣೆ ಪ್ರಮುಖ ಕಾರಣವಾಗಿದೆ. ನಗರೀಕರಣ ಆರ್ಥಿಕಾಭಿವೃದ್ಧಿಯ ಒಂದು ಧನಾತ್ಮಕ ಅಂಶವಾದರೆ ಪರಿಸರ ಮಾಲಿನ್ಯ ಒಂದು ಋಣಾತ್ಮಕ ಅಂಶವಾಗಿದೆ. ಪರಿಸರ ಮಾಲಿನ್ಯ ತಡೆಯಲು ತ್ಯಾಜ್ಯ ಉತ್ಪಾದನೆಯನ್ನು ಕಡಿಮೆಗೊಳಿಸುವುದು ಹಾಗೂ ಸರಿಯಾದ ರೀತಿಯ ತ್ಯಾಜ್ಯ ನಿರ್ವಹಣೆ ಅತೀ ಅಗತ್ಯ. ಈ ಬಗ್ಗೆ ಬಿಗಿ ನಿಯಂತ್ರಕ ಕ್ರಮಗಳನ್ನು ಕೈಗೊಳ್ಳದೇ ಹೋದರೆ, ಪರಿಸರ ವ್ಯವಸ್ಥೆಗಳು ಮರುಚೇತರಿಕೆಯಾಗದ ರೀತಿಯಲ್ಲಿ ಅಸಮತೋಲನ ಹೊಂದ ಬಹುದು. ಉತ್ಪಾದನೆ ಹೆಚ್ಚಿದಂತೆ ಅನುಪಯುಕ್ತ ತ್ಯಾಜ್ಯಗಳ ಪ್ರಮಾಣವೂ ಹೆಚ್ಚಿ ಮಾಲಿನ್ಯ ನಿಯಂತ್ರಣ ಪ್ರಮುಖ ಸಮಸ್ಯೆಯಾಗಿ ಕಾಡುತ್ತಿದೆ. ಅಸಮರ್ಪಕ ತ್ಯಾಜ್ಯ ನಿರ್ವಹಣೆಯಿಂದಾಗಿ ಸೊಳ್ಳೆಗಳ ಉತ್ಪಾದನೆ, ಕೆಟ್ಟ ವಾಸನೆ, ಕೊಳಚೆ ಪ್ರದೇಶಗಳ ಸೃಷ್ಟಿ, ಸಾಂಕ್ರಾಮಿಕ ರೋಗಗಳು ಮಾತ್ರವಲ್ಲದೆ ಸಾರ್ವಜನಿಕ ಹಾಗೂ ಇತರ ಖಾಸಗಿ ಜಾಗಗಳಲ್ಲಿ ನಿಯಮ ಬಾಹಿರ ತ್ಯಾಜ್ಯ ಎಸೆಯುವುದು ಇತ್ಯಾದಿ ಅನೇಕ ಆರೋಗ್ಯ ಮಾರಕ ಸಮಸ್ಯೆಗಳನ್ನು ಎದುರಿಸುತ್ತಿದ್ದೇವೆ. ಈ ಸಮಸ್ಯೆಗಳನ್ನು ಸಮರ್ಥವಾಗಿ ಬಗೆಹರಿಸಲು ತಳಮಟ್ಟದಿಂದಲೇ ಸರಿಯಾದ ಪರಿಸರ ಸ್ನೇಹಿ ತಂತ್ರಜ್ಞಾನ, ತ್ಯಾಜ್ಯ ಮರುತ್ಪಾದನಾ ವಿಧಾನ ಮತ್ತು ನಿರ್ವಹಣಾ ತಂತ್ರಗಳನ್ನು ಅತೀ ಅಗತ್ಯವಾಗಿ ಅನುಸರಿಸಬೇಕಾಗಿದೆ (ಅಗರವಾಲ್, 2013).[2]

ಹೊಸ ಆರ್ಥಿಕನೀತಿ (1991) ಮತ್ತು ವಿಶ್ವ ವ್ಯಾಪಾರ ಸಂಘಟಣೆ (1995)ಯ ಫಲವಾಗಿ ಭಾರತದಲ್ಲಿ ಆರ್ಥಿಕ ಅಭಿವೃದ್ಧಿಯ ವೇಗವರ್ಧಕಗಳಾದ ಕೈಗಾರಿಕೀಕರಣ ಮತ್ತು ನಗರೀಕರಣ ಪ್ರಕ್ರಿಯೆಗಳ ವೇಗ ಕಳೆದ ಒಂದೂವರೆ ದಶಕದಿಂದ ಗಣನೀಯವಾಗಿ ಹೆಚ್ಚಿದೆ. ಪರಿಣಾಮವಾಗಿ ಜನರು ನಗರ ಪ್ರದೇಶಗಳಿಗೆ ಶಿಕ್ಷಣ, ಉದ್ಯೋಗ ಮುಂತಾದ ಕಾರಣಗಳಿಂದಾಗಿ ವಲಸೆ ಹೋಗುವ ಪ್ರಮಾಣ ಹೆಚ್ಚುತ್ತಲೇ ಇದೆ. ಭಾರತದಲ್ಲಿ ಈ ಪ್ರಮಾಣವು ಉಳಿದ ರಾಷ್ಟ್ರಗಳಿಗಿಂತ ಕೊಂಚ ಹೆಚ್ಚೇ ಎನ್ನಬಹುದು. ಅಂಕಿ–ಅಂಶಗಳ ವಿಶ್ಲೇಷಣೆಯ ಪ್ರಕಾರ ಪ್ರಪಂಚದಲ್ಲಿ ಅತೀ ಹೆಚ್ಚು ಜನರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವುದು ಭಾರತದಲ್ಲಿ. ಸುಮಾರು 2040ರ ವೇಳೆಗೆ ಭಾರತವು ಪ್ರಪಂಚದಲ್ಲಿ ಅತೀ ಹೆಚ್ಚು ಜನರು ನಗರ ಪ್ರದೇಶದಲ್ಲಿ ವಾಸಿಸುವ ರಾಷ್ಟ್ರವಾಗಿ ಪರಿವರ್ತನೆಯಾಗಲಿದೆ. ಪ್ರಸ್ತುತ ಭಾರತದಲ್ಲಿ ಮೂರನೆಯ ಒಂದಂಶದಷ್ಟು(ಸುಮಾರು 33%) ಜನಸಂಖ್ಯೆ ನಗರ ಪ್ರದೇಶದಲ್ಲಿದೆ. ಒಂದು ಮಿಲಿಯಕ್ಕಿಂತ ಹೆಚ್ಚು ಜನಸಂಖ್ಯೆ ಇರುವ 35 ನಗರಗಳಲ್ಲಿ ಶೇಕಡ 37 ಜನರು ನಗರ ವಾಸಿಗಳಾಗಿದ್ದಾರೆ. ನಗರಗಳು ವಿಸ್ತಾರ ಹಾಗು ಅಭಿವೃದ್ಧಿಯಾದಷ್ಟೂ, ಸಮಸ್ಯೆಗಳೂ ಅದಕ್ಕಿಂತ ಹೆಚ್ಚು ಆಳ ಮತ್ತು ವಿಸ್ತಾರಗೊಂಡು ವಿವಿಧ ದಿಶೆ ಮತ್ತು ಪ್ರಮಾಣಗಳಲ್ಲಿ ಗೋಚರಿಸುತ್ತಿವೆ. "ನಾಗರಿಕ ಸಮಾಜ ಮತ್ತು ಜಾಗತೀಕರಣಗೊಂಡ ವಿಶ್ವದಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ಪರಿಸರ ನಾಶವಾಗುವ ಕಾರಣದಿಂದ 'ಅಭಿವೃದ್ಧಿ' ಎನ್ನುವ

ಪದಕ್ಕೆ ಹೊಸ ವ್ಯಾಖ್ಯೆಯನ್ನು ಅಗತ್ಯವಾಗಿ ನೀಡಬೇಕಾಗಿದೆ" (ಹ್ಯಾನ್ಸ್ ಮತ್ತು ಜಯಶೀಲ 2009).[3] ಹೆಚ್ಚುತ್ತಿರುವ ಜನಸಂಖ್ಯೆಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು ನಗರ ಸ್ಥಳೀಯ ಸಂಸ್ಥೆಗಳಿಗೆ ಒಂದು ದೊಡ್ಡ ಸವಾಲು. 1901ರಲ್ಲಿ ಭಾರತದ ಒಟ್ಟು ಜನಸಂಖ್ಯೆಯ ಶೇಕಡ 10.89 ಜನರು ನಗರವಾಸಿಗಳಾಗಿದ್ದರು. ಶೇಕಡ 25.7ರಷ್ಟು ಜನ 1991ರಲ್ಲಿ ನಗರವಾಸಿಗಳಾಗಿದ್ದರೆ, 2001ರಲ್ಲಿ ಈ ಪ್ರಮಾಣವು ಶೇಕಡ 27.8ಕ್ಕೆ ಏರಿತು. 2011ರಲ್ಲಿ ಶೇಕಡ 31.16 ಜನ ಅಂದರೆ ಸುಮಾರು 37.71 ಕೋಟಿ ಜನಸಂಖ್ಯೆ ನಗರವಾಸಿಗಳಾಗಿದ್ದಾರೆ (ಭಗತ್, 2011).[4] ಗ್ರಾಮೀಣ ಪ್ರದೇಶಗಳಿಂದ ನಗರಗಳಿಗೆ ವಲಸೆ ಹೋಗುವ ಪ್ರಮಾಣವೂ ಹೆಚ್ಚಾಗುತ್ತಿದೆ. ಈ ಪ್ರಮಾಣವು 1991–2001ರಲ್ಲಿ ಶೇಕಡ 42 ಇದ್ದರೆ, 2001–2011ರಲ್ಲಿ ಶೇಕಡ 56ಕ್ಕೆ ಏರಿತು. (ಭಗತ್, 2011).[5] ಹಾಗೆಯೆ ನಗರಗಳ ಸಂಖ್ಯೆಯು 2001ರಲ್ಲಿ 5161 ಇದ್ದುದು 2011ರಲ್ಲಿ 7935ಕ್ಕೆ ಏರಿದೆ. ಕರ್ನಾಟಕ ಸಹಿತ ಎಲ್ಲಾ ದಕ್ಷಿಣದ ರಾಜ್ಯಗಳಲ್ಲಿ ನಗರೀಕರಣದ ಪ್ರಮಾಣ ಸರಾಸರಿ ಶೇಕಡ 62 ಇದೆ. ಆದರೆ ತ್ಯಾಜ್ಯ ಉತ್ಪಾದನೆಯಲ್ಲಿ ಗ್ರಾಮೀಣ ಪ್ರದೇಶಗಳೂ ಹಿಂದೆ ಬಿದ್ದಿಲ್ಲ. ಹೆಚ್ಚಿನ ಗ್ರಾಮೀಣ ಪ್ರದೇಶಗಳು ನಗರಗಳ ಆಧುನಿಕ ಜೀವನ ಶೈಲಿಗಳ ಪ್ರಭಾವಕ್ಕೆ ಒಳಗಾಗುವುದರ ಮೂಲಕ ನಿಧಾನವಾಗಿ ಪರಿಸರ ಮಾಲಿನ್ಯವನ್ನು ಹೆಚ್ಚಿಸಿಕೊಳ್ಳುತ್ತಿವೆ. ಪ್ರಸ್ತುತ ಭಾರತದಲ್ಲಿ ಪರಿಸರ ಸಂರಕ್ಷಣೆ, ಮಾಲಿನ್ಯ ನಿಯಂತ್ರಣ ಮತ್ತು ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದಂತೆ ನಗರ ಪ್ರದೇಶಗಳ ಕಡೆಗೆ ಮಾತ್ರ ಸಾಕಷ್ಟು ಗಮನಹರಿಸಲಾಗಿದೆ. ಗ್ರಾಮೀಣ ಮಟ್ಟದಲ್ಲಿ ಸ್ಥಳೀಯ ಸರಕಾರಗಳು ಹಾಗೂ ಜನಸಮುದಾಯ ತ್ಯಾಜ್ಯ ನಿರ್ವಹಣೆಗೆ ಹೆಚ್ಚಿನ ಆದ್ಯತೆ ನೀಡದಿರುವುದು ಕಂಡುಬರುತ್ತದೆ. ಹಾಗೆಯೇ ತ್ಯಾಜ್ಯ ನಿರ್ವಹಣೆ ಬಗ್ಗೆ ನಡೆದ ಹೆಚ್ಚಿನ ಅಧ್ಯಯನಗಳು ನಗರ ಪ್ರದೇಶಗಳನ್ನೇ ಕೇಂದ್ರೀಕರಿಸಿ ನಡೆದಿವೆ. ಆದರೆ ಇಂದು ತ್ಯಾಜ್ಯ ಕೇವಲ ನಗರ ಸ್ಥಳೀಯ ಸರಕಾರಗಳ ಸಮಸ್ಯೆ ಯಾಗಿ ಉಳಿಯದೆ ಗ್ರಾಮೀಣ ಸ್ಥಳೀಯ ಸರಕಾರಗಳ ಮಟ್ಟಕ್ಕೂ ವ್ಯಾಪಿಸಿದೆ. ಗ್ರಾಮೀಣ ಕೇಂದ್ರಗಳಲ್ಲೂ (ಗ್ರಾಮದಲ್ಲಿ ಅಂಗಡಿ–ಮುಂಗಟ್ಟುಗಳಿರುವ ಪ್ರದೇಶ) ಹೆಚ್ಚಾಗುತ್ತಿರುವುದು ಕಂಡುಬರುತ್ತಿದೆ. ಆರಂಭದ ಹಂತದಲ್ಲಿಯೇ ಸರಿಯಾದ ಯೋಜನೆಗಳೊಂದಿಗೆ ತ್ಯಾಜ್ಯ ನಿರ್ವಹಣೆಯ ವಿಧಾನಗಳನ್ನು ಅಳವಡಿಸಿಕೊಳ್ಳುವುದು ಪರಿಸರ ಮತ್ತು ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ಅತೀ ಅಗತ್ಯ. ಸಮಸ್ಯೆಗಳು ನಮ್ಮ ಹಿಡಿತದಲ್ಲಿರುವಾಗಲೇ ಪರಿಹಾರ ಕಂಡುಕೊಳ್ಳುವುದು ಸುಲಭ.

**ತ್ಯಾಜ್ಯ ಎಂದರೇನು?**

'ತ್ಯಾಜ್ಯ' ಎನ್ನುವ ಪದವನ್ನು ಬೇರೆ ಬೇರೆ ರೀತಿಯಲ್ಲಿ ವ್ಯಾಖ್ಯಾನಿಸಲಾಗಿದೆ. ವಿಕಿಪೀಡಿಯದ ಪ್ರಕಾರ "ಯಾವುದೇ ಪ್ರಕ್ರಿಯೆ ಮುಗಿದ ಮೇಲೆ ಉಳಿಯುವ ಬೇಡವಾದ ಮತ್ತು ಬಯಸದ

ವಸ್ತುಗಳನ್ನು ತ್ಯಾಜ್ಯ ಎನ್ನುವರು."[6] ತ್ಯಾಜ್ಯ ಎನ್ನುವುದು ಮಾನವನ ಚಟುವಟಿಕೆಗಳ ಪ್ರತಿಫಲ. ಘನ, ಅನಿಲ, ದ್ರವ ಅಥವಾ ವಿಕಿರಣ ರೂಪದಲ್ಲಿರುವ ಯಾವುದೇ ವಸ್ತು ಪರಿಸರಕ್ಕೆ ಹೊರಹಾಕಲ್ಪಟ್ಟು, ಉಗುಳಿ ಅಥವಾ ಸ್ರವಿಸಿ ಅದರ ಪರಿಣಾಮವಾಗಿ ಪರಿಸರವು ವಿರೂಪಗೊಂಡರೆ, ಹಾನಿಯಾದರೆ ಅಥವಾ ಅಸಮತೋಲನಗೊಂಡರೆ ಅಂತಹ ವಸ್ತುವನ್ನು ತ್ಯಾಜ್ಯ ಎನ್ನಬಹುದು. "ತ್ಯಾಜ್ಯ ಎಂದರೆ ಆಕಸ್ಮಿಕವಾಗಿ ಅಥವಾ ಇತರ ರೀತಿಯಲ್ಲಿ ಪರಿಸರಕ್ಕೆ ಹಾಕಲ್ಪಟ್ಟ ಯಾವುದೇ ಸ್ಥಳದಲ್ಲಿ, ಯಾವುದೇ ಸಮಯದಲ್ಲಿ ಮತ್ತು ಯಾವುದೇ ರೂಪದಲ್ಲಿರುವ (ಘನ, ದ್ರವ ಅಥವಾ ಅನಿಲ) ಎಲ್ಲಾ ಬೇಡವಾದ ಮತ್ತು ಆರ್ಥಿಕವಾಗಿ ನಿರುಪಯೋಗಿ ವಸ್ತುಗಳು"(ಶರ್ಮ ಮತ್ತು ಬುಲ್ದಿನಿ, 1994).[7]

ಯುರೋಪಿಯನ್ ಯೂನಿಯನ್ ವೇಸ್ಟ್ ಫ್ರೇಮ್‌ವರ್ಕ್ ಡೈರೆಕ್ಟಿವ್ 1975ರಲ್ಲಿ ನೀಡಿದ ತ್ಯಾಜ್ಯದ ವ್ಯಾಖ್ಯಾನವು "ಯಾವುದೇ ವಸ್ತು ಅಥವಾ ಪದಾರ್ಥವನ್ನು ಹೊಂದಿರುವ ವ್ಯಕ್ತಿಯು ಒಂದು ವೇಳೆ ಅದನ್ನು ತ್ಯಜಿಸಿದರೆ ಅಥವಾ ತ್ಯಜಿಸಲು ಇಷ್ಟಪಟ್ಟರೆ ಅದನ್ನು ತ್ಯಾಜ್ಯವೆಂದು ಪರಿಗಣಿಸಲಾಗುವುದು"(ಪೌಲ್ ಟಿ ವಿಲಿಯಮ್ಸ್, 2005)

ಒಟ್ಟಿನಲ್ಲಿ "ತ್ಯಾಜ್ಯ ಎಂದರೆ ಘನ, ದ್ರವ ಅಥವಾ ಅನಿಲ ರೂಪದಲ್ಲಿರುವ ಯಥಾಸ್ಥಿತಿಯಲ್ಲಿ ಉಪಯೋಗಕ್ಕೆ ಬಾರದೆ ಶೇಖರಿಸಲ್ಪಟ್ಟ ಅಥವಾ ಬಿಸಾಡಿದ ವಸ್ತು"

ತ್ಯಾಜ್ಯಗಳನ್ನು ಘನ, ದ್ರವ ಮತ್ತು ಅನಿಲ ಎಂದು ಮೂರು ವಿಭಾಗಗಳಾಗಿ ವಿಂಗಡಿಸಬಹುದು. ಇವುಗಳಲ್ಲಿ ಘನತ್ಯಾಜ್ಯ ಅತ್ಯಂತ ಹೆಚ್ಚು ಅಪಾಯಕಾರಿ. ಇದು ನೇರವಾಗಿ ವ್ಯಕ್ತಿ/ ಕುಟುಂಬ/ಸಮುದಾಯಗಳ ಜೀವ–ಜೀವನಗಳ ಮೇಲೆ ಪ್ರಭಾವ ಬೀರುವ ವಿಷಯವಾಗಿದೆ. ಹಾಗೂ ದಿನೇ ದಿನೇ ಇದರ ಪ್ರಮಾಣ ಹೆಚ್ಚುತ್ತಲೇ ಇದೆ. ಇದು ಅನಿಲ ಮತ್ತು ಜಲ ತ್ಯಾಜ್ಯ ಸೃಷ್ಟಿಗೂ ಕಾರಣವಾಗಿದೆ. ಘನತ್ಯಾಜ್ಯದ ವ್ಯಾಖ್ಯೆ ಮತ್ತು ವಿಧಗಳ ಬಗ್ಗೆ ಅನೇಕ ಅಭಿಪ್ರಾಯಗಳಿವೆ.

"ನಿರುಪಯೋಗಿ, ಬೇಡವಾದ, ತಿರಸ್ಕರಿಸಲ್ಪಟ್ಟ ಯಾವುದೇ ಬಿಸಾಡಿದ ವಸ್ತುವನ್ನು ಘನತ್ಯಾಜ್ಯ ಎನ್ನುವರು" (ಡಬ್ಲ್ಯು.ಎಚ್.ಒ., 1982).[8] "ದ್ರವ ಅಥವಾ ಅನಿಲ ರೂಪದಲ್ಲಿಲ್ಲದ ನಿರುಪಯೋಗಿ, ಯಾರಿಗೂ ಬೇಡವಾದ ಮತ್ತು ತಿರಸ್ಕರಿಸಲ್ಪಟ್ಟ ಪದಾರ್ಥಗಳನ್ನು ಘನತ್ಯಾಜ್ಯವೆಂದು ಕರೆಯಲಾಗುತ್ತದೆ" (ವಿಕೀಪೀಡಿಯ)[9]

ಘನತ್ಯಾಜ್ಯವನ್ನು ಮೂರು ವಿಭಾಗಗಳಾಗಿ ವಿಂಗಡಿಸಬಹುದು. ಅವುಗಳೆಂದರೆ ಅ) ಗೃಹ ತ್ಯಾಜ್ಯ ಆ) ಆಸ್ಪತ್ರೆ ತ್ಯಾಜ್ಯ ಮತ್ತು ಇ) ಕೈಗಾರಿಕಾ ತ್ಯಾಜ್ಯ. ಸಮಾಜದ ಬೇರೆ ಬೇರೆ ಚಟುವಟಿಕೆಗಳಲ್ಲಿ ಉತ್ಪಾದನೆಯಾಗುವ ಮೌಲ್ಯವನ್ನು ಕಳೆದುಕೊಂಡ ಸಾವಯವ ಮತ್ತು ನಿರವಯವ ನಿರುಪಯೋಗಿ ವಸ್ತುಗಳನ್ನು ತ್ಯಾಜ್ಯ ಎನ್ನುವರು (ಸಿಂಗ್ ಜಗಬೀರ್, 2010).[10]

## ಘನತ್ಯಾಜ್ಯದ ವಿಧಗಳು

ಘನತ್ಯಾಜ್ಯದ ವಿಧಗಳನ್ನು ಅವುಗಳು ಉತ್ಪಾದನೆಯಾಗುವ ಮೂಲ ಮತ್ತು ಗುಣಲಕ್ಷಣಗಳನ್ನು ಆಧರಿಸಿ ಈ ಕೆಳಗಿನಂತೆ ಗುರುತಿಸಲಾಗಿದೆ.

1. **ಗೃಹ ತ್ಯಾಜ್ಯ:** ಕೊಳೆತ ವಸ್ತುಗಳನ್ನು ಮತ್ತು ಹೊಲಸು ತಿಪ್ಪೆಗಳನ್ನು ಎಲ್ಲಾ ಮನೆಗಳು ಸೃಷ್ಟಿಸುತ್ತವೆ. ಉಳಿದ ಹಾಳಾದ ಆಹಾರ ಪದಾರ್ಥಗಳು, ಹಳೆ ಪಾತ್ರೆ, ಪ್ಲಾಸ್ಟಿಕ್, ಲೋಹದ ತುಂಡುಗಳು, ಹಳೆ ಕಾಗದ, ಗಾಜಿನ ಬಾಟಲಿಗಳು, ಲೋಹದ ಖಾಲಿ ಡಬ್ಬಗಳು, ಹೂವು, ತರಕಾರಿ, ಹಣ್ಣು ಹಂಪಲು ಮತ್ತು ಮಾಂಸದ ಚೂರುಗಳು, ಬೂದಿ, ಬೀಡಿ ಮತ್ತು ಸಿಗರೇಟು ತುಂಡುಗಳು, ಪ್ಲಾಸ್ಟಿಕ್ಕು, ಹಳೆಯ ಬಟ್ಟೆ ಬರೆ ಇತ್ಯಾದಿಗಳು.

2. **ವಾಣಿಜ್ಯ ತ್ಯಾಜ್ಯ:** ದಿನಸಿ ಅಂಗಡಿಗಳು, ಹೋಟೆಲುಗಳು, ಬಟ್ಟೆ ಹೊಲಿಗೆ ಅಂಗಡಿಗಳು, ಸೆಲೂನ್, ಕೋಲ್ಡು ಹೌಸ್‌ಗಳು, ತರಕಾರಿ ಅಂಗಡಿಗಳು, ಮದುವೆ ಸಭಾಂಗಣಗಳು, ಸಣ್ಣ ಗೂಡಂಗಡಿಗಳು, ಮಾಂಸ ಮತ್ತು ಮೀನು ಮಾರಾಟ ಕೇಂದ್ರಗಳು ತ್ಯಾಜ್ಯಗಳ ಸೃಷ್ಟಿಗೆ ಕಾರಣವಾಗುತ್ತವೆ.

3. **ಮಾರುಕಟ್ಟೆ ತ್ಯಾಜ್ಯ:** ನಗರಗಳ ಮಾರುಕಟ್ಟೆ ಪ್ರದೇಶಗಳಲ್ಲಿ ಉಂಟಾಗುವ ತ್ಯಾಜ್ಯಗಳು. ಇವುಗಳಲ್ಲಿ ಮುಖ್ಯವಾಗಿ ಕೊಳೆತ ತರಕಾರಿ, ಹಣ್ಣು ಹಂಪಲು, ಪ್ಯಾಕೇಜಿಂಗ್ ವಸ್ತುಗಳು, ಇತ್ಯಾದಿ.

4. **ಆಸ್ಪತ್ರೆ ತ್ಯಾಜ್ಯಗಳು:** ರೋಗಿಗಳ ಬ್ಯಾಂಡೇಜಿಂಗ್ ಬಟ್ಟೆ, ಅವಧಿ ಮೀರಿದ ಔಷಧಿಗಳು, ಹೊರತೆಗೆದ ಅಂಗಾಂಶಗಳು, ಅಂಗಗಳು, ಸೋಂಕುಕಾರಿ ವಸ್ತುಗಳು, ಇಂಜೆಕ್ಷನ್ ಸೂಜಿಗಳು, ಇಂಜೆಕ್ಷನ್ ಟ್ಯೂಬು, ಗ್ಲೂಕೋಸ್ ಬಾಟಲಿ, ಉಪಯೋಗಿಸಿದ ಹತ್ತಿ ಹಾಗೂ ಇತರ ವಸ್ತುಗಳು.

5. **ಕಟ್ಟಡ ಸಾಮಗ್ರಿ ತ್ಯಾಜ್ಯ:** ಗಾರೆ, ನೆಲಸಮಗೊಳಿಸಲಾದ ಕಟ್ಟಡಗಳ ಸಿಮೆಂಟ್, ತುಂಡಾದ ಇಟ್ಟಿಗೆ, ಜಲ್ಲಿ, ಮುರಿದ ಪೀಠೋಪಕರಣಗಳು, ತುಂಡಾದ ಮೊಸಾಯಿಕ್, ಗ್ರಾನೈಟ್ ಕಲ್ಲುಗಳು ಇತ್ಯಾದಿ.

6. **ಕಸಾಯಿಖಾನೆ ತ್ಯಾಜ್ಯಗಳು:** ಪ್ರಾಣಿಗಳ ಚರ್ಮ, ಮೂಳೆ, ಮಾಂಸದ ತ್ಯಾಜ್ಯ, ಇತ್ಯಾದಿ.

7. **ಕೈಗಾರಿಕಾ ತ್ಯಾಜ್ಯಗಳು:** ಕೈಗಾರಿಕೆಗಳ ಪ್ಯಾಕೇಜಿಂಗ್ ವಸ್ತುಗಳು, ಲೋಹದ ಚೂರುಗಳು, ಮತ್ತಿತರ ವಿವಿಧ ಕೈಗಾರಿಕೆಗಳ ಘನ, ದ್ರವ ಮತ್ತು ಅನಿಲ ರೂಪದ ಬೇರೆ ಬೇರೆ ತ್ಯಾಜ್ಯಗಳು.

8. **ಗಣಿ ತ್ಯಾಜ್ಯಗಳು:** ಗಣಿಗಾರಿಕೆಯಿಂದ ಉಂಟಾಗುವ ಮಣ್ಣು, ಕಲ್ಲು ಮತ್ತಿತರ ರಾಸಾಯನಿಕ ವಸ್ತುಗಳು

**9. ಇ– ತ್ಯಾಜ್ಯಗಳು (ಇಲೆಕ್ಟ್ರೋನಿಕ್ ತ್ಯಾಜ್ಯಗಳು):** ವಿಜ್ಞಾನ ಮತ್ತು ತಂತ್ರಜ್ಞಾನದ ಪರಿಣಾಮವಾಗಿ ಹುಟ್ಟಿಕೊಂಡ ಆಧುನಿಕ ಇ–ತ್ಯಾಜ್ಯಗಳು ಮುಖ್ಯವಾಗಿ ಸಿ.ಡಿ, ಕೆಟ್ಟು ಹೋದ ಟಿ.ವಿ, ರೇಡಿಯೋ, ಫ್ರಿಜ್, ಕಂಪ್ಯೂಟರ್, ವಾಷಿಂಗ್ ಮೆಷಿನ್, ಪ್ರಿಂಟರ್, ಜೆರಾಕ್ಸ್ ಮೆಷಿನ್, ಮುಂತಾದುವುಗಳು.

**10. ಪಶುಗಳ ತ್ಯಾಜ್ಯಗಳು:** ಪಶುಸಂಗೋಪನೆ, ಹೈನುಗಾರಿಕೆ, ಕೋಳಿಸಾಕಣೆ, ಹಂದಿಸಾಕಣೆ, ಮುಂತಾದ ಚಟುವಟಿಕೆಗಳಲ್ಲಿ ಹೊಲಸು ತ್ಯಾಜ್ಯಗಳು ಹೆಚ್ಚಿನ ಪ್ರಮಾಣದಲ್ಲಿ ಉಂಟಾಗುತ್ತವೆ.

**11. ಅಪಾಯಕಾರಿ ತ್ಯಾಜ್ಯಗಳು:** ವಿಷಯುಕ್ತ ರಾಸಾಯನಿಕಗಳು, ದಹ್ಯ ವಸ್ತುಗಳು, ರೇಡಿಯೋ ವಿಕಿರಣ ವಸ್ತುಗಳು, ಜೈವಿಕ ವಸ್ತುಗಳು ಇತ್ಯಾದಿ. ಅಪಾಯಕಾರಿ ತ್ಯಾಜ್ಯಗಳು ಘನ, ದ್ರವ ಮತ್ತು ಅನಿಲ ರೂಪದಲ್ಲಿ ಇರಬಹುದು.

**12. ಬೂದಿ:** ಉಷ್ಣವಿದ್ಯುತ್ ಸ್ಥಾವರಗಳ ಹಾರು ಬೂದಿ, ಇಂಧನಗಳ ಬೂದಿ ಹಾಗು ಇತರ ತ್ಯಾಜ್ಯ ವಸ್ತುಗಳನ್ನು ದಹಿಸುವುದರಿಂದ ಉಂಟಾಗುವ ಬೂದಿ.

**13. ಕೃಷಿ ತ್ಯಾಜ್ಯಗಳು:** ಕೃಷಿ ಬೆಳೆಗಳು ಮತ್ತು ಕೃಷಿ ಕಾರ್ಯಗಳಲ್ಲಿ ಬೇರೆ ಬೇರೆ ರೀತಿಯ ತ್ಯಾಜ್ಯಗಳು ಸೃಷ್ಟಿಯಾಗುತ್ತವೆ. ಅವುಗಳಲ್ಲಿ ಕೆಲವು ಸಾಕುಪ್ರಾಣಿಗಳಿಗೆ ಆಹಾರವಾಗಿ ಬಳಕೆಯಾದರೆ ಉಳಿದ ಹೆಚ್ಚಿನ ತ್ಯಾಜ್ಯಗಳು ಸಾವಯವ ತ್ಯಾಜ್ಯಗಳಾಗಿವೆ ಹಾಗು ಇವುಗಳನ್ನು ಗೊಬ್ಬರವಾಗಿ ಬಳಕೆ ಮಾಡಬಹುದು. ಮನುಷ್ಯರ ಮೇಲೆ ಘನ ತ್ಯಾಜ್ಯಗಳು ಉಂಟು ಮಾಡುವ ಪರಿಣಾಮ ಗಳೆಂದರೆ:

1. ಪ್ಲಾಸ್ಟಿಕ್ ತಯಾರಿಕೆಯಲ್ಲಿ ಉಪಯೋಗಿಸಲ್ಪಡುವ ಕೆಲವು ಮೊನೊಮರ್‌ಗಳು ಕ್ಯಾನ್ಸರ್ ರೋಗಕ್ಕೆ ಕಾರಣವಾಗುತ್ತವೆ ಎಂದು ಗೊತ್ತಾಗಿದೆ.
2. ಘನ ತ್ಯಾಜ್ಯಕ್ಕೆ ಅಪಾಯಕಾರಿ ವಿಕಿರಣ (ಚರ) ದೊಡನೆ ದೀರ್ಘಾವಧಿಯ ಸಂಪರ್ಕವಿದ್ದರೆ ಅದು ಜೀವಿಗಳಿಗೆ ಹಾನಿಯನ್ನುಂಟು ಮಾಡುತ್ತದೆ.
3. ಕೈಗಾರಿಕಾ ತ್ಯಾಜ್ಯಗಳಾದ ಸೀಸ, ಪಾದರಸ, ಸತು, ತಾಮ್ರ, ಕೇಡಿಯಮ್, ಕ್ರೋಮಿಯಂ ಮೊದಲಾದುವುಗಳು ಸೇರಿಕೊಂಡ ಕಲುಷಿತ ನೀರು ತನ್ನ ಸ್ವ–ಸ್ಥಿತಿಯಲ್ಲಿಯೇ ಆಹಾರ ಸರಪಣಿಯನ್ನು ಸೇರಿಕೊಂಡು ಪರಿಸರ ವ್ಯವಸ್ಥೆಗೆ ಹಾನಿ ಮಾಡುತ್ತದೆ.
4. ಲೋಹ ಮಾಲಿನ್ಯಕಾರಕಗಳು ಮಣ್ಣು ಮತ್ತು ನೀರಿನಲ್ಲಿ ವಾಸಿಸುವ ಬ್ಯಾಕ್ಟೀರಿಯಾ ಮತ್ತು ಉಪಯುಕ್ತ ಏಕಾಣು ಜೀವಿಗಳನ್ನು ನಾಶಪಡಿಸುತ್ತವೆ.
5. ತಿಪ್ಪೆ ಮತ್ತು ಘನ ತ್ಯಾಜ್ಯಗಳಲ್ಲಿ ಸಂತಾನೋತ್ಪತ್ತಿ ಕಾರ್ಯ ನಡೆಸುವ ಸೊಳ್ಳೆಗಳಿಂದ ಕಲುಷಿತಗೊಂಡ ನೀರು ಮತ್ತು ಆಹಾರದ ಮೂಲಕ ಮನುಷ್ಯರಿಗೆ ವಿವಿಧ ರೀತಿಯ ಅತಿಸಾರ ಕಾಯಿಲೆಗಳು ಬರಬಹುದು.

6 ನಾವು ದಿನನಿತ್ಯ ಸೇವಿಸುವ ಎಲ್ಲಾ ಅಹಾರವಸ್ತುಗಳು, ಉಸಿರಾಡುವ ಗಾಳಿ, ಕುಡಿಯುವ ನೀರು, ಹೀಗೆ ಜೀವಿಸಲು ಅಗತ್ಯವಾದ ಪ್ರತಿಯೊಂದು ವಸ್ತುವೂ ತ್ಯಾಜ್ಯದಿಂದಾಗಿ ವಿಷಕಾರಿಯಾಗುತ್ತಿದೆ.

**ಘನತ್ಯಾಜ್ಯ ನಿರ್ವಹಣೆ ಎಂದರೇನು?**

ತ್ಯಾಜ್ಯ ನಿರ್ವಹಣೆಯು ತ್ಯಾಜ್ಯ ಸಂಗ್ರಹ, ತ್ಯಾಜ್ಯ ಸಾಗಾಟ, ತ್ಯಾಜ್ಯ ವಿಭಜನೆ, ಮರುಬಳಕೆ ಹಾಗೂ ವಿಲೇವಾರಿ ಅಂಶಗಳನ್ನು ಒಳಗೊಂಡಿದೆ. (ಕಲ್ಲೂರಾಯ ಮತ್ತು ಜಯವಂತ ನಾಯಕ್, 2009).[11] ನಿಜವಾಗಿಯೂ ಯಾವುದೂ ತ್ಯಾಜ್ಯವಲ್ಲ. ಸರಿಯಾಗಿ ನಿರ್ವಹಣೆ ಮಾಡಿದರೆ ತ್ಯಾಜ್ಯ ಎನ್ನುವುದು "ಆಸ್ತಿ", ಮೂಲದಲ್ಲಿಯೇ ಸರಿಯಾಗಿ ವಿಭಜಿಸಿ, ಮರು ಬಳಕೆ, ಮರು ಆವರ್ತನೀಯತೆಯಲ್ಲಿ ತೊಡಗಿಸಿದರೆ ತ್ಯಾಜ್ಯವು ಸಂಪನ್ಮೂಲವಾಗಿ ಬದಲಾಗುವುದು (ಅಗರವಾಲ್, 2013).[12]

ಘನತ್ಯಾಜ್ಯ ನಿರ್ವಹಣೆಯು ತ್ಯಾಜ್ಯ ಸಂಗ್ರಹ, ತ್ಯಾಜ್ಯ ಸಾಗಾಟ, ತ್ಯಾಜ್ಯ ವಿಭಜನೆ, ಮರುಬಳಕೆ ಹಾಗೂ ವಿಲೇವಾರಿ ಅಂಶಗಳನ್ನು ಒಳಗೊಂಡಿದೆ. (ಡಬ್ಲ್ಯೂ.ಎಚ್.ಒ., 1971)[13]

**ಘನತ್ಯಾಜ್ಯ ನಿರ್ವಹಣೆಯಲ್ಲಿ ಅನುಷ್ಠಾನದಲ್ಲಿರುವ ಸಾಮಾನ್ಯ ಕ್ರಮಗಳು**

**1. ಮೂಲದಲ್ಲಿ ಕಡಿಮೆ ಮಾಡುವುದು**: ತ್ಯಾಜ್ಯ ಸೃಷ್ಟಿಯ ಮೂಲದಲ್ಲೇ ತ್ಯಾಜ್ಯವನ್ನು ಕಡಿಮೆ ಮಾಡುವುದು ಅತ್ಯುತ್ತಮ ನಿರ್ವಹಣಾ ವಿಧಾನವಾಗಿದೆ. ಉತ್ಪನ್ನದ ವಿನ್ಯಾಸ, ತಯಾರಿಕೆ ಮತ್ತು ಬಳಕೆಯಲ್ಲಿ ವ್ಯತ್ಯಾಸಗಳನ್ನು ಮಾಡಿದರೆ ಮೂಲದಲ್ಲಿ ಸೃಷ್ಟಿಯಾಗುವ ತ್ಯಾಜ್ಯ ಪ್ರಮಾಣ ಕಡಿಮೆಯಾಗುತ್ತದೆ.

**2. ಮರು ಆವರ್ತನೀಯತೆ**: ತ್ಯಾಜ್ಯಗಳನ್ನು ಮರುಸಂಸ್ಕರಿಸಿ ಉಪಯೋಗಕ್ಕೆ ಯೋಗ್ಯವಾಗುವಂತೆ ಮಾಡುವುದಕ್ಕೆ ಮರು ಆವರ್ತನೀಯತೆ ಎಂದು ಹೆಸರು. ಉದಾ: ಹಳೆಯ ಅಲ್ಯುಮಿನಿಯಂ ಪಾತ್ರೆಗಳನ್ನು ಕರಗಿಸಿ ಹೊಸ ಅಲ್ಯುಮಿನಿಯಂ ಪಾತ್ರೆಗಳನ್ನು ತಯಾರಿಸುವುದು. ಅದೇ ರೀತಿಯಲ್ಲಿ ಕಾಗದ, ಗಾಜು, ಪ್ಲಾಸ್ಟಿಕ್, ಲೋಹ ಇತ್ಯಾದಿಗಳನ್ನು ತ್ಯಾಜ್ಯಗಳಿಂದ ಪ್ರತ್ಯೇಕಿಸಿ ಹೊಸ ಉತ್ಪನ್ನಗಳಾಗಿ ರೂಪೀಕರಿಸಬಹುದು.

**3. ಗೊಬ್ಬರಗುಂಡಿ ನಿರ್ಮಾಣ**: ಇದು ಅತ್ಯಂತ ಉಪಯೋಗಕಾರಿಯಾದ ಘನತ್ಯಾಜ್ಯ ನಿರ್ವಹಣಾ ವಿಧಾನವಾಗಿರುತ್ತದೆ. ಗೊಬ್ಬರ(ಕಾಂಪೋಸ್ಟು) ಗುಂಡಿಯಲ್ಲಿ ಹಾಕಿದ ತ್ಯಾಜ್ಯಗಳು (ಲೋಹ, ಗಾಜು, ಪ್ಲಾಸ್ಟಿಕ್ ಹೊರತಾಗಿ) ಕೊಳೆತು ರಸಭರಿತ ಗೊಬ್ಬರವಾಗಿ ಮಾರ್ಪಾಡಾಗುತ್ತದೆ. ಇದು

ಸಾವಯವ ಗೊಬ್ಬರವಾಗಿದ್ದು, ರಾಸಾಯನಿಕ ಗೊಬ್ಬರಗಳು ಸೃಷ್ಟಿಸುವ ಹಲವಾರು ಸಮಸ್ಯೆಗಳಿಗೆ ನೈಸರ್ಗಿಕವಾದ ಪರಿಹಾರವಾಗಿರುತ್ತದೆ.

**4. ಎರೆಹುಳು ಗೊಬ್ಬರ ತಯಾರಿ:** ನಗರದ ವಸತಿ ಸಂಕೀರ್ಣಗಳಲ್ಲಿ ವಾಸಿಸುವವರು ತ್ಯಾಜ್ಯ ನಿರ್ವಹಣೆಗೆ ಈ ಕ್ರಮವನ್ನು ಅನುಷ್ಠಾನಕ್ಕೆ ತರಬಹುದು. ಹಳ್ಳಿಗಳಲ್ಲಿಯೂ ಗೊಬ್ಬರಗುಂಡಿ ರಚನೆಗೆ ಸ್ಥಳಾವಕಾಶವಿಲ್ಲದವರಿಗೆ ಇದು ಅತ್ಯಂತ ಸೂಕ್ತವಾದ ತ್ಯಾಜ್ಯ ನಿರ್ವಹಣಾ ವಿಧಾನ ವಾಗಿರುತ್ತದೆ.

**5. ತಿಪ್ಪೆ ಗುಂಡಿಗಳ ರಚನೆ:** ಊರ ಹೊರಗೆ ತಿಪ್ಪೆಗುಂಡಿಗಳನ್ನು ರಚಿಸಿ ಅವುಗಳಲ್ಲಿ ಸಾವಯವ ತ್ಯಾಜ್ಯಗಳನ್ನು ತುಂಬಿಸುವುದು ತ್ಯಾಜ್ಯ ನಿರ್ವಹಣೆಯ ಇನ್ನೊಂದು ವಿಧಾನವಾಗಿದೆ.

**6. ದಹನದ ಕುಲುಮೆಗಳು:** ಅತ್ಯಧಿಕ ಉಷ್ಣತೆಯಲ್ಲಿ ತ್ಯಾಜ್ಯಗಳನ್ನು ದಹಿಸಲು ಕುಲುಮೆಗಳನ್ನು ತಯಾರಿಸುವುದು ಘನತ್ಯಾಜ್ಯ ನಿರ್ವಹಣೆಯ ಮತ್ತೊಂದು ವಿಧಾನವಾಗಿರುತ್ತದೆ. ಅದು ತ್ಯಾಜ್ಯ ಪ್ರಮಾಣವನ್ನು ಕಡಿಮೆ ಮಾಡುವುದರೊಂದಿಗೆ ವಿದ್ಯುತ್ತನ್ನು ಉತ್ಪಾದಿಸುತ್ತದೆ. ತ್ಯಾಜ್ಯವನ್ನು ನಾವೇ ದಹಿಸಿದರೆ ವಿದ್ಯುತ್ತು ಉತ್ಪಾದನೆಯಾಗುವುದಿಲ್ಲ. ದಹನಕ್ರಿಯೆಗಾಗಿ ಬೃಹತ್ ಕುಲುಮೆಗಳನ್ನು ರಚಿಸಿ ವ್ಯವಸ್ಥಿತವಾಗಿ ತ್ಯಾಜ್ಯಗಳನ್ನು ಸುಟ್ಟರೆ ವಿದ್ಯುತ್ತನ್ನು ಪಡೆಯಲು ಸಾಧ್ಯವಿದೆ.

ಘನತ್ಯಾಜ್ಯ ನಿರ್ವಹಣೆಯ ಮುಖ್ಯ ಉದ್ದೇಶ ಮಾಲಿನ್ಯವನ್ನು ಕಡಿಮೆ ಮಾಡುವುದು ಮತ್ತು ತ್ಯಾಜ್ಯವನ್ನು ಮರು ಬಳಕೆ ಮಾಡಿ ಸಂಪನ್ಮೂಲಗಳನ್ನು ಉಳಿಸಿ ಸಂರಕ್ಷಿಸುವುದು. ಸಹ್ಯ ಅಭಿವೃದ್ಧಿಯನ್ನು ಸಾಧಿಸಲು ಇದು ಅತ್ಯಂತ ಅವಶ್ಯಕ. ತ್ಯಾಜ್ಯದಿಂದ ಮಾಲಿನ್ಯ, ಮಾಲಿನ್ಯದಿಂದ ಜನರ ಅನಾರೋಗ್ಯ ಮತ್ತು ಅನಾರೋಗ್ಯವು ಅವರ ಶ್ರಮ ಮತ್ತು ಉತ್ಪಾದನಾ ಸಾಮರ್ಥ್ಯದ ಮೇಲೆ ಪ್ರತಿಕೂಲ ಪರಿಣಾಮವನ್ನು ಬೀರುತ್ತದೆ. ಅತ್ಯುತ್ತಮ ನಿರ್ವಹಣಾ ವ್ಯವಸ್ಥೆಯು ಸ್ಥಳೀಯ ಸಮಾಜೋ–ಆರ್ಥಿಕ ಪರಿಸ್ಥಿತಿ, ತ್ಯಾಜ್ಯದ ವಿಧಗಳು, ತಂತ್ರಜ್ಞಾನದ ಆಯ್ಕೆ, ಸಾಂಪ್ರದಾಯಿಕ ಜ್ಞಾನದ ಅರಿವು ಮತ್ತು ಸ್ಥಳೀಯ ಜನರು ಅಭಿವೃದ್ಧಿಪಡಿಸಿದ ಪದ್ಧತಿಗೆ ಅನುಗುಣವಾಗಿರುತ್ತದೆ.

ಸೋಮಶೇಖರ್ ಅವರ ಮಾತಿನಲ್ಲಿ (2010),[14] "ಅಭಿವೃದ್ಧಿಹೊಂದುತ್ತಿರುವ ದೇಶಗಳ ಬೆಳೆಯುತ್ತಿರುವ ನಗರಗಳಲ್ಲಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಮಿಲಿಯಗಟ್ಟಲೆ ಜನರು ತ್ಯಾಜ್ಯ ಸಂಗ್ರಹ, ಪುನರ್‌ಬಳಕೆ ಮುಂತಾದ ಚಟುವಟಿಕೆಗಳಲ್ಲಿ ಭಾಗವಹಿಸುವುದರ ಮೂಲಕ ತಮ್ಮ ಹಾಗೂ ತಮ್ಮ ಕುಟುಂಬದ ಆರ್ಥಿಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಿದ್ದಾರೆ." ಅಂದರೆ ತ್ಯಾಜ್ಯ ನಿರ್ವಹಣೆಯು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಅನೇಕ ರೀತಿಯ ಉದ್ಯೋಗಾವಕಾಶವನ್ನು ಒದಗಿಸುತ್ತಿದೆ.

ದಿನೇ ದಿನೇ ಬೆಳೆಯುತ್ತಿರುವ ತ್ಯಾಜ್ಯ ರಾಶಿ ನಗರ ಪ್ರದೇಶಗಳ ಬದುಕನ್ನು ಯಾತನಾಮಯವಾಗಿ ಮಾಡುವುದರ ಜೊತೆಗೆ ನಿಧಾನವಾಗಿ ಗ್ರಾಮೀಣ ಪ್ರದೇಶಗಳನ್ನು ಬಲಿತೆಗೆದುಕೊಳ್ಳುತ್ತಿವೆ. ಘನತ್ಯಾಜ್ಯ ನಿರ್ವಹಣೆ ಬಗ್ಗೆ ಜಗತ್ತಿನಾದ್ಯಂತ ಎಲ್ಲಾ ದೇಶಗಳಲ್ಲಿ ಹೊಸ ಹೊಸ ಪ್ರಯೋಗಗಳು ನಡೆದಿವೆ. ಆಧುನಿಕ ತಂತ್ರಜ್ಞಾನಗಳ ಮೂಲಕ ತ್ಯಾಜ್ಯಗಳ ಪುನರ್ ಬಳಕೆಯ ವಿಧಾನಗಳನ್ನು ಅಳವಡಿಸಲಾಗಿದೆ. ತ್ಯಾಜ್ಯ ಸಂಗ್ರಹ ಹಾಗೂ ಸಾಗಾಟ ವ್ಯವಸ್ಥೆಯಲ್ಲೂ ಬಹಳಷ್ಟು ಸುಧಾರಣೆಗಳಾಗಿವೆ. ಸರಕಾರಗಳು ಸಾಕಷ್ಟು ನೀತಿ ನಿಯಮಾವಳಿಗಳನ್ನು ರೂಪಿಸಿವೆ. ವಿಶ್ವಸಂಸ್ಥೆ (ಯುಎನ್ಒ) ಸಹಿತ ಹಲವಾರು ಅಂತರಾಷ್ಟ್ರೀಯ ಸಂಸ್ಥೆಗಳು ಈ ಕಾರ್ಯದಲ್ಲಿ ಭಾಗವಹಿಸಿವೆ. ಸ್ವಯಂ–ಸೇವಾ ಸಂಸ್ಥೆಗಳು ಜನಜಾಗೃತಿ ಕಾರ್ಯಕ್ರಮಗಳನ್ನು ನಡೆಸುವುದರ ಮೂಲಕ ಘನತ್ಯಾಜ್ಯ ಉತ್ಪಾದನೆಯನ್ನು ಮೂಲದಲ್ಲೇ ಕಡಿತಗೊಳಿಸುವ ಮತ್ತು ಸರಿಯಾದ ರೀತಿಯಲ್ಲಿ ವಿಲೇವಾರಿಗೊಳಿಸುವ ಬಗ್ಗೆ ತಿಳುವಳಿಕೆ ನೀಡುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ನಾಗರಿಕರ ಭಾಗವಹಿಸುವಿಕೆಯೂ ತೃಪ್ತಿಕರವಾಗಿದೆ. ಇಷ್ಟೆಲ್ಲಾ ಪ್ರಯತ್ನಗಳು ನಡೆಯುತ್ತಿದ್ದರೂ ತ್ಯಾಜ್ಯ ನಿರ್ವಹಣೆಯಲ್ಲಿ ಆಡಳಿತ ವ್ಯವಸ್ಥೆ ಎಡವುತ್ತಿರುವುದು ಕಂಡುಬರುತ್ತಿದೆ.

ಹಿಂದಿನ ಕಾಲದಲ್ಲಿ ಜನಸಂಖ್ಯೆ ಕಡಿಮೆ, ತ್ಯಾಜ್ಯಗಳ ಉತ್ಪಾದನೆಯೂ ಕಡಿಮೆ ಹಾಗೂ ಸಾಕಷ್ಟು ಪ್ರಮಾಣದಲ್ಲಿ ಭೂಮಿಯೂ ದೊರಕುತ್ತಿತ್ತು. ಹಾಗಾಗಿ ತ್ಯಾಜ್ಯ ನಿರ್ವಹಣೆ ಒಂದು ಸವಾಲಾಗಿರಲಿಲ್ಲ. ನಗರೀಕರಣ ಮತ್ತು ಕೈಗಾರಿಕೀಕರಣಗಳ ಪ್ರಕ್ರಿಯೆಗಳಿಂದಾಗಿ ನಗರ ಪ್ರದೇಶಗಳ ಜನಸಂಖ್ಯೆ ಹೆಚ್ಚುತ್ತಾ ಹೋಯಿತು ಹಾಗೆಯೇ ತ್ಯಾಜ್ಯ ಪ್ರಮಾಣವೂ ಹೆಚ್ಚಾಗಿರುವುದು ಕಂಡುಬಂದಿದೆ. ಸುಮಾರು ಸಾ.ಶ.ಪೂ 500 (ಬಿ.ಸಿ.ಇ)ರಲ್ಲಿ ಗ್ರೀಕ್‌ನ ಅಥೇನ್ಸ್‌ನಲ್ಲಿ ತ್ಯಾಜ್ಯವನ್ನು ರಸ್ತೆಯಲ್ಲಿ ಬಿಸಾಡುವುದರ ವಿರುದ್ಧ ಕಾನೂನು ಜಾರಿಗೆ ಬಂದಿತ್ತು (ವಿಲಿಯಮ್ಸ್, 2005).[15] ನಂತರ ತ್ಯಾಜ್ಯ ನಿರ್ಮೂಲನ ವ್ಯವಸ್ಥೆಯು ಮೆಡಿಟರೇನಿಯನ್ ನಗರಗಳಲ್ಲಿ ಪ್ರಾರಂಭಗೊಂಡಿತು. ಇಂಗ್ಲೆಂಡ್‌ನಲ್ಲಿ 1880ರಲ್ಲಿ ತ್ಯಾಜ್ಯ ನಿರ್ವಹಣೆಯನ್ನು ಪ್ರಾರಂಭಿಸಲಾಯಿತು. ತದನಂತರ ಇತರ ದೇಶಗಳಲ್ಲಿ ಜಾಗೃತಿ ಪ್ರಾರಂಭವಾಯಿತು. ಭೂಮಿಯಲ್ಲಿ ಹೂಳುವುದು, ನೀರಿನಲ್ಲಿ ಹಾಕುವುದು ಮತ್ತು ಸುಡುವುದು ಅಂದಿನ ಸಾಮಾನ್ಯ ವಿಧಾನಗಳಾಗಿದ್ದವು (ರಜೀಯಾ ಸುಲ್ತಾನ್, 2012).[16]

ಇಕ್ಬಾಲ್ ಖಾನ್ (2013)[17]ರವರ ಅಭಿಪ್ರಾಯದಂತೆ "ಹೆಚ್ಚಿನ ನಗರಗಳ ಕೇಂದ್ರಗಳಲ್ಲಿ, ತ್ಯಾಜ್ಯವನ್ನು ತಗ್ಗು ಪ್ರದೇಶದಲ್ಲಿ ಹಾಕುವ ಮೂಲಕ ವಿಲೇವಾರಿ ಮಾಡುತ್ತಾರೆ. ವಿಲೇವಾರಿ ಜಾಗಗಳನ್ನು ಆಯ್ಕೆ ಮಾಡುವಾಗ ತ್ಯಾಜ್ಯ ಸಂಗ್ರಹ ನಡುವಿನ ದೂರವನ್ನು ಪರಿಗಣಿಸಲಾಗುತ್ತಿದೆ ಮತ್ತು ಹೊಸ ವಿಲೇವಾರಿ ಜಾಗಗಳನ್ನು, ಪ್ರಸ್ತುತ ಉಪಯೋಗಿಸುತ್ತಿರುವ ಜಾಗದಲ್ಲಿ ತ್ಯಾಜ್ಯ ತುಂಬಿದ ನಂತರ ಗುರುತಿಸಲಾಗುತ್ತದೆ. ಹೆಚ್ಚಿನ ನಗರಗಳಲ್ಲಿ ತ್ಯಾಜ್ಯವನ್ನು ಮಣ್ಣಿನ ಗುಂಡಿಗಳಲ್ಲಿ ತುಂಬಲಾಗುತ್ತದೆ."

ತೃತೀಯ ಮಾಲಿನ್ಯ ಎನಿಸಿಕೊಂಡಿರುವ ಘನತ್ಯಾಜ್ಯವು ಹೆಚ್ಚಾಗಲು ಅನೇಕ ಕಾರಣಗಳಿವೆ. ಇವತ್ತಿನ ಹೆಚ್ಚಿನ ವಸ್ತುಗಳು ಒಂದು ಸಲ ಉಪಯೋಗಿಸಿ ಬಿಸಾಡುವಂತಹುದು. ಪೊಟ್ಟಣದಲ್ಲಿ ಕಟ್ಟಿದ (ಪ್ಯಾಕೇಜ್ ಕನ್ಸಂಷನ್) ಆಹಾರ ವಸ್ತುಗಳನ್ನು ಉಪಯೋಗಿಸುವ ಪ್ರಮಾಣ ಹೆಚ್ಚಾಗುತ್ತಿದೆ. ಇದರಿಂದಾಗಿ ಅಮೇರಿಕಾದಲ್ಲಿ ಪ್ಲಾಸ್ಟಿಕ್ ಕೈಗಾರಿಕೆಯು ಇನ್ನಷ್ಟು ವಿಸ್ತರಿಸಿಕೊಂಡಿದೆ. ಮಣ್ಣಿನಲ್ಲಿ ತ್ಯಾಜ್ಯ ಹೂಳುವಿಕೆಯ ವಿಧಾನಕ್ಕೆ ಮೂಲಭೂತ ವಿರೋಧ ಏಕೆಂದರೆ ಅದು ಪ್ರಾಕೃತಿಕ ಸಂಪನ್ಮೂಲಗಳನ್ನು ನಾಶಗೊಳಿಸುತ್ತದೆ. ಆದರೂ ಇದು ಒಂದು ರೀತಿಯ ಅತೀ ಕಡಿಮೆ ವೆಚ್ಚದ ತ್ಯಾಜ್ಯ ವಿಲೇವಾರಿ ವಿಧಾನವಾಗಿದೆ (ತೋಮಸ್ ವಾನ್ ಡೈಕೆ, 1972).[18]

ಟಾಟಾ ಎನರ್ಜಿ ರಿಸರ್ಚ್ ಇನ್ಸ್‌ಟಿಟ್ಯೂಟ್ ನಡೆಸಿದ ಅಧ್ಯಯನವು ಕಳೆದ ಎರಡು ದಶಕಗಳಲ್ಲಿ ಘನತ್ಯಾಜ್ಯಗಳ ಲಕ್ಷಣಗಳು ಬದಲಾಗಿರುವುದನ್ನು ಗುರುತಿಸಿದೆ. ಅನುಭೋಗ ಶಾಹಿತ್ವ ಮತ್ತು ಜೀವನ ಶೈಲಿಯ ಬದಲಾವಣೆಗಳನ್ನು ಅದು ಅವಲಂಬಿಸಿದೆ. ತ್ಯಾಜ್ಯಗಳ ಅಂಶಗಳು ಕಾಲದಿಂದ ಕಾಲಕ್ಕೆ, ಸ್ಥಳದಿಂದ ಸ್ಥಳಕ್ಕೆ, ಜೀವನ ಶೈಲಿ, ಆಹಾರ ಕ್ರಮಗಳು, ಜೀವನ ಮಟ್ಟ, ವಾಣಿಜ್ಯ ಮತ್ತು ಕೈಗಾರಿಕಾ ಚಟುವಟಿಕೆಗಳನ್ನು ಹೊಂದಿಕೊಂಡು ವ್ಯತ್ಯಾಸಗಳಾಗುತ್ತವೆ(ಸುಭಾಶ್ ಆನಂದ್).[19]

ಹೆಸಾರ್ಡಸ್ ವೇಸ್ಟ್ (ಮೆನೇಜ್‌ಮೆಂಟ್ ಆಂಡ್ ಹ್ಯಾಂಡಲಿಂಗ್) ಅಮೆಂಡ್ಮೆಂಟ್ ರೂಲ್ಸ್ 2003ರ ಪ್ರಕಾರ ಇ–ವೇಸ್ಟ್ ಎನ್ನುವುದು ಎಲ್ಲಾ ತರಹದ ನಿರುಪಯೋಗಿ ಇಲೆಕ್ಟ್ರಾನಿಕ್ ಉಪಕರಣಗಳು, ಅಂದರೆ ದೂರದರ್ಶನ, ರೆಫ್ರಿಜರೇಟರ್, ದೂರವಾಣಿ, ವಾತಾನುಕೂಲಿ, ಕಂಪ್ಯೂಟರ್ಸ್, ಜಂಗಮವಾಣಿ(ಮೊಬೈಲ್), ಹಳೆ ಡಿಜಿಟಲ್ ಕ್ಯಾಮರ, ಸಿ.ಡಿ.ಇತ್ಯಾದಿಗಳನ್ನು ಒಳಗೊಂಡಿದೆ. ಇದು ಅಪಾಯಕಾರಿ ತ್ಯಾಜ್ಯಗಳ ಪಟ್ಟಿಗೆ ಸೇರುತ್ತದೆ (ಹಣಕಾಸು ಸಚಿವಾಲಯ, ಭಾರತ ಸರಕಾರ, 2009).[20] ಅಮೇರಿಕ ಮೊದಲಬಾರಿಗೆ ಇ–ವೇಸ್ಟ್ ಕಾನೂನನ್ನು ಜಾರಿಗೆ ತಂದಿದೆ.ಅಮೇರಿಕಾದ ಕ್ಯಾಲಿಫೋರ್ನಿಯವು ಇಲೆಕ್ಟ್ರಾನಿಕ್ ವೇಸ್ಟ್ ರಿಸೈಕ್ಲಿಂಗ್ ಆ್ಯಕ್ಟ್ 2003ನ್ನು ಜಾರಿಗೆ ತಂದಿತು.

ಇ–ತ್ಯಾಜ್ಯ (ಇಲೆಕ್ಟ್ರಾನಿಕ್ ತ್ಯಾಜ್ಯ) ಸಮಸ್ಯೆಯು ದೊಡ್ಡ ಸಮಸ್ಯೆಯಾಗಿ ಕಾಡಲು ಎರಡು ಪ್ರಮುಖ ಕಾರಣಗಳೆಂದರೆ 1. ಇ–ತ್ಯಾಜ್ಯವು ಅತ್ಯಂತ ಅಪಾಯಕಾರಿ ಮತ್ತು 2. ತಂತ್ರಜ್ಞಾನ ದಲ್ಲಾಗುತ್ತಿರುವ ಕ್ಷಿಪ್ರ ಬೆಳವಣಿಗೆಯಿಂದಾಗಿ ವಸ್ತುಗಳು ಬಹುಬೇಗ ಮೌಲ್ಯವನ್ನು ಕಳೆದುಕೊಳ್ಳುತ್ತವೆ. ಇವು ಇ–ತ್ಯಾಜ್ಯದ ಪ್ರಮಾಣ ಗಣನೀಯವಾಗಿ ಹೆಚ್ಚಾಗಲು ಕಾರಣವಾಗಿದೆ. ಕೈಗಾರಿಕೆಯಲ್ಲಿ ಅಭಿವೃದ್ಧಿ ಹೊಂದಿದ ಅಮೇರಿಕಾದಂತಹ ರಾಷ್ಟ್ರಗಳು ಇಲೆಕ್ಟ್ರಾನಿಕ್ ಉಪಕರಣಗಳ ಬಹುದೊಡ್ಡ

ಗ್ರಾಹಕರು. ಪರಿಣಾಮವಾಗಿ ಈ ರಾಷ್ಟ್ರಗಳಲ್ಲಿ ಅಪಾಯಕಾರಿ ತ್ಯಾಜ್ಯಗಳ ಉತ್ಪಾದನೆ ಗರಿಷ್ಠ ಪ್ರಮಾಣದಲ್ಲಿದೆ. ಆದರೆ ಈ ರಾಷ್ಟ್ರಗಳು ಇವುಗಳನ್ನು ಏಷಿಯಾ, ಆಫ್ರಿಕಾದಂತಹ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ರಫ್ತು ಮಾಡುತ್ತವೆ. ಅಪಾಯಕಾರಿ ತ್ಯಾಜ್ಯಗಳ ಅನಿರ್ಬಂಧಿತ ರಫ್ತಿನಿಂದಾಗಿ ಬಡ ರಾಷ್ಟ್ರಗಳ ಜನರಿಗೆ ಬಡತನ ಮತ್ತು ವಿಷ ತ್ಯಾಜ್ಯಗಳ ನಡುವಿನ ಆಯ್ಕೆಯಲ್ಲಿ ಬದುಕುವಂತೆ ಮಾಡಿದೆ (ಹ್ಯಾನ್ಸ್ ಮತ್ತು ಜಯಶೀಲ, 2009).[21]

ವಿಶ್ವ ಬ್ಯಾಂಕ್ ವರದಿ (1995)[22] ಈ ರೀತಿ ಹೇಳುತ್ತದೆ, "ಮನರ್ಬಳಕೆ ವಿಧಾನ ಭಾರತ ದಲ್ಲಿ 1960 ರಿಂದಲೇ ಇತ್ತು. ಹೆಚ್ಚಿನ ರಾಷ್ಟ್ರಗಳಲ್ಲಿ ಕೇವಲ ಪ್ಲಾಸ್ಟಿಕನ್ನು ಮಾತ್ರ ಸ್ವಲ್ಪ ಪ್ರಮಾಣದಲ್ಲಿ ಪುನರ್‌ಬಳಕೆ ಮಾಡುತ್ತಿದ್ದಾರೆ, ಆದರೆ ಭಾರತದಲ್ಲಿ ಶೇಕಡ 75ರಷ್ಟು ತ್ಯಾಜ್ಯಗಳು ಮನರ್ಬಳಕೆ ಆಗುತ್ತಿವೆ".

ವಿಶ್ವ ಬ್ಯಾಂಕ್ ವರದಿ (1998)[23] 'ನಗರೀಕರಣ ಮತ್ತು ಹೆಚ್ಚುತ್ತಿರುವ ಆದಾಯದಿಂದಾಗಿ ಸಂಪನ್ಮೂಲಗಳ ಬಳಕೆ ಹೆಚ್ಚಿದೆ. ಇದರೊಂದಿಗೆ ತ್ಯಾಜ್ಯ ಉತ್ಪಾದನಾ ಪ್ರಮಾಣವೂ ಹೆಚ್ಚಿದೆ. ನಗರ ಪ್ರದೇಶಗಳ ಜನರು ಉಪಯೋಗಿಸುವ ಸಂಪನ್ಮೂಲಗಳು ಗ್ರಾಮೀಣ ಪ್ರದೇಶಗಳ ಜನರು ಉಪಯೋಗಿಸುವ ಸಂಪನ್ಮೂಲದ ಎರಡರಷ್ಟಿದೆ. ಈ ನಗರ–ಗ್ರಾಮೀಣ ತ್ಯಾಜ್ಯ ಉತ್ಪಾದನಾ ವ್ಯತ್ಯಾಸವು ಇತರ ಏಷ್ಯಾದ ರಾಷ್ಟ್ರಗಳಾದ ಬಾಂಗ್ಲಾದೇಶ, ಪಾಕಿಸ್ಥಾನ, ಶ್ರೀಲಂಕಾಗಳಲ್ಲಿ ಕಂಡುಬರುತ್ತದೆ'. ಅಭಿವೃದ್ಧಿ ಮತ್ತು ತ್ಯಾಜ್ಯ ಉತ್ಪಾದನೆಗಿರುವ ನೇರ ಸಂಬಂಧವನ್ನು ವಿಶ್ವಬ್ಯಾಂಕಿನ ಈ ವರದಿ ಸಾಬೀತುಪಡಿಸುತ್ತದೆ.

ಘನತ್ಯಾಜ್ಯ ನಿರ್ವಹಣೆ ಸೇವೆಗಳಿಗೆ ಸಂಬಂಧಿಸಿ, ಆಯಾಯ ಮುನ್ಸಿಫಲ್‌ಗಳು ತಮ್ಮದೇ ನಿಯಮಗಳನ್ನು ರೂಪಿಸಿಕೊಂಡಿವೆ. ಆದರೆ ಹೆಚ್ಚಿನ ನಿಯಮಗಳು ತುಂಬಾ ಹಳೆಯದಾದ ಕಾರಣ ತಿದ್ದುಪಡಿ ಮಾಡುವ ಅವಶ್ಯಕತೆ ಇದೆ. ಭಾರತೀಯ ದಂಡ ಸಂಹಿತೆ, ಅಪರಾಧ ನಿಯಮ ಸಂಹಿತೆ ಮತ್ತು ಭಾರತೀಯ ಸಂವಿಧಾನದಲ್ಲಿ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ಕಾನೂನಿನ ಹಾಗೂ ಸಾಂಸ್ಥಿಕ ಚೌಕಟ್ಟು ನೀಡಲಾಗಿದೆ (ಮಾಲಿಕ್, 2010).[24]

ಸುಮೀತ್ ಗುಪ್ತ ಮತ್ತು ಆಶಿಸ್ ಕುಮಾರ್(2000)[25] ಇವರು ದೆಹಲಿ ನಗರದಲ್ಲಿ ನಡೆಸಿದ ಅಧ್ಯಯನದಲ್ಲಿ ತ್ಯಾಜ್ಯ ಸಂಗ್ರಹ ಮತ್ತು ಸಾಗಾಟದ ನಡುವೆ ಹೊಂದಾಣಿಕೆ ಇಲ್ಲದಿರುವುದನ್ನು ಗುರುತಿಸಿದ್ದಾರೆ. ಸಂಗ್ರಹ, ಸಾಗಾಟ ಮತ್ತು ನಿರ್ವಹಣಾ ಪ್ರಕ್ರಿಯೆಯಲ್ಲಿ ಒಂದೇ ಕಂಪೆನಿ ಅಥವಾ ಒಂದೇ ಕಂಪೆನಿಯ ಅಡಿಯಲ್ಲಿ ಕ್ರೋಢೀಕೃತ ವಿಧಾನವನ್ನು ಅಳವಡಿಸಬೇಕಾಗಿದೆ ಎಂದಿದ್ದಾರೆ.

ಸೋಮಶೇಖರ್‌ರವರು (2010)[26] ಮಂಗಳೂರು ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ನಡೆಸಿದ ಅಧ್ಯಯನದಲ್ಲಿ ಪ್ರತೀ ನಗರಕ್ಕೂ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ಸಂಪೂರ್ಣ ವೆಚ್ಚ ಲೆಕ್ಕಾಚಾರ ಪದ್ಧತಿಯ ಅಗತ್ಯವಿದೆ. ಅದು ತ್ಯಾಜ್ಯ ನಿರ್ವಹಣೆಯ ಸರಿಯಾದ ಖರ್ಚನ್ನು ತೋರಿಸಬೇಕು, ಅಂದರೆ ಎಲ್ಲಾ ಗುಪ್ತವೆಚ್ಚಗಳನ್ನು ಒಳಗೊಂಡಿರಬೇಕು. ಖಾಸಗಿ ಪಾಲುದಾರಿಕೆ, ಖಾಸಗಿ–ಸಾರ್ವಜನಿಕ ಭಾಗವಹಿಸುವಿಕೆ ಅಥವಾ ಸ್ವಯಂಸೇವಾ ಸಂಸ್ಥೆಗಳ ಭಾಗವಹಿಸುವಿಕೆಯನ್ನು ಒಳಗೊಂಡಿರುವ ಸ್ಪಷ್ಟವಾದ ತ್ಯಾಜ್ಯ ನಿರ್ವಹಣಾ ನೀತಿಯ ಅಗತ್ಯವಿದೆ. ಹೆಚ್ಚಿನ ವೆಚ್ಚ ಸಿಬ್ಬಂದಿಗಳ ವೇತನಕ್ಕೆ ಪೋಲಾಗುತ್ತಿರುವುದರಿಂದ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ತಂತ್ರಜ್ಞಾನ, ಸಾಧನ ಸಲಕರಣೆಗಳಿಗೆ ಅಲ್ಪ ಮೊತ್ತ ದೊರಕುತ್ತಿರುವುದು ಸಮಸ್ಯೆಯನ್ನು ಉಲ್ಬಣಗೊಳಿಸಿದೆ' ಎಂಬ ಅಂಶವನ್ನು ಕಂಡುಕೊಂಡಿದ್ದಾರೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ವಾಯುಮಾಲಿನ್ಯ, ಜಲಮಾಲಿನ್ಯ ಮುಂತಾದ ಪರಿಸರ ಸಮಸ್ಯೆಗಳಿಗೆ ನೀಡಿದಷ್ಟು ಪ್ರಾಶಸ್ತ್ಯ ಘನತ್ಯಾಜ್ಯ ನಿರ್ವಹಣೆಗೆ ನೀಡಿಲ್ಲ ಎಂದಿದ್ದಾರೆ.

"ತ್ಯಾಜ್ಯ ನಿರ್ವಹಣೆಗೆ ಉತ್ತಮ ಉದಾಹರಣೆ ಭಾರತ ಸರಕಾರ ದೆಹಲಿಯ ಮೆಟ್ರೋ ರೈಲ್ವೆ ನಿಲ್ದಾಣಗಳಲ್ಲಿ ಅಳವಡಿಸಿರುವ "ಶೂನ್ಯ ಸಹನೆ ನೀತಿ", ಇದರ ಪ್ರಕಾರ ರೈಲ್ವೆ ನಿಲ್ದಾಣದ ಒಳಗೆ ಯಾವುದೇ ತಿಂಡಿ, ಪಾನೀಯಗಳನ್ನು ಸೇವಿಸುವಂತಿಲ್ಲ. ಇದು ಇಡೀ ವಿಶ್ವಕ್ಕೆ ಮಾದರಿ ಯಾಗಿದೆ" (ಶ್ರೇಜಿಯಾಂಗ್, 2010).[27]

ಎಕ್ಸೆಲ್ ಇಂಡಸ್ಟ್ರೀಸ್ ಲಿಮಿಟೆಡ್ ಎನ್ನುವ ರಾಸಾಯನಿಕ ಗೊಬ್ಬರ ತಯಾರಿಕಾ ಘಟಕವು ಕಡಿಮೆ ವೆಚ್ಚದ ಘನತ್ಯಾಜ್ಯ ನಿರ್ವಹಣೆ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸಿದೆ. ವೆಚ್ಚ ಕಡಿತಗೊಳಿಸುವ ಈ ತಂತ್ರಜ್ಞಾನವನ್ನು ಭಾರತದ ಹೆಚ್ಚಿನ ನಗರಪಾಲಿಕೆಗಳು ಅಳವಡಿಸಿಕೊಂಡಿವೆ. ಈ ತಂತ್ರಜ್ಞಾನವು ಘನತ್ಯಾಜ್ಯವನ್ನು ಸಾವಯವ ಗೊಬ್ಬರವನ್ನಾಗಿ ಪರಿವರ್ತಿಸುತ್ತದೆ (ರಾಮಚಂದ್ರ, 2006).[28]

ದೇಶದಾದ್ಯಂತ ನಗರ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ನಿರ್ವಹಣೆಗಾಗಿ ವಿವಿಧ ಯೋಜನೆಗಳನ್ನು ಕಾರ್ಯಗತಗೊಳಿಸಿವೆ. ಹೈದರಾಬಾದ್ ನಗರದಲ್ಲಿ ಶೇಕಡ 75ರಷ್ಟು ಬೀದಿ ಸ್ವಚ್ಛಗೊಳಿಸುವ ಕೆಲಸವನ್ನು ಖಾಸಗೀಕರಣಗೊಳಿಸಲಾಗಿದೆ. ಸೆಲ್ಕೊ ಇಂಟರ್‌ನ್ಯಾಷನಲ್ ಎನ್ನುವ ಸಂಸ್ಥೆಗೆ ನಗರಪಾಲಿಕೆಯು 10 ಎಕರೆ ಭೂಮಿಯನ್ನು 30 ವರ್ಷಗಳ ಅವಧಿಗೆ ಭೋಗ್ಯಕ್ಕೆ ಕೊಟ್ಟಿದೆ. ಸಾರ್ವಜನಿಕ–ಖಾಸಗಿ ಪಾಲುದಾರಿಕೆಯಲ್ಲಿ ಗುಜರಾತ್ ಅಹಮದಾಬಾದ್‌ನಲ್ಲಿ 500 ಮಿಲಿಯನ್ ಟನ್ ಸಾಮರ್ಥ್ಯದ ತ್ಯಾಜ್ಯ ಆಧಾರಿತ ಗೊಬ್ಬರ ತಯಾರಿಕಾ ಕಾರ್ಖಾನೆಯನ್ನು ಸ್ಥಾಪಿಸಿದೆ. ಚೆನ್ನೈ ನಗರವು ಸಾರ್ವಜನಿಕ–ಖಾಸಗಿ ಸಹಭಾಗಿತ್ವದಲ್ಲಿ ತ್ಯಾಜ್ಯ ನಿರ್ವಹಣೆ ಕೈಗೊಂಡ ಪ್ರಥಮ ನಗರ. ಓನಿಕ್ಸ ಎನ್ನುವ ಸಂಸ್ಥೆಗೆ ತ್ಯಾಜ್ಯ ವಿಲೇವಾರಿಗೆ ಸಂಬಂಧಿಸಿದ ಎಲ್ಲಾ ಕಾರ್ಯ

ಗಳನ್ನು 7 ವರ್ಷಗಳ ಅವಧಿಗೆ ನೀಡಲಾಗಿದೆ. ಲಕ್ನೊ ನಗರ ನಿಗಮವು ಬಯೋಮಿಥೇನೈಸೇಶನ್ ಪ್ಲಾಂಟನ್ನು ಸ್ಥಾಪನೆ ಮಾಡಿದೆ. ಖಾಸಗಿ ಸಂಸ್ಥೆಗಳಾದ ಚೆನ್ನೈನ ಎಂಕೆನ್ ಇಂಜಿನಿಯರ್ಸ್ ಪ್ರೈ.ಲಿಮಿಟೆಡ್, ಆಸ್ಟ್ರೀಯಾದ ಎನ್‌ಟೆಕ್ ಎನ್ವಿರಾನ್‌ಮೆಂಟ್ ಟೆಕ್ನೋಲಜಿ, ಸಿಂಗಾಪುರದ ಜುರೊಂಗ್ ಎಂಜಿನಿಯ ರಿಂಗ್ ಲಿಮಿಟೆಡ್, ಫ್ರಾನ್ಸ್‌ನ ಸಿಜಿಇಎ ಏಷ್ಯಾ ಹೋಲ್ಡಿಂಗ್ಸ್ ಪ್ರೈ.ಲಿಮಿಟೆಡ್ ಮತ್ತು ಭಾರತದ ಲಾರ್ಸನ್ ಎಂಡ್ ಟ್ಯೂಬ್ರೋ ಸಂಸ್ಥೆಗಳು ಪಾಲುದಾರಿಕೆಯನ್ನು ಪಡೆದುಕೊಂಡಿವೆ. ಮಂಗಳೂರು ಮಹಾನಗರ ಪಾಲಿಕೆಯು ಮಾರುಕಟ್ಟೆಗಳ ಸಾವಯವ ತ್ಯಾಜ್ಯಗಳನ್ನು ಬಳಸಿಕೊಂಡು ಬಯೋಮಿಥೆನೈಸೇಶನ್ ಘಟಕವನ್ನು ಪ್ರಾರಂಭಿಸಿದೆ. ಹೀಗೆ ದೇಶದಾದ್ಯಂತ ಸ್ಥಳೀಯ ಸಂಸ್ಥೆಗಳು ತ್ಯಾಜ್ಯಗಳನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳಲು ಅನೇಕ ವೈಜ್ಞಾನಿಕ ಕ್ರಮಗಳನ್ನು ಅಳವಡಿಸಿವೆ.

ರಾಮಚಂದ್ರರವರು(2006)[29] ಕೈಗೊಂಡ ಅಧ್ಯಯನವು ತಿಳಿಸುವಂತೆ ತ್ಯಾಜ್ಯ ಸಂಗ್ರಹ ಅವಧಿಯು ಹವಾಗುಣ, ಸಾಗಾಟ ವಾಹನಗಳ ದೊರಕುವಿಕೆ ಮತ್ತು ಸಾಗಾಟ ವೆಚ್ಚವನ್ನು ಅವಲಂಬಿಸಿದೆ. ತಾಪಮಾನ ಹೆಚ್ಚಿರುವ ಸ್ಥಳಗಳಲ್ಲಿ ವಾರಕ್ಕೆ ಕನಿಷ್ಠ ಎರಡು ಸಲ ತ್ಯಾಜ್ಯ ಸಂಗ್ರಹಿಸಬೇಕಾಗುತ್ತದೆ, ಕಾರಣ ಕೊಳೆತು ಹೋಗುವ ತ್ಯಾಜ್ಯಗಳು ದುರ್ವಾಸನೆ ಹಾಗೂ ಕೊಳಚೆಯನ್ನುಂಟು ಮಾಡುತ್ತವೆ. ಗೃಹ ತ್ಯಾಜ್ಯಗಳು ಹೆಚ್ಚಾಗಿ ಈ ವರ್ಗಕ್ಕೆ ಸೇರಿರುವ ಕಾರಣ ಆರೋಗ್ಯದ ದೃಷ್ಟಿಯಿಂದ ಆಗಾಗ ಸಂಗ್ರಹ ಮಾಡುವ ಅವಶ್ಯಕತೆ ಇದೆ. ಹಾಗೆಯೇ ಮುಚ್ಚಿದ ಕಸದ ತೊಟ್ಟಿಗಳಾಗಿದ್ದರೆ ಮೂರು ದಿನಗಳಿಗೊಮ್ಮೆ ತ್ಯಾಜ್ಯ ಸಂಗ್ರಹ ಮಾಡಿದರೆ ಸಾಕಾಗುತ್ತದೆ. ಜನ ಸಾಂದ್ರತೆ, ಜನರ ಆದಾಯ, ಆಹಾರ ಪದ್ಧತಿ(ಸಸ್ಯಹಾರ/ಮಾಂಸಹಾರ) ಇತ್ಯಾದಿ ಅಂಶಗಳು ತ್ಯಾಜ್ಯಸಂಗ್ರಹದ ಅವಧಿಯನ್ನು ನಿರ್ಧಾರ ಮಾಡುತ್ತವೆ. ತ್ಯಾಜ್ಯಸಂಗ್ರಹ ವೆಚ್ಚವು ವಾಹನಗಳ ಸಂಖ್ಯೆ, ನೌಕರರು ಹಾಗೂ ಸಾಗಾಟದ ದೂರವನ್ನು ಅವಲಂಬಿಸಿಕೊಂಡಿದೆ. ತ್ಯಾಜ್ಯ ಸಂಗ್ರಹದ ತೊಟ್ಟಿಗಳ ಗಾತ್ರ ದೊಡ್ಡದಾದಷ್ಟು ಹೆಚ್ಚು ದಿನಗಳ ಅಂತರವನ್ನು ಕಾಯ್ದುಕೊಳ್ಳಬಹುದು. ಆದರೆ ತ್ಯಾಜ್ಯ ಸಂಗ್ರಹದ ಅವಧಿ ಕಡಿಮೆಯಾದಷ್ಟು ಆರೋಗ್ಯ, ಸ್ವಚ್ಛತೆ ಮತ್ತು ನೈರ್ಮಲ್ಯೀಕರಣದ ದೃಷ್ಟಿಯಿಂದ ಉತ್ತಮ. ತ್ಯಾಜ್ಯವನ್ನು ಮಣ್ಣಿನಲ್ಲಿ ಹೂಳುವುದು ಅತ್ಯಂತ ಕಡಿಮೆ ವೆಚ್ಚದ ತ್ಯಾಜ್ಯ ನಿರ್ವಹಣಾ ವಿಧಾನಗಳಲ್ಲೊಂದು.

ಮುನ್ಸಿಪಾಲ್ ತ್ಯಾಜ್ಯ ವಿಲೇವಾರಿ ವಿಧಾನದ ದೋಷದಿಂದಾಗಿ, ಹೆಚ್ಚಿನ ಆರೋಗ್ಯದ ಸಮಸ್ಯೆಯನ್ನು ಎದುರಿಸುವವರು ಪೌರಕಾರ್ಮಿಕರು. ಮುಂಬಾಯಿಯ ತ್ಯಾಜ್ಯ ಎಸೆಯುವ ಜಾಗದಲ್ಲಿ, 95 ಕೆಲಸಗಾರರನ್ನು ಪರೀಕ್ಷಿಸಲಾಯಿತು ಮತ್ತು ಕ್ಷೇತ್ರಕಾರ್ಯ ನಡೆಸಲಾಯಿತು. ಅವರಲ್ಲಿ ಶೇಕಡ 80 ಕಾರ್ಮಿಕರಿಗೆ ಕಣ್ಣಿನ ತೊಂದರೆಯಿರುವುದು, ಶೇಕಡ 73 ಜನರಿಗೆ ಉಸಿರಾಟದ ಸಮಸ್ಯೆ ಮತ್ತು 51 ಶೇಕಡ ಕಾರ್ಮಿಕರು ಉದರ ಸಂಬಂಧಿ ಕಾಯಿಲೆಗೆ ತುತ್ತಾಗಿರುವುದು ಕಂಡುಬಂತು.

ಹಾಗೆಯೇ ಚಿಂದಿ ಹೆಕ್ಕುವ ಉದ್ಯೋಗ ನಡೆಸುವವರು ಚರ್ಮದ ಕಾಯಿಲೆ, ಉಸಿರಾಟದ ತೊಂದರೆ ಹಾಗೂ ವಾತ ಸಂಬಂಧಿ ಕಾಯಿಲೆಗಳಿಂದ ಬಳಲುವುದು ಕಂಡುಬಂದಿದೆ. ಅವರ ಕೈಕಾಲುಗಳಿಗೆ ಲೋಹ ಇತ್ಯಾದಿಗಳು ತಾಗಿ ಗಾಯಗಳಾಗುವುದರಿಂದ ಹೆಚ್ಚಿನವರು ಟೆಟನಸ್, ಎಚ್.ಐ.ವಿ., ಹೆಪಾಟೈಟಿಸ್, ತಲೆನೋವು, ವಾಕರಿಕೆ ಮುಂತಾದ ರೋಗಗಳಿಗೆ ತುತ್ತಾಗುತ್ತಾರೆ ಎನ್ನುವುದನ್ನು ಅಧ್ಯಯನ ಕಂಡುಕೊಂಡಿದೆ. ಕೊಲ್ಕತ್ತಾದಲ್ಲಿ 1995ರಲ್ಲಿ ನಡೆಸಿದ ಅಧ್ಯಯನದ ಪ್ರಕಾರ ಪ್ರತೀ 3 ತಿಂಗಳಿಗೊಮ್ಮೆ ಶೇಕಡ 85ರಷ್ಟು ಜನರು ಭೇದಿ, ಶೇಕಡ 72 ಜನರು ಜ್ವರ ಹಾಗೂ ಶೇಕಡ 63 ಜನರು ಕೆಮ್ಮು ಮತ್ತು ಶೀತದಿಂದ ಬಳಲುವುದು ಕಂಡುಬಂದಿದೆ. ಒಟ್ಟು 185 ಚಿಂದಿ ಹೆಕ್ಕುವವರನ್ನು ಸಂದರ್ಶಿಸಿ ಈ ವರದಿಯನ್ನು ತಯಾರಿಸಲಾಗಿದೆ (ಜೋಸೆಫ್, 2009).[30]

ಸಮೀರ್‌ದಾಸ್ ಟಿ. (2002)[31] ಇವರು 2002ರಲ್ಲಿ ಕ್ಯಾಲಿಕಟ್ ನಗರಪಾಲಿಕೆಯಲ್ಲಿ ತ್ಯಾಜ್ಯ ನಿರ್ವಹಣೆಯ ಔಪಚಾರಿಕ ಮತ್ತು ಅನೌಪಚಾರಿಕ ಆರ್ಥಿಕ ಸ್ಥಿತಿಗತಿ ಕುರಿತು ನಡೆಸಿರುವ ಅಧ್ಯಯನದಲ್ಲಿ ತ್ಯಾಜ್ಯ ನಿರ್ವಹಣೆ ವೆಚ್ಚದ ಕುರಿತು ವಿಶ್ಲೇಷಿಸಿದ್ದಾರೆ. ಹಾಗೆಯೇ ತ್ಯಾಜ್ಯ ನಿರ್ವಹಣೆ ವಿಧಾನವು ಸೃಷ್ಟಿಸುವ ಉದ್ಯೋಗವಕಾಶಗಳನ್ನು ಗುರುತಿಸಿದ್ದಾರೆ. ಈ ಅಧ್ಯಯನದ ಪ್ರಕಾರ ಪ್ರತೀ ಟನ್ ತ್ಯಾಜ್ಯ ನಿರ್ವಹಣೆಯ ವೆಚ್ಚ ರೂ.1,012.22. ಆದರೆ ಈ ಅಧ್ಯಯನದಲ್ಲಿ ಪ್ರತೀ ಟನ್ ತ್ಯಾಜ್ಯದ ಸರಾಸರಿ ಆದಾಯದ ವಿಶ್ಲೇಷಣೆಯು ನಡೆದಿಲ್ಲ. ಅನೌಪಚಾರಿಕ ಘನತ್ಯಾಜ್ಯ ನಿರ್ವಹಣಾ ಕ್ಷೇತ್ರವು ಸಾವಿರಾರು ಜನರಿಗೆ ನಗರಪಾಲಿಕೆ ವ್ಯಾಪ್ತಿಯಲ್ಲಿ ಉದ್ಯೋಗಾವಕಾಶ ಒದಗಿಸಿರುವುದನ್ನು ಅಧ್ಯಯನವು ತಿಳಿಸಿದೆ.

ಶ್ರೀನಿವಾಸನ್ ಕೃತಿಕಾ (2006)[32] ಇವರು ಚೆನ್ನೈ ನಗರದಲ್ಲಿ ನಡೆಸಿದ ಅಧ್ಯಯನವು ಘನತ್ಯಾಜ್ಯ ನಿರ್ವಹಣೆಯಲ್ಲಿ ಸ್ಥಳೀಯ ನಾಗರಿಕರು, ಖಾಸಗಿ ಸಂಸ್ಥೆಗಳು, ನಾಗರಿಕ ಸಮುದಾಯಗಳು ಹಾಗೂ ಸಾರ್ವಜನಿಕ–ಖಾಸಗಿ ಪಾಲುದಾರಿಕೆ ಬಗ್ಗೆ ಪ್ರಸ್ತಾವನೆಯನ್ನು ಮಾಡಿದೆ. ಇಡೀ ದೇಶದಲ್ಲಿ ನ್ಯಾಯಯುತವಾದ ಮತ್ತು ಪರಿಸರ ಸಹ್ಯ ನಿರ್ವಹಣಾ ವ್ಯವಸ್ಥೆಯನ್ನು ಅಳವಡಿಸುವ ಅಗತ್ಯವನ್ನು ತಿಳಿಸಿದ್ದಾರೆ. ತ್ಯಾಜ್ಯ ನಿರ್ವಹಣೆಯ ನೀತಿ ಮತ್ತು ಕೆಳಮಟ್ಟದಲ್ಲಿ ಅನುಷ್ಠಾನ ನಡುವಿನ ಅಂತರವನ್ನು ಅರ್ಥೈಸಿಕೊಳ್ಳುವ ದೃಷ್ಟಿಯಿಂದ, ಭಾರತದಲ್ಲಿ ತ್ಯಾಜ್ಯ ನಿರ್ವಹಣೆಯ ವಿಸ್ತಾರವಾದ ಅಧ್ಯಯನದ ಅಗತ್ಯವಿರುವುದನ್ನು ತಿಳಿಸಿದ್ದಾರೆ.

ಇಕ್ಬಾಲ್ ಖಾನ್ (2003)[33] ಮತ್ತು ಇತರರು ಪೂರ್ವ ಕೊಲ್ಕತ್ತಾದಲ್ಲಿ ನಡೆಸಿದ ಅಧ್ಯಯನದಲ್ಲಿ ನಗರಗಳ ಘನ ಮತ್ತು ದ್ರವ ತ್ಯಾಜ್ಯಗಳನ್ನು ಮರು ಆವರ್ತನೀಯ ವಿಧಾನದ ಮೂಲಕ ಬಳಸಿಕೊಂಡು ಫಲವತ್ತಾದ ಗೊಬ್ಬರಗಳನ್ನು ಉತ್ಪಾದಿಸಿ ಕೃಷಿಯಲ್ಲಿ ಬಳಸಿಕೊಂಡು

ನಗರ ಆಹಾರದ ಬೇಡಿಕೆಯ ಸಮಸ್ಯೆಯನ್ನು ಬಗೆಹರಿಸಿರುವುದನ್ನು ತಿಳಿಸಿದ್ದಾರೆ. ತ್ಯಾಜ್ಯ ನಿರ್ವಹಣೆಯ ಸಹ್ಯ ವಿಧಾನವನ್ನು ಈ ಅಧ್ಯಯನದಲ್ಲಿ ಗುರುತಿಸಿದ್ದಾರೆ.

ಪ್ಲಾಸ್ಟಿಕ್ ತ್ಯಾಜ್ಯಗಳನ್ನು ಎಲ್ಲಾ ಕಡೆಗಳಲ್ಲಿ ಎಸೆಯುವುದರಿಂದ ಪರಿಸರ ಮಾಲಿನ್ಯ ಹೆಚ್ಚಾಗುತ್ತಿದೆ. ಮುನ್ಸಿಪಾಲಿಟಿಗಳು ಇವುಗಳ ಸಂಗ್ರಹ, ಸಾಗಾಟ ಮತ್ತು ವಿಲೇವಾರಿ ಕಾರ್ಯಗಳ ಜವಾಬ್ದಾರಿಯನ್ನು ತೆಗೆದುಕೊಳ್ಳಬೇಕು. ಚಿಂದಿ ಆಯುವವರು ಪ್ಲಾಸ್ಟಿಕ್ ಬಾಟಲಿ, ತೊಟ್ಟೆಗಳನ್ನು ಲಾಭದಾಯಕವಲ್ಲದ ಕಾರಣಕ್ಕಾಗಿ ಹೆಕ್ಕುವುದಿಲ್ಲ. ಆದ್ದರಿಂದ ಎಲ್ಲಾ ಕಡೆಗಳಲ್ಲಿ ಪ್ಲಾಸ್ಟಿಕ್ ತ್ಯಾಜ್ಯಗಳು ಕಾಣಸಿಗುತ್ತವೆ. ಇದಕ್ಕಾಗಿ ಸರಕಾರವು **'ಪ್ಲಾಸ್ಟಿಕ್ ವೇಸ್ಟ್ ಮೆನೇಜ್‌ಮೆಂಟ್ ಟಾಸ್ಕ್ ಫೋರ್ಸ್'**ನ್ನು ನೇಮಿಸಿದೆ. ಇದರ ಶಿಫಾರಸ್ಸಿನ ಮೇರೆಗೆ ಪ್ಲಾಸ್ಟಿಕ್ ಉತ್ಪಾದನೆ ಮತ್ತು ಉಪಯೋಗದ ಬಗ್ಗೆ 1999ರಲ್ಲಿ ಹೊಸ ನೀತಿ ಜಾರಿಗೆ ಬಂದಿತು (ಹೊಸೆಟ್ಟಿ, 2006).[34] ಕರ್ನಾಟಕ ಸರ್ಕಾರವು ಸಂಪೂರ್ಣವಾಗಿ ಪ್ಲಾಸ್ಟಿಕನ್ನು ನಿಷೇಧಿಸುವ ಬಗ್ಗೆ ಚಿಂತನೆ ನಡೆಸುತ್ತಿದೆ. ಈಗಾಗಲೇ ಕೆಲವು ನಗರಗಳಲ್ಲಿ ಪ್ಲಾಸ್ಟಿಕ್ ಬಳಕೆ ನಿಷೇಧವಿದೆ.

ಇತ್ತೀಚಿನ ಕೆಲವು ದಶಕಗಳ ಹಿಂದೆ ತ್ಯಾಜ್ಯ ನಿರ್ವಹಣೆಯು ನಗರ ಸಂಸ್ಥೆಗಳು ಹಾಗೂ ಸಾರ್ವಜನಿಕರಿಗೆ ಒಂದು ಪ್ರಮುಖ ವಿಷಯವಾಗಿರಲಿಲ್ಲ. ಮೇಲಾಗಿ ಹೆಚ್ಚಿನ ನಗರಗಳಲ್ಲಿ ತ್ಯಾಜ್ಯ ರಾಶಿ ಹಾಕಲು ಸರಿಯಾದ ಜಾಗಗಳೇ ಸಿಗುತ್ತಿಲ್ಲ. ಆರೋಗ್ಯ ಮತ್ತು ಪರಿಸರದ ದೃಷ್ಟಿಯಿಂದ ತ್ಯಾಜ್ಯವನ್ನು ರಾಶಿ ಹಾಕುವುದು ಅಥವಾ ಸುಡುವುದು ಯೋಗ್ಯವಲ್ಲ (ಬರುಚಾ ಇರಾಚ್, 2005).[35] ಗ್ರಾಮೀಣ ಮಟ್ಟದಲ್ಲಿ ಇವತ್ತಿಗೂ ತ್ಯಾಜ್ಯನಿರ್ವಹಣೆಯು ಸಮರ್ಪಕವಾಗಿ ನಡೆಯುತ್ತಿಲ್ಲ.

ಕರ್ನಾಟಕದಲ್ಲಿ ತ್ಯಾಜ್ಯ ನಿರ್ವಹಣಾ ವಿಧಾನಗಳ ಬಗ್ಗೆ ಬೆಳಗಾವಿ, ಮೈಸೂರು, ಮಂಗಳೂರು ಸಹಿತ ಅನೇಕ ಅಧ್ಯಯನಗಳು ನಡೆದಿವೆ. ಆದರೆ ಹೆಚ್ಚಿನ ಅಧ್ಯಯನಗಳು ನಗರಗಳಿಗೆ ಸೀಮಿತ ವಾಗಿವೆ. ನಿರ್ವಹಣಾ ವೆಚ್ಚ ಮತ್ತು ಆದಾಯದ ಕುರಿತು ಸಲಹೆಗಳನ್ನು ನೀಡಿದ್ದರೂ ವೈಜ್ಞಾನಿಕವಾದ ವರದಿ ನಡೆದಿರುವುದು ಕಂಡುಬರುವುದಿಲ್ಲ. ಬೆಂಗಳೂರು ನಗರಪಾಲಿಕೆ 2 ವಿಧದ ತ್ಯಾಜ್ಯ ಸೇವೆಗಳ ಒಪ್ಪಂದವನ್ನು ಮಾಡಿಕೊಂಡಿದೆ. ಪ್ರಾಥಮಿಕ ತ್ಯಾಜ್ಯ ಸಂಗ್ರಹಕ್ಕೆ ಸಂಬಂಧಿಸಿದಂತೆ ಮನೆ-ಮನೆ ತ್ಯಾಜ್ಯ ಸಂಗ್ರಹ ಮತ್ತು ಸಾಗಾಟದ ವ್ಯವಸ್ಥೆಯನ್ನು ಸಣ್ಣ ಗುತ್ತಿಗೆದಾರರಿಗೆ ನೀಡಲಾಗಿದೆ. ತ್ಯಾಜ್ಯ ವಿಲೇವಾರಿ ಮತ್ತು ಸಂಸ್ಕರಣ ಕಾರ್ಯವನ್ನು ನುರಿತ ಸೇವೆಯನ್ನು ಒದಗಿಸುವ ಸಂಸ್ಥೆಗಳಿಗೆ ನೀಡಲಾಗಿದೆ

ಕೇಂದ್ರ ಪರಿಸರ ಮತ್ತು ಅರಣ್ಯ ಖಾತೆಯ ಅಡಿಯಲ್ಲಿ ಪ್ಲಾಸ್ಟಿಕ್ ತ್ಯಾಜ್ಯ ನಿಯಮಾವಳಿ 2011ರ ಪ್ರಕಾರ ಮಂಗಳೂರು ಮಹಾನಗರ ಪಾಲಿಕೆ ಪ್ಲಾಸ್ಟಿಕ್ ಚೀಲಗಳ ಉತ್ಪಾದನೆ, ಮಾರಾಟ ಹಾಗೂ ಬಳಕೆಯನ್ನು ಸಂಪೂರ್ಣವಾಗಿ ನಿಷೇಧಿಸಿದೆ. ಗುಟ್ಕಾ, ಹೊಗೆಸೊಪ್ಪು, ಪಾನ್‌ಮಸಾಲ

ಮುಂತಾದ ವಸ್ತುಗಳನ್ನು ಪ್ಲಾಸ್ಟಿಕ್ ಪೊಟ್ಟಣದಲ್ಲಿ ಮಾರುವುದನ್ನು ನಿಷೇಧವಿದ್ದರೂ ಅಲ್ಲಲ್ಲಿ ಉಲ್ಲಂಘನೆಯಾಗುತ್ತಿರುವುದು ಕಂಡುಬರುತ್ತಿದೆ.

ಬಾಬಾ ಅಟೋಮಿಕ್ ರಿಸರ್ಚ್‌ಸೆಂಟರ್‌ನ ಪ್ರೊಫೆಸರ್ ಶರದ್ ಕಾಲೆ ಇವರ ತಾಂತ್ರಿಕ ಸಲಹೆಯಲ್ಲಿ ವಿಪ್ರೊ ಇಕೋ ಎನರ್ಜಿ ಕಂಪೆನಿಯು ಕಳೆದ ನವೆಂಬರ್ 2011ರಲ್ಲಿ ಮಂಗಳೂರಿನ ಊರ್ವ ಮಾರ್ಕೆಟ್ ಪಕ್ಕದಲ್ಲಿ ಜೈವಿಕ ಅನಿಲ ಇಂಧನ ಘಟಕವನ್ನು ಸ್ಥಾಪಿಸಲಾಗಿದೆ. ಮಂಗಳೂರಿನ ಪಚ್ಚನಾಡಿಯಲ್ಲಿರುವ ತ್ಯಾಜ್ಯದಿಂದ ಗೊಬ್ಬರ ತಯಾರಿಸುವ ಘಟಕ ಮತ್ತು ತ್ಯಾಜ್ಯ ರಾಶಿಹಾಕುವ ಇತರ ಜಾಗಗಳಲ್ಲಿ ಕಾರ್ಮಿಕರನ್ನು ಮೇಲ್ವಿಚಾರಣೆಗೆ ನೇಮಿಸುವುದು ಅವರ ಆರೋಗ್ಯ ದೃಷ್ಟಿಯಿಂದಲೂ ಯೋಗ್ಯವಲ್ಲ. ಹಾಗೆಯೇ ಅವರಿಗೆ ಸಂಬಳ ಕೊಡುವುದು ಹೆಚ್ಚುವರಿ ಹೊರೆಯಾಗುವುದು. ಅದಕ್ಕಾಗಿ ಆ ಜಾಗಗಳಲ್ಲಿ ಕ್ಯಾಮರಾಗಳನ್ನು ಅಳವಡಿಸುವ ನಿರ್ಧಾರವನ್ನು ಮಂಗಳೂರು ನಗರಪಾಲಿಕೆ ತೆಗೆದುಕೊಂಡಿದೆ. ಇದರಿಂದ ಅಕ್ರಮವಾಗಿ ಹೊರಗಿ ನವರು ಈ ಪ್ರದೇಶದಲ್ಲಿ ತ್ಯಾಜ್ಯ ಎಸೆಯುವುದನ್ನು ಸಹ ತಡೆಗಟ್ಟಬಹುದು. ಕಾರ್ಮಿಕ ಕೆಲಸ ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿಯೂ ಇದು ಸಹಾಯಕ. ಆಧುನಿಕ ತಂತ್ರಜ್ಞಾನವನ್ನು ಈ ಕ್ಷೇತ್ರ ದಲ್ಲಿಯೂ ಹೇಗೆ ಸಮರ್ಥವಾಗಿ ಬಳಸಬಹುದು ಎಂಬುದಕ್ಕೆ ಇದೊಂದು ನಿದರ್ಶನ. ಮಂಗಳೂರು ನಗರಪಾಲಿಕೆ ವ್ಯಾಪ್ತಿಯಲ್ಲಿ 12 ಇ–ವೇಸ್ಟ್ ಸಂಗ್ರಹ ಕೇಂದ್ರಗಳನ್ನು ತೆರೆಯಲಾಗಿದೆ. ಇಡೀ ರಾಜ್ಯದಲ್ಲಿ ಇದುವರೆಗೆ ಸುಮಾರು 8000 ಟನ್‌ನಷ್ಟು ಇ–ತ್ಯಾಜ್ಯ ಉತ್ಪಾದನೆಯಾದರೂ ಅದರ ನಿರ್ವಹಣೆ ಸರಿಯಾಗಿ ನಡೆದಿಲ್ಲ. ಇ–ತ್ಯಾಜ್ಯದ ಬಗ್ಗೆ ಇನ್ನೂ ಜನರಲ್ಲಿ ಸಾಕಷ್ಟು ಜಾಗೃತಿ ಮೂಡದಿರುವುದು ಕಂಡುಬರುತ್ತದೆ. ಇತ್ತೀಚೆಗೆ ಬೆಂಗಳೂರು ನಗರದ ತ್ಯಾಜ್ಯದ ಸಮಸ್ಯೆಯು ಅಂತಾರಾಷ್ಟ್ರೀಯ ಮಟ್ಟದಲ್ಲಿಯೂ ಚರ್ಚಿಸಲ್ಪಟ್ಟಿದೆ. ಮಂಗಳೂರು ಮಹಾನಗರಪಾಲಿಕೆಯು ತ್ಯಾಜ್ಯ ವಿಲೇವಾರಿಗೆ ಸಂಬಂಧಿಸಿದ ದೂರುಗಳನ್ನು ಸ್ವೀಕರಿಸಲು ಸಹಾಯವಾಣಿಯನ್ನು ಪ್ರಾರಂಭಿಸುವ ನಿರ್ಧಾರವನ್ನು ಕೈಗೊಂಡಿದೆ.

## 1.1. ಸಮಸ್ಯೀಕರಣ ಮತ್ತು ಸಂಶೋಧನಾ ಪ್ರಶ್ನೆಗಳು

ನಗರ ಹಾಗೂ ಗ್ರಾಮೀಣ ಪ್ರದೇಶಗಳ ಕೇಂದ್ರ ಸ್ಥಳಗಳಲ್ಲಿ ನಮಗೆ ಸದಾ ತೊಂದರೆಯನ್ನುಂಟು ಮಾಡುವ ಹಲವಾರು ಸಮಸ್ಯೆಗಳಲ್ಲಿ ತ್ಯಾಜ್ಯವೂ ಒಂದು. ದಿನೇ ದಿನೇ ಹೆಚ್ಚುತ್ತಿರುವ ಘನತ್ಯಾಜ್ಯ ಪ್ರಮಾಣವು ಆರೋಗ್ಯ ಮತ್ತು ಪರಿಸರಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಉಲ್ಬಣಗೊಳಿಸುತ್ತಿರುವಂತೆ ಕಾಣುತ್ತಿದೆ. ಮಲೇರಿಯಾ, ಡೆಂಗ್ಯೂ, ಜಾಂಡೀಸ್‌ನಂತಹ ಸಂಕ್ರಾಮಿಕ ರೋಗಗಳು ಆಗಾಗ ಕಾಣಿಸಿಕೊಳ್ಳಲು ಘನತ್ಯಾಜ್ಯ ನಿರ್ವಹಣೆಯ ಲೋಪದೋಷಗಳೇ ಪ್ರಮುಖ ಕಾರಣಗಳು. ಪತ್ರಿಕೆಗಳು ಹಾಗೂ ಇನ್ನಿತರ ವರದಿಗಳ ಪ್ರಕಾರ ಘನತ್ಯಾಜ್ಯ ನಿರ್ವಹಣೆಯು

ಬೇರೆ ಬೇರೆ ಹಂತಗಳಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಈ ಸಮಸ್ಯೆಗಳಿಗೆ ಕಾರಣಗಳೇನು? ಅಲ್ಲಿನ ಲೋಪದೋಷಗಳೇನು? ಅವುಗಳನ್ನು ಹೇಗೆ ಸರಿಪಡಿಸಬಹುದು? ಅವುಗಳ ಆರ್ಥಿಕ ವಿಚಾರಗಳೇನು? ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಒಂದೇ ರೀತಿಯ ಸಮಸ್ಯೆಗಳೇ? ವಿಭಿನ್ನವಾಗಿದ್ದಲ್ಲಿ ಯಾವ ರೀತಿ? ಯಾಕೆ? ಮುಂತಾದ ಪ್ರಶ್ನೆಗಳನ್ನು ಇಟ್ಟುಕೊಂಡು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಪ್ರಸ್ತುತ ನಮಗೆ ತ್ಯಾಜ್ಯ ನಿರ್ವಹಣೆ ನಗರ ಪ್ರದೇಶಗಳ ಸಮಸ್ಯೆಯಾಗಿ ಕಂಡರೂ, ಕೆಲವು ಗ್ರಾಮೀಣ ಕೇಂದ್ರಗಳಲ್ಲಿ ಸಮಸ್ಯೆ ಉಲ್ಬಣಿಸುತ್ತಿರುವುದು ಮಾಧ್ಯಮಗಳಲ್ಲಿ ವರದಿಯಾಗುತ್ತಿದೆ. ಹಾಗಾದರೆ ಗ್ರಾಮೀಣ ಮತ್ತು ನಗರ ಕೇಂದ್ರಗಳಲ್ಲಿ ಏಕ ರೀತಿಯ ನಿರ್ವಹಣಾ ವ್ಯವಸ್ಥೆ ಸಾಧ್ಯವೇ? ತ್ಯಾಜ್ಯ ಹಾಗೂ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ನಗರ ಹಾಗೂ ಗ್ರಾಮೀಣ ಕೇಂದ್ರಗಳ ನಡುವಿನ ಸಾಮ್ಯತೆಗಳೇನು? ವ್ಯತ್ಯಾಸಗಳೇನು? ಅನುಷ್ಠಾನ ವ್ಯವಸ್ಥೆ ಹೇಗಿದೆ? ಮುಂತಾದ ಸಂಶೋಧನಾ ಸಮಸ್ಯೆಗಳನ್ನಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

ಸುಮೀತ್ ಗುಪ್ತ ಮತ್ತು ಆಶಿಸ್ ಕುಮಾರ್ ಇವರು ದೆಹಲಿ ನಗರದಲ್ಲಿ ನಡೆಸಿದ ಅಧ್ಯಯನದಲ್ಲಿ ತ್ಯಾಜ್ಯ ಸಂಗ್ರಹ ಮತ್ತು ಸಾಗಾಟದ ನಡುವೆ ಹೊಂದಾಣಿಕೆ ಇಲ್ಲದಿರುವುದನ್ನು ಗುರುತಿಸಿದ್ದಾರೆ. ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕ್ಷೇತ್ರದಲ್ಲೂ ಇದೇ ಸಮಸ್ಯೆ ಇದೆಯೇ? ಇದ್ದರೆ ಯಾಕೆ? ಎನ್ನುವುದನ್ನು ಪರಿಶೀಲಿಸಲಾಗಿದೆ.

ದೇಶದಲ್ಲಿ ಈಗಾಗಲೇ ಅನೇಕ ತ್ಯಾಜ್ಯ ನಿರ್ವಹಣಾ ನೀತಿಗಳಿದ್ದರೂ ದಿನೇ ದಿನೇ ತ್ಯಾಜ್ಯ ಪ್ರಮಾಣವು ಹೆಚ್ಚುತ್ತಿದೆ ಹಾಗೂ ಪರಿಸರ ಮತ್ತು ಜನರ ಆರೋಗ್ಯದ ಮೇಲೆ ಇದರಿಂದ ಹೆಚ್ಚಿನ ಹಾನಿಯುಂಟಾಗುತ್ತಿದೆ. ಈ ಹಿನ್ನೆಲೆಯಲ್ಲಿ ಘನತ್ಯಾಜ್ಯ ನಿರ್ವಹಣೆಯ ನೀತಿ ನಿಯಮಗಳು ಅಧ್ಯಯನ ವ್ಯಾಪ್ತಿಯಲ್ಲಿ ಸರಿಯಾಗಿ ಅನುಷ್ಠಾನ ಆಗುತ್ತಿದೆಯೇ ಎನ್ನುವುದನ್ನು ಸಂಶೋಧನಾ ಸಮಸ್ಯೆಯಾಗಿ ಪರಿಗಣಿಸಿ ಅಧ್ಯಯನ ಮಾಡಲಾಗಿದೆ.

ಜನರ ಸಹಭಾಗಿತ್ವ, ಆಡಳಿತದ ಕಾರ್ಯವೈಖರಿ, ಹವಾಗುಣ, ತ್ಯಾಜ್ಯದ ಮೂಲಗಳು, ಹಣಕಾಸಿನ ದೊರೆಯುವಿಕೆ ಮುಂತಾದ ಕಾರಣಗಳಿಂದ ನಿರ್ವಹಣೆಯಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಅನೇಕ ಲೋಪದೋಷಗಳು ಕಂಡುಬರುತ್ತವೆ. ಅಧ್ಯಯನ ವ್ಯಾಪ್ತಿಯಲ್ಲಿ ಜನರ ಸಹಭಾಗಿತ್ವ ಹೇಗಿದೆ? ತ್ಯಾಜ್ಯಗಳ ವಿವಿಧ ಮೂಲಗಳು ಯಾವುವು? ಹಣಕಾಸಿನ ವ್ಯವಸ್ಥೆ ಹೇಗಿದೆ? ತ್ಯಾಜ್ಯ ನಿರ್ವಹಣೆ ಸರಕಾರಗಳಿಗೆ ದೊಡ್ಡ ಹೊರೆಯೇ? ಅಥವಾ ಅವುಗಳ ಸರಿಯಾದ ನಿರ್ವಹಣೆ ಮೂಲಕ ಆರ್ಥಿಕ ಲಾಭಾಂಶಗಳನ್ನು ಪಡೆಯಲು ಸಾಧ್ಯವೇ? ಸ್ಥಳೀಯ ಸರ್ಕಾರಗಳು

ತ್ಯಾಜ್ಯದಿಂದ ಆದಾಯ ಗಳಿಸುತ್ತಿವೆಯೇ? ಮುಂತಾದ ಪ್ರಶ್ನೆಗಳಿಗೆ ಈ ಸಂಶೋಧನೆಯಲ್ಲಿ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ತ್ಯಾಜ್ಯ ನಿರ್ವಹಣೆಯ ಸಮರ್ಪಕ ಅನುಷ್ಠಾನಕ್ಕೆ ಕಟ್ಟುನಿಟ್ಟಾದ ಕಾನೂನಿನ ಅಗತ್ಯವಿರುವುದು ಸಾಹಿತ್ಯ ಸಮೀಕ್ಷೆಯಿಂದ ತಿಳಿದುಬಂದಿದೆ. ನಮ್ಮ ದೇಶದಲ್ಲಿ ಈ ಬಗ್ಗೆ ಸಮರ್ಪಕವಾದ ನೀತಿ ನಿಯಮಾವಳಿಗಳಿವೆಯೇ ಎಂದು ಪರಿಶೀಲಿಸಿದಾಗ, ಹಲವಾರು ತ್ಯಾಜ್ಯ ನಿರ್ವಹಣಾ ನೀತಿಗಳು ರಾಷ್ಟ್ರ, ರಾಜ್ಯ ಹಾಗೂ ಸ್ಥಳೀಯ ಮಟ್ಟದಲ್ಲಿ ಜಾರಿಯಲ್ಲಿರುವುದು ಅಧ್ಯಯನದಲ್ಲಿ ಕಂಡುಬರುತ್ತದೆ. ಭಾರತದಾದ್ಯಂತ ಎಲ್ಲಾ ನಗರಗಳಲ್ಲಿ ಗೃಹತ್ಯಾಜ್ಯ ನಿರ್ವಹಣೆಯು ನಿಯಮ 2000ದ ಅಡಿಯಲ್ಲಿ ಸ್ಥಳೀಯ ಸರಕಾರಗಳ ನೇತೃತ್ವದಲ್ಲಿ ನಡೆಯುತ್ತಿದೆ. ಹಾಗಾದರೆ ನಮ್ಮ ಸ್ಥಳೀಯ ಸರಕಾರಗಳು ಅವುಗಳ ಅನುಷ್ಠಾನದಲ್ಲಿ ಎಡವಿದ್ದಾವೆಯೇ?, ಒಂದು ವೇಳೆ ಸರಿಯಾಗಿ ಅನುಷ್ಠಾನಗೊಂಡಿರದಿದ್ದರೆ ಅದಕ್ಕೆ ಪ್ರಮುಖ ಕಾರಣಗಳೇನು? ಅಥವಾ ಹೊಸ ನಿಯಮಾವಳಿಗಳ ಅಗತ್ಯವಿದೆಯೇ ಎನ್ನುವುದನ್ನು ಈ ಅಧ್ಯಯನದಲ್ಲಿ ಪರೀಕ್ಷಿಸಲಾಗಿದೆ.

ತ್ಯಾಜ್ಯ ಯಾವ ಯಾವ ಸಮಸ್ಯೆಗಳನ್ನು ಹುಟ್ಟುಹಾಕುತ್ತಿದೆ ಎನ್ನುವುದರ ಬಗ್ಗೆ ವಸ್ತುನಿಷ್ಠವಾದ ಅಧ್ಯಯನದ ಅಗತ್ಯತೆ ಕಾಣುತ್ತಿದೆ. ಜಾಗತಿಕವಾಗಿ ಹಸಿರುಮನೆ ಪರಿಣಾಮ, ಓಜೋನ್ ಪದರದ ಶಿಥಿಲತೆ, ಆಮ್ಲಮಳೆ, ಜಾಗತಿಕ ತಾಪಮಾನ ಮುಂತಾದ ಪರಿಸರ ಸಮಸ್ಯೆಗಳಿಗೆ ಪರೋಕ್ಷವಾಗಿ ಕಾರಣವಾಗುವ ಘನತ್ಯಾಜ್ಯವು ಅನೇಕ ಸ್ಥಳೀಯ ಸಮಸ್ಯೆಗಳ ಸೃಷ್ಟಿಗೆ ಉತ್ತೇಜಕವಾಗಿದೆ. ಸಾಂಕ್ರಾಮಿಕ ರೋಗಗಳು, ಶ್ವಾಸಕೋಶ–ಹೃದಯಗಳಿಗೆ ಸಂಬಂಧಿಸಿದ ವ್ಯಾಧಿಗಳು, ರಸ್ತೆ ಅಪಘಾತಗಳು, ಮಾಲಿನ್ಯ ಸಾರ್ವಜನಿಕ ನೆಮ್ಮದಿಗೆ ಭಂಗ ಮುಂತಾದ ರೀತಿಯಲ್ಲಿ ಇವು ನಮ್ಮನ್ನು ಕಾಡುತ್ತಿದೆ. ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕ್ಷೇತ್ರದ ವ್ಯಾಪ್ತಿಯಲ್ಲಿ ತ್ಯಾಜ್ಯ ಪ್ರಮಾಣ ಏರುತ್ತಿದೆಯೇ? ಅವುಗಳ ನಿರ್ವಹಣೆ ಯಾವ ರೀತಿ ನಡೆಯುತ್ತಿದೆ? ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಯು ತ್ಯಾಜ್ಯ ನಿರ್ವಹಣೆಯಲ್ಲಿ ಯಾವ ಪಾತ್ರವನ್ನು ವಹಿಸುತ್ತಿದೆ? ಇತ್ಯಾದಿ ಸಂಶೋಧನಾ ಸಮಸ್ಯೆಗಳನ್ನಿಟ್ಟುಕೊಂಡು ಅಧ್ಯಯನ ನಡೆಸಲಾಗಿದೆ.

ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ಈ ಮೇಲಿನ ಸಮಸ್ಯೆಗಳಿಗೆ ಉತ್ತರವನ್ನು ಕಂಡುಕೊಳ್ಳುವ ದೃಷ್ಟಿಯಲ್ಲಿ ಅವುಗಳನ್ನು ಸಂಶೋಧನಾ ಪ್ರಶ್ನೆಗಳಾಗಿ ಪರಿಗಣಿಸಿ, ನಿರ್ದಿಷ್ಟ ಉದ್ದೇಶಗಳನ್ನಿಟ್ಟುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ.

## 1.2. ಅಧ್ಯಯನದ ಉದ್ದೇಶಗಳು

ಜಾಗತೀಕರಣ, ಖಾಸಗೀಕರಣ, ಉದಾರೀಕರಣ, ಆಧುನೀಕತೆ, ನಗರೀಕರಣ, ಕೈಗಾರಿಕೀಕರಣ ಮುಂತಾದ ಆರ್ಥಿಕ, ಸಾಮಾಜಿಕ, ರಾಜಕೀಯ, ವೈಜ್ಞಾನಿಕ ಕ್ಷೇತ್ರಗಳಲ್ಲಿ ಅಭಿವೃದ್ಧಿ ದೃಷ್ಟಿಕೋನದಿಂದ

ಕಂಡುಬರುವ ಧನಾತ್ಮಕ ಬದಲಾವಣೆಗಳಾದರೆ, ಇವುಗಳೊಂದಿಗೇ ಸೃಷ್ಟಿಯಾಗುತ್ತಿರುವ ಹಲವಾರು ಸಮಾಜೋ–ಆರ್ಥಿಕ ಸಮಸ್ಯೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯೂ ಒಂದು. ಸರಕಾರಗಳು ಅನೇಕ ನಿಯಮಾವಳಿಗಳನ್ನು ಅನುಷ್ಠಾನಕ್ಕೆ ತಂದರೂ ನಿರ್ವಹಣಾ ವ್ಯವಸ್ಥೆಯು ಸಮರ್ಪಕವಾಗಿಲ್ಲ ಎನ್ನುವುದು ಅಧ್ಯಯನಗಳಿಂದ, ಮಾಧ್ಯಮಗಳ ಮೂಲಕ, ಅವಲೋಕನದಿಂದ ಮತ್ತು ಸಾರ್ವಜನಿಕರು ದಿನನಿತ್ಯ ಅನುಭವಿಸುತ್ತಿರುವ ಯಾತನೆಗಳಿಂದ ಕಂಡುಕೊಂಡರೂ, ಸಮಸ್ಯೆಗೆ ಸೂಕ್ತ ಪರಿಹಾರಗಳನ್ನು ಸೂಚಿಸುವ ಕಾರಣದಿಂದ ವಸ್ತುನಿಷ್ಠವಾದ ಅಧ್ಯಯನದ ಅಗತ್ಯವಿದೆ. ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನಕ್ಕೆ ಸಂಬಂಧಿಸಿದ ಅನೇಕ ಸಮಾಜೊ–ಆರ್ಥಿಕ ವಿಚಾರಗಳ ದೃಷ್ಟಿಯಿಂದ ಈ ಕೆಳಗಿನ ಉದ್ದೇಶಗಳನ್ನು ಇಟ್ಟುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ.

1. **ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ಅಧ್ಯಯನ.**
2. **ಘನತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳ ಅಧ್ಯಯನ.**
3. **ಘನತ್ಯಾಜ್ಯ ನಿರ್ವಹಣೆಯ ನೀತಿ/ನಿಯಮಗಳ ಅಧ್ಯಯನ.**
4. **ಅಧ್ಯಯನದ ಹಿನ್ನೆಲೆಯಲ್ಲಿ ನೀತಿ/ಸಲಹೆಗಳನ್ನು ನೀಡುವುದು.**

## 1.3. ಅಧ್ಯಯನದ ವಿಧಾನಗಳು

ಪ್ರಸ್ತುತ ಅಧ್ಯಯನಕ್ಕೆ ಭಾರತದ ಕರ್ನಾಟಕ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯ ನಗರ ಮತ್ತು ಗ್ರಾಮೀಣ ಪ್ರದೇಶಗಳನ್ನು ಆಯ್ಕೆ ಮಾಡಲಾಗಿದೆ. ಈ ಸಂಶೋಧನಾ ವಿಷಯದ ಅಧ್ಯಯನ ವಿಧಾನವನ್ನು ಅಧ್ಯಯನದ ಸಮಸ್ಯೆ ಹಾಗೂ ಉದ್ದೇಶಗಳಿಗೆ ಅನುಗುಣವಾಗಿ ರೂಪಿಸಿಕೊಳ್ಳಲಾಗಿದೆ. ಈ ಅಧ್ಯಯನವು ಕ್ಷೇತ್ರಕಾರ್ಯ ಆಧಾರಿತ ಅಧ್ಯಯನವಾಗಿದ್ದರೂ, ಅಗತ್ಯವಿದ್ದಲ್ಲಿ ಸೈದ್ಧಾಂತಿಕ ವಿಚಾರಗಳನ್ನು ಬಳಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಅಗತ್ಯವಾದ ಪ್ರಾಥಮಿಕ ಮತ್ತು ಆನುಷಂಗಿಕ ಮಾಹಿತಿಗಳನ್ನು ವಿವಿಧ ಮೂಲಗಳಿಂದ ಪಡೆಯಲಾಗಿದೆ.

### ದತ್ತಾಂಶ ಸಂಗ್ರಹಣೆ

#### 1. ಪ್ರಾಥಮಿಕ ಮೂಲಗಳಿಂದ

ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಲ್ಲಿ ಒಟ್ಟು 5 ತಾಲೂಕುಗಳಿದ್ದು(2016–17ನೇ ರಾಜ್ಯ ಮುಂಗಡಪತ್ರದಲ್ಲಿ ಘೋಷಿಸಿದ 2 ತಾಲೂಕುಗಳನ್ನು ಹೊರತುಪಡಿಸಿ) 232 ಗ್ರಾಮ ಪಂಚಾಯತ್ ಗಳನ್ನು ಹೊಂದಿವೆ. ಅವುಗಳಲ್ಲಿ 29 ಗ್ರಾಮ ಪಂಚಾಯತ್‌ಗಳು ಹೊಸದಾಗಿ ಜನವರಿ 2015ರಲ್ಲಿ ರಚನೆಯಾಗಿರುತ್ತವೆ. ಆದ್ದರಿಂದ ನನ್ನ ಅಧ್ಯಯನಕ್ಕೆ ಹಿಂದೆ ಇದ್ದ 203 ಗ್ರಾಮ

ಪಂಚಾಯತ್‌ಗಳನ್ನು ಮಾತ್ರ ಪರಿಗಣಿಸಿದ್ದೇನೆ. ಅಧ್ಯಯನ ವ್ಯಾಪ್ತಿಯಲ್ಲಿ 10 ನಗರ ಸ್ಥಳೀಯ ಸಂಸ್ಥೆಗಳಿವೆ. ಅವುಗಳಲ್ಲಿ 1. ಮಹಾನಗರ ಪಾಲಿಕೆ (ಮಂಗಳೂರು), 2 ನಗರ ಸಭೆಗಳು (ಪುತ್ತೂರು ಮತ್ತು ಉಳ್ಳಾಲ), 2 ಪುರಸಭೆಗಳು (ಬಂಟ್ವಾಳಮತ್ತು ಮೂಡಬಿದ್ರೆ) ಮತ್ತು 5 ಪಟ್ಟಣ ಪಂಚಾಯತ್‌ಗಳು (ಬೆಳ್ತಂಗಡಿ, ಸುಳ್ಯ, ಕೋಟೇಕಾರ್, ವಿಟ್ಲ ಮತ್ತು ಮೂಲ್ಕಿ). ಕೋಟೇಕಾರ್ ಮತ್ತು ವಿಟ್ಲ ಪಟ್ಟಣ ಪಂಚಾಯತ್‌ಗಳು 2015ರಲ್ಲಿ ರಚನೆಯಾಗಿರುವುದರಿಂದ ಪ್ರಸ್ತುತ ಅಧ್ಯಯನಕ್ಕೆ 8 ನಗರ ಸ್ಥಳೀಯ ಸಂಸ್ಥೆಗಳನ್ನು ತೆಗೆದುಕೊಂಡು ಮಾಹಿತಿ ಸಂಗ್ರಹಿಸಲಾಗಿದೆ.

ಪ್ರತೀ ತಾಲೂಕು ಪಂಚಾಯತ್ ವ್ಯಾಪ್ತಿಯಿಂದ ಪಂಚಾಯತ್‌ಗಳನ್ನು ಯಾದೃಚ್ಛಿಕ ಮಾದರಿಯಲ್ಲಿ ಆಯ್ದುಕೊಂಡು ಪ್ರಶ್ನಾವಳಿ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ.ಅದರಂತೆ ಮಂಗಳೂರು ತಾಲೂಕಿನಿಂದ 5 (49ರಲ್ಲಿ) ಪುತ್ತೂರು ತಾಲೂಕಿನಿಂದ 4 (37ರಲ್ಲಿ) ಬೆಳ್ತಂಗಡಿ ತಾಲೂಕಿನಿಂದ 4 (43ರಲ್ಲಿ) ಸುಳ್ಯ ತಾಲೂಕಿನಿಂದ 3 (27ರಲ್ಲಿ) ಮತ್ತು ಬಂಟ್ವಾಳ ತಾಲೂಕಿನಿಂದ 5 (47ರಲ್ಲಿ) ಸೇರಿದಂತೆ ಒಟ್ಟು 21 ಪಂಚಾಯತ್‌ಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ಜನಸಂಖ್ಯೆ ಹಾಗೂ ವಾಣಿಜ್ಯ ಚಟುವಟಿಕೆಗಳು ಹೆಚ್ಚಿರುವ ಮತ್ತು ತ್ಯಾಜ್ಯ ನಿರ್ವಹಣೆಯಲ್ಲಿ ವಿಶೇಷ ಸಾಧನೆ ಮಾಡಿರುವ ಗ್ರಾಮಪಂಚಾಯತ್‌ಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

ಬೆಳ್ತಂಗಡಿ ತಾಲೂಕಿನ ಉಜಿರೆ, ಬಂಟ್ವಾಳ ತಾಲೂಕಿನ ವಿಟ್ಲ ಪಂಚಾಯತ್, ಮಂಗಳೂರು ತಾಲೂಕಿನ ಕೆಮ್ರಾಲ್ ಪಂಚಾಯತ್, ಪುತ್ತೂರು ತಾಲೂಕಿನ ಕಡಬ ಮತ್ತು ಸುಳ್ಯ ತಾಲೂಕಿನ ಸುಬ್ರಹ್ಮಣ್ಯ ಗ್ರಾಮಪಂಚಾಯತ್ ವ್ಯಾಪ್ತಿಗಳಿಂದ ತಲಾ 40 ಕುಟುಂಬಗಳಂತೆ ಒಟ್ಟು 200 ಕುಟುಂಬಗಳನ್ನು ಸಂದರ್ಶಿಸಲಾಗಿದೆ. ಇದರೊಂದಿಗೆ ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಿಂದ 50, ಪುತ್ತೂರು ನಗರ ಸಭೆ ವ್ಯಾಪ್ತಿಯಿಂದ 30, ಉಳ್ಳಾಲ ನಗರಸಭೆ ವ್ಯಾಪ್ತಿಯಿಂದ 30, ಬಂಟ್ವಾಳ ಪುರಸಭೆಯಿಂದ 20, ಮೂಲ್ಕಿ ಪುರಸಭೆ ವ್ಯಾಪ್ತಿಯಿಂದ 20, ಮೂಡಬಿದ್ರಿ ಪುರಸಭೆಯಿಂದ 20, ಬೆಳ್ತಂಗಡಿ ಪಟ್ಟಣ ಪಂಚಾಯತ್ ವ್ಯಾಪ್ತಿಯಿಂದ 20 ಹಾಗೂ ಸುಳ್ಯ ಪಟ್ಟಣ ಪಂಚಾಯತ್‌ನಿಂದ 20ರಂತೆ ಒಟ್ಟು 210 ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ವಾಸಿಸುವ ಕುಟುಂಬಗಳಿಂದ ಮಾಹಿತಿ ಸಂಗ್ರಹಿಸಿದ್ದೇನೆ. ಈ ಮೂಲಕ ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಒಟ್ಟು 410 ಕುಟುಂಬಗಳನ್ನು ಅನುಕೂಲಕರ ಯಾಧೃಚ್ಛಿಕ ಮಾದರಿಯಲ್ಲಿ ಆಯ್ಕೆ ಮಾಡಿಕೊಂಡು ಪ್ರಶ್ನಾವಳಿಗಳ ಮೂಲಕ ಮಾಹಿತಿಗಳನ್ನು ಸಂಗ್ರಹಿಸಿದ್ದೇನೆ.

ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣೆಯ ಆರ್ಥಿಕತೆ ಮತ್ತು ಸಾಮಾಜಿಕ ಅಂಶಗಳನ್ನು ಅರ್ಥೈಸಿಕೊಳ್ಳಲು ಸ್ಥಳೀಯ ಸಂಸ್ಥೆಗಳ ಮುಖ್ಯಾಧಿಕಾರಿ ಗಳು/ಆರೋಗ್ಯಾಧಿಕಾರಿಗಳು/ಅಭಿವೃದ್ಧಿ ಅಧಿಕಾರಿಗಳಿಂದ ಪೂರ್ವ ರಚಿತ ಪ್ರಶ್ನಾವಳಿ ಮತ್ತು

ಸಂದರ್ಶನದ ಮೂಲಕ ಮಾಹಿತಿಯನ್ನು ಪಡೆಯಲಾಗಿದೆ. ಜೊತೆಗೆ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಸ್ಥಳೀಯ ಸಂಸ್ಥೆಗಳಲ್ಲಿ ಸ್ವಂತ ನಿರ್ವಹಣ ಘಟಕ ಮತ್ತು ಭೂಭರ್ತಿ ಸ್ಥಳಗಳಿರುವಲ್ಲಿಗೆ ಭೇಟಿ ನೀಡಿ ಅಲ್ಲಿಯ ವಿಲೇವಾರಿ ವ್ಯವಸ್ಥೆಯನ್ನು ಅಧ್ಯಯನ ಮಾಡಲಾಗಿದೆ.

**2. ಆನುಷಂಗಿಕ ಮೂಲಗಳು**

ಅಧ್ಯಯನದಲ್ಲಿ ಮಾಹಿತಿಗಳನ್ನು ಸಂಗ್ರಹಿಸಲು ಕೇವಲ ಪ್ರಶ್ನಾವಳಿ ಮತ್ತು ಸಂದರ್ಶನದ ಮೂಲಕವಲ್ಲದೆ, ಇತರ ಆನುಷಂಗಿಕ ಮೂಲಗಳ ನೆರವನ್ನು ಪಡೆಯಲಾಗಿದೆ. ಗ್ರಂಥಗಳು, ನಿಯತಕಾಲಿಕೆಗಳು, ಅಪ್ರಕಟಿತ ಸಂಶೋಧನಾ ಪ್ರಬಂಧಗಳು, ಸಮೀಕ್ಷೆ ವರದಿಗಳು, ಪತ್ರಿಕಾ ವರದಿಗಳು, ಸರಕಾರಿ ವರದಿಗಳು, ಇಲಾಖೆಯ ದಾಖಲೆಗಳು, ಅಂತರ್ಜಾಲ ತಾಣಗಳು ಮತ್ತಿತರ ಮೂಲಗಳಿಂದ ಪಡೆದ ಮಾಹಿತಿಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಸಂಗ್ರಹಿಸಿದ ದತ್ತಾಂಶಗಳನ್ನು ಸೂಕ್ತ ಗಣಿತ ಮತ್ತು ಸಂಖ್ಯಾಶಾಸ್ತ್ರದ ವಿಧಾನಗಳ ಮೂಲಕ ಅಧ್ಯಯನದ ಉದ್ದೇಶಗಳಿಗೆ ಅನುಗುಣವಾಗಿ ವಿಶ್ಲೇಷಿಸಲಾಗಿದೆ.

## 1.4. ಅಧ್ಯಯನದ ವ್ಯಾಪ್ತಿ ಮತ್ತು ಅವಧಿ

ಭಾರತದ ಕರ್ನಾಟಕ ರಾಜ್ಯದ ಪಶ್ಚಿಮ ಕರಾವಳಿ ತೀರದಲ್ಲಿರುವ ದಕ್ಷಿಣ ಕನ್ನಡ ಜಿಲ್ಲೆಯ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಜಿಲ್ಲೆಯು 2014ರ 'ಮಾನವ ಅಭಿವೃದ್ಧಿ' ವರದಿಯ ಪ್ರಕಾರ ಮೊದಲನೇ ಸ್ಥಾನವನ್ನು ಹೊಂದಿದ್ದು, ಶಿಕ್ಷಣ, ಬ್ಯಾಂಕಿಂಗ್, ಆರೋಗ್ಯ ಸಹಿತ ಎಲ್ಲಾ ರಂಗಗಳಲ್ಲಿ ಪ್ರಗತಿಯನ್ನು ಸಾಧಿಸಿದೆ ಎಂದು ವರದಿ ತಿಳಿಸುತ್ತದೆ. ಜಿಲ್ಲೆಯ ಸಾಕ್ಷರತಾ ಪ್ರಮಾಣವು 2011ರ ಜನಗಣತಿ ಪ್ರಕಾರ ಶೇಕಡ 88.57 ಇದ್ದು ಕರ್ನಾಟಕ ರಾಜ್ಯದ 75.36 ಶೇಕಡ ಸಾಕ್ಷರತಾ ಪ್ರಮಾಣಕ್ಕಿಂತ 13 ಶೇಕಡ ಹೆಚ್ಚು ಇದೆ. ಈ ನೆಲೆಯಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನದಲ್ಲಿ ಜಿಲ್ಲೆಯ ವಸ್ತುಸ್ಥಿತಿ ಹೇಗಿದೆ? ಎನ್ನುವುದನ್ನು ವಿಶ್ಲೇಷಿಸುವ ದೃಷ್ಟಿಯಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯನ್ನು 5 ತಾಲೂಕುಗಳಾಗಿ ವಿಂಗಡಿಸಿದ್ದು, ಸುಮಾರು 19.5 ಲಕ್ಷ ಜನಸಂಖ್ಯೆಯನ್ನು ಹೊಂದಿದೆ. ಕೃಷಿ ಮತ್ತು ಮೀನುಗಾರಿಕೆ ಈ ಪ್ರದೇಶಗಳ ಪ್ರಮುಖ ಸಾಂಪ್ರಾದಾಯಿಕ ಉದ್ಯೋಗಗಳು. ದಕ್ಷಿಣ ಕನ್ನಡ ಜಿಲ್ಲೆಯ ಪ್ರಧಾನ ಕಛೇರಿ ಎಂದೇ ಗುರುತಿಸಲ್ಪಡುವ ಮಂಗಳೂರು ಭಾರತದ ಪ್ರಮುಖ ತೀರ ಪ್ರದೇಶದ ವಾಣಿಜ್ಯನಗರ ಅನ್ನಿಸಿಕೊಂಡಿದೆ. ಈ ಜಿಲ್ಲೆಯು ಬ್ಯಾಂಕಿಂಗ್, ವಾಣಿಜ್ಯ, ಶಿಕ್ಷಣ ಹಾಗೂ ಕೈಗಾರಿಕಾ ಕೇಂದ್ರವಾಗಿ ದೇಶದಲ್ಲಿ ಗುರುತಿಸಲ್ಪಟ್ಟಿದೆ. ಇತ್ತೀಚಿನ ವರ್ಷಗಳಿಂದ ಮಂಗಳೂರು ವಿಶೇಷ ವಿತ್ತ(ಎಮ್ ಎಸ್ ಇ ಝೆಡ್) ವಲಯವೆಂದು

ಗುರುತಿಸಿಕೊಂಡ ಕಾರಣದಿಂದ ಅಭಿವೃದ್ಧಿಯ ವೇಗ ಮತ್ತಷ್ಟು ಹೆಚ್ಚಾಗಿದೆ. ಪರಿಸರವಾದಿಗಳ ಸತತ ಹೋರಾಟ ಹಾಗೂ ಎಚ್ಚರಿಕೆಯ ಫಲವಾಗಿ ಅನೇಕ ಕೈಗಾರಿಕೆಗಳು ಇಲ್ಲಿಂದ ಕಾಲ್ಕಿತ್ತರೂ ಗಟ್ಟಿಯಾಗಿ ನೆಲೆಯೂರಿದ ಎಮ್‌ಆರ್‌ಪಿಎಲ್, ಸುಜಲಾನ್, ಒಎನ್‌ಜಿಸಿ, ಕೆಐಒಸಿಎಲ್, ಎಮ್‌ಸಿಎಫ್ ಮುಂತಾದ ಘನಕೈಗಾರಿಕೆಗಳು ಪರಿಸರ ಸಂರಕ್ಷಣೆಯ ದೃಷ್ಟಿಯಿಂದ ಒಂದು ದೊಡ್ಡ ಸವಾಲೇ ಆಗಿದೆ. ಶೈಕ್ಷಣಿಕ ಗುಣಮಟ್ಟ, ವ್ಯಾವಹಾರಿಕಾ ಚಾಕಚಕ್ಯತೆ ಹೆಚ್ಚುತ್ತಿದ್ದರೂ, ಆಧುನಿಕ ಮೂಲಸೌಕರ್ಯ, ವಿಸ್ತೃತ ಪ್ರಾದೇಶಿಕ ಅಭಿವೃದ್ಧಿ, ನಾಗರಿಕ ಸಮಾಜದ ಪೂರ್ಣ ಭಾಗಿತ್ವದ ಕೊರತೆ, ಇಲ್ಲಿನ ಸಮಸ್ಯಾತ್ಮಕ ವಿಚಾರಗಳಲ್ಲಿ ಒಳಗೊಂಡಿವೆ. ಬದಲಾಗುತ್ತಿರುವ ಪರಿಸರ–ಪರಿಸ್ಥಿತಿಯ ಸಂದರ್ಭದಲ್ಲಿ ಇವುಗಳ ಕಡೆಗೆ ಸಂಶೋಧಕರೂ, ನೀತಿ–ರೂಪಿಸುವವರು/ಆಡಳಿತಗಾರರೂ ತ್ವರಿತ ಗಮನ ಹರಿಸುವುದು ಅಗತ್ಯ. ಕೈಗಾರಿಕೀಕರಣ ಹಾಗೂ ನಗರೀಕರಣದ ಫಲವಾಗಿ ಹೊರಗಿನಿಂದ ವಲಸೆ ಬರುವವರ ಸಂಖ್ಯೆ ಹೆಚ್ಚಾಗಿದೆ. ಅನುಭೋಗಶಾಹಿತ್ವವೂ ಇದರ ಜೊತೆ ಜೊತೆಗೇ ಇರುವ ಕಾರಣದಿಂದ ತಲಾವಾರು ಹಾಗೂ ಒಟ್ಟು ತ್ಯಾಜ್ಯ ಪ್ರಮಾಣವೂ ಗಣನೀಯವಾಗಿ ಹೆಚ್ಚಾಗುತ್ತಿರುವುದನ್ನು ಗಮನಿಸಬಹುದು(ಹ್ಯಾನ್ಸ್, 2007).[36]

## ಅಧ್ಯಯನದ ಅವಧಿ

ಘನತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ನಿಯಮಾವಳಿಗಳಲ್ಲಿ, ವಿಲೇವಾರಿ ವಿಧಾನಗಳಲ್ಲಿ, ತ್ಯಾಜ್ಯ ಬಳಕೆಯಲ್ಲಿ ಹಾಗೂ ಇನ್ನಿತರ ಅನುಷ್ಠಾನದ ವಿಷಯಗಳಲ್ಲಿ ಕಾಲ ಕಾಲಕ್ಕೆ ಅನೇಕ ಸುಧಾರಣೆಗಳಾಗುತ್ತಿರುವುದನ್ನು ಗಮನಿಸಬಹುದು. ನನ್ನ ಅಧ್ಯಯನದಲ್ಲಿ ಎಲ್ಲಾ ಅಂಶಗಳನ್ನು ಸೀಮಿತ ಅವಧಿಯಲ್ಲಿ ಸೇರಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲ. ಕ್ಷೇತ್ರಕಾರ್ಯ ಕೈಗೊಂಡ 2015 ರಿಂದ 2017ರರ ವರೆಗಿನ ಸಮಯದಲ್ಲಿ ಕಂಡುಬಂದ ವಸ್ತುಸ್ಥಿತಿಗನುಗುಣವಾಗಿ ಮಾಹಿತಿಯನ್ನು ಸಂಗ್ರಹಿಸಿದ್ದೇನೆ.

## 1.5. ಅಧ್ಯಯನದ ಪ್ರಾಮುಖ್ಯತೆ

ಪರಿಸರವನ್ನು ರಕ್ಷಿಸುವುದು ಮತ್ತು ಸುರಕ್ಷಿತವಾಗಿ ಅದನ್ನು ಕಾಪಾಡಿಕೊಂಡು ಬರುವುದು ಬಹು ಮುಖ್ಯ ವಿಚಾರ. ಪರಿಸರವನ್ನು ರಕ್ಷಿಸುವುದು ಪ್ರತಿಯೊಬ್ಬ ವ್ಯಕ್ತಿ, ಸಂಸ್ಥೆ ಮತ್ತು ಸಂಘಟನೆಯ ಕರ್ತವ್ಯ ಮತ್ತು ಜವಾಬ್ದಾರಿಯಾಗಿದೆ. ಪರಿಸರ ಸಂವೇದನೆಗೆ ಎಲ್ಲಾ ಮಟ್ಟಗಳಲ್ಲಿ ಪ್ರಚಾರ ಸಿಗಬೇಕಾಗಿದೆ. ಪರಿಸರ ಸಂರಕ್ಷಣೆಯು ಮಾಲಿನ್ಯ ನಿಯಂತ್ರಣ ಮಾತ್ರವೇ ಆಗಿರುವುದಿಲ್ಲ. ಅದು ಸಹ್ಯ ಬೆಳವಣಿಗೆ ಮತ್ತು ಪ್ರಾಕೃತಿಕ ಸಂಪನ್ಮೂಲ ಮತ್ತು ಪರಿಸರ ವ್ಯವಸ್ಥೆಯ ಕಾಪಾಡುವಿಕೆಯನ್ನು ಕೂಡಾ ಒಳಗೊಂಡಿರುತ್ತದೆ. ಈ ನಿಟ್ಟಿನಲ್ಲಿ ತ್ಯಾಜ್ಯ ನಿರ್ವಹಣೆಯ ಅಗತ್ಯವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಚರ್ಚಿಸಬೇಕಾಗಿದೆ.

ಅಭಿವೃದ್ಧಿ, ಆಧುನೀಕರಣ ಹಾಗು ನಗರೀಕರಣ ಪ್ರಕ್ರಿಯೆಗಳು ಘನತ್ಯಾಜ್ಯ ನಿರ್ವಹಣೆಯ ಮೇಲೆ ಹೆಚ್ಚಿನ ಒತ್ತಡವನ್ನು ಹೇರುತ್ತಿವೆ. ಪರಿಸರದ ಗುಣಮಟ್ಟ ಮತ್ತು ಆರ್ಥಿಕಾಭಿವೃದ್ಧಿ ನಡುವೆ ಸಮತೋಲನವನ್ನು ಸಾಧಿಸುವ ನಿಟ್ಟಿನಲ್ಲಿ ಸಮರ್ಪಕ ರೀತಿಯ ತ್ಯಾಜ್ಯ ನಿರ್ವಹಣೆ ಭಾರತವೂ ಸೇರಿದಂತೆ ಪ್ರಪಂಚದ ಎಲ್ಲಾ ಅಭಿವೃದ್ಧಿ ಹೊಂದುತ್ತಿರುವ ನಗರಗಳಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಕೈಗಾರಿಕೆ, ವಾಣಿಜ್ಯ, ಶಿಕ್ಷಣ ಹೀಗೆ ಎಲ್ಲಾ ರಂಗಗಳಲ್ಲಿ ಪ್ರಗತಿಯನ್ನು ಸಾಧಿಸುತ್ತಿರುವ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೇವಲ ನಗರಪಾಲಿಕೆ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ಬಗ್ಗೆ ಅಧ್ಯಯನ ನಡೆಸಲಾಗಿದೆ. ನಗರ ಸ್ಥಳೀಯ ಸಂಸ್ಥೆಗಳು ಮತ್ತು ಗ್ರಾಮೀಣ ಸ್ಥಳೀಯ ಸಂಸ್ಥೆಗಳ ಮಟ್ಟದಲ್ಲಿ ಹೆಚ್ಚಿನ ಅಧ್ಯಯನಗಳು ಕಂಡುಬರುವುದಿಲ್ಲ. ನನ್ನ ಅಧ್ಯಯನ ಅವಧಿಯ ಮಿತಿಗೊಳಪಟ್ಟು ನಡೆಸಿದ ಸಾಹಿತ್ಯ ವಿಮರ್ಶೆಯಲ್ಲಿ ಭಾರತದ ಅನೇಕ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಸಂಶೋಧಕರು ನಡೆಸಿದ ಅಧ್ಯಯನಗಳ ಬಗ್ಗೆ ಸೂಕ್ಷ್ಮ ವಿವರಗಳನ್ನು ನೀಡಲಾಗಿದೆ. ದೆಹಲಿ, ಕೊಲ್ಕತ್ತ, ಚೆನ್ನೈ, ಮುಂಬಯಿ, ಬೆಂಗಳೂರು, ಮಂಗಳೂರು ಸೇರಿದಂತೆ ದೇಶದ ಅನೇಕ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಕೈಗೊಂಡ ಅಧ್ಯಯನಗಳ ಪ್ರಮುಖ ಅಂಶಗಳನ್ನು 'ಸಾಹಿತ್ಯ ವಿಮರ್ಶೆ' ವಿಭಾಗದಲ್ಲಿ ಕಾಣಬಹುದು. ಹಾಗೆಯೇ ಘನತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ಕೇಂದ್ರೀಯ ಮಾಲಿನ್ಯ ನಿಯಂತ್ರಣ ಮಂಡಳಿ, ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಹಾಗೂ ಪೌರಾಡಳಿತ ನಿರ್ದೇಶನಾಲಯಗಳು ಜಾರಿಗೆ ತಂದ ನೀತಿ/ನಿಯಮಾವಳಿಗಳು ನಗರ ಸ್ಥಳೀಯ ಸಂಸ್ಥೆಗಳನ್ನೇ ಗುರಿಯಾಗಿರಿಸಿಕೊಂಡಿರುವುದು ತಿಳಿದುಬರುತ್ತದೆ. ನನ್ನ ಅಧ್ಯಯನದಲ್ಲಿ ಗ್ರಾಮೀಣ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣೆಯ ಅನುಷ್ಠಾನ ಹಾಗೂ ನೀತಿ/ನಿಯಮಾವಳಿಗಳ ಅನುಷ್ಠಾನಕ್ಕೆ ಸಂಬಂಧಿಸಿ ಚರ್ಚಿಸಲಾಗಿರುವುದರಿಂದ ಈ ಅಧ್ಯಯನವು ಇತರೆ ಅಧ್ಯಯನಗಳಿಗಿಂತ ಭಿನ್ನವಾಗಿದೆ ಮತ್ತು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಈ ಅಧ್ಯಯನವು ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಘನತ್ಯಾಜ್ಯ ನಿರ್ವಹಣೆಯಲ್ಲಿರುವ ವಿಧಾನಗಳು ಮತ್ತು ಲೋಪ ದೋಷಗಳನ್ನು ಗುರುತಿಸುವ ದೃಷ್ಟಿಯಿಂದಲೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

ತ್ಯಾಜ್ಯ ಸಂಗ್ರಹ, ವಿಭಜನೆ ಮತ್ತು ವಿಲೇವಾರಿಗೆ ಸಂಬಂಧಿಸಿ ನಾಗರಿಕರು ದಿನನಿತ್ಯ ಎದುರಿಸುತ್ತಿರುವ ಸಮಸ್ಯೆ ಮತ್ತು ಸವಾಲುಗಳನ್ನು ಅರಿಯುವ ದೃಷ್ಟಿಯಿಂದಲೂ ಈ ಅಧ್ಯಯನವು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಸರಕಾರಕ್ಕೂ ಈ ಅಧ್ಯಯನವು ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ಬೇರೆ ಬೇರೆ ನೀತಿ ನಿಯಮಗಳನ್ನು ರೂಪಿಸುವ ದೃಷ್ಟಿಯಿಂದ ಸಹಕಾರಿಯಾಗಲಿದೆ. ಸ್ಥಳೀಯ ಸಂಘ ಸಂಸ್ಥೆಗಳ ಪಾತ್ರವನ್ನು ಕುರಿತು ಚರ್ಚಿಸುವ ದೃಷ್ಟಿಯಲ್ಲಿಯೂ ಈ ಅಧ್ಯಯನಕ್ಕೆ

ಪ್ರಾಮುಖ್ಯತೆಯಿದೆ. ದೇಶದ ಯಾವುದೇ ಭಾಗದಲ್ಲಿ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಲು ಈ ಅಧ್ಯಯನವು ಸಹಕಾರಿಯಾಗಬಹುದು.

### 1.6. ಅಧ್ಯಯನದ ಮಿತಿಗಳು

ತ್ಯಾಜ್ಯವು ಗೃಹ, ಆಸ್ಪತ್ರೆ, ವಾಣಿಜ್ಯ ಮುಂತಾದ ಅನೇಕ ಮೂಲಗಳಿಂದ ಉತ್ಪತ್ತಿಯಾಗುತ್ತವೆ ಮತ್ತು ಘನ, ದ್ರವ ಹಾಗೂ ಅನಿಲ ರೂಪದಲ್ಲಿರುತ್ತವೆ. ಹಾಗೆಯೇ ತ್ಯಾಜ್ಯವು ಅಭಿವೃದ್ಧಿ, ಪರಿಸರ, ಆರೋಗ್ಯ ಮುಂತಾದುವುಗಳ ಮೇಲೆ ದುಷ್ಪರಿಣಾಮ ಬೀರುತ್ತದೆ. ಪ್ರಸ್ತುತ ಅಧ್ಯಯನವು ಸಮಯದ ಮಿತಿಗೆ ಒಳಪಟ್ಟಿರುವುದರಿಂದ ಕೇವಲ ಆಯ್ದ ಗೃಹ ಮತ್ತು ವಾಣಿಜ್ಯ ಘನತ್ಯಾಜ್ಯಗಳನ್ನು ಮಾತ್ರ ಒಳಗೊಂಡಿದೆ. ಈ ಅಧ್ಯಯನದಲ್ಲಿ ಕೈಗಾರಿಕಾ ತ್ಯಾಜ್ಯ, ಆಸ್ಪತ್ರೆ ತ್ಯಾಜ್ಯ ಹಾಗೂ ಇನ್ನಿತರ ಅಪಾಯಕಾರಿ ತ್ಯಾಜ್ಯಗಳನ್ನು ಸೇರಿಸಿಕೊಂಡಿಲ್ಲ.

- ದಕ್ಷಿಣ ಕನ್ನಡ ಜಿಲ್ಲೆಯ ನಗರ ಮತ್ತು ಗ್ರಾಮೀಣ ಪ್ರದೇಶಗಳ ವ್ಯಾಪ್ತಿಯಲ್ಲಿ ಈ ಅಧ್ಯಯನವನ್ನು ನಡೆಸಲಾಗಿದೆ.
- ಈ ಅಧ್ಯಯನವು ದ್ರವ ಮತ್ತು ಅನಿಲ ತ್ಯಾಜ್ಯಗಳನ್ನು ಹೊರತುಪಡಿಸಿ ಕೇವಲ ಘನತ್ಯಾಜ್ಯ ಸಂಗ್ರಹ ಮತ್ತು ವಿಲೇವಾರಿ ಅಂಶಗಳನ್ನು ಮಾತ್ರ ವಿಶ್ಲೇಷಿಸುತ್ತದೆ.
- ಈ ಅಧ್ಯಯನದ ಫಲಿತಾಂಶಗಳು ಇತರ ಯವುದೇ ಪ್ರದೇಶಗಳಿಗೆ ನೇರವಾಗಿ ಅನ್ವಯವಾಗುವುದಿಲ್ಲ.
- ಈ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಅಂಕಿ–ಅಂಶಗಳನ್ನು ಯಾವುದೇ ಸಾಂಖ್ಯಿಕ ಸಾಧನಗಳ ಮೂಲಕ ವಿಶ್ಲೇಷಣೆಗೆ ಒಳಪಡಿಸಿಲ್ಲ. ಕೇವಲ ಶೇಕಡಾವಾರು ಕ್ರಮದಲ್ಲಿ ಮಾಡಿದ ಲೆಕ್ಕಾಚಾರದ ಆಧಾರದಲ್ಲಿ ಫಲಿತಗಳನ್ನು ನೀಡಲಾಗಿದೆ.
- ಅಧ್ಯಯನದ ಸೀಮಿತ ಅವಧಿ ಮತ್ತು ಸಂಪನ್ಮೂಲಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪ್ರತೀ ತಾಲೂಕಿನಿಂದ ಒಂದು ಗ್ರಾಮ ಪಂಚಾಯತ್‌ನಂತೆ ಐದು ತಾಲೂಕುಗಳಿಂದ ಐದು ಗ್ರಾಮ ಪಂಚಾಯತ್‌ಗಳನ್ನು ಯಾಧೃಚ್ಛಿಕ ಮಾದರಿಯಲ್ಲಿ ಆಯ್ಕೆ ಮಾಡಿಕೊಂಡು, ಪ್ರತೀ ಗ್ರಾಮ ಪಂಚಾಯತ್ ವ್ಯಾಪ್ತಿಯಿಂದ 20 ಪ್ರತಿಕ್ರಿಯೆದಾರರಿಂದ ಮಾಹಿತಿ ಸಂಗ್ರಹಿಸಲಾಗಿದೆ. ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಗಳಿಂದ ಒಟ್ಟು 410 ಜನರ ಪ್ರತಿಕ್ರಿಯೆ ಪಡೆಯಲಾಗಿದೆ. ಹಾಗೆಯೇ ಒಟ್ಟು 203 ಗ್ರಾಮ ಪಂಚಾಯತ್‌ಗಳಲ್ಲಿ 21 ಗ್ರಾಮ ಪಂಚಾಯತ್‌ಗಳಿಗೆ ಭೇಟಿ ನೀಡಿ ಅಧ್ಯಯನ ಮಾಡಲಾಗಿದೆ.

• ಅಧ್ಯಯನ ಕ್ಷೇತ್ರದಲ್ಲಿ ಪ್ರತಿಕ್ರಿಯೆದಾರರು ನೀಡಿದ ಮಾಹಿತಿಯ ಆಧಾರದಲ್ಲಿ ಫಲಿತಗಳನ್ನು ನೀಡಲಾಗಿದೆ. ಆದರೆ ಮಾಹಿತಿದಾರರು ಒಂದು ವೇಳೆ ಸಮರ್ಪಕ ಉತ್ತರ ನೀಡದಿರುವ ಸಾಧ್ಯತೆಯನ್ನು ತಳ್ಳಿಹಾಕಲು ಸಾಧ್ಯವಿಲ್ಲ. ಇದು ಅಧ್ಯಯನದ ಮಿತಿಯಾಗಿದೆ.

## 1.7. ಅಧ್ಯಾಯಗಳ ವಿನ್ಯಾಸ

ಈ ಮಹಾಪ್ರಬಂಧವನ್ನು ಹೀಗೆ ಆಯೋಜಿಸಲಾಗಿದೆ.

**ಮೊದಲನೆಯ ಅಧ್ಯಾಯ: ಪ್ರವೇಶ**

ಇದರಲ್ಲಿ ಅಧ್ಯಯನದ ಪೀಠಿಕೆ, ಸ್ವರೂಪ, ವ್ಯಾಖ್ಯೆ, ಅಧ್ಯಯನದ ಸಮಸ್ಯೆಗಳು, ಉದ್ದೇಶಗಳು, ಮಿತಿಗಳು ಮತ್ತು ಅಧ್ಯಯನದ ವಿಧಾನಗಳನ್ನು ವಿವರಿಸಲಾಗಿದೆ.

**ಎರಡನೆಯ ಅಧ್ಯಾಯ: ಸಾಹಿತ್ಯ ಸಮೀಕ್ಷೆ**

ಈ ಅಧ್ಯಾಯದಲ್ಲಿ ಮೂರು ಭಾಗಗಳಿವೆ:

2.1. ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನಕ್ಕೆ ಸಂಬಂಧಿಸಿದ ಸಾಹಿತ್ಯ ವಿಮರ್ಶೆ

2.2 ತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳ ಕುರಿತಾದ ಸಾಹಿತ್ಯ ವಿಮರ್ಶೆ

2.3. ತ್ಯಾಜ್ಯ ನಿರ್ವಹಣೆಯ ನೀತಿ ನಿಯಮಾವಳಿಗಳ ಬಗೆಗಿನ ಸಾಹಿತ್ಯ ವಿಮರ್ಶೆ

**ಮೂರನೇ ಅಧ್ಯಾಯ: ಕ್ಷೇತ್ರ ಪರಿಚಯ**

ಈ ಅಧ್ಯಾಯದಲ್ಲಿ 5 ಭಾಗಗಳಿವೆ:

3.1. ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ

3.2 ಭೌಗೋಳಿಕ ಪರಿಚಯ

3.3 ಜನಸಂಖ್ಯಾ ಚಿತ್ರಣ

3.4 ಆರ್ಥಿಕತೆ ಮತ್ತು ಮೂಲ ಸೌಲಭ್ಯಗಳು

3.5 ಮಾನವ ಅಭಿವೃದ್ಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ

**ನಾಲ್ಕನೆಯ ಅಧ್ಯಾಯ: ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನ.**

ಈ ಅಧ್ಯಾಯದಲ್ಲಿ ಈ ಕೆಳಗಿನ ಉಪ ವಿಭಾಗಗಳಿವೆ

4.1. ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನ.

4.2. ಗ್ರಾಮೀಣ ಸ್ಥಳೀಯ ಸಂಸ್ಥೆಗಳಲ್ಲಿ (ಗ್ರಾಮ ಪಂಚಾಯತ್) ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನ.

4.3. ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ವಿಶ್ಲೇಷಣೆ

4.4. ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ಬಗ್ಗೆ ಜನರ ಪ್ರತಿಕ್ರಿಯೆ

**ಐದನೆಯ ಅಧ್ಯಾಯ: ಘನತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳು**

ಈ ಅಧ್ಯಾಯವು ಈ ಕೆಳಗಿನ ಅಂಶಗಳನ್ನು ಒಳಗೊಂಡಿದೆ

5.1 ಘನತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಆಯಾಮಗಳು

5.2 ಘನತ್ಯಾಜ್ಯ ನಿರ್ವಹಣೆಯ ಆರ್ಥಿಕ ಆಯಾಮಗಳು

**ಆರನೆಯ ಅಧ್ಯಾಯ: ತ್ಯಾಜ್ಯ ನಿರ್ವಹಣಾ ನೀತಿ**

ಈ ಅಧ್ಯಾಯವು ಈ ಕೆಳಗಿನ ಅಂಶಗಳನ್ನು ಒಳಗೊಂಡಿದೆ

6.1. ಅಂತಾರಾಷ್ಟ್ರೀಯ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

6.2. ಭಾರತದಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

6.3 ಕರ್ನಾಟಕದಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

6.4 ಅಧ್ಯಯನ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳ ಅನುಷ್ಠಾನದ ವಿಶ್ಲೇಷಣೆ

**ಏಳನೆಯ ಅಧ್ಯಾಯ: ಅಧ್ಯಯನದ ಫಲಿತಗಳು ಮತ್ತು ಸಲಹೆ ಸೂಚನೆಗಳು(ಶಿಫಾರಸ್ಸು)**

ಈ ಅಧ್ಯಾಯವು ಈ ಕೆಳಗಿನ ಅಂಶಗಳನ್ನು ಒಳಗೊಂಡಿದೆ

7.1. ಅಧ್ಯಯನದ ಫಲಿತಗಳು

7.2. ಸಲಹೆ ಸೂಚನೆಗಳು

7.3. ಸಂಶೋಧನಾ ಅವಕಾಶಗಳು

**ಅನುಬಂಧ**

ಈ ವಿಭಾಗವು ಅಧ್ಯಯನಕ್ಕೆ ಬಳಸಿದ ಆಕರ ಗ್ರಂಥಗಳ ಬಗ್ಗೆ ಮಾಹಿತಿ ಮತ್ತು ಮಾದರಿ ಪ್ರಶ್ನಾವಳಿಗಳನ್ನು ಒಳಗೊಂಡಿದೆ.

**ಪರಾಮರ್ಶನ ಗ್ರಂಥಗಳು ಮತ್ತು ಕೊನೆ ಟಿಪ್ಪಣಿಗಳು**


1. ಹನ್ಸ್, ವಿ. ಬಾಸಿಲ್. (2007). ಇನ್ಫ್ರಾಸ್ಟ್ರಕ್ಚರ್ ಫಾರ್ ರೂರಲ್ ಡೆವೆಲಪ್‌ಮೆಂಟ್–ಎ ಕಂಪಾರೆಟಿವ್ ಸ್ಟಡಿ ಇನ್ ದಕ್ಷಿಣ ಕನ್ನಡ ಡಿಸ್ಟ್ರಿಕ್ಟ್, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು, ಪು.52.
2. ಅಗರವಾಲ್, ಸುನೀತಾ ಮತ್ತು ಲಲಿತಾ, ಅರೋರ. (2013). ಡೊಮೆಸ್ಟಿಕ್ ವೇಸ್ಟ್ ಮೆನೇಜ್‌ಮೆಂಟ್. ಆವಿಷ್ಕಾರ್ ಪಬ್ಲಿಷರ್ಸ್ & ಡಿಸ್ಟ್ರಿಬ್ಯೂಟರ್ಸ್, ಜೈಪುರ. ಪು.78–88.
3. ಜಯಶೀಲ ಮತ್ತು ವಿ. ಬಾಸಿಲ್, ಹ್ರನ್ಸ್. (2009), ಇ–ವೇಸ್ಟ್ ಮೆನೇಜ್‌ಮೆಂಟ್ ಇನ್ ಇಂಡಿಯ: ಪ್ರೋಬ್ಲೆಮ್ಸ್ ಎಂಡ್ ಸೊಲ್ಯೂಷನ್ಸ್. ನಗರಲೋಕ. 40, ಸಂಖ್ಯೆ.3, ಪು. 52–58.
4. ಭಗತ್, ಆರ್. ಬಿ. (2011). ಎಮರ್ಜಿಂಗ್ ಪ್ಯಾಟರ್ನ್ ಆಫ್ ಅರ್ಬನೈಸೇಶನ್ ಇನ್ ಇಂಡಿಯ. ಇಕನಾಮಿಕ್ ಎಂಡ್ ಪೊಲಿಟಿಕಲ್ ವೀಕ್ಲಿ. 47, ಸಂಖ್ಯೆ 4. ಪು.23–29.
5. ಅದೇ, ಪು.24
6. https://en.wikipedia/org/
7. ಶರ್ಮ, ಜೆ. ಎಲ್. ಮತ್ತು ಬುಲ್ದಿನಿ, ಎ. ಎಲ್. (1994). ಎ ಡಿಕ್ಷನರಿ ಆಫ್ ಪೊಲ್ಯೂಷನ್. ಸಿ.ಬಿ.ಎಸ್ ಪಬ್ಲಿಷರ್ಸ್, ನ್ಯೂಡೆಲ್ಲಿ. ಪು.87–94.
8. htpp://www.who.
9. https://en.wikipedia/org/

10. ಆನಂದ್, ಸುಭಾಶ್. (2010) ರಿಸೈಕ್ಲಿಂಗ್ ಆಫ್ ಸಾಲಿಡ್ ವೇಸ್ಟ್ ಮೆಟೀರಿಯಲ್ಸ್. ಇನ್: ಸಿಂಗ್ ಜಗಬೀರ್ ಮತ್ತು ರಾಮನಾಥನ್ ಆರ್(ಸಂ.), ಸಾಲಿಡ್ ವೇಸ್ಟ್ ಮೆನೇಜ್‌ಮೆಂಟ್– ಪ್ರೆಸೆಂಟ್ ಆಂಡ್ ಫ್ಯೂಚರ್ ಚಾಲೆಂಜೆಸ್. ಐ.ಕೆ. ಇಂಟರ್ ನ್ಯಾಷನಲ್ ಪಬ್ಲಿಷಿಂಗ್ ಹೌಸ್, ಬೆಂಗಳೂರು. ಪುಟ 162–168

11. ಕಲ್ಲೂರಾಯ, ಶ್ರೀಪತಿ, ಪಿ. ಮತ್ತು ಜಯವಂತ, ನಾಯಕ್.(2009). ಪರಿಸರ ಅರ್ಥಶಾಸ್ತ್ರ. ಮಂಗಳ ಪ್ರಕಾಶನ, ಮಂಗಳೂರು. ಪು.95–103.

12. ಅಗರವಾಲ್, ಸುನೀತಾ ಮತ್ತು ಲಲಿತಾ, ಅರೋರ.(2013). ಡೊಮೆಸ್ಟಿಕ್ ವೇಸ್ಟ್ ಮೆನೇಜ್ ಮೆಂಟ್. ಆವಿಷ್ಕಾರ್ ಪಬ್ಲಿಷರ್ಸ್ & ಡಿಸ್ಟ್ರಿಬ್ಯೂಟರ್ಸ್, ಜೈಪುರ. ಪು.78–88.

13. htpp://www.who.

14. ಸೋಮಶೇಖರ, ಕೆ.ಕೆ. (2010). ಆ್ಯನ್ ಇಕನಾಮಿಕ್ ಇವಾಲ್ಯುವೇಶನ್ ಆಫ್ ಸಾಲಿಡ್ ವೇಸ್ಟ್ ಮೆನೇಜ್‌ಮೆಂಟ್ ಸರ್ವಿಸಸ್ ಇನ್ ಸಿಟೀಸ್: ಎ ಕೇಸ್ ಸ್ಟಡಿ ಆಫ್ ಮಂಗಳೂರು ಸಿಟಿ ಕಾರ್ಪರೇಶನ್, ಮಂಗಳೂರು. ಅಪ್ರಕಟಿತ ಪಿ.ಎಚ್.ಡಿ. ಮಹಾ ಪ್ರಬಂಧ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು. ಪು.56–67

15. ಪಾವ್ಲ್, ಟಿ. ವಿಲಿಯಮ್ಸ್. (2005). ವೇಸ್ಟ್ ಟ್ರೀಟ್‌ಮೆಂಟ್ ಆಂಡ್ ಡಿಸ್‌ಪೋಸಲ್. ವಿಲೆ ಇಂಡಿಯ ಪ್ರೈ. ಲಿಮಿಟೆಡ್, ನ್ಯೂಡೆಲ್ಲಿ. ಪು.1

16. ರಾವ್, ಎಂ. ಎಸ್. ಮತ್ತು ಸುಲ್ತಾನಾ, ರಜಿಯಾ. (2012). ಸಾಲಿಡ್ ವೇಸ್ಟ್ ಎಂಡ್ ಹೆಸಾರ್ಡಸ್ ವೇಸ್ಟ್ ಮೆನೇಜ್‌ಮೆಂಟ್. ಬಿ ಎಸ್ ಪಬ್ಲಿಕೇಷನ್ಸ್, ಹೈದರಾಬಾದ್. ಪು. 36.

17. ಇಕ್ಬಾಲ್, ಹೆಚ್. ಖಾನ್. ಮತ್ತು ನವೇದ್, ಆಶಾನ್. (2003). ಟೆಕ್ಸ್ಟ್ ಬುಕ್ ಆಫ್ ವೇಸ್ಟ್ ಮ್ಯಾನೇಜ್‌ಮೆಂಟ್. ಸಿ.ಬಿ.ಎಸ್ ಪಬ್ಲಿಷರ್ಸ್ ಮತ್ತು ಡಿಸ್ಟ್ರಿಬ್ಯೂಟರ್ಸ್ ಪ್ರೈವೆಟ್ ಲಿ, ನ್ಯೂ ಡೆಲ್ಲಿ. ಪು.60–65.

18. ತೋಮಸ್, ಹೆನ್ರಿ, ಡೈಕೆ, ವಾನ್. (1972). ಅವರ್ ಎನ್ವಿರಾನ್‌ಮೆಂಟ್, ಪಾತ್ ವೇಯ್ಸ್ ಟು ಸೊಲ್ಯೂಷನ್. ಗಿನ್ ಎಂಡ್ ಕಂಪೆನಿ, ಮೆಸಚುಸೆಟ್ಸ್. ಪು.123–128.

19. ಆನಂದ್, ಸುಭಾಶ್. (2010) ರಿಸೈಕ್ಲಿಂಗ್ ಆಫ್ ಸಾಲಿಡ್ ವೇಸ್ಟ್ ಮೆಟೀರಿಯಲ್ಸ್. ಇನ್: ಸಿಂಗ್ ಜಗಬೀರ್ ಮತ್ತು ರಾಮನಾಥನ್ ಆರ್ (ಸಂ.), ಸಾಲಿಡ್ ವೇಸ್ಟ್ ಮೆನೇಜ್‌ಮೆಂಟ್– ಪ್ರೆಸೆಂಟ್ ಆಂಡ್ ಫ್ಯೂಚರ್ ಚಾಲೆಂಜೆಸ್. ಐ.ಕೆ.ಇಂಟರ್ ನ್ಯಾಷನಲ್ ಪಬ್ಲಿಷಿಂಗ್ ಹೌಸ್, ಬೆಂಗಳೂರು. ಪು.255–265.

20. ಪೊಸಿಷನ್ ಪೇಪರ್, ಆರ್ಥಿಕ ವ್ಯವಹಾರಗಳ ವಿಭಾಗ, ಹಣಕಾಸು ಸಚಿವಾಲಯ, ಭಾರತ ಸರ್ಕಾರ, 2009

21. ಹನ್ಸ್, ವಿ. ಬಾಸಿಲ್. (2009) ಗೋಷ್ಠಿ–3 ವರದಿ. ಇನ್: ಜಿ.ವಿ. ಜೋಶಿ ಮತ್ತು ನೋರ್ಬರ್ಟ್ ಲೋಬೊ (ಸಂ.), ಕರಾವಳಿ ಕರ್ನಾಟಕದ ಅರ್ಥವ್ಯವಸ್ಥೆ: ಹಿಂದಿನಿಂದ ಇಂದಿನವರೆಗೆ. ಮಂಗಳ ಪ್ರಕಾಶನ, ಮಂಗಳೂರು. ಪು.89–91.

22. htpp://www.who.int/patientsefety

23. htpp://www.who.int/patientsefety

24. ಮಾಲಿಕ್, ಲೋಕೇಂದ್ರ (2010). ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಆ್ಯಂಡ್ ಸಸ್ಟೈನೇಬಲ್‌ಸಿಟೀಸ್ ಇನ್ ಇಂಡಿಯಾ: ಎ ಕ್ರಿಟಿಕ್. ನಗರಲೋಕ, 42, ಸಂಖ್ಯೆ 4. ಪು.41–48.

25. ಸುಮೀತ್ ಗುಪ್ತ ಮತ್ತು ಆಶಿಶ್ ಕುಮಾರ್ (2011), "ಪಿ.ಪಿ.ಪಿ ಇನ್ ಸಾಲಿಡ್ ವೇಸ್ಟ್ ಮೆನೇಜ್ಮೆಂಟ್: ಎ ಸ್ಟಡಿ ಆಫ್ ಡೆಹ್ರಾಡೂನ್ ಸಿಟಿ ಇನ್ ಉತ್ತರಖಂಡ", ದಿ ಐ ಯು ಪಿ ಜರ್ನಲ್ ಆಫ್ ಇನ್ಫ್ರಾಸ್ಟ್ರಕ್ಚರ್, ದಿ ಐ.ಸಿ.ಎಫ್.ಎ.ಐ ಯುನಿವರ್ಸಿಟಿ ಪ್ರೆಸ್, ಹೈದರಾಬಾದ್, 9, ಸಂಖ್ಯೆ 2, ಸಂಖ್ಯೆ 21–23. ಪು.72–77.

26. ಸೋಮಶೇಖರ, ಕೆ.ಕೆ. (2010). ಆ್ಯನ್ ಇಕನಾಮಿಕ್ ಇವಾಲ್ಯುವೇಶನ್ ಆಫ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಸರ್ವಿಸಸ್ ಇನ್ ಸಿಟೀಸ್: ಎ ಕೇಸ್ ಸ್ಟಡಿ ಆಫ್ ಮಂಗಳೂರು ಸಿಟಿ ಕಾರ್ಪರೇಶನ್, ಮಂಗಳೂರು. ಅಪ್ರಕಟಿತ ಪಿಎಚ್.ಡಿ. ಮಹಾ ಪ್ರಬಂಧ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು. ಪು.44–47.

27. ಶ್ರೇಜಿಯಾಂಗ್, ಜೋನ್. (2010). ಪ್ರೆಸೆಂಟ್ ಆಂಡ್ ಫ್ಯೂಚರ್ ಚಾಲೆಂಜೆಸ್ ಇನ್ ರಿಸೈಕ್ಲಿಂಗ್ ಆಂಡ್ ಮೆನೇಜ್‌ಮೆಂಟ್ ಆಫ್ ಸಾಲಿಡ್ ವೇಸ್ಟ್. ಇನ್: ಜಗಬೀರ್, ಸಿಂಗ್ ಮತ್ತು ರಾಮನಾಥನ್, ಆರ್. (ಸಂ.), ಸಾಲಿಡ್ ವೇಸ್ಟ್ ಮೆನೇಜ್‌ಮೆಂಟ್–ಪ್ರೆಸೆಂಟ್ ಆಂಡ್ ಫ್ಯೂಚರ್ ಚಾಲೆಂಜೆಸ್, ಐ.ಕೆ.ಇಂಟರ್ ನ್ಯಾಷನಲ್ ಪಬ್ಲಿಷಿಂಗ್ ಹೌಸ್. ಬೆಂಗಳೂರು. ಪು.93–98.

28. ರಾಮಚಂದ್ರ, ಟಿ.ವಿ.(2006). ಮ್ಯಾನೇಜ್‌ಮೆಂಟ್ ಆಫ್ ಮುನ್ಸಿಪಾಲ್ ಸೋಲಿಡ್ ವೇಸ್ಟ್, ಕ್ಯಾಪಿಟಲ್ ಪಬ್ಲಿಷಿಂಗ್ ಕಂಪೆನಿ, ನ್ಯೂಡೆಲ್ಲಿ. ಪು.33–38.

29. ಅದೇ ಪು.54–58.

30. ಬೆನ್ನಿ, ಜೋಸೆಫ್. (2009). ಎನ್ವಿರಾನಮೆಂಟಲ್ ಸ್ಟಡೀಸ್. ಟಾಟಾ ಮೆಕ್‌ಗ್ರೊ ಹಿಲ್ ಪಬ್ಲಿಷಿಂಗ್ ಕಂ.ಲಿ., ನ್ಯೂಡೆಲ್ಲಿ. ಪು.142–153.

31. ಸಮೀರ್‌ದಾಸ್, ಟಿ. (2002). ಇಕನಾಮಿಕ್ಸ್ ಆಫ್ ಸೋಲಿಡ್‌ವೇಸ್ಟ್ ಮೆನೇಜ್‌ಮೆಂಟ್ ಇನ್ ಕ್ಯಾಲಿಕಟ್ ಕಾರ್ಪೋರೇಷನ್. ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಪಾಂಡಿಚೇರಿ ವಿಶ್ವವಿದ್ಯಾನಿಲಯ, ಪಾಂಡಿಚೇರಿ. ಪು.82–93.

32. ಶ್ರೀನಿವಾಸನ್, ಕಾರ್ತಿಕಾ. (2006). ಪಬ್ಲಿಕ್, ಪ್ರೈವೇಟ್ ಎಂಡ್ ವಾಲಂಟರಿ ಏಜನ್ಸೀಸ್ ಇನ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್–ಎ ಸ್ಟಡೀ ಇನ್ ಚೆನ್ನೈ ಸಿಟಿ. ವಾಲ್ಯೂಮ್ 41, ಸಂಖ್ಯೆ 22, ಜೂನ್, ಪು.18.

33. ಇಕ್ಬಾಲ್, ಹೆಚ್. ಖಾನ್. ಮತ್ತು ನವೇದ್, ಆಶಾನ್. (2003). ಟೆಕ್ಸ್ಟ್ ಬುಕ್ ಆಫ್ ವೇಸ್ಟ್ ಮೆನೇಜ್‌ಮೆಂಟ್. ಸಿ. ಬಿ. ಎಸ್ ಪಬ್ಲಿಷರ್ಸ್ ಮತ್ತು ಡಿಸ್ಟ್ರಿಬ್ಯೂಟರ್ಸ್ ಪ್ರೈವೇಟ್ ಲಿ, ನ್ಯೂ ಡೆಲ್ಲಿ. ಪು.112–119.

34. ಹೊಸೆಟ್ಟಿ, ಬಿ.ಬಿ. (2006). ಪ್ರೋಸ್‌ಪೆಕ್ಟಸ್ ಆ್ಯಂಡ್ ಪರ್ಸ್‌ಪೆಕ್ಟಿವ್ಸ್ ಆಫ್ ಸೋಲಿಡ್ ವೇಸ್ಟ್ ಮ್ಯಾನೇಜ್‌ಮೆಂಟ್. ನ್ಯೂ ಏಜ್ ಇಂಟರ್ ನ್ಯಾಷನಲ್ ಪಬ್ಲಿಷರ್, ನ್ಯೂಡೆಲ್ಲಿ. ಪು.135–148.

35. ಬರುಚಾ, ಇರಾಚ್. (2005). ಎನ್ವಿರಾನಮೆಂಟಲ್ ಸ್ಟಡೀಸ್. ಯೂನಿವರ್ಸಿಟೀಸ್ ಪ್ರೆಸ್, ಇಂಡಿಯ ಪ್ರೈ.ಲಿ., ಹೈದರಾಬಾದ್. ಪು.48–61.

36. ಹನ್ಸ್, ವಿ. ಬಾಸಿಲ್. (2007). ಇನ್ಫ್ರಾಸ್ಟ್ರಕ್ಚರ್ ಫಾರ್ ರೂರಲ್ ಡೆವೆಲಪ್‌ಮೆಂಟ್–ಎ ಕಂಪಾರೆಟಿವ್ ಸ್ಟಡಿ ಇನ್ ದಕ್ಷಿಣ ಕನ್ನಡ ಡಿಸ್ಟ್ರಿಕ್ಟ್, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು. ಪು.69–75

37. ಪಾವ್ಲ್, ಟಿ. ವಿಲಿಯಮ್ಸ್.(2005)., ವೇಸ್ಟ್ ಟ್ರೀಟ್‌ಮೆಂಟ್ ಆಂಡ್ ಡಿಸ್‌ಪೋಸಲ್. ವಿಲೆ ಇಂಡಿಯ ಪ್ರೈ. ಲಿಮಿಟೆಡ್, ನ್ಯೂಡೆಲ್ಲಿ. ಪು.64–65.

# ಅಧ್ಯಾಯ: ಎರಡು

# ಸಾಹಿತ್ಯ ಪರಾಮರ್ಶನ

2.1. ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನಕ್ಕೆ ಸಂಬಂಧಿಸಿದ ಸಾಹಿತ್ಯ ವಿಮರ್ಶೆ

2.2. ತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳ ಕುರಿತಾದ ಸಾಹಿತ್ಯ ವಿಮರ್ಶೆ

2.3. ತ್ಯಾಜ್ಯ ನಿರ್ವಹಣೆಯ ನೀತಿ ನಿಯಮಾವಳಿಗಳ ಬಗೆಗಿನ ಸಾಹಿತ್ಯ ವಿಮರ್ಶೆ

## ಅಧ್ಯಾಯ: ಎರಡು

# ಸಾಹಿತ್ಯ ಪರಾಮರ್ಶನ

### ಪೀಠಿಕೆ

ಈ ಅಧ್ಯಾಯದಲ್ಲಿ 'ಘನತಾಜ್ಯ ನಿರ್ವಹಣೆ' ವಿಷಯದಲ್ಲಿ ದೇಶವಿದೇಶಗಳಲ್ಲಿ ನಡೆಸಿದ ಅನೇಕ ಅಧ್ಯಯನಗಳ ಉದ್ದೇಶ, ಸೈದ್ಧಾಂತಿಕ ವಿಚಾರಗಳು, ಅಂಕಿ-ಅಂಶಗಳ ವಿಶ್ಲೇಷಣೆ, ಅಧ್ಯಯನದ ವಿಧಾನಗಳು, ಫಲಿತಗಳು, ಶಿಫಾರಸ್ಸುಗಳು ಹಾಗೂ ಸಲಹೆ-ಸೂಚನೆಗಳ ಆಯ್ದ ಕೆಲವೊಂದು ಅಂಶಗಳನ್ನು ನೀಡಲಾಗಿದೆ. ಈ ವಿಷಯದಲ್ಲಿ ವೈಜ್ಞಾನಿಕ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ದೃಷ್ಟಿಕೋನಗಳಲ್ಲಿ ಅನೇಕ ಸಂಶೋಧನೆಗಳು ಸ್ಥಳೀಯ, ರಾಷ್ಟ್ರೀಯ ಹಾಗೂ ಜಾಗತಿಕ ಮಟ್ಟದಲ್ಲಿ ನಡೆದಿವೆ. ಹಾಗೆಯೇ ಅನೇಕ ಹೋರಾಟಗಳು, ಪ್ರಮುಖವಾಗಿ ಪರಿಸರ ಮತ್ತು ಆರೋಗ್ಯದ ದೃಷ್ಟಿಯಿಂದ ನಡೆದಿವೆ. ನನ್ನ ಸಂಶೋಧನೆಯ ಚೌಕಟ್ಟು, ಕಾಲ ಮಿತಿ ಮತ್ತು ಸಂಪನ್ಮೂಲಗಳ ದೃಷ್ಟಿಯಿಂದ ಆಯ್ದ ಕೆಲವೊಂದು ವಿಚಾರ/ಅಂಶಗಳನ್ನು ಮಾತ್ರ ಇಲ್ಲಿ ನೀಡಲಾಗಿದೆ.

ಈ ಸಾಹಿತ್ಯ ಪರಾಮರ್ಶೆಯು ನನಗೆ ಅಧ್ಯಯನದಲ್ಲಿ ವಿಷಯದ ಆಯ್ಕೆ, ಸಮಸ್ಯೆಗಳನ್ನು ಗುರುತಿಸಲು, ಉದ್ದೇಶಗಳನ್ನು ರೂಪಿಸಲು, ಅಧ್ಯಯನದ ವಿಧಾನಗಳನ್ನು ಅಳವಡಿಸಿಕೊಳ್ಳಲು, ಪ್ರಶ್ನಾವಳಿಗಳನ್ನು ತಯಾರಿಸಲು ಮಾರ್ಗದರ್ಶನ ನೀಡಿದೆ. ಅಧ್ಯಯನದ ವ್ಯಾಖ್ಯೆ, ತಾತ್ವಿಕ ಅಂಶಗಳು ಮತ್ತು ಪರಿಕಲ್ಪನೆಗಳನ್ನು ಮೊದಲನೆ ಅಧ್ಯಾಯದಲ್ಲಿ ನೀಡಲಾಗಿದೆ. ನನ್ನ ಅಧ್ಯಯನದಲ್ಲಿ ಒಟ್ಟು ನಾಲ್ಕು ಉದ್ದೇಶಗಳಿದ್ದು, ಅವುಗಳಲ್ಲಿ ಮೊದಲ ಮೂರು ಉದ್ದೇಶಗಳಿಗನುಸಾರವಾಗಿ, ಪ್ರಸ್ತುತ ಅಧ್ಯಾಯವನ್ನು ಮೂರು ವಿಭಾಗಗಳಾಗಿ ವಿಂಗಡಿಸಿದ್ದೇನೆ. ಮೊದಲ ಭಾಗದಲ್ಲಿ ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನಕ್ಕೆ ಸಂಬಂಧಿಸಿದ ಸಾಹಿತ್ಯ ವಿಮರ್ಶೆ, ಎರಡನೇ ಭಾಗದಲ್ಲಿ ತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಮತ್ತು ಆರ್ಥಿಕ

ಆಯಾಮಗಳ ಕುರಿತಾದ ವಿಚಾರಗಳನ್ನು ನೀಡಲಾಗಿದೆ ಹಾಗೂ ಮೂರನೇ ಭಾಗದಲ್ಲಿ ತ್ಯಾಜ್ಯ ನಿರ್ವಹಣೆಯ ನೀತಿ ನಿಯಮಾವಳಿಗಳ ಬಗೆಗಿನ ಸಾಹಿತ್ಯ ವಿಮರ್ಶೆ, ಸಾಹಿತ್ಯ ಸಮೀಕ್ಷೆಯಲ್ಲಿ ಗ್ರಂಥಗಳು, ವಿವಿಧ ನಿಯತಕಾಲಿಕೆಗಳಲ್ಲಿ ಪ್ರಕಟಿತ ಸಂಶೋಧನಾ ಲೇಖನಗಳು, ಅಪ್ರಕಟಿತ ಸಂಶೋಧನಾ ಪ್ರಬಂಧಗಳು, ವರದಿಗಳು, ವಿವಿಧ ದಿನಪತ್ರಿಕೆಗಳಲ್ಲಿ ಪ್ರಕಟಿತ ಸುದ್ದಿಗಳು ಮತ್ತು ಜಾಲತಾಣಗಳಲ್ಲಿ ಪ್ರಕಟಿತ ಲೇಖನಗಳು ಒಳಗೊಂಡಿವೆ.

## 2.1. ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನಕ್ಕೆ ಸಂಬಂಧಿಸಿದ ಸಾಹಿತ್ಯ ವಿಮರ್ಶೆ

ತೊಹೊಬಾಂಗ್ಲಾಸ್‌ಜಾರ್ಜ್(1993)[1] ತ್ಯಾಜ್ಯ ನಿರ್ವಹಣೆಯ ಪ್ರಮುಖ ಸವಾಲುಗಳೆಂದರೆ ಜನರ ಅನುಭೋಗ ಪ್ರವೃತ್ತಿಯನ್ನು ಬದಲಿಸುವುದು, ಮೂಲದಲ್ಲೇ ತ್ಯಾಜ್ಯ ಪ್ರಮಾಣವನ್ನು ಕಡಿಮೆ ಮಾಡುವುದು, ಭೂಭರ್ತಿ ಪ್ರದೇಶವನ್ನು ಹೆಚ್ಚು ಸುರಕ್ಷಿತವಾಗಿಡುವುದು ಮತ್ತು ಹೊಸ ತಂತ್ರಜ್ಞಾನವನ್ನು ಅಭಿವೃದ್ಧಿಗೊಳಿಸುವುದು.

ಸೇಖರ್ ಮಧುಶ್ರೀ (1998)[2] ಯವರು ಬೆಂಗಳೂರು ನಗರದಲ್ಲಿ ನಡೆಸಿದ ಅಧ್ಯಯನದಲ್ಲಿ ಭಾಗೀದಾರರನ್ನು 2 ವಿಭಾಗಗಳಾಗಿ ವಿಂಗಡಿಸಿದ್ದಾರೆ. ಮೊದಲನೆಯ ವಿಭಾಗ ಉತ್ಪಾದಕರು ಅಂದರೆ ತ್ಯಾಜ್ಯವನ್ನು ಬೇರೆ ಬೇರೆ ರೀತಿಯ ಪ್ರಕ್ರಿಯೆಗೊಳಪಡಿಸುವ ವರ್ಗಗಳಾದ ಹೆಕ್ಕುವವರು, ಕೊಂಡುಕೊಳ್ಳುವ ವ್ಯಾಪಾರಿಗಳು, ಮಧ್ಯವರ್ತಿಗಳು, ನಗರಪಾಲಿಕೆಗಳು, ಪುನರುತ್ಪಾದನಾ ಘಟಕಗಳು (ಸರಕಾರಿ–ಖಾಸಗಿ), ಇತ್ಯಾದಿ. ಎರಡನೇ ವಿಭಾಗದಲ್ಲಿ ತ್ಯಾಜ್ಯ ಉತ್ಪಾದನೆ ಮಾಡುವ ಅನುಭೋಗಿಗಳೆಂದರೆ ಗೃಹ, ವಾಣಿಜ್ಯ ಚಟುವಟಿಕೆಗಳು (ಹೋಟೇಲು, ಅಂಗಡಿಗಳು ಇತ್ಯಾದಿ), ಸಂಸ್ಥೆಗಳು (ಶಾಲಾ–ಕಾಲೇಜು, ಆಸ್ಪತ್ರೆ ಇತ್ಯಾದಿ) ಮತ್ತು ಕೈಗಾರಿಕೆಗಳು (ಸಣ್ಣ, ಮಧ್ಯಮ ಮತ್ತು ದೊಡ್ಡ). ಇವರು ಅಧ್ಯಯನದಲ್ಲಿ ಕಂಡುಕೊಂಡ ಪ್ರಮುಖ ಸಮಸ್ಯೆಗಳೆಂದರೆ ಕ್ಲಪ್ತ ಸಮಯದಲ್ಲಿ ಕಸ ತೆಗೆಯದೆ ತ್ಯಾಜ್ಯ ತೊಟ್ಟಿ ತುಂಬಿ ಹೊರಚೆಲ್ಲಿ ದುರ್ನಾತ ಬೀರುವುದು, ತ್ಯಾಜ್ಯಗಳನ್ನು ದನ, ನಾಯಿ, ಆಡು ಮುಂತಾದ ಸಾಕುಪ್ರಾಣಿಗಳು ತಿನ್ನುವುದು ಮತ್ತು ಚೆಲ್ಲಾಡಿಸುವುದು ಇತ್ಯಾದಿ. ತ್ಯಾಜ್ಯ ಉತ್ಪಾದನೆಗೆ ಸಂಬಂಧಿಸಿ ಮಾಹಿತಿ ಪಡೆಯುವ ಯಾವುದೇ ಏಕಗವಾಕ್ಷಿ ವ್ಯವಸ್ಥೆ ಜಾರಿಯಲ್ಲಿಲ್ಲ. ನಗರದಲ್ಲಿರುವ ಹೊಟೇಲು ಹಾಗೂ ಇತರ ವಾಣಿಜ್ಯ ಚಟುವಟಿಕೆಗಳ ಬಗ್ಗೆ ಸರಿಯಾದ ಅಂಕಿ–ಅಂಶಗಳ ಕೊರತೆಯಿದೆ. ನಗರದಲ್ಲಿ ಉತ್ಪತ್ತಿಯಾಗುವ ಒಟ್ಟು ತ್ಯಾಜ್ಯದಲ್ಲಿ ಕೈಗಾರಿಕಾ ತ್ಯಾಜ್ಯ ಶೇಕಡ 39, ಗೃಹತ್ಯಾಜ್ಯ ಶೇಕಡ 18, ಸಂಸ್ಥೆಗಳ ಕೊಡುಗೆ ಶೇಕಡ 4 ಮತ್ತು ವಾಣಿಜ್ಯ ಚಟುವಟಿಕೆಗಳಿಂದ ಶೇಕಡ 39. ಇದರಲ್ಲಿ ಶೇಕಡ 90ರಷ್ಟು ಪುನರುತ್ಪಾದನಾ

ಘಟಕಗಳಿಗೆ ತಲುಪಿದ ತ್ಯಾಜ್ಯಗಳು ಉಪಯೋಗಿಸಲ್ಪಡುತ್ತವೆ. ಸುಮಾರು ಶೇಕಡ 25ಕ್ಕಿಂತ ಹೆಚ್ಚು ಚಿಂದಿಹೆಕ್ಕುವವರು ಸರಾಸರಿ 15 ಕೆ.ಜಿ ಸಂಗ್ರಹ ಮಾಡುತ್ತಾರೆ. ಶೇಕಡ 21ರಷ್ಟು ಚಿಂದಿಯನ್ನು ಸಾರ್ವಜನಿಕ ತೊಟ್ಟಿಗಳಿಂದ ಸಂಗ್ರಹಿಸುತ್ತಾರೆ. ಪುನರುತ್ಪಾದನಾ ಘಟಕಗಳಲ್ಲಿ ತಯಾರಾದ ವಸ್ತುಗಳಿಗೆ ಉತ್ತಮ ಮಾರುಕಟ್ಟೆ ಇಲ್ಲದಿರುವುದು, ಸಾರ್ವಜನಿಕರಲ್ಲಿ ಸಾಕಷ್ಟು ಜಾಗೃತಿಯ ಕೊರತೆ, ಅವೈಜ್ಞಾನಿಕ ತ್ಯಾಜ್ಯ ವಿಲೇವಾರಿ ವಿಧಾನ, ಸಾಕಷ್ಟು ಕಾರ್ಮಿಕರ ಕೊರತೆ ಮುಂತಾದ ಸಮಸ್ಯೆಗಳಿವೆ.

ಸಿನ್ಹ ಆರ್.ಕೆ. ಇವರು (2000)[3] ಸಾಲಿಡ್ ವೇಸ್ಟ್ ಮ್ಯಾನೇಜ್‌ಮೆಂಟ್ ಇನ್ ಇಂಡಿಯ ಎನ್ನುವ ಗ್ರಂಥದಲ್ಲಿ ತ್ಯಾಜ್ಯ ಸಂಗ್ರಹಣೆಯ ಲೋಪದೋಷಗಳನ್ನು ಪಟ್ಟಿ ಮಾಡುತ್ತ ಈ ಕೆಳಗಿನ ಅಂಶಗಳನ್ನು ತಿಳಿಸಿದ್ದಾರೆ.

ವಾಹನಗಳನ್ನು ಸರಿಯಾದ ರೀತಿಯಲ್ಲಿ ಬಳಸುತ್ತಿಲ್ಲ, ತ್ಯಾಜ್ಯಗಳನ್ನು ವಾಹನಗಳಿಗೆ ತುಂಬಿಸುವ ಮತ್ತು ಇಳಿಸುವ ಕೆಲಸವನ್ನು ಕಾರ್ಮಿಕರೇ ಮಾಡುವ ಕಾರಣ ವಾಹನ ಮತ್ತು ಮಾನವ ಶಕ್ತಿಯ ಉತ್ಪಾದನಾ ಪ್ರಮಾಣ ಕಡಿಮೆಯಾಗುತ್ತದೆ, ಎರಡೆರಡು ಸಲ ತ್ಯಾಜ್ಯಗಳನ್ನು ತುಂಬಿಸುವ ಮತ್ತು ಇಳಿಸುವ ಕೆಲಸಗಳಿಂದಾಗಿ ಹೆಚ್ಚಿನ ವೆಚ್ಚ ತಗಲುತ್ತದೆ ಮತ್ತು ಇದು ಕಾರ್ಮಿಕರ ಆರೋಗ್ಯದ ಮೇಲೂ ದುಷ್ಪರಿಣಾಮ ಬೀರುತ್ತದೆ, ಸಾಗಾಟ ವಾಹನಗಳನ್ನು ಸುಸ್ಥಿತಿಯಲ್ಲಿಡದಿರುವುದು, ವಾಹನಗಳ ಚಲನೆಯನ್ನು ನೋಡಿಕೊಳ್ಳುವ ಸರಿಯಾದ ವ್ಯವಸ್ಥೆ ಇಲ್ಲದಿರುವುದು, ವಾಹನಗಳನ್ನು ಸುಸ್ಥಿತಿಯಲ್ಲಿಡಲು ಸರಿಯಾದ ಕಾರ್ಯಾಗಾರಗಳಿಲ್ಲದಿರುವುದು ಮತ್ತು ಹಣಕಾಸಿನ ಶಿಸ್ತಿನ ಕಡೆಗೆ ಗಮನ ಹರಿಸದೆ ಇರುವುದು.

ಅಬ್ಬಾಸಿ ಎಸ್ ಎ ಮತ್ತು ರಾಮಸ್ವಾಮಿ ಇ.ವಿ (2001)[4] ಇವರು ತಮ್ಮ ಅಧ್ಯಯನದಲ್ಲಿ ಎರೆಹುಳುಗಳು ತಮ್ಮ ಅದ್ಭುತವಾದ ಪಚನಕ್ರಿಯೆ ಮತ್ತು ಜೀರ್ಣಕ್ರಿಯೆಯಿಂದ ಸಾವಯವ ತ್ಯಾಜ್ಯಗಳಾದ ತರಕಾರಿ, ಕಾಗದ, ಆಹಾರ ತ್ಯಾಜ್ಯ ಮುಂತಾದುವುಗಳನ್ನು ಗೊಬ್ಬರವನ್ನಾಗಿ ಪರಿವರ್ತಿಸುತ್ತವೆ. ಸಾವಯವ ಗೊಬ್ಬರವನ್ನು ಇತರ ರಾಸಾಯನಿಕ ಗೊಬ್ಬರಗಳಿಗಿಂತ ಕಡಿಮೆ ವೆಚ್ಚದಲ್ಲಿ ತಯಾರಿಸಬಹುದಾಗಿದೆ. ನಗರ ಪ್ರದೇಶಗಳ ಸಾವಯವ ತ್ಯಾಜ್ಯಗಳ ನಿರ್ವಹಣೆಗೆ 'ಎರೆಹುಳ ಗೊಬ್ಬರ' ತಯಾರಿಕಾ ವಿಧಾನವು ಆಶಾದಾಯಕವಾಗಿದೆ.

ಪ್ರಭಾಕರ ವಿ.ಕೆ. (2001)[5] ಯವರು ಸ್ಥಳೀಯ ವಿದ್ಯಮಾನಗಳಿಗೆ ಅನುಗುಣವಾಗಿ ಅಂದರೆ ತ್ಯಾಜ್ಯ ಸಂಗ್ರಹದ ವಿಧಾನ, ವಾಹನದ ಮಾದರಿ, ಕಾರ್ಮಿಕರ ಸಂಖ್ಯೆ, ತ್ಯಾಜ್ಯ ಸಂಗ್ರಹದ ಅವಧಿ, ಸಂಗ್ರಹದ ನಿರ್ದಿಷ್ಟ ಮಾರ್ಗ ಮುಂತಾದುವುಗಳನ್ನು ಗಮನದಲ್ಲಿಟ್ಟುಕೊಂಡು ತ್ಯಾಜ್ಯ ಸಂಗ್ರಹಣಾ ವಿಧಾನವನ್ನು ಅನುಸರಿಸಬೇಕು ಎನ್ನುವ ಅಭಿಪ್ರಾಯವನ್ನು ನೀಡಿದ್ದಾರೆ.

ಅಬ್ಬಾಸಿ ಎಸ್.ಎ. ಮತ್ತು ರಾಮಸಾಮಿ ಇ.ಪಿ.(2001)[6] ತ್ಯಾಜ್ಯ ಬಳಸಿ ಎರೆಹುಳು ಗೊಬ್ಬರ ತಯಾರಿಸುವ ವಿವಿಧ ಸಂಶೋಧನಾ ಘಟಕಗಳು ದೇಶದಾದ್ಯಂತ ಕಾರ್ಯ ನಿರ್ವಹಿಸುತ್ತಿವೆ. ಮಹಾರಾಷ್ಟ್ರದ ಪನ್ವೆಲಿಯಲ್ಲಿರುವ ಯೂಸುಫ್ ಮೆಹೆರಾಲಿ ಸೆಂಟರ್ ಇವರು ಎರೆಹುಳುಗಳ ಗೊಬ್ಬರದ ನೀರಿನ (Vermi Wash) ತಯಾರಿಕಾ ವಿಧಾನವನ್ನು ಅಭಿವೃದ್ಧಿಪಡಿಸಿದ್ದಾರೆ. ಇದು ಸಸ್ಯಗಳ ಬೇರುಗಳಿಗೆ ಮತ್ತು ಎಲೆಗಳಿಗೆ ಸಿಂಪಡಣೆ ಮಾಡಲು ಉತ್ತಮವಾದ ದ್ರವರೂಪದ ಗೊಬ್ಬರವಾಗಿದೆ. ಎರೆಹುಳು ಗೊಬ್ಬರ ತಯಾರಿಕೆಯಲ್ಲಿ ಉಪಯೋಗಿಸುವ ತ್ಯಾಜ್ಯದಿಂದ ಲೋಹ, ಗಾಜು, ಸಿಮೆಂಟ್ ತುಂಡು ಮುಂತಾದ ನಿರವಯವ ವಸ್ತುಗಳನ್ನು ಬೇರ್ಪಡಿಸಬೇಕು.

ರಾವ್ ಎಂ ಎನ್ ಮತ್ತು ರಜಿಯಾ ಸುಲ್ತಾನ್ (2002)[7] ಇವರು ಜೈವಿಕ–ವೈದ್ಯಕೀಯ ತ್ಯಾಜ್ಯ ನಿರ್ವಹಣೆ ಬಗ್ಗೆ ಮಾಹಿತಿ ನೀಡಿದ್ದಾರೆ. ಪ್ರತೀ ಆಸ್ಪತ್ರೆಗಳು ಸ್ವಂತವಾಗಿ ತ್ಯಾಜ್ಯ ನಿರ್ವಹಣೆ ಮಾಡುವುದನ್ನು ಉತ್ತೇಜಿಸಬಾರದು. ಇದರಿಂದ ಪಕ್ಕದ ನಿವಾಸಿಗಳಿಗೆ ಆರೋಗ್ಯದ ದೃಷ್ಟಿಯಿಂದ ತೊಂದರೆಯಾಗುತ್ತದೆ. ಒಂದು ಪ್ರದೇಶದ ಎಲ್ಲಾ ಆಸ್ಪತ್ರೆಗಳಿಗೆ ಅನುಕೂಲವಾಗುವ ರೀತಿಯಲ್ಲಿ ವಸತಿ ಪ್ರದೇಶಗಳಿಂದ ದೂರವಿರುವ ಸ್ಥಳದಲ್ಲಿ ಜೈವಿಕ–ವೈದ್ಯಕೀಯ ತ್ಯಾಜ್ಯ ವಿಲೇವಾರಿ ಘಟಕ ವನ್ನು ಸ್ಥಾಪಿಸಬೇಕು. ಕೇಂದ್ರ ಸರಕಾರವು ಈ ಬಗ್ಗೆ ನಿರ್ದೇಶನಗಳನ್ನು ನೀಡಿದೆ. ಸಾಂಕೇತಿಕ ಬಣ್ಣಗಳನ್ನು ಹೊಂದಿರುವ ತೊಟ್ಟಿ/ಚೀಲಗಳಲ್ಲಿ ವಿವಿಧ ರೀತಿಯ ತ್ಯಾಜ್ಯಗಳನ್ನು ಪ್ರತ್ಯೇಕವಾಗಿ ಸಂಗ್ರಹಿಸಬೇಕು. ಹಳದಿ, ನೀಲಿ. ಬಿಳಿ, ಕೆಂಪು ಮತ್ತು ಕಪ್ಪು ಬಣ್ಣಗಳನ್ನು ಹೊಂದಿರುವ ತೊಟ್ಟಿ/ಚೀಲಗಳಿಗೆ ಬಣ್ಣಕ್ಕೆ ಅನುಗುಣವಾಗಿ ನಿರ್ಧರಿಸಿದ ತ್ಯಾಜ್ಯಗಳನ್ನು ಮಾತ್ರ ಹಾಕಬೇಕು. ಬಯೋ–ಮೆಡಿಕಲ್ ವೇಸ್ಟ್ (ಮೆನೇಜ್‌ಮೆಂಟ್ ಮತ್ತು ಹ್ಯಾಡ್ಲಿಂಗ್) ರೂಲ್ಸ್, 1998 ಮತ್ತು ತಿದ್ದುಪಡಿ ಕಾಯ್ದೆ, 1986, ಜೈವಿಕ–ವೈದ್ಯಕೀಯ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ನಿರ್ದೇಶನ ಮತ್ತು ಕಾನೂನಿನ ಬಗ್ಗೆ ತಿಳಿಸುತ್ತದೆ.

ರಾವ್ ಎಂ ಎನ್ ಮತ್ತು ರಜಿಯಾ ಸುಲ್ತಾನ್ (2002)[8] ಇವರ ಸಾಲಿಡ್ ವೇಸ್ಟ್ ಆ್ಯಂಡ್ ಹೆಸಾರ್ಡಸ್ ವೇಸ್ಟ್ ಎಂಬ ಪುಸ್ತಕದಲ್ಲಿ ತ್ಯಾಜ್ಯ ನಿರ್ವಹಣೆಯ ವ್ಯಾಖ್ಯೆಯನ್ನು ಈ ರೀತಿ ನೀಡಿದ್ದಾರೆ. "ಸಾರ್ವಜನಿಕ ಆರೋಗ್ಯ, ಆರ್ಥಿಕತೆ, ಇಂಜಿನಿಯರಿಂಗ್, ಪರಿಸರ ಸಂರಕ್ಷಣೆ, ಇತರ ಪರಿಸರಕ್ಕೆ ಸಂಬಂಧಿಸಿದ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ತ್ಯಾಜ್ಯ ಉತ್ಪಾದನೆಯ ಮೇಲೆ ಹಿಡಿತ, ಸಂಗ್ರಹ, ಶೇಖರಣೆ, ಸಾಗಾಣಿಕೆ, ವರ್ಗಾವಣೆ, ವಿಭಜನೆ ಮತ್ತು ವಿಲೇವಾರಿ ಮಾಡುವುದು" ಎಂದಿದ್ದಾರೆ. ಈ ಕೃತಿಯಲ್ಲಿ ತ್ಯಾಜ್ಯ ವಿಭಜನೆ ಬಗ್ಗೆ ಹೆಚ್ಚಿನ ಮಾಹಿತಿ ಇದೆ. ಅವುಗಳಲ್ಲಿ ತ್ಯಾಜ್ಯ ತೇವಾಂಶಗೊಳಿಸಿ ಬೇರ್ಪಡಿಸುವಿಕೆ ಮತ್ತು ಒಣಗಿಸಿ ಬೇರ್ಪಡಿಸುವ ವಿಧಾನಗಳನ್ನು ನೀಡಲಾಗಿದೆ. ಪೈರೋಲಿಸಿಸ್ ವಿಧಾನ ಎಂದರೆ ಆಮ್ಲಜನಕ ರಹಿತ ವಾತಾವರಣದಲ್ಲಿ

ಸುಮಾರು 900 ಡಿಗ್ರಿ ಸೆಂಟಿಗ್ರೇಡ್ ತಾಪಮಾನದಲ್ಲಿ ಸಾವಯವ ತ್ಯಾಜ್ಯವನ್ನು ಕೊಳೆಯಿಸುವ ವಿಧಾನದ ಕುರಿತು ವಿವರಿಸಲಾಗಿದೆ. ಅಪಾಯಕಾರಿ ತ್ಯಾಜ್ಯಗಳನ್ನು ಸಾಗಿಸುವ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಈ ಕೃತಿಯಲ್ಲಿ ತಿಳಿಸಿದಂತೆ ಇವುಗಳ ಸಾಗಾಟದ ವಾಹನದಲ್ಲಿ "ಅಪಾಯಕಾರಿ ತ್ಯಾಜ್ಯ"ವೆಂದು ಸ್ಥಳೀಯ ಭಾಷೆಯಲ್ಲಿ ಬರೆಯುವುದರೊಂದಿಗೆ ತ್ಯಾಜ್ಯದ ಸಂಗ್ರಹಣ ಮತು ವಿಲೇವಾರಿ ವಿಧಾನದ ಬಗ್ಗೆ ಮಾಹಿತಿಯನ್ನು ಒದಗಿಸಬೇಕೆಂದು ತಿಳಿಸಿದ್ದಾರೆ.

ಫ್ರಾಂಕ್ ಕ್ರೀತ್ ಇವರ ಪ್ರಕಾರ (2002)[9] ತ್ಯಾಜ್ಯ ದಹನದಿಂದ ಭೂಭರ್ತಿಯ ಪ್ರಮಾಣ ಕಡಿತಗೊಳಿಸುತ್ತದೆ ಹಾಗೂ ಉಷ್ಣ ಮತ್ತು ಶಕ್ತಿಯ ಉತ್ಪಾದನೆ ಸಾಧ್ಯ. ಇದೊಂದು ಕಡಿಮೆ ವೆಚ್ಚದ ನಿರ್ವಹಣಾ ವಿಧಾನ. ಯೂರೋಪಿನ ರಾಷ್ಟ್ರಗಳು, ಜಪಾನ್ ಪರಿಸರವನ್ನು ಅತ್ಯುನ್ನತ ಮಟ್ಟದಲ್ಲಿ ಸಂರಕ್ಷಿಸಿಕೊಂಡಿರುವ ಸ್ವೀಡನ್, ಸ್ವಿಟ್ಜರ್‌ಲ್ಯಾಂಡ್ ಮುಂತಾದ ದೇಶಗಳಲ್ಲಿ ಶೇಕಡ 75ರಷ್ಟು ತ್ಯಾಜ್ಯವನ್ನು ದಹಿಸುತ್ತಾರೆ. ಇದರಿಂದ ಸಾಗಾಟ ವೆಚ್ಚವನ್ನು ಕಡಿತಗೊಳಿಸುವುದರೊಂದಿಗೆ, ಸಣ್ಣ ವಿಲೇವಾರಿ ಜಾಗ ಸಾಕಾಗುತ್ತದೆ. ನುರಿತ ತಂತ್ರಜ್ಞಾನ ಹಾಗೂ ತಂತ್ರಜ್ಞರ ಅಗತ್ಯ ಇದೆ. ಹಾಗೆಯೇ ಎಲ್ಲಾ ರೀತಿಯ ತ್ಯಾಜ್ಯಗಳನ್ನು ದಹಿಸಲು ಸಾಧ್ಯವಿಲ್ಲ. ಹೆಚ್ಚು ತೇವಾಂಶವಿರುವ ತ್ಯಾಜ್ಯಗಳನ್ನು ದಹಿಸಲು ಹೆಚ್ಚಿನ ಇಂಧನದ ಅವಶ್ಯಕತೆಯಿದೆ.

ರಘುನಂದನನ್ ವಿ.ಆರ್ (2004)[10] ಇಂಟಿಗ್ರೇಟೆಡ್ ರೂರಲ್ ಟೆಕ್ನೋಲಜಿ ಸೆಂಟರ್ (ಐಆರ್‌ಟಿಸಿ) ಮುಂಡೂರು, ಪಾಲಕ್ಕಾಡು, ಇವರು ಗ್ರಾಮ ಪಂಚಾಯತ್ ಮಟ್ಟದಲ್ಲಿ ತಂತ್ರಜ್ಞಾನ ಅಳವಡಿಸಿ ಮತ್ತು ತಂತ್ರಜ್ಞಾನ ವರ್ಗಾವಣೆಯ ಮೂಲಕ ತ್ಯಾಜ್ಯ ನಿರ್ವಹಣಾ ವಿಧಾನವನ್ನು ಉತ್ತಮಗೊಳಿಸುವ ಯೋಜನೆಯನ್ನು ತಯಾರಿಸಿದ್ದಾರೆ. ಇದರ ಮುಖ್ಯ ಉದ್ದೇಶ ಬೇರೆ ಬೇರೆ ತ್ಯಾಜ್ಯ ನಿರ್ವಹಣಾ ವಿಧಾನಗಳನ್ನು ವಿಶ್ಲೇಷಿಸಿ, ಸೂಕ್ತವಾದ ತಂತ್ರಜ್ಞಾನವನ್ನು ನಿರ್ದಿಷ್ಟ ಪ್ರದೇಶ ಗಳಿಗನುಗುಣವಾಗಿ ಅಳವಡಿಸುವುದು ಮತ್ತು ಈ ಬಗ್ಗೆ ಜಾಗೃತಿ ತರಬೇತಿಗಳನ್ನು ನೀಡುವುದು. ತ್ಯಾಜ್ಯ ನಿರ್ವಹಣೆಯ ಜೊತೆಗೆ ಅಂತರ್ಜಲ ಮಾಲಿನ್ಯವನ್ನು ತಡೆಗಟ್ಟುವ ಬಗ್ಗೆಯೂ ತಮ್ಮ ಸಂಶೋಧನೆ ಮತ್ತು ಅಭಿವೃದ್ಧಿಯ ಕಾರ್ಯಸೂಚಿಯಲ್ಲಿ ಹಾಕಿಕೊಂಡಿದ್ದಾರೆ. ಸ್ಥಳೀಯ ಸಂಸ್ಥೆಗಳಿಗೆ ಸೂಕ್ತವಾಗುವ ತಂತ್ರಜ್ಞಾನದ ಯೋಜನೆಯನ್ನು ಅಳವಡಿಸಲು ಸಹಾಯ ಮಾಡುವುದು ಮತ್ತು ಅದಕ್ಕೆ ಸಂಬಂಧಿಸಿ ಅಧ್ಯಯನ ತರಬೇತಿ ಹಾಗೂ ಸಂಶೋಧನೆ ನಡೆಸುವ ಉದ್ದೇಶದಿಂದ ಪ್ರತ್ಯೇಕ ಕೇಂದ್ರವನ್ನು ಸ್ಥಾಪಿಸುವ ಬಗ್ಗೆಯೂ ಪ್ರಸ್ತಾಪಿಸಿದೆ. ತ್ಯಾಜ್ಯ ಸಂಗ್ರಹದ ಪ್ರಮುಖ ಸಮಸ್ಯೆಗಳೆಂದರೆ ತ್ಯಾಜ್ಯ ಸಂಗ್ರಹ ತೊಟ್ಟಿಗಳನ್ನು ಸುಸ್ಥಿತಿಯಲ್ಲಿಡದಿರುವುದು ಹಾಗೂ ತೊಟ್ಟಿಗಳಿಂದ ಬರುವ ದುರ್ನಾತವನ್ನು ತಡೆಯಲು ಸೂಕ್ತ ಕ್ರಮ ಕೈಗೊಳ್ಳದಿರುವುದು, ಕಾಲಕಾಲಕ್ಕೆ ತ್ಯಾಜ್ಯಗಳನ್ನು

ತೆಗೆಯದಿರುವುದು ಹಾಗೂ ತ್ಯಾಜ್ಯ ನಿರ್ವಹಣೆಯಲ್ಲಿ ಸಾರ್ವಜನಿಕರ ಭಾಗವಹಿಸುವಿಕೆ ಮತ್ತು ಜಾಗೃತಿ ಕಡಿಮೆ ಇರುವುದರಿಂದ ಸಮಸ್ಯೆ ಪರಿಹಾರವು ಜಟಿಲವಾಗಿ ಪರಿಣಮಿಸಿದೆ.

ಪಾವ್ಲ್ ಟಿ ವಿಲಿಯಮ್ಸ್ ಇವರ 'ವೇಸ್ಟ್ ಟ್ರೀಟ್‌ಮೆಂಟ್ ಆಂಡ್ ಡಿಸ್‌ಪೋಸಲ್' (2005)[12] ಎನ್ನುವ ಕೃತಿಯಲ್ಲಿ, ಭೂಭರ್ತಿ ವಿಧಾನದಲ್ಲಿ ವಹಿಸಬೇಕಾದ ಅಗತ್ಯ ಕ್ರಮಗಳ ಬಗ್ಗೆ ತಿಳಿಸುತ್ತಾ ಭೂಭರ್ತಿ ಮಾಡುವ ಸ್ಥಳವನ್ನು ಗುರುತಿಸುವಾಗ ಸಮಗ್ರವಾಗಿ ಪರಿಶೀಲಿಸಿ ಅನೇಕ ಅಂಶಗಳನ್ನು ಪರಿಗಣಿಸಬೇಕು ಎಂದಿದ್ದಾರೆ. ಅದು ನೀರಿನ ಮೂಲವಾಗಿರಕೂಡದು, ರಸ್ತೆಗಳ ಸಂಪರ್ಕ ಸರಿಯಾಗಿರಬೇಕು, ಸ್ಥಳೀಯ ಪರಿಸರದ ಮೇಲೆ ದುಷ್ಪರಿಣಾಮವನ್ನು ಮಾಡಬಾರದು, ನೆಲಭಾಗ ಗಟ್ಟಿಯಾಗಿರಬೇಕು, ಅರ್ಹ ಅಧಿಕಾರಿಯಿಂದ ಪರಿಶೀಲಿಸಿ ಅನುಮತಿ ಪಡೆದಿರಬೇಕು. ಜನವಸತಿ, ಕೃಷಿ ಭೂಮಿ ಮತ್ತು ನದಿ ಹರಿಯುವಿಕೆಯಿಂದ ಅಂತರವನ್ನು ಕಾಯ್ದುಕೊಳ್ಳಬೇಕು. ನೆರೆಹಾವಳಿ, ಭೂಕುಸಿತ ಅಥವಾ ಯಾವುದೇ ಸಾಂದರ್ಭಿಕ ವಿಕೋಪಗಳಿಗೆ ಒಳಗಾಗದ ಭೂಮಿಯಾಗಿರಬೇಕು. ಅಂತರ್ಜಲ ಮಟ್ಟ, ಮಣ್ಣಿನ ಗುಣಮಟ್ಟ, ಐತಿಹಾಸಿಕ ಸ್ಮಾರಕಗಳು, ಜೀವ ವೈವಿಧ್ಯಗಳಿಗೆ ಹಾನಿಯಾಗದಂತಿರಬೇಕು. ಅಪಾಯಕಾರಿ ತ್ಯಾಜ್ಯಗಳು, ಅಪಾಯ ರಹಿತ ತ್ಯಾಜ್ಯಗಳು ಹಾಗೂ ನಿಸ್ತೇಜ (ಜಡ) ತ್ಯಾಜ್ಯಗಳಿಗೆ ಬೇರೆ ಬೇರೆ ಭೂಭರ್ತಿ ಜಾಗಗಳಿರಬೇಕು. ಕೈಗಾರಿಕಾ ತ್ಯಾಜ್ಯಗಳನ್ನು ಕಂಟೈನರ್ ರೀತಿಯಲ್ಲಿ ಭೂಮಿಯನ್ನು ಸಿದ್ಧಪಡಿಸಿ ಹಾಕಬೇಕು, ಇತ್ಯಾದಿ ಸಲಹೆಗಳನ್ನು ನೀಡಿದ್ದಾರೆ.

ವಿಲಿಯಮ್ ಪೌಲ್ ಟಿ.(2005)[13] ಇವರ ಅಧ್ಯಯನದ ಪ್ರಕಾರ ಅಪಾಯಕಾರಿ ತ್ಯಾಜ್ಯವು ಹೆಚ್ಚಾಗಿ ಕಾರ್ಖಾನೆಗಳಿಂದ ಸೃಷ್ಟಿಯಾಗುತ್ತಿದೆ. ನಗರ ಪ್ರದೇಶಗಳ ತ್ಯಾಜ್ಯವು ಅತ್ಯಂತ ಪ್ರಮುಖ ತ್ಯಾಜ್ಯದ ಮೂಲವಾಗಿದೆ ಮತ್ತು ಅವುಗಳಲ್ಲಿ ಹೆಚ್ಚಾಗಿ ಅಪಾಯರಹಿತ ತ್ಯಾಜ್ಯಗಳಿರುವುದರಿಂದ ಭೂಭರ್ತಿ ಮಾಡಲು ಸಾಧ್ಯವಾಗುತ್ತದೆ. ಮುನ್ಸಿಪಾಲ್ ತ್ಯಾಜ್ಯಗಳಲ್ಲಿ ಕಾಗದ, ಆಹಾರ ತ್ಯಾಜ್ಯ, ಬಟ್ಟೆ ಮುಂತಾದ ಸಾವಯವ ತ್ಯಾಜ್ಯಗಳಾಗಿರುವ ಕಾರಣ ಅವುಗಳನ್ನು ಗೊಬ್ಬರವಾಗಿ ಬಳಸಬಹುದು.

ವಿಲಿಯಮ್ ಪೌಲ್ ಟಿ.(2005)[14] ಇವರ ಅಧ್ಯಯನದ ಪ್ರಕಾರ ತ್ಯಾಜ್ಯ ಸಂಗ್ರಹ ಸ್ಥಳಗಳಲ್ಲೇ ತ್ಯಾಜ್ಯ ದಹನ ಕುಲುಮೆಗಳನ್ನು ಅಳವಡಿಸಬಹುದು. ಹೆಚ್ಚಿನ ನಗರಗಳಲ್ಲಿ ಭೂಭರ್ತಿ ಪ್ರದೇಶಗಳು ಕೇಂದ್ರ ಸ್ಥಾನದಿಂದ ದೂರವಿರುತ್ತವೆ. ಇದರಿಂದ ಸಾಗಾಟ ವೆಚ್ಚ ಅಧಿಕವಾಗುತ್ತದೆ. ಆದುದರಿಂದ ಹೆಚ್ಚು ದಹಿಸುವ, ಆಮ್ಲೀಯ ಗುಣವುಳ್ಳ, ಸೋಂಕು ರೋಗಗಳನ್ನುಂಟುಮಾಡುವ ಅಪಾಯಕಾರಿ ತ್ಯಾಜ್ಯಗಳನ್ನು ಸಂಗ್ರಹ ಕೇಂದ್ರಗಳ ಸಮೀಪದಲ್ಲೇ ದಹಿಸುವುದು ಉತ್ತಮ.

ಬರುಚಾ ಇರಾಚ್ (2005)[15] ಇತ್ತೀಚಿನ ಕೆಲವು ದಶಕಗಳ ಹಿಂದೆ ತ್ಯಾಜ್ಯ ನಿರ್ವಹಣೆಯು ನಗರ ಸಂಸ್ಥೆಗಳು ಹಾಗೂ ಸಾರ್ವಜನಿಕರಿಗೆ ಒಂದು ಪ್ರಮುಖ ವಿಷಯವಾಗಿರಲಿಲ್ಲ. ಮೇಲಾಗಿ

ಹೆಚ್ಚಿನ ನಗರಗಳಲ್ಲಿ ತ್ಯಾಜ್ಯ ರಾಶಿ ಹಾಕಲು ಸರಿಯಾದ ಜಾಗಗಳೇ ಸಿಗುತ್ತಿಲ್ಲ. ಆರೋಗ್ಯ ಮತ್ತು ಪರಿಸರದ ದೃಷ್ಟಿಯಿಂದ ತ್ಯಾಜ್ಯವನ್ನು ರಾಶಿ ಹಾಕುವುದು ಅಥವಾ ಸುಡುವುದು ಯೋಗ್ಯವಲ್ಲ. ಗ್ರಾಮೀಣ ಮಟ್ಟದಲ್ಲಿ ಇವತ್ತಿಗೂ ತ್ಯಾಜ್ಯ ನಿರ್ವಹಣೆಯು ಸಮರ್ಪಕವಾಗಿ ನಡೆಯುತ್ತಿಲ್ಲ.

ಉಪಾಧ್ಯಾಯ ವಿ.ಪಿ ಮತ್ತು ಇತರರು (2005)[16] ತಮ್ಮ ಅಧ್ಯಯನದಲ್ಲಿ ತಿಳಿಸಿದಂತೆ ಜನಸಂಖ್ಯಾ ಬೆಳವಣಿಗೆಯು ಪರಿಸರದ ಗುಣಮಟ್ಟದ ಮೇಲೆ ದುಷ್ಪರಿಣಾಮವನ್ನು ಬೀರಿದೆ. ಅವರು ಗೃಹಮಟ್ಟದಲ್ಲಿ ವಿವಿಧ ರೀತಿಯ ಸಾವಯವ ಮತ್ತು ನಿರವಯವ(ಹಸಿ ಕಸ ಮತ್ತು ಒಣ ಕಸ) ತ್ಯಾಜ್ಯಗಳನ್ನು ಉತ್ಪಾದಿಸುತ್ತಾರೆ. ಸರಿಯಾದ ಸಂಗ್ರಹ ಮತ್ತು ವಿಲೇವಾರಿ ವಿಧಾನಗಳ ಮೂಲಕ ಈ ತ್ಯಾಜ್ಯಗಳನ್ನು ಸಂಪನ್ಮೂಲಗಳನ್ನಾಗಿ ಪರಿವರ್ತಿಸಬಹುದು ಮತ್ತು ಇದರಿಂದ ಸಮಾಜಕ್ಕೆ ಅನುಕೂಲವಾಗಬಹುದು. ಹೆಚ್ಚಿನ ತ್ಯಾಜ್ಯಗಳನ್ನು ಪುನರಾವರ್ತನಾ ವಿಧಾನದ ಮೂಲಕ ಮರುಬಳಕೆ ಮಾಡಬಹುದು. ಆಧುನಿಕ ತಂತ್ರಜ್ಞಾನದ ಬಳಕೆಯಿಂದ ಉದ್ಯೋಗ ಸೃಷ್ಟಿ ಮತ್ತು ಶಕ್ತಿಯ ಉತ್ಪಾದನೆಗೆ ಅವಕಾಶಗಳಿವೆ. ಭೂಭರ್ತಿ, ಜೈವಿಕ ಅನಿಲ, ಎರೆಹುಳು ಗೊಬ್ಬರ, ದಹನಕ್ರಿಯೆ ಮುಂತಾದ ಸಾಮಾನ್ಯ ವಿಧಾನಗಳನ್ನು ತ್ಯಾಜ್ಯ ನಿರ್ವಹಣೆಯಲ್ಲಿ ಬಳಸಲಾಗುತ್ತಿದೆ.

ರಾಮಚಂದ್ರ ಟಿ.ವಿ.(2006)[17] ಕೈಗೊಂಡ ಅಧ್ಯಯನವು ತಿಳಿಸುವಂತೆ ತ್ಯಾಜ್ಯ ಸಂಗ್ರಹ ಅವಧಿಯು ಹವಾಗುಣ, ಸಾಗಾಟ ವಾಹನಗಳ ದೊರಕುವಿಕೆ, ಮತ್ತು ಸಾಗಾಟ ವೆಚ್ಚವನ್ನು ಅವಲಂಬಿಸಿದೆ. ತಾಪಮಾನ ಹೆಚ್ಚಿರುವ ಸ್ಥಳಗಳಲ್ಲಿ ವಾರಕ್ಕೆ ಕನಿಷ್ಟ ಎರಡು ಸಲ ತ್ಯಾಜ್ಯ ಸಂಗ್ರಹಿಸಬೇಕಾಗುತ್ತದೆ, ಕಾರಣ ಕೊಳೆತು ಹೋಗುವ ತ್ಯಾಜ್ಯಗಳು ದುರ್ವಾಸನೆ ಹಾಗೂ ಕೊಳಚೆಯನ್ನುಂಟು ಮಾಡುತ್ತವೆ. ಗೃಹ ತ್ಯಾಜ್ಯಗಳು ಹೆಚ್ಚಾಗಿ ಈ ವರ್ಗಕ್ಕೆ ಸೇರಿರುವ ಕಾರಣ ಆರೋಗ್ಯದ ದೃಷ್ಟಿಯಿಂದ ಆಗಾಗ ಸಂಗ್ರಹ ಮಾಡುವ ಅವಶ್ಯಕತೆ ಇದೆ. ಹಾಗೆಯೇ ಮುಚ್ಚಿದ ಕಸದ ತೊಟ್ಟಿಗಳಾಗಿದ್ದರೆ ಮೂರು ದಿನಗಳಿಗೊಮ್ಮೆ ತ್ಯಾಜ್ಯ ಸಂಗ್ರಹ ಮಾಡಿದರೆ ಸಾಕಾಗುತ್ತದೆ. ಜನ ಸಾಂದ್ರತೆ, ಜನರ ಆದಾಯ, ಆಹಾರ ಪದ್ಧತಿ (ಸಸ್ಯಹಾರ/ಮಾಂಸಾಹಾರ) ಇತ್ಯಾದಿ ಅಂಶ ಗಳು ತ್ಯಾಜ್ಯ ಸಂಗ್ರಹದ ಅವಧಿಯನ್ನು ನಿರ್ಧಾರ ಮಾಡುತ್ತವೆ. ತ್ಯಾಜ್ಯ ಸಂಗ್ರಹ ವೆಚ್ಚವು ವಾಹನಗಳ ಸಂಖ್ಯೆ, ನೌಕರರು ಹಾಗೂ ಸಾಗಾಟದ ದೂರವನ್ನು ಅವಲಂಬಿಸಿಕೊಂಡಿದೆ. ತ್ಯಾಜ್ಯ ಸಂಗ್ರಹದ ತೊಟ್ಟಿಗಳ ಗಾತ್ರ ದೊಡ್ಡದಾದಷ್ಟು ಹೆಚ್ಚು ದಿನಗಳ ಅಂತರವನ್ನು ಕಾಯ್ದುಕೊಳ್ಳಬಹುದು. ಆದರೆ ತ್ಯಾಜ್ಯ ಸಂಗ್ರಹದ ಅವಧಿ ಕಡಿಮೆಯಾದಷ್ಟು ಆರೋಗ್ಯ, ಸ್ವಚ್ಛತೆ ಮತ್ತು ನೈರ್ಮಲ್ಯೀಕರಣದ ದೃಷ್ಟಿಯಿಂದ ಉತ್ತಮ. ತ್ಯಾಜ್ಯವನ್ನು ಮಣ್ಣಿನಲ್ಲಿ ಹೂಳುವುದು ಅತ್ಯಂತ ಕಡಿಮೆ ವೆಚ್ಚದ ತ್ಯಾಜ್ಯ ನಿರ್ವಹಣಾ ವಿಧಾನಗಳಲ್ಲೊಂದು.

ಹೊಸೆಟ್ಟಿ (2006)[18] ಇವರು ನೀಡಿದ ಮಾಹಿತಿಯಂತೆ ಪ್ಲಾಸ್ಟಿಕ್ ತ್ಯಾಜ್ಯಗಳನ್ನು ಎಲ್ಲಾ ಕಡೆಗಳಲ್ಲಿ ಎಸೆಯುವುದರಿಂದ ಪರಿಸರಮಾಲಿನ್ಯ ಹೆಚ್ಚಾಗುತ್ತಿದೆ. ಮುನ್ಸಿಪಾಲಿಟಿಗಳು ಇವುಗಳ ಸಂಗ್ರಹ, ಸಾಗಾಟ ಮತ್ತು ವಿಲೇವಾರಿ ಕಾರ್ಯಗಳ ಜವಾಬ್ದಾರಿಯನ್ನು ತೆಗೆದುಕೊಳ್ಳಬೇಕು. ಚಿಂದಿ ಆಯುವವರು ಪ್ಲಾಸ್ಟಿಕ್ ಬಾಟಲಿ, ತೊಟ್ಟೆಗಳನ್ನು ಲಾಭದಾಯಕವಲ್ಲದ ಕಾರಣಕ್ಕಾಗಿ ಹೆಕ್ಕುವುದಿಲ್ಲ. ಆದ್ದರಿಂದ ಎಲ್ಲಾ ಕಡೆಗಳಲ್ಲಿ ಪ್ಲಾಸ್ಟಿಕ್ ತ್ಯಾಜ್ಯಗಳು ಕಾಣಸಿಗುತ್ತವೆ. ಇದಕ್ಕಾಗಿ ಸರಕಾರವು "ಪ್ಲಾಸ್ಟಿಕ್ ವೇಸ್ಟ್ ಮೆನೇಜ್‌ಮೆಂಟ್ ಟಾಸ್ಕ್ ಫೋರ್ಸ್"ನ್ನು ನೇಮಿಸಿದೆ. ಇದರ ಶಿಫಾರಸ್ಸಿನ ಮೇರೆಗೆ ಪ್ಲಾಸ್ಟಿಕ್ ಉತ್ಪಾದನೆ ಮತ್ತು ಉಪಯೋಗದ ಬಗ್ಗೆ 1999ರಲ್ಲಿ ಹೊಸ ನೀತಿ ಜಾರಿಗೆ ಬಂದಿತು.

ಡಬ್ಯು ಎಮ್ ಡಬ್ಯು (2006)[19] ಇವರು ಪ್ರಕಟಿಸಿದ ಸ್ಯಾಲಿ ಮೋರ್ಗನ್ ಇವರ ಸಸ್ಟೈನೇಬಲ್ ಫೀಚರ್ಸ್–ವೇಸ್ಟ್ ರಿ ಸೈಕ್ಲಿಂಗ್ ಅಂಡ್ ರಿ ಯೂಸ್ ಎನ್ನುವ ಗ್ರಂಥದಲ್ಲಿ ಬೇರೆ ಬೇರೆ ತ್ಯಾಜ್ಯಗಳನ್ನು ಹೇಗೆ ನಿರ್ವಹಣೆ ಮಾಡಬಹುದೆಂದು ತಿಳಿಸಲಾಗಿದೆ. ತ್ಯಾಜ್ಯ ನಿರ್ವಹಣಾ ಹಾಗೂ ವಿಲೇವಾರಿ ವಿಧಾನಗಳು ತ್ಯಾಜ್ಯದ ವಿಧವನ್ನು ಅವಲಂಬಿಸಿದೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ತ್ಯಾಜ್ಯಗಳ ಮರು ಆವರ್ತನೀಯತೆ ಮತ್ತು ಮರುಬಳಕೆ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗಿಂತ ಹೆಚ್ಚಿದೆ ಎಂದು ತಿಳಿಸಿದ್ದಾರೆ.

ಭಾಟಿಯ ಎಸ್ ಸಿ (2007)[20] ಇವರ ಪ್ರಕಾರ ಪ್ರಸ್ತುತ ಜಾರಿಯಲ್ಲಿರುವ ತ್ಯಾಜ್ಯ ವಿಲೇವಾರಿ ವಿಧಾನಗಳ ಸಾಮರ್ಥ್ಯವು ತ್ಯಾಜ್ಯ ಸಂಗ್ರಹಣೆ ವಿಧಾನ, ಸಂಗ್ರಹ ಸಾಮರ್ಥ್ಯ, ವಾಹನದ ವಿಧ, ಸಂಗ್ರಹಕಾರರ ಸಂಖ್ಯೆ ಮತ್ತು ಸಂಗ್ರಹಣಾ ಅವಧಿಯು ತ್ಯಾಜ್ಯದ ಗಾತ್ರ ಮತ್ತು ಸಾಂದ್ರತೆಯನ್ನು ಅವಲಂಬಿಸಿದೆ. ಇದರ ಜೊತೆಗೆ ಪ್ರಸ್ತುತ ಜಾರಿಯಲ್ಲಿರುವ ತ್ಯಾಜ್ಯ ವಿಲೇವಾರಿ ವಿಧಾನಗಳ ಫಲಿತಾಂಶವನ್ನು ಮೌಲ್ಯಮಾಪನ ಮಾಡಲು ತ್ಯಾಜ್ಯದಲ್ಲಿರುವ ಭೌತಿಕ ಹಾಗೂ ರಾಸಾಯನಿಕ ಲಕ್ಷಣಗಳ ಬಗ್ಗೆ ಜ್ಞಾನವನ್ನು ಹೊಂದಿರುವುದು ಅಗತ್ಯ. ತ್ಯಾಜ್ಯದ ಲಕ್ಷಣಗಳು ಕಾಲಮಾನಕ್ಕೆ ಮತ್ತು ಸಾಮಾಜಿಕ–ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಬದಲಾಗು ತ್ತಿರುತ್ತದೆ. ಅದಕ್ಕಾಗಿ ವಿವಿಧ ರೀತಿಯ ಮಾದರಿಗಳನ್ನು ಆಯ್ಕೆ ಮಾಡಬೇಕಾಗುತ್ತದೆ ಮತ್ತು ಆಯ್ಕೆಗಳು ಪ್ರಾತಿನಿಧಿಕವಾಗಿರಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ.

ಭಾಟಿಯ ಎಸ್ ಸಿ (2007)[21] ಇವರ ಅಧ್ಯಯನದ ಪ್ರಕಾರ ತ್ಯಾಜ್ಯ ನಿರ್ವಹಣಾ ವಿಧಾನದಲ್ಲಿ ಗೊಬ್ಬರ ತಯಾರಿಕಾ ವಿಧಾನವು ಪ್ರಮುಖವಾದುದು. ನಿರ್ವಹಣೆ ವೆಚ್ಚವು ತ್ಯಾಜ್ಯ ವಿಲೇವಾರಿ ಹಾಗೂ ವಸ್ತುಗಳ ಮಾರುಕಟ್ಟೆಯನ್ನು ಅವಲಂಬಿಸಿದೆ. ಗೊಬ್ಬರ ತಯಾರಿಕಾ

ವಿಧಾನದ ಅನುಕೂಲತೆಗಳೆಂದರೆ, ಇದು ಅನಾವಶ್ಯಕ ವೆಚ್ಚವನ್ನು ನಿಲ್ಲಿಸುತ್ತದೆ. ಗೊಬ್ಬರವನ್ನು ಮಾರಾಟ ಮಾಡಿ ಆದಾಯವನ್ನು ಗಳಿಸಬಹುದು ಹಾಗು ಸಾರ್ವಜನಿಕರಿಂದ ತ್ಯಾಜ್ಯ ಸಂಗ್ರಹಣಾ ವೆಚ್ಚವನ್ನು ಸಂಗ್ರಹಿಸಬಹುದು. ತ್ಯಾಜ್ಯ ನಿರ್ವಹಣೆಯ ಆರ್ಥಿಕತೆಯನ್ನು ವೆಚ್ಚ ಮತ್ತು ಆದಾಯದ ಆಧಾರದಲ್ಲಿ ಅಳೆಯಬಹುದು. ತ್ಯಾಜ್ಯ ಮೂಲಗಳಿಂದ ಉತ್ಪಾದಿಸಿದ ಗೊಬ್ಬರದಲ್ಲಿ ವಿಷಕಾರಿಯಾದ ವಸ್ತುಗಳು ಸೇರದಂತೆ ಜಾಗ್ರತೆ ವಹಿಸಬೇಕು. ಆಹಾರ ಸರಪಣಿಯ ಮೂಲಕ ಅದು ಜನರ ಹಾಗೂ ಪ್ರಾಣಿಗಳ ದೇಹವನ್ನು ಸೇರಿ ಆರೋಗ್ಯ ಸಮಸ್ಯೆಗಳಿಗೆ ಕಾರಣವಾಗುತ್ತವೆ. ಸಾವಯವ ತ್ಯಾಜ್ಯವನ್ನು ಕ್ಲಪ್ತ ಕಾಲದಲ್ಲಿ ಸಂಗ್ರಹಿಸಿ ವಿಲೇವಾರಿ ಮಾಡದೇ ಹೋದಲ್ಲಿ ನೊಣ, ಸೊಳ್ಳೆ, ಇಲಿ, ಹೆಗ್ಗಣ ಮುಂತಾದುವುಗಳ ಪ್ರಮಾಣ ಹೆಚ್ಚಾಗುತ್ತವೆ ಹಾಗೂ ಇದು ಆರೋಗ್ಯ ಸಮಸ್ಯೆಗೆ ಕಾರಣವಾಗುತ್ತದೆ. ಹಾಗೆಯೇ ಭರ್ತಿಮಾಡುವ ಸಂದರ್ಭದಲ್ಲಿಯೂ ಸಹ ಇಲಿ, ಹೆಗ್ಗಣ, ನೊಣ, ಸೊಳ್ಳೆ ಮುಂತಾದುವುಗಳಿಗೆ ಬೆಳೆಯಲು ಅವಕಾಶ ನೀಡಬಾರದು. ಇವುಗಳ ನಿಯಂತ್ರಣಕ್ಕೆ ತ್ಯಾಜ್ಯದ ರಾಶಿಗೆ ಸರಿಯಾದ ಮಣ್ಣಿನ ಹೊದಿಕೆ ಮಾಡಬೇಕು.

ಪೋತಿಮಾಮಕ ಜೆ(2008)[22] ಇವರ ಅವಲೋಕನದಂತೆ 50 ಶೇಕಡಕ್ಕಿಂತಲೂ ಅಧಿಕ ಕುಟುಂಬಗಳು ತ್ಯಾಜ್ಯ ವಿಭಜನೆಯನ್ನು ಮಾಡುತ್ತಿಲ್ಲ. ಇವರ ಅಧ್ಯಯನದ ಪ್ರಕಾರ, ಗೃಹಮಟ್ಟದಲ್ಲಿ ಸರಿಯಾದ ತ್ಯಾಜ್ಯ ನಿರ್ವಹಣೆ ವಿಧಾನಗಳನ್ನು ಅನುಸರಿಸುತ್ತಿಲ್ಲ. ಜನರಿಗೆ ತ್ಯಾಜ್ಯವನ್ನು ಮನೆ, ಕಛೇರಿ, ಇನ್ನಿತರ ಕೆಲಸದ ಸ್ಥಳಗಳಲ್ಲಿ ನಿರ್ವಹಣೆ ಮಾಡುವ ವಿಧಾನಗಳ ಬಗ್ಗೆ ತರಬೇತಿಯನ್ನು ನೀಡಬೇಕು.

ಬೇಗಮ್ ಅರಾ ಆರ್ ಮತ್ತು ಪೆರೇರಾ ಜಾಕಲಿನ್ ಜೆ (2008)[23] ಇವರು ಮಲೇಶಿಯಾದ ಗುತ್ತಿಗೆದಾರರಲ್ಲಿ ತ್ಯಾಜ್ಯ ಉತ್ಪಾದನೆ, ಪುನರುತ್ಪಾದನೆ, ಬೇರ್ಪಡಿಸುವಿಕೆ, ಮತ್ತು ಮೂಲದಲ್ಲಿ ಕಡಿತಗೊಳಿಸುವ ಬಗ್ಗೆ ಅವರ ಜಾಗೃತಿ ಮನೋಭಾವ ಮತ್ತು ವರ್ತನಾ ಸ್ಥಿತಿ ಬಗ್ಗೆ ನಡೆಸಿದ ಅಧ್ಯಯನದ ಪ್ರಕಾರ ತ್ಯಾಜ್ಯವನ್ನು ಮೂಲದಲ್ಲಿ ಕಡಿತಗೊಳಿಸುವ ಬಗ್ಗೆ ಭಾಗೀದಾರರಿಗೆ ಸಾಕಷ್ಟು ಜಾಗೃತಿ ಇಲ್ಲದಿರುವುದು ಕಂಡು ಬಂದಿದೆ ಎಂದಿದ್ದಾರೆ.

ಡಿಪಾರ್ಟ್‌ಮೆಂಟ್ ಆಫ್ ಇಕನಾಮಿಕ್ ಎಫೇರ್ಸ್, ಹಣಕಾಸು ಖಾತೆ, ಭಾರತ ಸರಕಾರ (2009)[24] ಒಂದು ಅಂದಾಜಿನ ಪ್ರಕಾರ ಭಾರತದಲ್ಲಿ ಪ್ರತೀದಿನ 1,60,000 ಮೆಟ್ರಿಕ್ ಟನ್‌ನಷ್ಟು ಮುನ್ಸಿಪಾಲ್ ತ್ಯಾಜ್ಯ ಉತ್ಪತ್ತಿಯಾಗುತ್ತದೆ. ಜನಸಂಖ್ಯೆಗೆ ಅನುಗುಣವಾಗಿ ನಗರಗಳಲ್ಲಿ ತಲಾವಾರು ತ್ಯಾಜ್ಯ ಉತ್ಪಾದನಾ ಪ್ರಮಾಣವು 200ಗ್ರಾಂ ನಿಂದ 600 ಗ್ರಾಂ ತನಕ ಇದೆ. ತಲಾವಾರು ತ್ಯಾಜ್ಯ ಪ್ರಮಾಣವು ಪ್ರತೀ ವರ್ಷ 1.3 ಶೇಕಡದಷ್ಟು ಹೆಚ್ಚಾಗುತ್ತಿರುವುದು ಕಂಡುಬಂದಿದೆ.

ನಗರದ ಜನಸಂಖ್ಯೆಯೂ ಪ್ರತಿವರ್ಷ 3ರಿಂದ 3.5%ರಷ್ಟು ಹೆಚ್ಚಾಗುತ್ತಿರುವ ಕಾರಣದಿಂದ ತ್ಯಾಜ್ಯ ಪ್ರಮಾಣವು ಸರಾಸರಿ ಪ್ರತೀ ವರ್ಷ ಶೇಕಡ 5ರಷ್ಟು ಹೆಚ್ಚಾಗುತ್ತಿದೆ.

ಸೋಮಶೇಖರವರ ಮಾತಿನಲ್ಲಿ (2010)[25] "ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಬೆಳೆಯುತ್ತಿರುವ ನಗರಗಳಲ್ಲಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಮಿಲಿಯಗಟ್ಟಲೆ ಜನರು ತ್ಯಾಜ್ಯ ಸಂಗ್ರಹ, ಪುನರ್‌ಬಳಕೆ ಮುಂತಾದ ಚಟುವಟಿಕೆಗಳಲ್ಲಿ ಭಾಗವಹಿಸುವುದರ ಮೂಲಕ ತಮ್ಮ ಹಾಗೂ ತಮ್ಮ ಕುಟುಂಬದ ಆರ್ಥಿಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಿದ್ದಾರೆ". ಅಂದರೆ ತ್ಯಾಜ್ಯ ನಿರ್ವಹಣೆಯು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಅನೇಕ ರೀತಿಯ ಉದ್ಯೋಗಾವಕಾಶವನ್ನು ಒದಗಿಸುತ್ತಿದೆ.

ಬಾಬು ಸುರೇಶ್ ಬಿ.ಕೆ, ತೇಜಸ್ವಿನಿ ವಿ, ಶರತ್ ಎಚ್.ಎನ್ ಮತ್ತು ವಸಂತ್ ಬಿ.ಎಸ್ (2011)[26] ಇವರು ಮೈಸೂರು ನಗರದಲ್ಲಿ ಜಿ.ಪಿ.ಎಸ್ (ಜಾಗತಿಕ ಸ್ಥಳ ಗುರುತಿಸುವ ವಿಧಾನ) ಸಾಧನವನ್ನು ತ್ಯಾಜ್ಯ ಸಾಗಾಟ ವಾಹನಗಳಲ್ಲಿ ಅಳವಡಿಸುವ ಅಗತ್ಯವನ್ನು ಪ್ರತಿಪಾದಿಸಿದ್ದಾರೆ. ಇದರಿಂದ ವಾಹನಗಳು ಯಾವ ರಸ್ತೆಯ ಮೂಲಕ ಸಾಗಬೇಕು, ತ್ಯಾಜ್ಯ ಸಂಗ್ರಹ ತೊಟ್ಟಿಗಳ ವಿವರ, ವಾಹನದ ವೇಗ ನಿಯಂತ್ರಣ, ಕಾರ್ಮಿಕರ ಕೆಲಸದ ದಕ್ಷತೆಯ ಮೇಲ್ವಿಚಾರಣೆ, ಇತ್ಯಾದಿಗಳನ್ನು ಪರಿಶೀಲಿಸಲು ಅನುಕೂಲವಾಗಿದೆ. ವಾಹನಗಳು ನಿರ್ಧಿಷ್ಟ ಮಾರ್ಗದ ಮೂಲಕ ಸಂಚರಿಸುವುದರಿಂದ ಇಂಧನ ಉಳಿತಾಯವಾಗುತ್ತದೆ. ನಗರವನ್ನು 'ಜಿಯೋಫೆನ್ಸಿಂಗ್' ಅಂದರೆ ಜಿ.ಪಿ.ಎಸ್.ಗೆ ಗುರುತಿಸಲು ಸಾಧ್ಯವಾಗುವ ರೀತಿಯಲ್ಲಿ ಗಡಿರೇಖೆಯನ್ನು ಮಾಡುವುದು.. ಇದರಿಂದ ಯಾವುದೇ ತ್ಯಾಜ್ಯ ಸಾಗಾಟದ ವಾಹನ ಗಡಿಯ ವ್ಯಾಪ್ತಿಯೊಳಗೆ ಆಗಮಿಸಿದ ಮತ್ತು ನಿರ್ಗಮಿಸಿದ ಸಮಯ ದಾಖಲಾಗುತ್ತದೆ ಹಾಗೂ ಯಾವುದೇ ತೊಟ್ಟಿಯಿಂದ ತ್ಯಾಜ್ಯ ಸಂಗ್ರಹಿಸದೇ ಹೋದರೆ ತಕ್ಷಣ ಮಾಹಿತಿಯು ನಿಯಂತ್ರಣ ಕೇಂದ್ರಕ್ಕೆ ಲಭ್ಯವಾಗುತ್ತದೆ.

ಅಮೃತಾ (2011)[27] ಘನತ್ಯಾಜ್ಯ ನಿರ್ವಹಣೆ ಕೇವಲ ತಾಂತ್ರಿಕ ಸವಾಲಾಗದೆ, ಇದೊಂದು 'ಜ್ಞಾನ' ಹಾಗೂ 'ಸಾಂಸ್ಕೃತಿಕ' ವಿಷಯವಾಗಿದೆ, ಏಕರೀತಿಯ ಪರಿಹಾರವನ್ನು ಎಲ್ಲಾ ದೇಶಗಳಲ್ಲಿ, ಎಲ್ಲಾ ಪ್ರದೇಶಗಳಲ್ಲಿ ಅಳವಡಿಸಲು ಸಾಧ್ಯವಿಲ್ಲ. ನಿರ್ದಿಷ್ಟ ಪರಿಸರ ಮತ್ತು ಆರೋಗ್ಯ ಪರಿಣಾಮಗಳು, ಹಣಕಾಸಿನ ಮತ್ತು ಆರ್ಥಿಕ ಮಾಪನಗಳು, ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಷಯಗಳನ್ನು ಹಾಗೂ ಇದರೊಂದಿಗೆ ಸಾಂಸ್ಥಿಕ, ರಾಜಕೀಯ ಮತ್ತು ಕಾನೂನಿನ ಚೌಕಟ್ಟುಗಳನ್ನು ತಿಳಿಯುವುದು ಮತ್ತು ಅರ್ಥೈಸಿಕೊಳ್ಳುವುದರ ಮೂಲಕ ನಗರ ತ್ಯಾಜ್ಯ ನಿರ್ವಹಣೆಗೆ ಸೂಕ್ತ ಯೋಜನೆ ಮತ್ತು ಕಾರ್ಯನುಷ್ಠಾನ ಮಾಡಲು ಸಾಧ್ಯವಾಗುತ್ತದೆ. ತ್ಯಾಜ್ಯ ನಿರ್ವಹಣೆಯ ಎಲ್ಲಾ ಹಂತಗಳಲ್ಲಿ

ಸಾರ್ವಜನಿಕರ ಭಾಗವಹಿಸುವಿಕೆ ಇದ್ದರೆ ಮಾತ್ರ ಯಶಸ್ವಿಯಾಗುತ್ತದೆ. ತ್ಯಾಜ್ಯ ನಿರ್ವಹಣೆಯಲ್ಲಿ ದೀರ್ಘಾವಧಿ ಯೋಜನೆಯನ್ನು ಸ್ಥಳೀಯ ಪ್ರಾದೇಶಿಕ ಮತ್ತು ರಾಜ್ಯಮಟ್ಟದಲ್ಲಿ ತಯಾರಿಸಬೇಕು. ಅದು ಪರಿಸರ ಕಾಳಜಿ ಮತ್ತು ಆರ್ಥಿಕ ಮಿತಿಗಳನ್ನು ಗಮನದಲ್ಲಿಟ್ಟುಕೊಂಡು ರಚಿತವಾಗಿರಬೇಕು. ಸರಿಯಾದ ಅಂಕಿ ಅಂಶಗಳ ಆಧಾರದಲ್ಲಿ ಯೋಜನೆಯ ತಯಾರಿಯಾಗಬೇಕು.ಪೂರ್ವಭಾವಿ ಅಧ್ಯಯನವನ್ನು ಕೈಗೊಂಡ ಬಳಿಕ ಯೋಜನೆಯನ್ನು ಜಾರಿಗೊಳಿಸಬೇಕು ಎಂದಿದ್ದಾರೆ.

ಗ್ಯಾಂಗ್ ಬೋಸೆಂಗ್, ಮಿಂಗ್ ಜಿಯಾಂಗ್ ಮತ್ತಿತರರು (2011)[28] ತಮ್ಮ ಸಂಶೋಧನಾ ಲೇಖನದಲ್ಲಿ ಚೈನಾದಲ್ಲಿ ತ್ಯಾಜ್ಯ ಪ್ರಮಾಣದ ಹೆಚ್ಚಳವನ್ನು ವಿವರಿಸುತ್ತಾ, ವಾರ್ಷಿಕ 160 ಮಿಲಿಯನ್ ಟನ್ ತ್ಯಾಜ್ಯ ಉತ್ಪಾದನೆಯಾಗುತ್ತಿದ್ದು, ಶೇಕಡ 50ರಷ್ಟು ತ್ಯಾಜ್ಯವನ್ನು ಯಾವುದೇ ರೀತಿಯಲ್ಲಿ ಸಂಸ್ಕರಿಸದೆ, ಭೂಭರ್ತಿ ಮಾಡಲಾಗುತ್ತಿದೆ. ಇದರಿಂದ ಅಂತರ್ಜಲದ ಮಾಲಿನ್ಯ, ಹಸಿರುಮನೆ ಅನಿಲಗಳ ಹೊರಸೂಸುವಿಕೆ ಹೆಚ್ಚಾಗುತ್ತಿದೆ. ಈ ಸಮಸ್ಯೆಗಳನ್ನು ನಿವಾರಿಸಲು ಮತ್ತು ಭೂಭರ್ತಿಯನ್ನು ಕಡಿತಗೊಳಿಸಲು ಮುನ್ಸಿಪಾಲ್ ತ್ಯಾಜ್ಯಗಳನ್ನು ದಹಿಸುವ ದಹನ ಕುಲುಮೆಗಳನ್ನು ಸ್ಥಾಪಿಸಲಾಗಿದೆ. ಇದರಿಂದಾಗಿ ತ್ಯಾಜ್ಯ ದಹಿಸುವ ಪ್ರಮಾಣ 8.7 ರಿಂದ 15.7 ಮಿಲಿಯನ್ ಟನ್‌ನಷ್ಟು ಹೆಚ್ಚಳವಾಗಿದೆ.

ನಾಗ್ ಎ ಮತ್ತು ವಿಜಯಕುಮಾರ್.ಕೆ.(2012)[29] ಅವೈಜ್ಞಾನಿಕ ರೀತಿಯ ತ್ಯಾಜ್ಯ ನಿರ್ವಹಣಾ ಆಡಳಿತ ವ್ಯವಸ್ಥೆಯಿಂದಾಗಿ ಹೆಚ್ಚಿನ ಸ್ಥಳೀಯ ಸಂಸ್ಥೆಗಳು ತಮ್ಮ ಉದ್ದೇಶಗಳನ್ನು ಈಡೇರಿಸಿಕೊಳ್ಳುವಲ್ಲಿ ಯಶಸ್ವಿಯಾಗಿಲ್ಲ. ಒಬ್ಬರು ತಮ್ಮ ಜವಾಬ್ದಾರಿ/ತಪ್ಪನ್ನು ಇನ್ನೊಬ್ಬರ ಮೇಲೆ ವರ್ಗಾಯಿಸುವುದು ಹಾಗೂ ಇದರಿಂದ ಸೂಕ್ತ ನಿರ್ಧಾರ ತೆಗೆದುಕೊಳ್ಳುವಲ್ಲಿ ವಿಳಂಬವಾಗುತ್ತದೆ. ಘನತ್ಯಾಜ್ಯ ನಿರ್ವಹಣಾ ಯೋಜನೆಯಲ್ಲಿ ಕಾರ್ಮಿಕರನ್ನು ನಿಯುಕ್ತಿಗೊಳಿಸುವಾಗ ಅವರನ್ನು ನಿರ್ದಿಷ್ಟ ಪಡಿಸಿದ ತ್ಯಾಜ್ಯ ಸಂಗ್ರಹಣಾ ಕೇಂದ್ರಕ್ಕೆ ನಿಯೋಜಿಸಬೇಕು. ಕೆಲಸದ ಸಂಯೋಜನೆ ಹಾಗೂ ಮೇಲ್ವಿಚಾರಣೆಗಾಗಿ 'ನಾಗರಿಕ ಸಮಿತಿ'ಯನ್ನು ರಚಿಸಬೇಕು. ಕಾರ್ಮಿಕರು ಮತ್ತು ಮೇಲ್ವಿಚಾರಕರು ಸಂಬಂಧಿಸಿದ ಪ್ರದೇಶದ ತ್ಯಾಜ್ಯ ನಿರ್ವಹಣೆಗೆ ಸಂಪೂರ್ಣ ಬದ್ಧರಾಗಿರುವಂತೆ ಮಾಡಬೇಕು. ಕಾರ್ಮಿಕರಿಗೆ ಕೆಲಸವನ್ನು ವಹಿಸುವಾಗ ಒಬ್ಬನೇ ಮೇಲಾಧಿಕಾರಿಯಿಂದ ಆದೇಶ ಬರಬೇಕು ಬದಲಾಗಿ ಅನೇಕರು ಬೇರೆ ಬೇರೆ ರೀತಿಯ ಕೆಲಸದ ಆದೇಶಗಳನ್ನು ನೀಡಬಾರದು. ಒಬ್ಬ ಮೇಲ್ವಿಚಾರಕನ ಅಡಿಯಲ್ಲಿ ನಿರ್ದಿಷ್ಟಪಡಿಸಿದಷ್ಟು ಕಾರ್ಮಿಕರು ಮಾತ್ರ ಕೆಲಸ ನಿರ್ವಹಿಸಬೇಕು. ವಾರದ ಹಾಗೂ ತಿಂಗಳ ವರದಿಗಳನ್ನು ಸರಿಯಾದ ನಮೂನೆಯಲ್ಲಿ ಮೇಲಾಧಿಕಾರಿಗಳಿಗೆ ಸಲ್ಲಿಸಬೇಕು.

ಸೇತ್ ಸಿಂಡ್ಲರ್, ಫೆಡೆರಿಕೋ ಡೆಮಾರಿಯಾ ಮತ್ತು ಶಶಿ ಬಿ.ಪಂಡಿತ್ (2012)[30] ದೆಹಲಿ ನಗರದಲ್ಲಿ ನಡೆಸಿದ ಅಧ್ಯಯನ ಪ್ರಕಾರ ತ್ಯಾಜ್ಯ ನಿರ್ವಹಣೆಯ ವಿವಿಧ ಹಂತಗಳಲ್ಲಿ ಖಾಸಗಿ ಸಹಭಾಗಿತ್ವದ ಪ್ರಮಾಣ ಹೆಚ್ಚಾಗುತ್ತಿದೆ. ಜೊತೆಗೆ ಅಸಾಂಪ್ರದಾಯಿಕ ಕ್ಷೇತ್ರವನ್ನು ಈ ಕಾರ್ಯದಲ್ಲಿ ಬಳಸಿಕೊಳ್ಳುವುದರಿಂದ ಪರಿಸರ ಸಂರಕ್ಷಣೆ ದೃಷ್ಟಿಯಿಂದಲೂ ಉತ್ತಮ. ತ್ಯಾಜ್ಯ ಸಂಗ್ರಹಕಾರರಿಗೆ ಕೆಲಸ ಸ್ಥಿತಿಗತಿಯ ಸುಧಾರಣೆಯ ಅವಶ್ಯಕತೆಯೂ ಇದೆ. ಅವರಿಗೆ ಕೈಚೀಲ, ಶೂ, ಮುಖಕವಚ ಮುಂತಾದ ಉಪಕರಣಗಳನ್ನು ಉಪಯೋಗಿಸುವಂತೆ ನೋಡಿಕೊಳ್ಳುವುದು, ಆರೋಗ್ಯ ರಕ್ಷಣೆ, ವಿಮೆ, ನಿವೃತ್ತಿವೇತನ ಹಾಗೂ ಇನ್ನಿತರ ಆರ್ಥಿಕ ಸೌಲಭ್ಯಗಳನ್ನು ನೀಡುವುದು ಅವಶ್ಯಕವಾಗಿದೆ ಎಂದು ಸಲಹೆ ಮಾಡಿದ್ದಾರೆ. ತ್ಯಾಜ್ಯ ನಿರ್ವಹಣಾ ನಿಯಾಮಾವಳಿಗಳಲ್ಲಿ ಇವುಗಳ ಕಟ್ಟುನಿಟ್ಟಿನ ಅನುಷ್ಠಾನದ ಬಗ್ಗೆ ಉಲ್ಲೇಖಗಳಿಲ್ಲ. ದೆಹಲಿಯ ಕೆಲವು ಶ್ರೀಮಂತ ಪ್ರದೇಶಗಳಲ್ಲಿ ಖಾಸಗಿ ಕಂಪೆನಿಗಳು ತಮಗೆ ಆ ಪ್ರದೇಶದ ತ್ಯಾಜ್ಯ ವಿಲೇವಾರಿ ಕೆಲಸ ನೀಡದಿದ್ದರೂ, ತ್ಯಾಜ್ಯ ಸಂಗ್ರಹಿಸಿರುವುದನ್ನು ಅಧ್ಯಯನ ಗುರುತಿಸಿದೆ. ಇದಕ್ಕೆ ಕಾರಣ ಅಲ್ಲಿಯ ತ್ಯಾಜ್ಯಗಳಲ್ಲಿ ನಿರುಪಯುಕ್ತ ವಸ್ತುಗಳ ಪ್ರಮಾಣ ಅತೀ ಕನಿಷ್ಠ ಮಟ್ಟದಲ್ಲಿರುತ್ತದೆ ಎಂದು ತಿಳಿಸಿದ್ದಾರೆ.

ಲಿಂಗರಾಜ ಪತ್ರಾವೊ ಮತ್ತು ಇತರರು (2012)[31] ಒರಿಸ್ಸಾದ ಭುವನೇಶ್ವರ್ ಮತ್ತು ಮಹಾರಾಷ್ಟ್ರದ ಮುಂಬೈ ನಗರದಲ್ಲಿ ನಡೆಸಿದ ಅಧ್ಯಯನದ ಪ್ರಕಾರ ಈ ನಗರಗಳಲ್ಲಿ ಶಿಸ್ತುಬದ್ಧವಾದ ಮತ್ತು ವೈಜ್ಞಾನಿಕವಾದ ತ್ಯಾಜ್ಯ ಸಂಗ್ರಹ, ವಿಭಜನೆ, ಸಾಗಾಟ ಮತ್ತು ವಿಲೇವಾರಿ ವಿಧಾನಗಳಿಲ್ಲ. ತ್ಯಾಜ್ಯ ಸಂಗ್ರಹದ ಪ್ರಮಾಣ ತೀರ ಕೆಳಮಟ್ಟದಲ್ಲಿದ್ದು, ಕಾರ್ಮಿಕರ ಬಳಕೆ, ಹಣ ಹಾಗೂ ಯಂತ್ರೋಪಕರಣಗಳ ಬಳಕೆ ತೃಪ್ತಿದಾಯಕವಾಗಿಲ್ಲ. ತೆರೆದ ಚರಂಡಿಗಳಲ್ಲಿ ಘನತ್ಯಾಜ್ಯ ತುಂಬಿರುವ ದೃಶ್ಯಗಳು ತೀರಾ ಸಾಮಾನ್ಯವಾಗಿವೆ. ಇದರಿಂದ ಆ ಪ್ರದೇಶಗಳಲ್ಲಿ ಸೊಳ್ಳೆ ಉತ್ಪತ್ತಿ ಹೆಚ್ಚಾಗಿ ಸಾಂಕ್ರಾಮಿಕ ರೋಗಗಳು ಹೆಚ್ಚಾಗಿ ಕಾಣಿಸಿಕೊಂಡಿವೆ, ತೆರೆದ ಪ್ರದೇಶಗಳಲ್ಲಿ ಬೇಕಾಬಿಟ್ಟಿ ತ್ಯಾಜ್ಯ ಗಳನ್ನು ವಿಭಜಿಸದೆ ರಾಶಿ ಹಾಕುವುದು, ಅವೈಜ್ಞಾನಿಕ ಭೂಭರ್ತಿ, ತೆರೆದ ಪ್ರದೇಶಗಳಲ್ಲಿ ದಹನ ಕುಲುಮೆಗಳ ಅಳವಡಿಕೆಯಿಂದಾಗಿ ಜಲಮಾಲಿನ್ಯ ಹೆಚ್ಚಾಗಿದೆ. ಆಸ್ಪತ್ರೆ ಮುಂತಾದ ಅಪಾಯಕಾರಿ ತ್ಯಾಜ್ಯಗಳ ಸಂಗ್ರಹ ಹಾಗೂ ವಿಲೇವಾರಿಯನ್ನು ಕಡೆಗಣಿಸಲಾಗಿದೆ. ಅದಕ್ಕೆ ಇವರು ತಮ್ಮ ಅಧ್ಯಯನದಲ್ಲಿ ಈ ಕೆಳಗಿನ ಕಾರ್ಯ ಯೋಜನೆಗಳನ್ನು ಹಮ್ಮಿಕೊಳ್ಳುವಂತೆ ತಿಳಿಸಿದ್ದಾರೆ.

ವಿಕೇಂದ್ರೀಕೃತ ಘನತ್ಯಾಜ್ಯ ವಿಲೇವಾರಿ ವಿಧಾನ ಅಳವಡಿಸಬೇಕು, ಜನರ ಭಾಗವಹಿಸುವಿಕೆ ಯನ್ನು ಹೆಚ್ಚಿಸಬೇಕು, ತ್ಯಾಜ್ಯ ಸಂಗ್ರಹ ಸವಲತ್ತುಗಳನ್ನು ಉತ್ತಮಪಡಿಸಬೇಕು, ತ್ಯಾಜ್ಯ ಸಂಗ್ರಹ ಘಟಕಗಳನ್ನು ಹೆಚ್ಚಿಸಬೇಕು, ತ್ಯಾಜ್ಯ ವಿಭಜನೆ, ತ್ಯಾಜ್ಯ ಮರುಬಳಕೆ ಮತ್ತು ಪುನರಾವರ್ತನೆ (Recycling) ವಿಧಾನಗಳಿಗೆ ಆದ್ಯತೆ ನೀಡಬೇಕು, ಸಾರ್ವಜನಿಕರಿಗೆ ಮಾಹಿತಿ ಹಾಗೂ

ಸೂಚನೆಗಳನ್ನು ನೀಡಬೇಕು, ಆಸ್ಪತ್ರೆ ಮತ್ತು ಅಪಾಯಕಾರಿ ತ್ಯಾಜ್ಯಗಳನ್ನು ಪ್ರತ್ಯೇಕವಾಗಿ ವಿಲೇವಾರಿ ಮಾಡಬೇಕು, ಇತ್ಯಾದಿ.

ಸುಭಾಷ್ ಆನಂದ (2012)[32] ತಮ್ಮ ಅಧ್ಯಯನದಲ್ಲಿ ತ್ಯಾಜ್ಯ ಸಂಸ್ಕರಣ ಮತ್ತು ಆರೈಕೆ ಯೆಂದರೆ ಭೌತಿಕ, ರಾಸಾಯನಿಕ ಅಥವಾ ಜೈವಿಕ ವಿಧಾನದಲ್ಲಿ ತ್ಯಾಜ್ಯದಿಂದ ಸಂಪನ್ಮೂಲವನ್ನು ಹೊರತೆಗೆಯುವುದು, ಇದರಿಂದ ಇಂಧನ, ಅನಿಲ ಮುಂತಾದ ಶಕ್ತಿಯ ಉತ್ಪಾದನೆ ಮತ್ತು ಇತರ ಲಾಭದಾಯಕ ಉದ್ದೇಶಗಳಿಗೆ ಬಳಸಿಕೊಳ್ಳುವುದು ಎಂದಿದ್ದಾರೆ. ಗೊಬ್ಬರ ತಯಾರಿಸುವುದು, ಎರೆಹುಳು ಗೊಬ್ಬರ, ದಹನಕ್ರಿಯೆ ಮೂಲಕ ತ್ಯಾಜ್ಯವನ್ನು ವಿಲೇವಾರಿ ಮಾಡುವುದು ಇದರಲ್ಲಿ ಒಳಗೊಂಡಿದೆ.

**ಪೈರೋಲಿಸಿಸ್**[33] ವಿಧಾನದಲ್ಲಿ ಅತೀ ತಾಪಮಾನದಲ್ಲಿ ದಹಿಸಿ ಅನಿಲ ಮತ್ತು ಇಂಧನವನ್ನು ತಯಾರಿಸುವುದು, **ಗ್ಯಾಸಿಫಿಕೇಶನ್**[34] ಮತ್ತು ತ್ಯಾಜ್ಯವನ್ನು ಸಣ್ಣ ಉಂಡೆಗಳಾಗಿ ಪರಿವರ್ತಿಸಿ (ಪೆಲ್ಲೆಟೈಸೇಶನ್) ಕಲ್ಲಿದ್ದಲು ರೀತಿಯಲ್ಲಿ ಇಂಧನವನ್ನಾಗಿ ಬಳಸುವ ವಿಧಾನ ಇವುಗಳನ್ನು ಒಳಗೊಂಡಿದೆ. ಆದರೆ ಗೊಬ್ಬರ ತಯಾರಿಕಾ ವಿಧಾನ ಮತ್ತು ಎರೆಹುಳು ಗೊಬ್ಬರ ತಯಾರಿಕೆ ಬಿಟ್ಟು ಉಳಿದ ವಿಧಾನಗಳು ಹೆಚ್ಚು ಬಳಕೆಯಲ್ಲಿರದಿರುವುದನ್ನು ದೆಹಲಿಯಲ್ಲಿ ಕೈಗೊಂಡ ಅಧ್ಯಯನದಲ್ಲಿ ಗುರುತಿಸಿದ್ದಾರೆ.

ಲಿಂಗರಾಜ್ ಪತ್ರಾವೋ ಇವರ ಸಂಪಾದಿತ ಕೃತಿ ಸಾಲಿಡ್ ವೇಸ್ಟ್ ಮೆನೇಜ್‌ಮೆಂಟ್ (2012)[35] ಇದರಲ್ಲಿ ಉತ್ಪಲ್ ದತ್ತ ಇವರು 'ಮುನ್ಸಿಪಾಲ್ ಸಾಲಿಡ್ ವೇಸ್ಟ್ ಮೆನೇಜ್‌ಮೆಂಟ್ ಇನ್ ಇಂಡಿಯಾ: ಪ್ರೋವಿಷನ್ ಆಂಡ್ ಪ್ರಾಬ್ಲಮ್ಸ್' ಎಂಬ ಲೇಖನದಲ್ಲಿ ತ್ಯಾಜ್ಯ ನಿರ್ವಹಣಾ ವಿಧಾನಗಳು ಅಭಿವೃದ್ಧಿ ಹೊಂದಿದ ದೇಶಗಳು ಹಾಗೂ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಬೇರೆ ಬೇರೆಯಾಗಿವೆ ಎಂದಿದ್ದಾರೆ. ತ್ಯಾಜ್ಯ ಸಂಗ್ರಹ ಹಾಗೂ ವಿಲೇವಾರಿ ದುಬಾರಿಯಾದ ಕಾರಣ ಭಾರತದಲ್ಲಿ ಹೆಚ್ಚಿನ ಮುನ್ಸಿಪಾಲಿಟಿಗಳು ಸೂಕ್ತ ರೀತಿಯಲ್ಲಿ ನಿಭಾಯಿಸುತ್ತಿಲ್ಲ, ಶೇಕಡ 90ರಷ್ಟು ಅಧಿಕಾರಿಗಳು ಮತ್ತು ಜನಪ್ರತಿನಿಧಿಗಳು ಹೆಚ್ಚಿನ ಮುತುವರ್ಜಿ ವಹಿಸುತ್ತಿಲ್ಲ ಅಲ್ಲದೇ ಮುನ್ಸಿಪಾಲ್ ಘನತ್ಯಾಜ್ಯ (ನಿರ್ವಹಣೆ ಹಾಗೂ ನಿಭಾವಣೆ) ನಿಯಮ 2000ದ ಸರಿಯಾದ ಅನುಷ್ಠಾನದ ಕೊರತೆಯಿರುವುದನ್ನು ಅಧ್ಯಯನದಲ್ಲಿ ಗುರುತಿಸಿದ್ದಾರೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (2012)[36] ಮರುಆವರ್ತನೀಯಕ್ಕೆ ಒಳಪಡುವ ಹಾಗೂ ಮರುಬಳಕೆ ಮಾಡಬಹುದಾದ ತ್ಯಾಜ್ಯಗಳಿಗೆ ಗುಜರಿ ಅಂಗಡಿಯವರು ನೀಡುವ ದರದ ಪಟ್ಟಿಯನ್ನು ನೀಡಿದ್ದಾರೆ. ತ್ಯಾಜ್ಯ ನಿರ್ವಹಣೆಯು ಆರ್ಥಿಕಾಂಶಗಳಲ್ಲಿ ಇದು ಪ್ರಮುಖ

ಅಂಶವೆಂದು ತಿಳಿಸಲಾಗಿದೆ.. ಈ ಕೈಪಿಡಿಯಲ್ಲಿ ನೀಡಿರುವ ಆಂಧ್ರಪ್ರದೇಶದ ಎಲ್ಲೂರಿನಲ್ಲಿ ನಡೆಸಿದ ಪ್ರಕರಣ ಅಧ್ಯಯನದಲ್ಲಿ., ವೆಲ್ತ್ ಔಟ್ ಆಫ್ ವೇಸ್ಟ್ (ಡಬ್ಲ್ಯೂ ಒ ಡಬ್ಲ್ಯೂ) ತ್ಯಾಜ್ಯದಿಂದ ಸಂಪತ್ತು ಎನ್ನುವ ತ್ಯಾಜ್ಯ ನಿರ್ವಹಣಾ ವಿಧಾನವು ಹೇಗೆ ತ್ಯಾಜ್ಯವನ್ನು ಶಕ್ತಿಯ ಆಕರವಾಗಿ ಬಳಸಿಕೊಳ್ಳಬಹುದೆಂದು ತಿಳಿಸುತ್ತದೆ. ಈ ಗ್ರಂಥದಲ್ಲಿ ಲಿಂಗರಾಜ್ ಪತ್ರಾವೊ, ಜೆ.ಕೆ.ದಸ್ಮಾಪಾತ್ರ ಮತ್ತು ಎಸ್.ಸಿ ಮಿಶ್ರ ಇವರ ಲೇಖನಗಳಲ್ಲಿ ಪರಿಸರಕ್ಕೆ ಸಂಬಂಧಿಸಿದ ನಿಯಮಾವಳಿ ಮತ್ತು ಕಾನೂನು ಕುರಿತು ಮಾಹಿತಿ ಇದೆ.

ಬಾನು ಶಮೀಮ್ ಎಸ್ (2013)[37] ಇವರು ಮಧುರೈ ನಗರದಲ್ಲಿ ನಡೆಸಿದ ಅಧ್ಯಯನದಲ್ಲಿ ತ್ಯಾಜ್ಯ ಸೃಷ್ಟಿ ಮತ್ತು ವಿವಿಧ ತ್ಯಾಜ್ಯಗಳ ಲಕ್ಷಣಗಳನ್ನು ವಿಶ್ಲೇಷಿಸಿದ್ದಾರೆ. ತ್ಯಾಜ್ಯ ಸೃಷ್ಟಿಯನ್ನು ನಿರ್ಧರಿಸುವ ಅಂಶಗಳನ್ನು ಮತ್ತು ಅಧ್ಯಯನಕ್ಕೆ ಒಳಪಡಿಸಿದ ವ್ಯಾಪಾರಿಗಳು ಉತ್ಪಾದಿಸುವ ತ್ಯಾಜ್ಯದ ಪ್ರಮಾಣ ಮತ್ತು ವಿಧಗಳನ್ನು ಪರಿಶೀಲಿಸಿದ್ದಾರೆ. ಗೃಹತ್ಯಾಜ್ಯದ ಪ್ರಮಾಣ ಉಳಿದ ತ್ಯಾಜ್ಯಗಳಿಗಿಂತ ಹೆಚ್ಚಿರುವುದನ್ನು ಗುರುತಿಸಿದ್ದಾರೆ ಹಾಗೂ ಸುಮಾರು 68.42 ಶೇಕಡದಷ್ಟು ತ್ಯಾಜ್ಯವು ಸಾವಯವ ಹಾಗೂ 31.58 ಪ್ರಮಾಣವು ನಿರವಯವ ತ್ಯಾಜ್ಯವಾಗಿದೆ. ಜನಸಂಖ್ಯೆ ಹೆಚ್ಚಾದಂತೆ ತ್ಯಾಜ್ಯ ಪ್ರಮಾಣವೂ ಹೆಚ್ಚಾಗುತ್ತದೆ. ನಗರಗಳ ತ್ಯಾಜ್ಯಗಳಲ್ಲಿ ಪೇಪರ್, ರಬ್ಬರ್ ಮತ್ತು ಪ್ಲಾಸ್ಟಿಕ್ ಗರಿಷ್ಠ ಪ್ರಮಾಣದಲ್ಲಿ ಉತ್ಪಾದನೆಯಾಗುತ್ತದೆ. ಹಾಗೆಯೇ ನಗರದಿಂದ ನಗರಕ್ಕೆ ತ್ಯಾಜ್ಯ ಉತ್ಪಾದನಾ ಪ್ರಮಾಣವು ಏಕಪ್ರಕಾರವಾಗಿಲ್ಲದಿರುವುದು ಇವರ ಅಧ್ಯಯನದಲ್ಲಿ ದಾಖಲಿಸಿದ್ದಾರೆ.

ಅಗರ್ವಾಲ್ ಸುನೀತಾ ಮತ್ತು ಆರೋರಾ ಲಲಿತಾ (2013)[38] ಇವರ ಹೇಳಿಕೆಯಂತೆ ತ್ಯಾಜ್ಯ ನಿರ್ವಹಣೆ ವಿಷಯವನ್ನು ಗೃಹವಿಜ್ಞಾನ, ಪ್ರಾಣಿಶಾಸ್ತ್ರ, ಜೀವಶಾಸ್ತ್ರ, ಪರಿಸರ ವಿಜ್ಞಾನದಂತಹ ವಿಷಯಗಳಲ್ಲಿ ಪಠ್ಯವಾಗಿ ಸೇರಿಸಿಕೊಳ್ಳಬೇಕು. ರಾಜಸ್ಥಾನ ಮತ್ತು ಭಾಗತದ ಇತರ ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ನಗರಪಾಲಿಕೆಗಳು ತ್ಯಾಜ್ಯ ನಿರ್ವಹಣೆ ಬಗ್ಗೆ ಸಾರ್ವತ್ರಿಕ ಶಿಕ್ಷಣ ಮತ್ತು ಜಾಗೃತಿ ಮೂಡಿಸುವ ಪ್ರತ್ಯೇಕ ವಿಭಾಗಗಳನ್ನು ತೆರೆದಿವೆ. ಬೇರೆ ಬೇರೆ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಸ್ವಯಂಸೇವಾ ಸಂಸ್ಥೆಗಳನ್ನು ತ್ಯಾಜ್ಯ ನಿರ್ವಹಣೆ ಜಾಗೃತಿ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಂತೆ ಸರಕಾರ ಉತ್ತೇಜನ ನೀಡಬೇಕು. ಸಾರ್ವಜನಿಕ ಜಾಗೃತಿ ಮತ್ತು ಸ್ಪಂದನೆಯ ಮೂಲಕ ಸುರಕ್ಷಿತ ತ್ಯಾಜ್ಯ ನಿರ್ವಹಣೆಯನ್ನು ಮಾಡಲು ಸಾಧ್ಯ.

ಭಾಸ್ಕರ್ ಪವನ್ ಕುಮಾರ್ ಮತ್ತು ಕುಮಾರ ವಿ.ಕೆ.(2013)[39] ತ್ಯಾಜ್ಯ ವಿಭಜನೆ ಪ್ರಾಥಮಿಕ ಹಂತದ ಪ್ರಮುಖ ವಿಧಾನ. ತ್ಯಾಜ್ಯವನ್ನು ಜೈವಿಕ, ಪುನರುತ್ಪಾದನೆಗೆ ಯೋಗ್ಯ

ಹಾಗೂ ಅಜೈವಿಕ. ಹೀಗೆ ವಿಭಜನೆ ಮಾಡುವುದರ ಮೂಲಕ ತ್ಯಾಜ್ಯದ ಸಂಗ್ರಹ ಮತ್ತು ತ್ಯಾಜ್ಯ ವಿಲೇವಾರಿ ವೆಚ್ಚವನ್ನು ಕಡಿತಗೊಳಿಸಬಹುದು. ತ್ಯಾಜ್ಯ ದಹಿಸುವಿಕೆ ಅತ್ಯಂತ ಕಡಿಮೆ ವೆಚ್ಚದ ವಿಧಾನವಾದರೂ ಪರಿಸರದ ದೃಷ್ಟಿಯಿಂದ ಯೋಗ್ಯವಲ್ಲ. ಕಡಿಮೆ ವೆಚ್ಚದ ಆಯ್ಕೆಗಳೆಂದರೆ ಕ್ರಮವಾಗಿ ಪುನರುತ್ಪಾದನೆ ಹಾಗೂ ದಹಿಸುವಿಕೆ, ಪುನರುತ್ಪಾದನೆ ಹಾಗೂ ಭೂಭರ್ತಿ, ಭೂಭರ್ತಿ ಮತ್ತು ದಹಿಸುವಿಕೆ. ಪ್ರತಿಯೊಂದು ನಗರವೂ ತನ್ನ ಪರಿಸರಕ್ಕೆ ಸೂಕ್ತವಾದ ವಿಧಾನವನ್ನು ಅಳವಡಿಸುವುದರ ಮೂಲಕ ತ್ಯಾಜ್ಯ ನಿರ್ವಹಣಾ ವೆಚ್ಚವನ್ನು ಕಡಿತಗೊಳಿಸಬಹುದು. ಬೆಂಗಳೂರು ನಗರವನ್ನು ಅನುಲಕ್ಷಿಸಿ ಇಲೆಕ್ಟ್ರಾನಿಕ್/ಇಲೆಕ್ಟ್ರಿಕಲ್ ತ್ಯಾಜ್ಯ ಕುರಿತು ನಡೆಸಿದ ಅಧ್ಯಯನ ಪ್ರಮುಖವಾದ ಉದ್ದೇಶ ಇ–ತ್ಯಾಜ್ಯ ನಿರ್ವಹಣೆಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸಂಸ್ಥೆಗಳ ಪಾತ್ರ ಮತ್ತು ಮಿತಿಗಳು. ಇ–ತ್ಯಾಜ್ಯ ನಿರ್ವಹಣೆಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸಂಸ್ಥೆಗಳ ಪಾತ್ರ ಮತ್ತು ಮಿತಿಗಳನ್ನು ವಿಶ್ಲೇಷಣೆ ಮಾಡುವ ಉದ್ದೇಶದಿಂದ ಬೆಂಗಳೂರು ನಗರದಲ್ಲಿ ನಡೆಸಿದ ಅಧ್ಯಯನದಲ್ಲಿ ನೀಡಿರುವ ಅಭಿಪ್ರಾಯದಂತೆ ಗುಜರಿ ಮರುಬಳಕೆ ತ್ಯಾಜ್ಯಗಳ ನಿರ್ವಹಣೆಯನ್ನು ಸರಕಾರವು ಅಧಿಕೃತ ಡೀಲರ್‌ಗಳ ಮೂಲಕ ಮಾಡಿದರೆ ನಿರ್ವಹಣೆಯ ಲೋಪದೋಷಗಳನ್ನು ಸರಿಪಡಿಸಬಹುದು. ಮುಖ್ಯವಾಗಿ ಅಪಾಯಕಾರಿ ತ್ಯಾಜ್ಯಗಳ ನಿರ್ವಹಣೆಗೆ ಸಹಕಾರಿಯಾಗಲಿದೆ ಹಾಗೂ ಅಪಾಯಕಾರಿ ತ್ಯಾಜ್ಯಗಳ ನಿಯಂತ್ರಣ ಪ್ರಾಧಿಕಾರದ ಸ್ಥಾಪನೆ ಅಗತ್ಯ. ತ್ಯಾಜ್ಯ ಸಂಗ್ರಹಕಾರರಿಗೆ ಸರಿಯಾದ ತರಬೇತಿ ನೀಡಿ ಅವರನ್ನು ಅಧಿಕೃತವಾಗಿ ತ್ಯಾಜ್ಯ ಸಂಗ್ರಹಣೆಯಲ್ಲಿ ತೊಡಗಿಸಿಕೊಳ್ಳಬೇಕು.

ದಿ ಹಿಂದು (2014)[40] ಮಂಗಳೂರು ಮಹಾನಗರ ಪಾಲಿಕೆಯು ತ್ಯಾಜ್ಯ ವಿಲೇವಾರಿ ಮಾಡುವ ಹೊಣೆಯನ್ನು ಮುಂಬಯಿ ಮೂಲದ ಆ್ಯಂಟನಿ ವೇಸ್ಟ್ ಹ್ಯಾಂಡ್ಲಿಂಗ್ ಪ್ರೈ.ಲಿ. ಕಂಪೆನಿಗೆ ಜನವರಿ 2015 ರಿಂದ ವಹಿಸಿಕೊಟ್ಟಿದೆ. ಈ ಕಂಪೆನಿಯು ನಗರಪಾಲಿಕೆಯ ಒಟ್ಟು 60 ವಾರ್ಡ್‌ಗಳಲ್ಲಿ 47 ವಾರ್ಡ್‌ಗಳಲ್ಲಿ ಸ್ವತಂತ್ರವಾಗಿ ಹಾಗೂ ಉಳಿದ 13 ವಾರ್ಡ್‌ಗಳಲ್ಲಿ ಪಾಲಿಕೆಯಲ್ಲಿರುವ ಪೌರಕಾರ್ಮಿಕರ ಸಹಾಯದೊಂದಿಗೆ ಕಾರ್ಯನಿರ್ವಹಿಸುತ್ತಿದೆ. ವಿಭಜಿಸಿದ ತ್ಯಾಜ್ಯಗಳನ್ನು ಬೇರೆ ಬೇರೆ ವಿಭಾಗಗಳಲ್ಲಿ ಹಾಕಲು ಹಾಗೂ ಹೊರತೆಗೆಯಲು ಅನುಕೂಲವಾಗುವಂತೆ ವಿಶೇಷವಾಗಿ ವಿನ್ಯಾಸಗೊಳಿಸಿ ಸಿದ್ಧಪಡಿಸಿದ 55 ಜೀಪುಗಳನ್ನು ಮನೆಮನೆ ಕಸ ಸಂಗ್ರಹಕ್ಕೆ ಬಳಸಲಾಗುತ್ತಿದೆ ಹಾಗೂ ಇದೇ ರೀತಿ ವಿನ್ಯಾಸಗೊಳಿಸಿದ ದೊಡ್ಡ ಗಾತ್ರದ ಸ್ವಯಂಚಾಲಿತ ಯಂತ್ರಗಳಿರುವ ಲಾರಿಗಳನ್ನು ತೊಟ್ಟಿಗಳಿಂದ ಕಸ ಸಾಗಿಸಲು ಬಳಸಲಾಗುತ್ತಿದೆ. ರಸ್ತೆ ವಿಭಾಜಕಗಳಲ್ಲಿ ಸಂಗ್ರಹವಾದ ಧೂಳು ಗುಡಿಸಲು ಯಂತ್ರವನ್ನು ಬಳಕೆ ಮಾಡುತ್ತಿದ್ದು ಪ್ರತಿ ನಿತ್ಯ 25 ಕಿ.ಮೀ. ರಸ್ತೆಯನ್ನು ಸ್ವಚ್ಛಗೊಳಿಸುತ್ತದೆ. ಮನೆಮನೆ ಕಸ ಸಂಗ್ರಹ, ರಸ್ತೆ ಗುಡಿಸುವುದು, ಕಳೆ ನಿರ್ಮೂಲನೆ,

ಒಳಚರಂಡಿ ಸ್ವಚ್ಛತೆ, ಮುಂತಾದ ಕಾರ್ಯಗಳನ್ನು ಈ ಸಂಸ್ಥೆ ನಿರ್ವಹಿಸುತ್ತದೆ. ಈ ಹಿಂದೆ ಬೇರೆ ಬೇರೆ ಕಂಪೆನಿಗಳು ಏಕಕಾಲದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಪ್ರಸ್ತುತ ಒಂದೇ ಕಂಪೆನಿಗೆ ಹೊರಗುತ್ತಿಗೆ ನೀಡಲಾಗಿದೆ. ಹಿಂದೆ ನಗರಪಾಲಿಕೆಯು ವಾರ್ಷಿಕ 11 ಕೋಟಿ ರೂಪಾಯಿ ವ್ಯಯಿಸುತ್ತಿದ್ದು, ಪ್ರಸ್ತುತ ವಾಹನಗಳಿಗೆ ಜಿ.ಪಿ.ಎಸ್ ಅಳವಡಿಕೆ, ಮನೆಮನೆ ಕಸ ಸಂಗ್ರಹ ಹಾಗೂ 3 ಸಮುದ್ರ ಕಿನಾರೆಗಳ ಸ್ವಚ್ಛತೆಯನ್ನು ನಿರ್ವಹಿಸುವ ಕಾರಣ ವಾರ್ಷಿಕ 17.62 ಕೋಟಿ ರೂಪಾಯಿಯನ್ನು ಕಂಪೆನಿಗೆ ಪಾವತಿಸುತ್ತಿದೆ. ಆದರೆ ನಗರಪಾಲಿಕೆ ಅಥವಾ ಕಂಪೆನಿಗೆ ತ್ಯಾಜ್ಯ ನಿರ್ವಹಣೆಯಿಂದ ಬರುವ ಆದಾಯದ ಬಗ್ಗೆ ಯಾವುದೇ ಪ್ರಸ್ತಾಪವಿಲ್ಲ.

ಸುಮತಿ ವಿ ಆರ್ (2014)[41] ಇವರು ತಮಿಳುನಾಡಿನ ಪಾಂಡಿಚೇರಿ ವ್ಯಾಪ್ತಿಯಲ್ಲಿ ಘನತ್ಯಾಜ್ಯ ನಿರ್ವಹಣೆಯ ಅಭಿವೃದ್ಧಿ ಯೋಜನೆ ನೋಟ ಎನ್ನುವ ಶೀರ್ಷಿಕೆಯಡಿ ಹಿಂದಿನ ತ್ಯಾಜ್ಯ ರಾಶಿಹಾಕುವ ಪ್ರದೇಶಗಳ ಪರಿಸರ ಸಮಸ್ಯೆ, ಸರಿಯಾದ ಭೂಭರ್ತಿ ಪ್ರದೇಶಗಳ ಆಯ್ಕೆ, ಮತ್ತು ಸರಿಯಾದ ತ್ಯಾಜ್ಯ ಸಂಗ್ರಹಣಾ ವಿಧಾನಗಳನ್ನು ಸೂಚಿಸಿರುವುದರ ಬಗ್ಗೆ ಉದ್ದೇಶಗಳನ್ನು ಇಟ್ಟುಕೊಂಡು ಅಧ್ಯಯನ ನಡೆಸಿದ್ದಾರೆ. ಹಳೆಯ ಭೂಭರ್ತಿ ಪ್ರದೇಶಗಳ ಪರಿಸರದಲ್ಲಿ ಅಂತರ್ಜಲ ಮಾಲಿನ್ಯ, ದುರ್ಗಂಧ ಬೀರುವ ಗಾಳಿ ಮುಂತಾದ ಪರಿಸರ ಸಂಬಂಧಿ ಸಮಸ್ಯೆಗಳನ್ನು ಗುರುತಿಸಿದ್ದಾರೆ. ಇವರು ತ್ಯಾಜ್ಯ ಸಾಗಾಟ ಸಮಯವು ವಾಹನದಟ್ಟಣೆ ಕಡಿಮೆ ಇರುವ ಬೆಳಿಗ್ಗೆ 5 ಗಂಟೆಯಿಂದ 7 ಗಂಟೆ ತನಕ, 10 ರಿಂದ 1 ಗಂಟೆ ತನಕ, ಮತ್ತು 2 ರಿಂದ 4 ಇರಬೇಕೆಂದು ತಿಳಿಸಿದ್ದಾರೆ. ಭೂಭರ್ತಿ ಪ್ರದೇಶಗಳಲ್ಲಿ ಉತ್ಪಾದನೆಯಾಗುವ ಮಿಥೇನ್ ಅನಿಲವನ್ನು ವಿದ್ಯುತ್ ಉತ್ಪಾದನೆಯಲ್ಲಿ ಬಳಸಿಕೊಳ್ಳುವಂತೆ ಸಲಹೆಯನ್ನು ನೀಡಿದ್ದಾರೆ.

ವಾಲೀಕಾರ ಪಿ ಡಿ (2014)[42] ಇವರು ತಮ್ಮ ಲೇಖನದಲ್ಲಿ ತ್ಯಾಜ್ಯ ನಿರ್ವಹಣೆಯಲ್ಲಿ ಪ್ರಾಥಮಿಕ/ ಪ್ರೌಢ/ ಕಾಲೇಜುಗಳು ಮಾಡಬೇಕಾದ ಜಾಥಾ, ಕರಪತ್ರ ಹಂಚುವಿಕೆ, ಚರ್ಚಾಗೋಷ್ಠಿ, ಇಕೋಕ್ಲಬ್, ಪ್ರಬಂಧ ಸ್ಪರ್ಧೆ, ಕ್ಷೇತ್ರ ಸಂದರ್ಶನ, ಬೀದಿ ನಾಟಕ ಮುಂತಾದುವುಗಳ ಬಗ್ಗೆ ತಿಳಿಸಿದ್ದಾರೆ. ನಗರಸಭೆ, ಪಟ್ಟಣ ಪಂಚಾಯತಿಗಳು ಕೈಗೊಳ್ಳಬಹುದಾದ ಕಾರ್ಯಗಳನ್ನು ಪಟ್ಟಿಮಾಡಿದ್ದಾರೆ. ನಾಗರಿಕರ ಕರ್ತವ್ಯದ ಬಗ್ಗೆ ಎಚ್ಚರಿಸಿದ್ದಾರೆ. ಸಾರ್ವಜನಿಕ ಕಸದ ತೊಟ್ಟಿಗಳನ್ನು ತೂತಾದ ನೀರಿನ ಟ್ಯಾಂಕ್, ರಟ್ಟಿನ ಡಬ್ಬಿ, ಖಾಲಿ ಡಾಂಬರ್ ಡಬ್ಬಿ ಮುಂತಾದುವುಗಳನ್ನು ಬಳಸಿ ಕಡಿಮೆ ವೆಚ್ಚದಲ್ಲಿ ತಯಾರಿಸಲು ಸಲಹೆ ಮಾಡಿದ್ದಾರೆ. ಹಾಗೆಯೇ ಸಂಘ ಸಂಸ್ಥೆಗಳು ಕೈಗೊಳ್ಳಬಹುದಾದ ಜಾಥಾ, ಗೋಡೆಬರಹ, ಫ್ಲೆಕ್ಸ್ ಅಳವಡಿಕೆ, ಶಿಬಿರಗಳನ್ನು ಹಮ್ಮಿಕೊಳ್ಳುವುದು, ಉಪನ್ಯಾಸ, ಕ್ಷೇತ್ರಕಾರ್ಯ, ಕರಪತ್ರ ಹಂಚುವಿಕೆ ಮುಂತಾದ ಕಾರ್ಯಕ್ರಮಗಳನ್ನು ಲೇಖನದಲ್ಲಿ ತಿಳಿಸಿದ್ದಾರೆ.

ಶಾಲಾ ಕಾಲೇಜುಗಳಲ್ಲಿ ಎನ್.ಸಿ.ಸಿ., ಎನ್.ಎಸ್.ಎಸ್. ಹಾಗೂ ಸ್ಕೌಟ್ಸ್ ಮತ್ತು ಗೈಡ್ ಮುಂತಾದ ಸಂಘಗಳ ಮೂಲಕ ತ್ಯಾಜ್ಯ ನಿರ್ವಹಣೆಯನ್ನು ಯಶಸ್ವಿಗೊಳಿಸಲು ಸಾಧ್ಯ ಎಂದಿದ್ದಾರೆ.

ಉಷಾಕುಮಾರಿ ಎಂ. ಮತ್ತು ಫೆಮಿಲಾ ಡಾರ್ಲಿಂಗ್ (2015)[43] ಇವರ ಅಧ್ಯಯನದಂತೆ, 'ಶೂನ್ಯ ತ್ಯಾಜ್ಯ' ಎಂದರೆ ಎಲ್ಲಾ ತ್ಯಾಜ್ಯಗಳನ್ನು ಸಮರ್ಪಕವಾಗಿ ಬಳಕೆ ಮಾಡುವುದು. ಒಂದು ಅಂದಾಜಿನ ಪ್ರಕಾರ (ತೋಂಪ್ಸನ್ ಎಸ್.ದಿ ಎನ್ವಿರಾನ್‌ಮೆಂಟ್ ಆ್ಯಂಡ್ ಫ್ಯೂಚರ್ ಟ್ರೆಂಡ್ಸ್. ಫಿಲೋಸೋಪಿಕಲ್ ಟ್ರ್ಯಾನ್ಸಾಕ್ಷನ್ಸ್ ಆಫ್ ದಿ ರಾಯಲ್ ಸೊಸೈಟಿ 2009) 28 ಶೇಕಡ ಘನತ್ಯಾಜ್ಯವನ್ನು ಪುನರಾವರ್ತನ ವಿಧಾನದ ಮೂಲಕ ಬಳಸಲಾಗುತ್ತಿದೆ. 15 ಶೇಕಡ ದಹಿಸಲ್ಪಡುತ್ತದೆ, ಉಳಿದ 57 ಶೇಕಡ ನಿಷ್ಪ್ರಯೋಜಕವಾಗಿ ಭೂಭರ್ತಿ ಮಾಡಲಾಗುತ್ತಿದೆ. ತಮಿಳುನಾಡಿನ ಕೊಳಾಚೆಲ್ ಮುನ್ಸಿಪಾಲಿಟಿ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣಾ ಜಾಗೃತಿಯ ಕುರಿತು ನಡೆಸಿದ ಅಧ್ಯಯನದಲ್ಲಿ ಎರಡು ರೀತಿಯಲ್ಲಿ ಪರೀಕ್ಷಿಸಲಾಯಿತು. ಜಾಗೃತಿ ಕಾರ್ಯಕ್ರಮ ನೀಡುವ ಮೊದಲು ಜನರ ಪ್ರತಿಕ್ರಿಯೆ ಹಾಗೂ ನೀಡಿದ ನಂತರದ ಪ್ರತಿಕ್ರಿಯೆ. ಅಧ್ಯಯನದ ಪ್ರಕಾರ ವೀಡಿಯೋ ಮಾಹಿತಿ ಕಾರ್ಯಕ್ರಮವು ಶೂನ್ಯ ತ್ಯಾಜ್ಯ ನಿರ್ವಹಣೆ ಬಗ್ಗೆ ವಯಸ್ಕರಲ್ಲಿ ಹೆಚ್ಚಿನ ಜಾಗೃತಿಯನ್ನು ಮೂಡಿಸಿದೆ. ತ್ಯಾಜ್ಯ ನಿರ್ವಹಣಾ ಶಿಕ್ಷಣದ ಅವಶ್ಯಕತೆಯಿರುವುದನ್ನು ಈ ಅಧ್ಯಯನವು ಗುರುತಿಸಿದೆ. ಅವರ ಆದಾಯ ಮತ್ತು ಶಿಕ್ಷಣಮಟ್ಟ ತ್ಯಾಜ್ಯ ನಿರ್ವಹಣೆಯಲ್ಲಿ ಧನಾತ್ಮಕವಾಗಿ ಕಾರ್ಯ ನಿರ್ವಹಿಸಿರುವುದನ್ನು ಗುರುತಿಸಿದ್ದಾರೆ.

ದಿ ಹಿಂದು (2016)[44] ವರದಿಯಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ನಿವೃತ್ತ ಯೋಧರನ್ನು ಮೂಲದಲ್ಲಿ ತ್ಯಾಜ್ಯ ವಿಭಜನೆಯನ್ನು ಅನುಷ್ಠಾನಗೊಳಿಸುವ ಕಾರ್ಯದಲ್ಲಿ ತೊಡಗಿಸಿಕೊಳ್ಳುವ ನಿರ್ಧಾರಮಾಡಿದೆ. ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡುವುದು ಕಡ್ಡಾಯವಾದರೂ ಅನೇಕ ಮಂದಿ ಈ ನಿಯಮವನ್ನು ಅನುಸರಿಸುತ್ತಿಲ್ಲ. ಇದರಿಂದ ತ್ಯಾಜ್ಯ ನಿರ್ವಹಣಾ ಕಾರ್ಯಕ್ಕೆ ತೊಂದರೆಯುಂಟಾಗುತ್ತದೆ ಹಾಗೂ ಹೆಚ್ಚಿನ ತ್ಯಾಜ್ಯಗಳು ನಿರುಪಯುಕ್ತವಾಗುವ ಕಾರಣ ಭೂಭರ್ತಿ ಮಾಡಬೇಕಾಗುತ್ತದೆ. ತ್ಯಾಜ್ಯ ಸಂಗ್ರಹಿಸುವ ಕಂಪೆನಿಗಳು ಅನೇಕ ಸಲ ಇಂತಹ ನಿರುಪಯುಕ್ತ ತ್ಯಾಜ್ಯಗಳನ್ನು ರಸ್ತೆಗಳಲ್ಲೆ ಚೆಲ್ಲಿ ಬಿಡುತ್ತಾರೆ. ತ್ಯಾಜ್ಯ ನಿರ್ವಹಣಾ ತಜ್ಞ ಎನ್ ಎಸ್ ರಮಾಕಾಂತ್ ಇವರ ಅಧ್ಯಯನದ ಪ್ರಕಾರ ಶೇಕಡ 40ರಷ್ಟು ಪ್ರಮಾಣದ ತ್ಯಾಜ್ಯ ಮಾತ್ರ ಮೂಲದಲ್ಲಿ ವಿಭಜನೆಗೊಳ್ಳುತ್ತದೆ. ಮನೆಮನೆಗಳಲ್ಲಿ ತ್ಯಾಜ್ಯ ವಿಭಜನೆಯನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ನೋಡಿಕೊಳ್ಳುವುದು ಹಾಗೂ ಪೌರ ಕಾರ್ಮಿಕರು/ಸಿಬ್ಬಂದಿಗಳು ಸಂಗ್ರಹ ಮತ್ತು ಸಾಗಾಟ ಸಮಯದಲ್ಲಿ ತ್ಯಾಜ್ಯಗಳನ್ನು ಮಿಶ್ರವಾಗದಂತೆ ನೋಡಿಕೊಳ್ಳುವ ಬಗ್ಗೆ ನಿಯೋಜಿತ ನಿವೃತ್ತ ಯೋಧರು (ತ್ಯಾಜ್ಯ ಶಿಸ್ತು ಪಾಲಕರು) ನೋಡಿಕೊಳ್ಳಲಿದ್ದಾರೆ. ಈ ವರದಿಯ ಪ್ರಕಾರ

ಸದ್ಯಕ್ಕೆ ಈ ಕಾನೂನು ಬೆಂಗಳೂರು ನಗರಕ್ಕೆ ಮಾತ್ರ ಅನ್ವಯಿಸಲಾಗಿದೆ. ಮೂಲದಲ್ಲಿ ತ್ಯಾಜ್ಯ ವಿಭಜನೆಯು ತ್ಯಾಜ್ಯ ನಿರ್ವಹಣೆಯ ಪ್ರಮುಖ ಭಾಗವಾಗಿರುವುದು ಅಧ್ಯಯನಗಳಿಂದ ತಿಳಿದುಬರುತ್ತದೆ. ಎಲ್ಲಾ ಸ್ಥಳೀಯ ಸರಕಾರಗಳು ಮೂಲದಲ್ಲಿ ತ್ಯಾಜ್ಯ ವಿಭಜನೆಯನ್ನು ಕಟ್ಟುನಿಟ್ಟಾಗಿ ಪಾಲಿಸಲು ಕ್ರಮ ಕೈಗೊಳ್ಳಲು ಸಾಧ್ಯವೇ ಎಂದು ಅಧ್ಯಯನದಲ್ಲಿ ವಿಶ್ಲೇಷಿಸಲಾಗುವುದು.

ಸಂಗೀತಾ ಸಾಹ್ನಿ (2016)[45] ಇವರು ಮಧ್ಯಪ್ರದೇಶದ ಗ್ವಾಲಿಯರ್ ನಗರದಲ್ಲಿ ನಡೆಸಿದ ಅಧ್ಯಯನದಲ್ಲಿ ತ್ಯಾಜ್ಯ ನಿರ್ವಹಣೆಯ ವಾಣಿಜ್ಯ ಅಂಶಗಳ ಬಗ್ಗೆ ವಿಶ್ಲೇಷಣೆ ಮಾಡಿದ್ದಾರೆ. ಶೇಕಡ 60.6ರಷ್ಟು ಪ್ರತಿಕ್ರಿಯೆದಾರರ ಅಭಿಪ್ರಾಯದಂತೆ ಕೈಗಾರಿಕಾ ಸ್ಥಳದ ಒಳಗೆ ಮಾಲಿಕರೇ ತ್ಯಾಜ್ಯ ನಿರ್ವಹಣೆಗೆ ವ್ಯವಸ್ಥೆ ಮಾಡಿಕೊಳ್ಳಬೇಕು. ಶೇಕಡ 58.4 ಜನರು ಮುನ್ಸಿಪಾಲಿಟಿಯೇ ನದಿಗಳನ್ನು, ಒಳಚರಂಡಿಗಳನ್ನು ಸ್ವಚ್ಛಗೊಳಿಸಬೇಕೆಂದು ಅಭಿಪ್ರಾಯ ಪಡುತ್ತಾರೆ. ಹಾಗೆಯೇ ಸತ್ತ ಪ್ರಾಣಿಗಳನ್ನು ನಗರ ಸಂಸ್ಥೆಯೇ ವಿಲೇವಾರಿ ಮಾಡಬೇಕು, ನಗರ ಸಂಸ್ಥೆಯು ತಮ್ಮ ಸಿಬ್ಬಂದಿಗಳಿಗೆ ಸೂಕ್ತ ತರಬೇತಿ ಕಾರ್ಯಕ್ರಮವನ್ನು ನಡೆಸಬೇಕು, ಸಾಕಷ್ಟು ಸಿಬ್ಬಂದಿಗಳನ್ನು ಕ್ಲಪ್ತ ಸಮಯದಲ್ಲಿ ನೇಮಕ ಮಾಡಬೇಕು, ಸಾರ್ವಜನಿಕರಲ್ಲಿ ಜನಜಾಗೃತಿಯನ್ನು ನಿರಂತರವಾಗಿ ಮೂಡಿಸುತ್ತಿರಬೇಕು ಎಂದು ಸಲಹೆಗಳನ್ನು ನೀಡಿದ್ದಾರೆ. ಸಿಬ್ಬಂದಿಗಳಿಗೆ ಸಾಕಷ್ಟು ತರಬೇತಿ ಇಲ್ಲದಿರುವುದನ್ನು ಅಧ್ಯಯನವು ಗುರುತಿಸಿದೆ. ಸಾಕಷ್ಟು ತ್ಯಾಜ್ಯ ಸಾಗಾಟ ವಾಹನಗಳು ಇಲ್ಲದಿರುವುದು ಹಾಗೂ ಸಂಗ್ರಹ ಹಾಗೂ ವಿಲೇವಾರಿಗೆ ಸಂಬಂಧಿಸಿ ಉಪಕರಣಗಳ ಕೊರತೆಯಿರುವುದನ್ನು ಗುರುತಿಸಿದ್ದಾರೆ.



## 2.2. ತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳ ಕುರಿತಾದ ಸಾಹಿತ್ಯ ವಿಮರ್ಶೆ

ರೋಬರ್ಟ್ ಜೆ ಎಂಡರ್ಸನ್ (1964)[46] ಪ್ರಕಾರ ತ್ಯಾಜ್ಯವನ್ನು ಬಯಲು ಪ್ರದೇಶಗಳಲ್ಲಿ ವಿಲೇವಾರಿ ಮಾಡುವುದರಿಂದ ಅನೇಕ ಆರೋಗ್ಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಇಲಿ ಮತ್ತು ನೊಣಗಳಿಂದ ಅನೇಕ ಸಾಂಕ್ರಾಮಿಕ ರೋಗಗಳು ಬರುತ್ತವೆ. ತ್ಯಾಜ್ಯವನ್ನು ದಹಿಸು ವುದರಿಂದುಂಟಾಗುವ ಅಪಾಯಗಳನ್ನು ಸಹ ಗುರುತಿಸಿದ್ದಾರೆ.

ತೋಮಸ್ ವಾನ್ ಡೈಕೆ (1972)[47]ಯವರು ತೃತೀಯ ಮಾಲಿನ್ಯ ಎನಿಸಿಕೊಂಡಿರುವ ಘನತ್ಯಾಜ್ಯವು ಹೆಚ್ಚಾಗಲು ಅನೇಕ ಕಾರಣಗಳಿವೆ ಎಂದಿದ್ದಾರೆ. ಇವತ್ತಿನ ಹೆಚ್ಚಿನ ವಸ್ತುಗಳು ಒಂದು ಸಲ ಉಪಯೋಗಿಸಿ ಬಿಸಾಡುವಂತಹದು. ಪೊಟ್ಟಣದಲ್ಲಿ ಕಟ್ಟಿದ (ಪ್ಯಾಕೇಜ್ ಕನ್ಸಂಷನ್) ಆಹಾರ ವಸ್ತುಗಳನ್ನು ಉಪಯೋಗಿಸುವ ಪ್ರಮಾಣ ಹೆಚ್ಚಾಗುತ್ತಿದೆ. ಇದರಿಂದಾಗಿ ಅಮೇರಿಕಾದಲ್ಲಿ

ಪ್ಲಾಸ್ಟಿಕ್ ಕೈಗಾರಿಕೆಯು ಇನ್ನಷ್ಟು ವಿಸ್ತರಿಸಿಕೊಂಡಿದೆ. ಮಣ್ಣಿನಲ್ಲಿ ತ್ಯಾಜ್ಯ ಹೂಳುವಿಕೆಯ ವಿಧಾನಕ್ಕೆ ಮೂಲಭೂತ ವಿರೋಧ ಏಕೆಂದರೆ ಅದು ಪ್ರಾಕೃತಿಕ ಸಂಪನ್ಮೂಲಗಳನ್ನು ನಾಶಗೊಳಿಸುತ್ತದೆ. ಆದರೂ ಇದು ಒಂದು ರೀತಿಯ ಅತೀ ಕಡಿಮೆ ವೆಚ್ಚದ ತ್ಯಾಜ್ಯ ವಿಲೇವಾರಿ ವಿಧಾನವಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಶುಕ್ಲ ಎಸ್ ಕೆ ಮತ್ತು ಶ್ರೀವಾಸ್ತವ (1992)[48]ಇವರು ಸಾವಯವ ತ್ಯಾಜ್ಯದಿಂದ ಶಕ್ತಿ ಉತ್ಪಾದನೆಯ ವಿವಿಧ ವಿಧಾನಗಳನ್ನು ದಾಖಲಿಸಿದ್ದಾರೆ. ಒಂದೆಡೆ ಕಲ್ಲಿದ್ದಲು ಮತ್ತು ಅಣು ವಿದ್ಯುತ್ ಉತ್ಪಾದನೆಯಲ್ಲಿ ಅಪಾಯಗಳು ಹೆಚ್ಚಾಗಿದ್ದು, ಮತ್ತೊಂದೆಡೆ ದಿನೇ ದಿನೇ ವಿದ್ಯುತ್ ಬೇಡಿಕೆ ಹೆಚ್ಚಾಗುತ್ತಿದೆ. ಸಾವಯವ ತ್ಯಾಜ್ಯಗಳನ್ನು ಬಳಸಿಕೊಂಡು ದಹನಕ್ರಿಯೆ, ಹೈಡ್ರೋ ಗ್ಯಾಸಿಫಿಕೇಶನ್ ಪೈರೊಲಿಸಿಸ್, ಬಯೋಕನ್ವರ್ಶನ್–ಫರ್ಮಂಟೇಶನ್ ಮತ್ತು ದ್ರವ ಇಂಧನ ಪರಿವರ್ತನೆ ವಿಧಾನಗಳ ಮೂಲಕ ಸುರಕ್ಷಿತ ರೀತಿಯಲ್ಲಿ ಶಕ್ತಿ ಉತ್ಪಾದನೆ ಸಾಧ್ಯ. ಇದರೊಂದಿಗೆ ತ್ಯಾಜ್ಯ ಸಂಬಂಧಿ ನಿರ್ಮೂಲನ ಸಮಸ್ಯೆಗಳೂ ಪರಿಹಾರವಾಗುತ್ತವೆ ಎಂದಿದ್ದಾರೆ.

ಶುಕ್ಲ ಎಸ್ ಕೆ ಮತ್ತು ಶ್ರೀ ವಾಸ್ತವ (1992)[49] ಇವರ ವೇಸ್ಟ್ ಮ್ಯಾನೇಜ್‌ಮೆಂಟ್ ಎಂಡ್ ಕಂಟ್ರೋಲ್ ಎನ್ನುವ ಸಂಪಾದಿತ ಕೃತಿಯಲ್ಲಿ ಹೆಚ್ಚುತ್ತಿರುವ ಶಕ್ತಿಯ ಮೂಲಗಳ ಬೇಡಿಕೆ ಮತ್ತು ದಿನೇ ದಿನೇ ಕಡಿಮೆಯಾಗುತ್ತಿರುವ ಪೆಟ್ರೋಲಿಯಂ ಮತ್ತು ನೈಸರ್ಗಿಕ ಅನಿಲಗಳ ಕೊರತೆ ಹೆಚ್ಚುತ್ತಿರುವುದಕ್ಕೆ ಪರ್ಯಾಯವಾಗಿ ಸಾವಯವ ತ್ಯಾಜ್ಯಗಳನ್ನು ಶಕ್ತಿಯ ಉತ್ಪಾದನೆಯಲ್ಲಿ ಬಳಸಿಕೊಳ್ಳು ವುದರಿಂದ ಪರಿಸರ ಮಾಲಿನ್ಯವನ್ನೂ ತಡೆಗಟ್ಟಲು ಅನುಕೂಲವಾಗುತ್ತದೆ ಎಂದಿದ್ದಾರೆ.

ಹ್ಯೂಸ್‌ಮನ್ ಮಾರಿಕ್ ಮತ್ತು ವೇಲು ಜೈ ಎಸ್. (1994)[50] ಬೆಂಗಳೂರು ನಗರದಲ್ಲಿ ತ್ಯಾಜ್ಯ ನಿರ್ವಹಣೆಯ ಪ್ರಮುಖ ಅಡೆತಡೆಗಳೆಂದರೆ ತ್ಯಾಜ್ಯ ನಿರ್ವಹಣೆಯ ಜವಾಬ್ದಾರಿಯನ್ನು ಹೊಂದಿರುವ ಆರೋಗ್ಯ ಇಲಾಖೆಯಲ್ಲಿ ಸಾಕಷ್ಟು ಸಿಬ್ಬಂದಿಗಳ ಕೊರತೆ, ಸಾಕಷ್ಟು ಹಣಕಾಸಿನ ಪೂರೈಕೆ ಇಲ್ಲದಿರುವುದು, ನಗರದ ವಿಸ್ತರಣೆಗೆ ಸಂಬಂಧಿಸಿ ಮುನ್ಸಿಪಾಲಿಟಿ ಮತ್ತು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಹೊಂದಾಣಿಕೆ ಇಲ್ಲದಿರುವುದು, ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ಅತ್ಯಾಧುನಿಕ ತಂತ್ರಜ್ಞಾನವನ್ನು ಅಳವಡಿಸದಿರುವುದು ಹಾಗೂ ಖಾಸಗಿ ಕ್ಷೇತ್ರ ಮತ್ತು ಸ್ಥಳೀಯ ಸಂಸ್ಥೆಗಳ ನಡುವೆ ಸಹಕಾರ ಹಾಗೂ ಜ್ಞಾನ ವಿನಿಮಯದ ಕೊರತೆ ಕಂಡುಬರುತ್ತದೆ. ಕೇವಲ ಆರೋಗ್ಯ ಇಲಾಖೆ ಮಾತ್ರ ಎಲ್ಲಾ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವಿಲ್ಲ. ಖಾಸಗಿ ಸಹಭಾಗಿತ್ವ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಬಾಗವಹಿಸುವಿಕೆ ಅಗತ್ಯ ಜೊತೆಗೆ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸಬೇಕಾಗಿದೆ.

ಬೌದ್ ಎಸಾ ಮತ್ತು ಶೆಂಕ್ ಹನ್ಸ್ (1994)[51] ವರ್ಷದಿಂದ ವರ್ಷಕ್ಕೆ ತಲಾವಾರು ತ್ಯಾಜ್ಯ ಪ್ರಮಾಣ ಏರುತ್ತಲೇ ಇದೆ. ನಿರವಯವ (ಒಣಕಸ) ತ್ಯಾಜ್ಯಗಳನ್ನು ಬಿಸಾಡುವ ಪ್ರಮಾಣವೂ ಹೆಚ್ಚುತ್ತಿದೆ. ಸಪಾಯಿ ಕರ್ಮಚಾರಿಗಳು ತ್ಯಾಜ್ಯ ಸಂಗ್ರಹದ ಸಮಯದಲ್ಲಿ ತಮ್ಮ ಆರೋಗ್ಯದ ಕಡೆಗೆ ಗಮನಹರಿಸುವುದಿಲ್ಲ. ಬರಿಗೈಯಲ್ಲಿ ತ್ಯಾಜ್ಯಗಳನ್ನು ಲಾರಿಗಳಿಗೆ ತುಂಬಿಸುವುದು, ಮುಖಕ್ಕೆ ಮುಸುಕು ಧರಿಸದಿರುವುದು, ತ್ಯಾಜ್ಯ ಎತ್ತಲು ಸರಿಯಾದ ಉಪಕರಣಗಳ ಕೊರತೆ ಇತ್ಯಾದಿ ತ್ಯಾಜ್ಯ ಸಂಗ್ರಹ ಹಂತದಲ್ಲಿ ಕಂಡುಬರುತ್ತದೆ.ಮಕ್ಕಳನ್ನು ಈ ಕೆಲಸದಲ್ಲಿ ತೊಡಗಿಸಿಕೊಳ್ಳುವುದನ್ನು ಅವರ ಶಿಕ್ಷಣ ಹಾಗೂ ಆರೋಗ್ಯದ ಕಾರಣದಿಂದ ನಿಷೇಧಿಸಬೇಕು ಎಂದಿದ್ದಾರೆ.

ಬೌದ್ ಇಸ್ ಮತ್ತು ಶೆಂಕ್ ಹನ್ಸ್ (1994)[52] ಮೂಲದಲ್ಲಿ ತ್ಯಾಜ್ಯ ವಿಭಜನೆ ಮತ್ತು ತ್ಯಾಜ್ಯ ಪುನರುತ್ಪಾದನೆ ತ್ಯಾಜ್ಯದ ಪ್ರಮಾಣವನ್ನು ಕಡಿಮೆ ಮಾಡುತ್ತದೆ. ಅಂದರೆ ತ್ಯಾಜ್ಯ ಸಂಗ್ರಹದ ವೆಚ್ಚ ಮತ್ತು ಪರಿಸರ ಹಾನಿಯನ್ನು ಕಡಿಮೆಗೊಳಿಸುತ್ತದೆ. ಇದರೊಂದಿಗೆ ಪ್ರಾಕೃತಿಕ ಸಂಪನ್ಮೂಲಗಳ ದುರ್ಬಳಕೆಯನ್ನು ಕಡಿತಗೊಳಿಸುತ್ತದೆ ಎಂದು ತಿಳಿಸಿದ್ದಾರೆ.

ಡೇವಿಡ್ ಎನ್ ಬೀಡೆ ಮತ್ತು ಡೇವಿಡ್ ಇ ಬ್ಲೂಮ್ (1995)[53] ಇವರು ತ್ಯಾಜ್ಯ ಸೃಷ್ಟಿ ಮತ್ತು ನಿರ್ವಹಣೆಯನ್ನು ಆರ್ಥಿಕ ಅಂಶಗಳ ದೃಷ್ಟಿಕೋನದಲ್ಲಿ ಪರೀಕ್ಷಿಸಿದ್ದಾರೆ. ಕೈಗಾರಿಕಾ ಪ್ರಧಾನ ರಾಷ್ಟ್ರಗಳೇ ಬಹುಪಾಲು ತ್ಯಾಜ್ಯ ಉತ್ಪಾದಿಸುವ ರಾಷ್ಟ್ರಗಳಾಗಿವೆ. ತಲಾದಾಯ ಮತ್ತು ತ್ಯಾಜ್ಯ ಸೃಷ್ಟಿಗೆ ನೇರ ಸಂಬಂಧವಿದೆ. ಆದರೆ ತ್ಯಾಜ್ಯ ಸೃಷ್ಟಿ ಮತ್ತು ಜನಸಂಖ್ಯೆ ಗಾತ್ರಕ್ಕೆ ಯಾವುದೇ ಸಂಬಂಧವಿಲ್ಲದಿರುವುದನ್ನು ಅಧ್ಯಯನದಲ್ಲಿ ಕಂಡುಕೊಂಡಿದ್ದಾರೆ. ಆಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ತ್ಯಾಜ್ಯ ನಿರ್ವಹಣಾ ವಿಧಾನಗಳು ಅಸಮರ್ಪಕವಾಗಿವೆ. ಪರಿಸರ ಮತ್ತು ಆರೋಗ್ಯದ ಮೇಲೆ ದುಷ್ಪರಿಣಾಮ ಬೀರಿವೆ. ತ್ಯಾಜ್ಯ ಪ್ರಮಾಣವು ಪ್ರತಿ ವರ್ಷ ಸರಾಸರಿ 2.7 ಶೇಕಡದಷ್ಟು ಹೆಚ್ಚಾಗಬಹುದೆಂದು ಅಧ್ಯಯನದಿಂದ ತಿಳಿದು ಬಂದಿದೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ತ್ಯಾಜ್ಯವನ್ನು ಸಂಪನ್ಮೂಲವಾಗಿ ಪುನರಾವರ್ತನೆ ವಿಧಾನದಲ್ಲಿ ಕೇವಲ ಅಸಂಪ್ರಾದಾಯಿಕ ಕ್ಷೇತ್ರ (ಚಿಂದಿ ಹೆಕ್ಕುವವರು) ಮಾತ್ರ ಬಳಸಿಕೊಳ್ಳುತ್ತಿದೆ. ಗೊಬ್ಬರ, ಇಂಧನ ಇತ್ಯಾದಿಗಳಲ್ಲಿ ಕಡಿಮೆ ಬಳಕೆಯಾಗುತ್ತಿದೆ. ಆದಾಯವು ಶೇಕಡ 1ರ ಪ್ರಮಾಣದಲ್ಲಿ ಹೆಚ್ಚಾದಾಗ ತ್ಯಾಜ್ಯ ಉತ್ಪಾದನಾ ಪ್ರಮಾಣವು 0.34 ಶೇಕಡ ಹೆಚ್ಚಾಗುತ್ತಿದೆ ಎಂದು ಅಧ್ಯಯನದಲ್ಲಿ ಕಂಡುಬಂದಿದೆ. ಪ್ರತಿನಿತ್ಯ ಉತ್ಪಾದನೆಯಾಗುವ ತಲಾವಾರು ತ್ಯಾಜ್ಯದ ಪ್ರಮಾಣವು ಕಡಿಮೆ ಆದಾಯವಿರುವ ರಾಷ್ಟ್ರಗಳಲ್ಲಿ, ಹೆಚ್ಚು ಆದಾಯ ಹೊಂದಿರುವ ರಾಷ್ಟ್ರಗಳಿಗಿಂತ ಕಡಿಮೆ ಇರುವುದು ಕಂಡುಬಂದಿದೆ. ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಆಹಾರ ತ್ಯಾಜ್ಯದ ಪ್ರಮಾಣ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗಿಂತ ಹೆಚ್ಚಿದೆ, ಕಾರಣ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳು ಹೆಚ್ಚು ಸಂಸ್ಕರಿಸುವ ಆಹಾರವನ್ನು ಉಪಯೋಗಿಸುತ್ತಿವೆ.

ಆದರೆ ರಟ್ಟು, ದಿನಪತ್ರಿಕೆ, ನಿಯತಕಾಲಿಕೆ, ಕಛೇರಿ ಕಾಗದ ಇತ್ಯಾದಿಗಳ ಪ್ರಮಾಣ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಹೆಚ್ಚಿರುವುದು ಕಂಡುಬಂದಿದೆ.

ರವಿಚಂದ್ರನ್ ಮತ್ತು ಪೂಂಗೊಡಿ (1999)[54] ತಮ್ಮ ಲೇಖನದಲ್ಲಿ ಕರ್ನಾಟಕ ಸರ್ಕಾರವು ಸಂಪೂರ್ಣವಾಗಿ ಪ್ಲಾಸ್ಟಿಕನ್ನು ನಿಷೇಧಿಸುವ ಬಗ್ಗೆ ಚಿಂತನೆ ನಡೆಸುತ್ತಿದೆ. ತ್ಯಾಜ್ಯಗಳ ಪುನರುತ್ಪಾದನೆಯು ತ್ಯಾಜ್ಯ ನಿರ್ವಹಣೆಯ ಒಂದು ಉತ್ತಮ ವಿಧಾನ. ಇದರಿಂದ ತ್ಯಾಜ್ಯ ಪ್ರಮಾಣವು ಕಡಿಮೆಯಾಗುವುದರೊಂದಿಗೆ, ಪ್ರಾಕೃತಿಕ ಸಂಪನ್ಮೂಲಗಳ ಉಳಿತಾಯ ಮಾಡಿದಂತಾಗುತ್ತದೆ ಹಾಗೂ ಪರಿಸರ ಮಾಲಿನ್ಯವನ್ನು ತಡೆಗಟ್ಟಬಹುದು. ನಗರಗಳಲ್ಲಿ ತ್ಯಾಜ್ಯಗಳನ್ನು ರಾಶಿಹಾಕಲು ಸ್ಥಳಾವಕಾಶವೂ ಕಡಿಮೆ ಇರುವುದರಿಂದಲೂ ಇದು ಉತ್ತಮ ವಿಧಾನ. ಚಿಂದಿ ಹೆಕ್ಕುವವರ ಮೂಲಕವೂ ಈ ಕಾರ್ಯ ನಡೆಯುತ್ತದೆ. ಅವರನ್ನು ಪರಿಸರ–ಉದ್ಯಮಿಗಳೆಂದು ಕರೆಯಬಹುದು ಎಂದಿದ್ದಾರೆ.

ಯೆಡ್ಲಾ ಸುಧಾಕರ್ ಮತ್ತು ಪಾರಿಖ್ ಜ್ಯೋತಿ ಕೆ. (2000)[56] ಭೂಭರ್ತಿಯಿಂದ ಅನಿಲ ಉತ್ಪಾದನೆ ಮತ್ತು ವೆಚ್ಚ–ಲಾಭ ವಿಶ್ಲೇಷನೆ ಉದ್ದೇಶವಿಟ್ಟುಕೊಂಡು ಭಾರತದ ಮುಂಬೈ, ಸೂರತ್, ಕೊಲ್ಕತ್ತಾ, ಸೋಲಾಪುರ ಮತ್ತು ಅಮರಾವತಿ ನಗರಗಳಲ್ಲಿ ನಡೆಸಿದ ಅಧ್ಯಯನಗಳಲ್ಲಿ ಘನತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಗುರುತಿಸಿದ್ದಾರೆ. ತ್ಯಾಜ್ಯ ವಿಭಜನೆ ಸರಿಯಾಗಿ ಆಗದ ಕಾರಣ ತ್ಯಾಜ್ಯಗಳನ್ನು ಪುನರ್‌ಬಳಕೆ ಹಾಗೂ ಪುನರುತ್ಪಾದನೆ ಮಾಡಲು ಸಾಧ್ಯವಾಗುವುದಿಲ್ಲ. ಹೆಚ್ಚಿನ ನಗರಗಳು ಸ್ವಚ್ಛತೆಯನ್ನು ಕಾಪಾಡಿಕೊಳ್ಳದ ಕಾರಣ ವಿದೇಶಿ ಬಂಡವಾಳಗಾರರನ್ನು ಆಕರ್ಷಿಸುತ್ತಿಲ್ಲ. ತಾಪಮಾನ ಹೆಚ್ಚಿರುವ ಪ್ರದೇಶಗಳಿಗೆ ಮಾತ್ರ ಭೂಭರ್ತಿ ವಿಧಾನ ಅನುಕೂಲಕರ ವಾಗಿದೆ. ಭೂಭರ್ತಿಯಿಂದ ಹೊರಸೂಸುವ ಅನಿಲದ ಬಳಕೆಯ ಕುರಿತು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಇದರಿಂದ ಪರಿಸರ ಮಾಲಿನ್ಯ ಕಡಿಮೆಯಾಗುತ್ತದೆ.ಭೂಪ್ರದೇಶದ ಬಳಕೆ ಕಡಿಮೆಯಾಗುತ್ತದೆ. ಪರ್ಯಾಯ ಇಂಧನದ ವ್ಯವಸ್ಥೆ, ಲೀಚೆಟ್ ಪ್ರಮಾಣ ಕಡಿಮೆಯಾಗುವುದರಿಂದ ಜಲಮಾಲಿನ್ಯವನ್ನು ಹೋಗಲಾಡಿಸುತ್ತದೆ ಮತ್ತು ಹಸಿರುಮನೆ ಪರಣಾಮವನ್ನು ಬಗೆಹರಿಸುತ್ತದೆ. ಅಮೇರಿಕದಲ್ಲಿ ಹೆಚ್ಚಿನ ಭೂಭರ್ತಿ ಪ್ರದೇಶಗಳಲ್ಲಿ ಅನಿಲ ತಯಾರಿಕಾ ಘಟಕಗಳನ್ನು ಸ್ಥಾಪಿಸಲಾಗಿದೆ. ಭಾರತದ ಸಮಶೀತೋಷ್ಣ ಪ್ರದೇಶಗಳೂ ಈ ವಿಧಾನಕ್ಕೆ ಇನ್ನೂ ಹೆಚ್ಚು ಅನುಕೂಲಕರವಾಗಿವೆ.

ಸಮೀರ್‌ದಾಸ್ ಟಿ. (2002)[56]ರಲ್ಲಿ ಕ್ಯಾಲಿಕಟ್ ನಗರಪಾಲಿಕೆಯಲ್ಲಿ ತ್ಯಾಜ್ಯ ನಿರ್ವಹಣೆಯ ಔಪಚಾರಿಕ ಮತ್ತು ಅನೌಪಚಾರಿಕ ಆರ್ಥಿಕ ಸ್ಥಿತಿಗತಿ ಕುರಿತು ನಡೆಸಿರುವ ಅಧ್ಯಯನದಲ್ಲಿ ತ್ಯಾಜ್ಯನಿರ್ವಹಣೆ ವೆಚ್ಚದ ಕುರಿತು ವಿಶ್ಲೇಷಿಸಿದ್ದಾರೆ. ಹಾಗೆಯೇ ತ್ಯಾಜ್ಯ ನಿರ್ವಹಣೆ ವಿಧಾನವು

ಸೃಷ್ಟಿಸುವ ಉದ್ಯೋಗವಕಾಶಗಳನ್ನು ಗುರುತಿಸಿದ್ದಾರೆ. ಈ ಅಧ್ಯಯನದ ಪ್ರಕಾರ ಪ್ರತೀ ಟನ್ ತ್ಯಾಜ್ಯ ನಿರ್ವಹಣೆಯ ವೆಚ್ಚ ರೂ.1,012.22. ಆದರೆ ಈ ಅಧ್ಯಯನದಲ್ಲಿ ಪ್ರತೀ ಟನ್ ತ್ಯಾಜ್ಯದ ಸರಾಸರಿ ಆದಾಯದ ವಿಶ್ಲೇಷಣೆಯು ನಡೆದಿಲ್ಲ. ಅನೌಪಚಾರಿಕ ಘನತ್ಯಾಜ್ಯ ನಿರ್ವಹಣಾ ಕ್ಷೇತ್ರವು ಸಾವಿರಾರು ಜನರಿಗೆ ನಗರಪಾಲಿಕೆ ವ್ಯಾಪ್ತಿಯಲ್ಲಿ ಉದ್ಯೋಗವಕಾಶ ಒದಗಿಸಿರುವುದನ್ನು ಅಧ್ಯಯನವು ತಿಳಿಸಿದೆ.

ಚಂದೋರ್ಕರ್ ವಿ.ಜಿ. ಮತ್ತು ನಾಗೋಬ ಬಿ.ಎಸ್. (2003)[57] ಚಂದೋರ್ಕರ್ ಮತ್ತು ರತ್ನಮ್ ಎ.ವಿ ಇವರು ತ್ಯಾಜ್ಯ ಸಂಗ್ರಹ, ವಿಭಜನೆ ಮತ್ತು ವಿಲೇವಾರಿಗೆ ಸಂಬಂಧಿಸಿ ಆಸ್ಪತ್ರೆಗಳ ವ್ಯವಸ್ಥೆಗಳ ಕುರಿತು ನಡೆಸಿದ ಅಧ್ಯಯನದ ಪ್ರಕಾರ ತ್ಯಾಜ್ಯ ವಿಭಜನೆಯು ತ್ಯಾಜ್ಯ ಉತ್ಪಾದನಾ ಪ್ರಮಾಣವನ್ನು ಕಡಿಮೆ ಮಾಡುತ್ತದೆ ಹಾಗೂ ಸರಿಯಾದ ನಿರ್ವಹಣೆಗೆ ಸಹಾಯಕವಾಗುತ್ತದೆ. ಒಂದು ವೇಳೆ ರೋಗಾಣು ಮಿಶ್ರಿತ ತ್ಯಾಜ್ಯವು ಇತರ ತ್ಯಾಜ್ಯಗಳೊಂದಿಗೆ ಬೆರೆತರೆ ಇಡೀ ತ್ಯಾಜ್ಯವು ಮಲೀನವಾಗುತ್ತದೆ ಮತ್ತು ನಿರುಪಯೋಗವಾಗುತ್ತದೆ. ಆಸ್ಪತ್ರೆಯ ಇತರ ತ್ಯಾಜ್ಯಗಳನ್ನು ರೋಗಾಣು ಮಿಶ್ರಿತ ತ್ಯಾಜ್ಯಗಳಿಂದ ಪ್ರತ್ಯೇಕಿಸಿದರೆ ತ್ಯಾಜ್ಯ ನಿರ್ವಹಣೆಯು ಪರಿಣಾಮಕಾರಿಯಾದೀತು. ಇದಕ್ಕಾಗಿ ವಿವಿಧ ಬಣ್ಣಗಳ ಗುರುತಿನ ಕಸದ ತೊಟ್ಟಿಗಳನ್ನು ಅಳವಡಿಸಬೇಕು. ಹಾಗೆಯೇ ಅತ್ಯಂತ ಅಪಾಯಕಾರಿ ಲೋಹ ಮತ್ತು ರಾಸಾಯನಿಕ ತ್ಯಾಜ್ಯಗಳನ್ನು ಬೇರೆಯೇ ಸಂಗ್ರಹ ಮಾಡಬೇಕು. ಈ ಎಲ್ಲಾ ತ್ಯಾಜ್ಯಗಳನ್ನು ನಿರ್ವಹಿಸುವಾಗ ಆರೋಗ್ಯಕ್ಕೆ ಹಾನಿಯಾಗದ ರೀತಿಯಲ್ಲಿ ಜಾಗರೂಕರಾಗಿರಬೇಕು.

ದಮೀಜ ಎಸ್ (2005)[58] ಅಧ್ಯಯನದಲ್ಲಿ ಕಂಡುಕೊಂಡಂತೆ ಅಸಮರ್ಪಕ ತ್ಯಾಜ್ಯ ವಿಲೇವಾರಿಯು ಜಲಮಾಲಿನ್ಯವನ್ನು ಹೆಚ್ಚಿಸುತ್ತದೆ ಮತ್ತು ಬೆಳೆಗಳಿಗೆ ಹಾನಿಯನ್ನುಂಟು ಮಾಡುತ್ತದೆ. ಜಲಮಾಲಿನ್ಯವು ಮನುಷ್ಯರಿಗೆ, ಜಲಚರಗಳಿಗೆ ಹಾಗೂ ಇತರ ಪ್ರಾಣಿಪಕ್ಷಿಗಳಿಗೂ ದುಷ್ಪರಿಣಾಮ ವನ್ನುಂಟುಮಾಡುತ್ತದೆ.

ರಾಜಗೋಪಾಲನ್ ಪಿ (2005)[59] ಇವರ ಅಧ್ಯಯನದಲ್ಲಿ ಕಂಡುಬಂದಂತೆ ಯದ್ವಾತದ್ವಾ ತ್ಯಾಜ್ಯ ನಿರ್ವಹಣೆಯಿಂದ ಅನೇಕ ಪರಿಸರ ಸಂಬಂಧಿ ತೊಂದರೆಗಳುಂಟಾಗುತ್ತವೆ. ಭಾರತದ ಶೇಕಡ 70 ರಷ್ಟು ನಗರಗಳಲ್ಲಿ ಸರಿಯಾದ ತ್ಯಾಜ್ಯ ವಿಲೇವಾರಿ ಸೌಕರ್ಯಗಳಿಲ್ಲ. ರಸ್ತೆಗಳಲ್ಲೇ ತ್ಯಾಜ್ಯ ಹರಡಿಕೊಂಡಿರುತ್ತದೆ. ಚರಂಡಿಗಳು ತ್ಯಾಜ್ಯಗಳಿಂದ ತುಂಬಿ ತ್ಯಾಜ್ಯ ನೀರು ಸರಿಯಾಗಿ ಹರಿದು ಹೋಗದೆ ಕೊಳಚೆ ಹೆಚ್ಚಾಗುತ್ತಿದೆ. ಕೆಟ್ಟವಾಸನೆ ಹೊರಸೂಸುವ ತ್ಯಾಜ್ಯ ನೀರು ಹರಿದು ಹೋಗುವ ತೋಡುಗಳು ಸಾಮಾನ್ಯವಾಗಿ ಕಂಡುಬರುತ್ತವೆ.

ರಾಮಚಂದ್ರ ಟಿ.ವಿ (2006)[60] ಇವರು ಸಮಗ್ರ ತ್ಯಾಜ್ಯ ನಿರ್ವಹಣೆ(ಇಂಟಿಗ್ರೇಟೆಡ್ ವೇಸ್ಟ್ ಮೆನೇಜ್‌ಮೆಂಟ್) ಬಗ್ಗೆ ಪ್ರಸ್ತಾಪಿಸುತ್ತಾ, ನಿರ್ವಹಣೆಯ ಪರಿಸರ, ಆರ್ಥಿಕ ಮತ್ತು ಸಾಮಾಜಿಕವಾಗಿ ಸಹ್ಯವಾಗಿರಬೇಕು ಮತ್ತು ಸಮಗ್ರವಾಗಿರಬೇಕು, ಮಾರುಕಟ್ಟೆ ಆಧಾರಿತವಾಗಿರಬೇಕು, ಬದಲಾವಣೆಗೆ ಅವಕಾಶವಿರಬೇಕು ಮತ್ತು ಸ್ಥಳೀಯ ಮಟ್ಟದಲ್ಲಿ ಕಾರ್ಯ ನಿರ್ವಹಿಸುವಂತಿರಬೇಕು. ಇದಕ್ಕಾಗಿ 5 ಪಿ (5 P)ಗಳ ಗಮನಹರಿಸಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ. ಅವುಗಳೆಂದರೆ 1. ಯೋಜನೆ (Plan) 2. ಬೆಲೆ (Price)3. ಪ್ರಚಾರ (Publicity) 4. ರಾಜಕೀಯ ಬೆಂಬಲ (Political Support) ಮತ್ತು 5. ಅವಿರತ (Perservarence) ಪರಿಶ್ರಮ. ತ್ಯಾಜ್ಯ ನಿರ್ವಹಣೆಯಲ್ಲಿ ಸ್ಥಳೀಯ ಸಂಸ್ಥೆಗಳು ಇವುಗಳನ್ನು ಅಳವಡಿಸಿಕೊಳ್ಳುವುದರ ಅಗತ್ಯವನ್ನು ಒತ್ತಿ ಹೇಳಿದ್ದಾರೆ.

ಸಿನ್ಹಾ ಉದಯಪ್ರಕಾಶ್ (2007)[61] ನ್ಯಾಷನಲ್ ಎನ್ವಾಯರ್‌ಮೆಂಟಲ್ ಇಂಜಿನಿಯರಿಂಗ್ ರಿಸರ್ಚ್ ಇನ್‌ಸ್ಟಿಟ್ಯೂಟ್ (ಎನ್ ಇ ಇ ಆರ್ ಐ) ವಿಜ್ಞಾನಿಗಳು ತ್ಯಾಜ್ಯ ಬಳಸಿ ಕನಿಷ್ಠ ವೆಚ್ಚದ ಅಡುಗೆ ಅನಿಲ ಮತ್ತು ವಿದ್ಯುತ್ ಉತ್ಪಾದನಾ ಘಟಕಗಳನ್ನು ಈಗಾಗಲೇ ಅನೇಕ ಸ್ಥಳಗಳಲ್ಲಿ ಸ್ಥಾಪಿಸಿದ್ದಾರೆ ಮತ್ತು ಇನ್ನಷ್ಟು ಸಂಶೋಧನೆಗಳನ್ನು ನಡೆಸುತ್ತಿದ್ದಾರೆ.

ಅನಂತ ಪದ್ಮನಾಭನ್, ಶ್ರೀನಿವಾಸ ಕೆ ಮತ್ತು ವಿನುತಾ ಗೋಪಾಲ್ (2007)[62] ಇವರು 'ಗ್ರೀನ್‌ಪೀಸ್ ಇಂಡಿಯ' ವರದಿಯಲ್ಲಿ ಹವಾಮಾನ ಬದಲಾವಣೆ **ಕುರಿತು 'ಬಡವರ ಹಿಂದೆ ಅಡಗಿಸುವಿಕೆ' (Hiding behind the Poor)** ಎನ್ನುವ ಶೀರ್ಷಿಕೆಯಡಿಯಲ್ಲಿ ಅಭಿವೃದ್ಧಿ ಮತ್ತು ಸಹ್ಯ ಪರಿಸರದ ನಡುವಿನ ಸಂಬಂಧದ ಬಗ್ಗೆ ವಿವರಿಸುತ್ತಾ, ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಶ್ರೀಮಂತ ರಾಷ್ಟ್ರಗಳು ಹೆಚ್ಚು ಮಾಲಿನ್ಯ ($CO_2$)ವನ್ನು ಉಂಟುಮಾಡುತ್ತಿವೆ. ಹಾಗೆಯೇ ಭಾರತದಲ್ಲಿ ಮಾಲಿನ್ಯವನ್ನು ಹೆಚ್ಚು ಸೃಷ್ಟಿಸುತ್ತಿರುವುದು ಶ್ರೀಮಂತ ಗ್ರಾಹಕರು. ಅತೀ ಶ್ರೀಮಂತ ಗ್ರಾಹಕರು ಬಡವರಿಗಿಂತ 4.5 ಪಟ್ಟು ಹೆಚ್ಚು ಮಾಲಿನ್ಯವನ್ನು ಉತ್ಪಾದಿಸುತ್ತಾರೆ. ಇದು ಸಾಮಾನ್ಯ ಭಾರತೀಯನಿಗಿಂತ 3 ಪಟ್ಟು ಹೆಚ್ಚು. ಅಂದರೆ ಸರಾಸರಿ ವಾರ್ಷಿಕ ಪ್ರಮಾಣ ಬಡವರು 355 ಕಿ.ಗ್ರಾಂ, ಶ್ರೀಮಂತರು 1494 ಕಿ.ಗ್ರಾಂ ಮತ್ತು ಮಧ್ಯಮ ವರ್ಗ 501 ಕಿ.ಗ್ರಾಂ ಉತ್ಪಾದಿಸುತ್ತಿದ್ದಾರೆ. ಶ್ರೀಮಂತ ವರ್ಗದ ಸಂಪತ್ತು ಮತ್ತು ಅನುಭೋಗ ಸ್ವಾತಂತ್ರ್ಯವು ಬಡನದ ಸಮಸ್ಯೆಗಳನ್ನು ಹೆಚ್ಚು ಮಾಡಿವೆ.

ಜುಲಿ, ಡಾ, ಅಸ್ನಾನಿ ಮತ್ತು ಇತರರು (2007)[63] ಘನತ್ಯಾಜ್ಯ ನಿರ್ವಹಣೆಯಲ್ಲಿ ಸಮುದಾಯಗಳ ಭಾಗವಹಿಸುವಿಕೆ ಯಾಕೆ ಅಗತ್ಯ ಎನ್ನುವುದನ್ನು ಗುರುತಿಸಿದ್ದಾರೆ. ತ್ಯಾಜ್ಯ ಉತ್ಪಾದನಾ ಪ್ರಮಾಣವನ್ನು ಕಡಿಮೆಗೊಳಿಸಲು, ಮರುಬಳಕೆಗೆ ಉತ್ತೇಜಿಸಲು ಮತ್ತು ಪುನರಾವರ್ತನ ವಿಧಾನವನ್ನು ಅಳವಡಿಸಲು ಸಮುದಾಯಗಳ ಭಾಗವಹಿಸುವಿಕೆ ಅಗತ್ಯ. ತ್ಯಾಜ್ಯವನ್ನು ಮೂಲದಲ್ಲಿ

ವಿಭಜಿಸಲು, ಸ್ವಸಹಾಯ ಸಂಘಗಳು, ಸ್ವಯಂಸೇವಾ ಸಂಸ್ಥೆಗಳು ಮತ್ತು ಇತರ ವೈಯಕ್ತಿಕ ತ್ಯಾಜ್ಯ ಸಂಗ್ರಹಕಾರರಿಗೆ ಬೇಕಾದ ವ್ಯವಸೆಗಳನ್ನು ಕಲ್ಪಿಸಿಕೊಡಲು, ಕಡಿಮೆ ಆದಾಯ ಹೊಂದಿರುವ ಜನರಿಗೆ ತ್ಯಾಜ್ಯ ನಿರ್ವಹಣಾ ಸೇವೆ ಒದಗಿಸಲು ಮುಂತಾದ ದೃಷ್ಟಿಯಿಂದಲೂ ಸಮುದಾಯಗಳ ಭಾಗವಹಿಸುವಿಕೆ ಅಗತ್ಯ.

ನಾರಾಯಣ್ ಉಮೇಶ್ (2008)[64] ಇವರ ಅಧ್ಯಯನದ ಪ್ರಕಾರ ಸೂಕ್ತವಾದ ಘನತ್ಯಾಜ್ಯ ನಿರ್ವಹಣಾ ಪದ್ಧತಿಗೆ ತ್ಯಾಜ್ಯ ನಿರ್ವಹಣೆಯ ವ್ಯಾಪ್ತಿ ಮತ್ತು ಜವಾಬ್ದಾರಿಯನ್ನು ಗೊತ್ತುಪಡಿಸುವ ಅಗತ್ಯವಿದೆ. ಗೃಹತ್ಯಾಜ್ಯದ ಭಾಗೀದಾರರು ತ್ಯಾಜ್ಯ ವಿಭಜನೆ ಕ್ರಮವನ್ನು ಅನುಸರಿಸಬೇಕು. ಸೇವಾ ತರಿಗೆ ನೀಡಲು ಸಿದ್ಧರಿರಬೇಕು ಹಾಗೂ ತ್ಯಾಜ್ಯವನ್ನು ನಿರ್ದಿಷ್ಟ ಸಂಗ್ರಹಣಾ ಸ್ಥಳಕ್ಕೆ ಸಾಗಿಸಲು ಸಿದ್ಧರಿರಬೇಕು. ಅದರಂತೆ ಇನ್ನಿತರ ಭಾಗೀದಾರರಾದ ವ್ಯಾಪಾರಸ್ಥರು, ಆರೋಗ್ಯ ಇಲಾಖೆ ಮತ್ತು ಸ್ಥಳೀಯ ಸರಕಾರಗಳು ತಮ್ಮ ತಮ್ಮ ಜವಾಬ್ದಾರಿಗಳನ್ನು ನಿಭಾಯಿಸಬೇಕು. ತ್ಯಾಜ್ಯ ಸಂಗ್ರಹ, ಸಾಗಾಟ ಮತ್ತು ವಿಲೇವಾರಿಯ ಜವಾಬ್ದಾರಿಯನ್ನು ಹೊಂದಿರಬೇಕು.

ಬೆನ್ನಿ ಜೋಸೆಫ್ (2009)[66] ಪೂರ್ವ ಕೊಲ್ಕತ್ತಾದಲ್ಲಿ ನಡೆಸಿದ ಅಧ್ಯಯನದಲ್ಲಿ ನಗರಗಳ ಘನ ಮತ್ತು ದ್ರವ ತ್ಯಾಜ್ಯಗಳನ್ನು ಮರು ಆವರ್ತನೀಯ ವಿಧಾನದ ಮೂಲಕ ಬಳಸಿ ಕೊಂಡು ಫಲವತ್ತಾದ ಗೊಬ್ಬರಗಳನ್ನು ಉತ್ಪಾದಿಸಿ ಕೃಷಿಯಲ್ಲಿ ಬಳಸಿಕೊಂಡು ನಗರ ಆಹಾರದ ಬೇಡಿಕೆಯ ಸಮಸ್ಯೆಯನ್ನು ಬಗೆಹರಿಸಿರುವುದನ್ನು ತಿಳಿಸಿದ್ದಾರೆ. ತ್ಯಾಜ್ಯ ನಿರ್ವಹಣೆಯ ಸಹ್ಯ ವಿಧಾನವನ್ನು ಈ ಅಧ್ಯಯನದಲ್ಲಿ ಗುರುತಿಸಿದ್ದಾರೆ.

ಬೆನ್ನಿ ಜೋಸೆಫ್ (2009)[66] ರವರ ಪ್ರಕಾರ ಮುನ್ಸಿಪಾಲ್ ತ್ಯಾಜ್ಯ ವಿಲೇವಾರಿ ವಿಧಾನದ ದೋಷದಿಂದಾಗಿ ಹೆಚ್ಚಿನ ಆರೋಗ್ಯದ ಸಮಸ್ಯೆಯನ್ನು ಎದುರಿಸುವವರು ಪೌರ ಕಾರ್ಮಿಕರು. ಮುಂಬಯಿಯ ತ್ಯಾಜ್ಯ ಎಸೆಯುವ ಜಾಗದಲ್ಲಿ, 95 ಕೆಲಸಗಾರರನ್ನು ಪರೀಕ್ಷಿಸಲಾಯಿತು ಮತ್ತು ಕ್ಷೇತ್ರಕಾರ್ಯ ನಡೆಸಲಾಯಿತು. ಅವರಲ್ಲಿ ಶೇಕಡ 80 ಕಾರ್ಮಿಕರಿಗೆ ಕಣ್ಣಿನ ತೊಂದರೆಯಿರುವುದು, ಶೇಕಡ 73 ಜನರಿಗೆ ಉಸಿರಾಟದ ಸಮಸ್ಯೆ ಮತ್ತು ಶೇಕಡ 51 ಕಾರ್ಮಿಕರು ಉದರ ಸಂಬಂಧಿ ಕಾಯಿಲೆಗೆ ತುತ್ತಾಗಿರುವುದು ಕಂಡುಬಂತು. ಹಾಗೆಯೇ ಚಿಂದಿ ಹೆಕ್ಕುವ ಉದ್ಯೋಗ ನಡೆಸು ವವರು ಚರ್ಮದ ಕಾಯಿಲೆ, ಉಸಿರಾಟದ ತೊಂದರೆ ಹಾಗೂ ವಾತ ಸಂಬಂಧಿ ಕಾಯಿಲೆಗಳಿಂದ ಬಳಲುವುದು ಕಂಡುಬಂದಿದೆ. ಅವರ ಕೈಕಾಲುಗಳಿಗೆ ಲೋಹ ಇತ್ಯಾದಿಗಳು ತಾಗಿ ಗಾಯಗಳಾಗು ವುದರಿಂದ ಹೆಚ್ಚಿನವರು ಟೆಟನಸ್, ಎಚ್.ಐ.ವಿ, ಹೆಪಾಟೈಟಿಸ್, ತಲೆನೋವು, ವಾಕರಿಕೆ ಮುಂತಾದ ರೋಗಗಳಿಗೆ ತುತ್ತಾಗುತ್ತಾರೆ ಎನ್ನುವುದನ್ನು ಅಧ್ಯಯನ ಕಂಡುಕೊಂಡಿದೆ. ಕೊಲ್ಕತ್ತಾದಲ್ಲಿ 1995ರಲ್ಲಿ ನಡೆಸಿದ ಅಧ್ಯಯನದ ಪ್ರಕಾರ ಪ್ರತೀ 3 ತಿಂಗಳಿಗೊಮ್ಮೆ ಶೇಕಡ 85ರಷ್ಟು ಜನರು

ಭೇದಿ, ಶೇಕಡ 72 ಜನರು ಜ್ವರ ಹಾಗೂ ಶೇಕಡ 63 ಜನರು ಕೆಮ್ಮು ಮತ್ತು ಶೀತದಿಂದ ಬಳಲುವುದು ಕಂಡುಬಂದಿದೆ. ಒಟ್ಟು 185 ಚಿಂದಿಹೆಕ್ಕುವವರನ್ನು ಸಂದರ್ಶಿಸಿ ಈ ವರದಿಯನ್ನು ತಯಾರಿಸಲಾಗಿದೆ.

ಸಾಹಾ ಸಾಂತಾನು (2011)[67] ಘನತ್ಯಾಜ್ಯ ಸಮಸ್ಯೆಯು ವಾಯುಮಾಲಿನ್ಯ ಮತ್ತು ಜಲಮಾಲಿನ್ಯದ ನಂತರದ ಸ್ಥಾನವನ್ನು ಪಡೆದುಕೊಂಡಿದೆ. ಮುನ್ಸಿಪಾಲ್ ಘನತ್ಯಾಜ್ಯವು ಮಾನವನ ಆರೋಗ್ಯ ಮತ್ತು ಪರಿಸರ ಮಾಲಿನ್ಯ ದೃಷ್ಟಿಯಿಂದ ಅತ್ಯಂತ ಅಪಾಯಕಾರಿ ತ್ಯಾಜ್ಯವಾಗಿದೆ.ತ್ಯಾಜ್ಯ ನಿರ್ವಹಣೆಯ ಒಟ್ಟು ವೆಚ್ಚ ಕಡಿತಗೊಳಿಸುವ ಕ್ರಮದಲ್ಲಿ ಸಾಗಾಟ ವೆಚ್ಚವನ್ನು ಕಡಿತಗೊಳಿಸುವುದು ಒಂದು ಭಾಗ ಮಾತ್ರ. ಇದರೊಂದಿಗೆ ಸಂಗ್ರಹ ವೆಚ್ಚ, ವಿಲೇವಾರಿ ವೆಚ್ಚ ಮತ್ತು ತ್ಯಾಜ್ಯ ಪರಿಷ್ಕರಣೆ ವೆಚ್ಚಗಳನ್ನು ಕಡಿತಗೊಳಿಸುವ ಪರಿಹಾರದೊಂದಿಗೆ ಉತ್ತಮ ಆಯವ್ಯಯ ಪಟ್ಟಿಯನ್ನು ತಯಾರಿಸಬೇಕು.

ಬೊಹೆಂಗ್ ಜೊಸೆಫ್ ಮಾರ್ಪೊ ಮತ್ತು ಔಸು ವಿಕ್ಟರ್ (2011)[68] ಘಾನ ದೇಶದ ಕುಮಾಸಿ ಮೆಟ್ರೊಪಾಲಿಟಿಯಲ್ಲಿ ಗೃಹತ್ಯಾಜ್ಯ ಸಂಗ್ರಹದ ಮತ್ತು ನಿರ್ವಹಣೆಯನ್ನು 4 ರೀತಿಯಲ್ಲಿ ನಿರ್ವಹಿಸುತ್ತಾರೆ. ಅವುಗಳೆಂದರೆ ಮನೆ–ಮನೆ ಸಂಗ್ರಹ, ಪಾವತಿಸಿ ತ್ಯಾಜ್ಯ ನೀಡುವ ಪದ್ಧತಿ, ಮನೆಯ ಆವರಣದಲ್ಲೇ ತ್ಯಾಜ್ಯ ಗುಂಡಿಗಳ ನಿರ್ಮಾಣ ಮತ್ತು ಸಂಗ್ರಹವಾಗದ ತ್ಯಾಜ್ಯ (ಯಾವುದೇ ಸಂಗ್ರಹ ವಿಧಾನ ಅನುಸರಿಸದಿರುವುದು). ಆದಾಗ್ಯೂ ಮನೆ–ಮನೆ ಸಂಗ್ರಹ ಹಾಗೂ ಪಾವತಿಸಿ ತ್ಯಾಜ್ಯ ನೀಡುವ ಪ್ರಮಾಣ ಹೆಚ್ಚು ಜನಪ್ರಿಯವಾಗಿದೆ. ಮನೆ–ಮನೆ ಸಂಗ್ರಹ ವಿಧಾನದಲ್ಲಿ ಪ್ರತಿ ಮನೆಗೂ ಸಂಗ್ರಹ ತೊಟ್ಟಿಯನ್ನು ಸಾಲದ ರೂಪದಲ್ಲಿ ನೀಡಲಾಗುತ್ತದೆ. ಸದಸ್ಯರ ಸಂಖ್ಯೆ ಹೆಚ್ಚಿರುವ ಕುಟುಂಬಗಳು ಹಣಪಾವತಿಸಿ ತ್ಯಾಜ್ಯ ಎಸೆಯುವ ವಿಧಾನವನ್ನು ಅನುಸರಿಸುತ್ತಾರೆ. ಮನೆ–ಮನೆ ಸಂಗ್ರಹ ವಿಧಾನವನ್ನು ದೊಡ್ಡ ಕುಟುಂಬಗಳು ಹೆಚ್ಚು ಬಯಸುವುದಿಲ್ಲ, ಕಾರಣ ಅಧಿಕ ಹಣಕಾಸಿನ ಹೊರೆ.

ಘೋಷ್ ಕೆ.ಸಾಧನ್ (2011)[69] ಇವರು ಭಾರತದಲ್ಲಿ ತ್ಯಾಜ್ಯ ನಿರ್ವಹಣೆಯಲ್ಲಿ ಯುವಕರ ಭಾಗವಹಿಸುವಿಕೆಯ ಕಾರ್ಯತಂತ್ರದ ಬಗ್ಗೆ ನಡೆಸಿದ ಅಧ್ಯಯನದಲ್ಲಿ ಯುವಕರಲ್ಲಿ/ ಶಾಲಾ ಕಾಲೇಜುಗಳಲ್ಲಿ ಜಾಗೃತಿಯನ್ನು ಮೂಡಿಸುವ ವಿವಿಧ ವಿಧಾನಗಳ ಪಟ್ಟಿ ನೀಡಿದ್ದಾರೆ. ಅವುಗಳೆಂದರೆ: ಜಾಥಾ, ಎಸ್ ಡಬ್ಲ್ಯೂ ಎಂ ಪ್ರೊಜೆಕ್ಟ್, ಪ್ರಬಂಧ ಸ್ಪರ್ಧೆ, ಸಾಮಾನ್ಯ ಜ್ಞಾನ ಸ್ಪರ್ಧೆ, ಕಸ ಎಸೆಯುವುದರ ವಿರುದ್ಧ ಪ್ರಚಾರ, ಚಿಂದಿ ಹೆಕ್ಕುವವರಿಗೆ ಕಾರ್ಯಾಗಾರ, ಪರಿಸರ ಸಂಘ, ಉತ್ತಮ ತ್ಯಾಜ್ಯ ನಿರ್ವಹಣಾ ಸಂಸ್ಥೆಗಳಿಗೆ ಪ್ರಶಸ್ತಿ ನೀಡುವುದು ಇತ್ಯಾದಿ. ಜಾಗೃತಿ ಮಟ್ಟವನ್ನು ಗುರುತಿಸುವ ದೃಷ್ಟಿಯಿಂದ ನಡೆಸಿದ ಕ್ಷೇತ್ರಕಾರ್ಯದಲ್ಲಿ 10 ರಿಂದ 18 ವರ್ಷದ ಶಾಲಾವಿದ್ಯಾರ್ಥಿಗಳನ್ನು ಮತ್ತು

ಪೋಷಕರನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಅವರಲ್ಲಿ ಹೆಚ್ಚಿನ ಪ್ರಕರಣಗಳಲ್ಲಿ ಪೋಷಕರಿಗಿಂತ ಮಕ್ಕಳಿಗೆ ಹೆಚ್ಚಿನ ಜ್ಞಾನವಿರುವುದು ಕಂಡುಬಂದಿದೆ. ಕೇವಲ ಪುನರ್‌ಬಳಕೆ ವಿಷಯದಲ್ಲಿ ಮಾತ್ರ ಪೋಷಕರಿಗೆ ಮಕ್ಕಳಿಗಿಂತ ಹೆಚ್ಚು ಅನುಭವವಿರುವುದು ಕಂಡುಬಂದಿದೆ. ಯುವಜನಾಂಗವನ್ನು ತ್ಯಾಜ್ಯ ನಿರ್ವಹಣೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ತೊಡಗಿಸುವ ಕಾರ್ಯಯೋಜನೆಗಳನ್ನು ಹಾಕಿಕೊಳ್ಳಬೇಕು.

ಅಹ್ಮದ್ ಮೊಹಮ್ಮದ್ ಇಜಾರ್ ಮತ್ತು ವಾಸಿಕ ಟಿ. ಆರ್ (2011)[70] ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಘನತ್ಯಾಜ್ಯ ನಿರ್ವಹಣೆಗೆ ದೊಡ್ಡ ನಗರಗಳನ್ನು ಹೊರತುಪಡಿಸಿ ಇತರ ಸಣ್ಣ ನಗರಗಳು ಹಾಗೂ ಗ್ರಾಮ ಮಟ್ಟಗಳಲ್ಲಿ ಅತೀ ಕಡಿಮೆ ಆದ್ಯತೆ ನೀಡಲಾಗಿದೆ. ಸ್ಥಳೀಯ ಸರಕಾರಗಳಿಗೆ ಸಾಂಸ್ಥಿಕ ಸಾಮರ್ಥ್ಯ ಕಡಿಮೆ ಇದೆ. ಹಣಕಾಸಿನ ಕೊರತೆಯು ಸಾಮಾನ್ಯವಾಗಿದೆ. ಹೆಚ್ಚಿನ ಅಭಿವೃದ್ಧಿಶೀಲ ರಾಷ್ಟ್ರಗಳು ಗರಿಷ್ಠ ವೆಚ್ಚದ ಉಪಕರಣಗಳನ್ನು ಆಮದು ಮಾಡಿಕೊಳ್ಳುತ್ತಿವೆ. ಆದರೆ ಹೆಚ್ಚಿನ ಸಂದರ್ಭಗಳಲ್ಲಿ ಸ್ಥಳೀಯ ವ್ಯವಸ್ಥೆಗೆ ಅವು ಅನುಕೂಲಕರವಾಗಿರುವುದಿಲ್ಲ. ಪೌರಕಾರ್ಮಿಕರ ಸಾಮಾಜಿಕ ಸ್ಥಾನಮಾನ ತುಂಬಾ ಕೆಳಮಟ್ಟದಲ್ಲಿದೆ. ಖಾಸಗಿ ತ್ಯಾಜ್ಯ ಪುನರುತ್ಪಾದನಾ ಘಟಕಗಳಿಗೆ ವಿಶ್ವ ಬ್ಯಾಂಕ್ ಯಾವುದೇ ಹಣಕಾಸಿನ ಸಹಾಯವನ್ನು ನೀಡುವುದಿಲ್ಲ. ಹಾಗೆಯೇ ವಿಶ್ವ ಬ್ಯಾಂಕ್ ಕೇವಲ ಸರಕಾರಗಳಿಗೆ ಮಾತ್ರ ಸಾಲ ನೀಡುತ್ತದೆ, ವಿನಃ ಸ್ಥಳೀಯ ಸಂಸ್ಥೆಗಳಿಗೆ ನೀಡುವುದಿಲ್ಲ. ವಿದ್ಯುನ್ಮಾನ ಮತ್ತು ಮುದ್ರಣ ಮಾಧ್ಯಮಗಳನ್ನು ತ್ಯಾಜ್ಯ ನಿರ್ವಹಣೆ, ಪುನರುತ್ಪಾದನೆ, ವಿಲೇವಾರಿ, ಮರುಬಳಕೆ ಇತ್ಯಾದಿಗಳಿಗೆ ಸಂಬಂಧಿಸಿ ನಾಗರಿಕರನ್ನು ಹೆಚ್ಚು ಸುಶಿಕ್ಷಿತರನ್ನಾಗಿಸಲು ಬಳಸಿಕೊಳ್ಳಬೇಕು.

ಲಿಂಗರಾಜ್ ಪತ್ರಾವೋ ಇವರ ಸಂಪಾದಿತ ಕೃತಿ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ (2012)[71] ಇದರಲ್ಲಿ ಒಮನ ಜೆ ಇವರು 'ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಯಾಸ್ ಎ ಕುಡುಂಬಶ್ರೀ ಪ್ರಾಗ್ರಾಮ್ ಇನ್ ಕೇರಳ' ಎನ್ನುವ ಲೇಖನದಲ್ಲಿ ನೀಡಿದ ವರದಿ ಈ ರೀತಿ ಇದೆ–ಕೇರಳದಲ್ಲಿ ಬಡತನ ನಿರ್ಮೂಲನೆ ಯೋಜನೆಯಡಿ ಸಣ್ಣ ಹಣಕಾಸು ಮತ್ತು ಸ್ವಸಹಾಯ ಗುಂಪುಗಳ ಸಂಘಟನೆ ಕುಟುಂಬ ಶ್ರೀ (ಕೌಟುಂಬಿಕ ಏಳಿಗೆ) ಎನ್ನುವ ಯೋಜನೆಯನ್ನು ಮೇ 1998 ರಲ್ಲಿ ಪ್ರಾರಂಭಿಸಿತು. ಮಹಿಳಾ ಸಬಲೀಕರಣ ಉದ್ದೇಶದ ಈ ಯೋಜನೆಯಲ್ಲಿ ಸ್ವಚ್ಛ ಕೇರಳ ಉದ್ಯೋಗವೂ ಒಂದು. ಕೇರಳ ರಾಜ್ಯಾದಾದ್ಯಂತ ಘನ ತ್ಯಾಜ್ಯ ನಿರ್ವಹಣೆ ಮಾಡುವ ಉದ್ದೇಶದಿಂದ 155 "ಸ್ವಚ್ಛ ಕೇರಳ ಉದ್ಯೋಗ ಘಟಕ"ಗಳನ್ನು ಪ್ರಾರಂಭಿಸಲಾಯಿತು. ಇವುಗಳಿಗೆ ಪೂರಕವಾಗಿ 18 ಸ್ಥಳೀಯ ನಗರ ಸಂಸ್ಥೆಗಳಲ್ಲಿ 40ಕ್ಕೂ ಅಧಿಕ ತ್ಯಾಜ್ಯ ಸಂಸ್ಕರಣ ಘಟಕಗಳನ್ನು ಸ್ಥಾಪಿಸಲಾಯಿತು. ಮಹಿಳೆಯರಿಂದಲೇ ನಡೆಸಲ್ಪಡುವ ಈ ಯೋಜನೆ ಮುಂದೆ ಇಡೀ ಕೇರಳದಾದ್ಯಂತ ಸುಮಾರು 580ಕ್ಕೂ ಅಧಿಕ ನಗರ ಸ್ಥಳೀಯ ಸಂಸ್ಥೆಗಳಲ್ಲಿ 30,000 ಕ್ಕೂ

ಅಧಿಕ ಮಹಿಳೆಯರಿಗೆ ಉದ್ಯೋಗ ದೊರಕಿಸಿ ಕೊಟ್ಟಿತು. ತ್ಯಾಜ್ಯ ಸಂಗ್ರಹ ಕಾರ್ಯದಲ್ಲಿ ತೊಡಗಿದ ಮಹಿಳೆಗೆ ಪ್ರತಿ ಮನೆಯವರು ತಿಂಗಳಿಗೆ ರೂ.30ರಂತೆ ಶುಲ್ಕ ನೀಡುತ್ತಾರೆ. ತ್ಯಾಜ್ಯವನ್ನು ಮನೆ, ಹೊಟೇಲ್, ಆಸ್ಪತ್ರೆ, ವಸತಿಗೃಹ, ರೈಲ್ವೆ ನಿಲ್ದಾಣ, ಬಸ್ ನಿಲ್ದಾಣ, ಮಾರುಕಟ್ಟೆ ಮತ್ತಿತರ ಸಂಸ್ಥೆಗಳಿಂದ ಸಂಗ್ರಹಿಸಿದ ತ್ಯಾಜ್ಯವನ್ನು ನಿರ್ದಿಷ್ಟಪಡಿಸಿದ ಸ್ಥಳದಲ್ಲಿ ವಿಲೇವಾರಿ ಮಾಡುತ್ತಾರೆ. ಇದು ಸ್ವಚ್ಛ ಪರಿಸರ, ಸಹ್ಯ ಅಭಿವೃದ್ಧಿ, ಉದ್ಯೋಗ ಸೃಷ್ಟಿ ಮತ್ತು ಬಡತನ ನಿರ್ಮೂಲನೆ ಹಾಗೂ ಆರ್ಥಿಕ ಅಭಿವೃದ್ಧಿಯ ಉದ್ದೇಶಗಳನ್ನು ಏಕಕಾಲದಲ್ಲಿ ಈಡೇರಿಸಿದೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (2012)[72] ಆಂಧ್ರಪ್ರದೇಶದ ನಲಗುಂದ ಜಿಲ್ಲೆಯ ಸೂರ್ಯಪೇಟೆ ಎನ್ನುವ ಸಣ್ಣ ನಗರ ಪಂಚಾಯತ್‌ನಲ್ಲಿ ನಡೆಸಿದ ಅಧ್ಯಯನವು ತ್ಯಾಜ್ಯ ವನ್ನು ಮೂಲದಲ್ಲಿ ಬೇರ್ಪಡಿಸುವಿಕೆಯಿಂದ ಸ್ಥಳೀಯ ಸಂಸ್ಥೆಗೆ ಹೆಚ್ಚಿನ ಆದಾಯ ಗಳಿಕೆ ಸಾಧ್ಯವಾಗಿರುವುದು ಕಂಡುಬರುತ್ತದೆ ಎಂದಿದ್ದಾರೆ. ಈ ಕೈಪಿಡಿಯಲ್ಲಿ ನೀಡಿರುವ ಇತರ ಪ್ರಕರಣ ಅಧ್ಯಯನಗಳಾದ ನಮಕ್ಯಾಲ್ ಮುನ್ಸಿಪಾಲಿಟಿ, ತಮಿಳುನಾಡು, ಪೂನಾ ನಗರ, ಚಂಢೀಗಡ ಇವುಗಳು ಹೇಗೆ ತ್ಯಾಜ್ಯಗಳನ್ನು ಸಂಪನ್ಮೂಲಗಳಾಗಿ ಪರಿವರ್ತಿಸಬಹುದೆಂದು ತಿಳಿಸುತ್ತವೆ. 'ಇಂಡಿಯನ್ ಗ್ರೀನ್ ಸರ್ವಿಸ್' ಎಂಬ ಸಂಸ್ಥೆಯ ನಿರ್ದೇಶಕರಾದ ಶ್ರೀ ಶ್ರೀನಿವಾಸನ್ ಇವರು ವೆಲ್ಲೂರಿನ ತ್ಯಾಜ್ಯ ನಿರ್ವಹಣಾ ವಿಧಾನದ ಬಗ್ಗೆ ನೀಡಿದ ವರದಿಯಲ್ಲಿ (2012) ತ್ಯಾಜ್ಯ ವಿಭಜನೆ ಕುರಿತಂತೆ ಸಾವಯವ ತ್ಯಾಜ್ಯಗಳಲ್ಲಿ 41 ವಿಭಾಗಗಳು, ನಿರವಯವ ತ್ಯಾಜ್ಯಗಳಲ್ಲಿ 148, ಗಾಜಿನ ವಸ್ತುಗಳಲ್ಲಿ 122 ವಿಧ ಮತ್ತು ಯಾವುದೇ ರೀತಿಯ ಮರುಬಳಕೆಗೆ ಅಸಾಧ್ಯವಾದ ನಿರುಪಯುಕ್ತ 12 ವಿಧದ ತ್ಯಾಜ್ಯಗಳನ್ನು ಗುರುತಿಸಿದ್ದಾರೆ. ಈ ಮೂಲಕ ತ್ಯಾಜ್ಯ ವಿಭಜನೆಯ ಪ್ರಾಮುಖ್ಯತೆಯನ್ನು ತಿಳಿದುಕೊಳ್ಳಬಹುದು.

ಕರ್ಪಗಂ ಜಿ.(2012)[73] ಇವರು ತಮಿಳುನಾಡಿನ ನಾಮಕ್ಕಲ್ ಮುನ್ಸಿಪಾಲಿಟಿಯ ಕೋಸುವಮ್‌ಪಟ್ಟಿಯಲ್ಲಿ ನಡೆಸಿದ ಅಧ್ಯಯನದಲ್ಲಿ ಭೂಭರ್ತಿ ಮಾಡಿದ ಸ್ಥಳದ ಸುತ್ತಮುತ್ತಲಿನ ಕೆರೆ, ಬಾವಿಗಳ ನೀರು ತ್ಯಾಜ್ಯದ ಒಸರಿನಿಂದ ಮಾಲಿನ್ಯಗೊಂಡಿರುವ ಬಗೆಗೆ ಸ್ಥಳೀಯರು ದೂರು ನೀಡಿರುವುದನ್ನು ದಾಖಲಿಸಿದ್ದಾರೆ. ಇದರಿಂದ ಕೆಟ್ಟವಾಸನೆ, ನೊಣಗಳ ಹಾವಳಿ ಮತ್ತು ಅನಾರೋಗ್ಯಕರ ವಾತಾವರಣ ಸೃಷ್ಟಿಯಾಗಿರುವುದರಿಂದ ಈ ಬಗ್ಗೆ ನಗರಾಡಳಿತ ಕ್ರಮ ಕೈಗೊಂಡಿದ್ದು ಶೇಕಡ 20ರಷ್ಟು ಭೂಭಾಗವನ್ನು ಹೂದೋಟ ಹಾಗೂ ಎರೆಹುಳು ಗೊಬ್ಬರ ತಯಾರಿಕೆಗೆ ಮತ್ತು ಉಳಿದ ತ್ಯಾಜ್ಯ ತುಂಬಿದ ಭಾಗವನ್ನು ವೈಜ್ಞಾನಿಕ ವಿಧಾನದಲ್ಲಿ ಮುಚ್ಚಲಾಗಿದೆ. ಭೂಭರ್ತಿಯನ್ನು ವೈಜ್ಞಾನಿಕ ರೀತಿಯಲ್ಲಿ ನಿರ್ವಹಿಸುವ ಅಗತ್ಯವಿದ್ದು ಸಂಪನ್ಮೂಲದ ಹೆಚ್ಚಿನ ಅಗತ್ಯವಿದೆ ಎಂದಿದ್ದಾರೆ.

ಹರಿಗೋವಿಂದರಾಜ್ ಜಿ. ಮತ್ತು ಸೇಕ್ರೆಟಿಸ್ ಜೆ. (2012)[74] ಇವರು ತಮಿಳುನಾಡಿನ ತಿರುನೆಲ್ವೇಲಿಯಲ್ಲಿ ನಡೆಸಿದ ಅಧ್ಯಯನ ಪ್ರಕಾರ ತ್ಯಾಜ್ಯ ಉತ್ಪಾದನೆಯು ಜನರ ಆಹಾರ ಕ್ರಮ, ಜೀವನ ಮಟ್ಟ, ವಾಣಿಜ್ಯ ಚಟುವಟಿಕೆಯ ಪ್ರಮಾಣ ಮತ್ತು ಕಾಲಮಾನವನ್ನು ಅವಲಂಬಿಸಿದೆ. ಇತ್ತೀಚಿನ ವರ್ಷಗಳಲ್ಲಿ ನೀರಿನ ಬಾಟಲಿ, ತಂಪು ಪಾನೀಯಗಳ ಬಾಟಲಿ ಮತ್ತು ಪ್ಲಾಸ್ಟಿಕ್ ಕೈಚೀಲಗಳ ಬಳಕೆ ಹೆಚ್ಚಿದ್ದು ತ್ಯಾಜ್ಯ ಪ್ರಮಾಣ ಹೆಚ್ಚಾಗಿದೆ. ತ್ಯಾಜ್ಯ ನಿರ್ವಹಣಾ ವ್ಯವಸ್ಥೆಯು ಕಾರ್ಮಿಕರ ದೊರೆಯುವಿಕೆ ಮತ್ತು ಸಾಗಾಟ ಸಾಮರ್ಥ್ಯವನ್ನು ಅವಲಂಬಿಸಿದೆ. ನದಿ ದಡದಲ್ಲಿ ವಾಸಿಸುವ ಜನರು ತ್ಯಾಜ್ಯವನ್ನು ನದಿಗೆ ಎಸೆಯುವುದನ್ನು ಅಧ್ಯಯನ ಗುರುತಿಸಿದೆ. ಹಾಗೆಯೇ ಹೋಟೆಲ್ ಮತ್ತಿತರ ವಾಣಿಜ್ಯ ತ್ಯಾಜ್ಯಗಳು ರಾತ್ರಿ ಸಮಯದಲ್ಲಿ ಸಂಗ್ರಹವಾದರೆ, ಗೃಹತ್ಯಾಜ್ಯಗಳು ಬೆಳಿಗ್ಗೆ ಮತ್ತು ಸಂಜೆ ಸಂಗ್ರಹವಾಗುತ್ತವೆ. ರಸ್ತೆ ಬದಿಯ ನದಿ, ಕೆರೆ, ಹಾಳುಬಾವಿ ಮುಂತಾದ ನೀರಿನ ಆಶ್ರಯ ತಾಣಗಳಿಗೆ ಎಸೆದ ಕಸವು ಮೇಲ್ನೋಟಕ್ಕೆ ಗೋಚರಿಸುವುದು. ಆದರೆ ಅವುಗಳ ದುಷ್ಪರಿಣಾಮ ದುಪ್ಪಟ್ಟು. ಸಾರ್ವಜನಿಕರನ್ನು ಈ ವಿಷಯದಲ್ಲಿ ಹೆಚ್ಚು ಸುಶಿಕ್ಷಿತರನ್ನಾಗಿ ಮಾಡಬೇಕಾಗಿದೆ. ತ್ಯಾಜ್ಯ ವರ್ಗೀಕರಣ ಮತ್ತು ಮೂಲದಲ್ಲಿ ತ್ಯಾಜ್ಯ ಉತ್ಪಾದನಾ ಪ್ರಮಾಣವನ್ನು ಕಡಿತಗೊಳಿಸುವಲ್ಲಿ ಸಾರ್ವಜನಿಕರ ಪಾಲ್ಗೊಳ್ಳುವಿಕೆಯ ಅಗತ್ಯವಿದೆ. ಭೂಭರ್ತಿ ಪ್ರದೇಶಗಳಿಗೆ ಬರುವ ತ್ಯಾಜ್ಯ ಪ್ರಮಾಣವನ್ನು ಅಳತೆ ಮಾಡುವುದು ಅವಶ್ಯಕ ಎಂದಿದ್ದಾರೆ. ಸಾರ್ವಜನಿಕ ಸ್ಥಳದಲ್ಲಿ ತ್ಯಾಜ್ಯ ಸುಡುವುದನ್ನು ನಿಷೇಧಿಸಬೇಕೆಂದು ಸಲಹೆ ಮಾಡಿದ್ದಾರೆ.

ರಾವ್ ಎಂ ಎಸ್ ಮತ್ತು ಸುಲ್ತಾನಾ ರಜಿಯಾ(2012)[75] ಇವರು ಮೂಲದಲ್ಲಿಯೇ ತ್ಯಾಜ್ಯ ಉತ್ಪಾದನಾ ಪ್ರಮಾಣವನ್ನು ಕಡಿತಗೊಳಿಸುವ ಬಗ್ಗೆ ಪ್ರಸ್ತಾಪಿಸಿದ್ದಾರೆ. ಮೂಲದಲ್ಲಿ ತ್ಯಾಜ್ಯ ಉತ್ಪಾದನಾ ಪ್ರಮಾಣವನ್ನು ಕಡಿತಗೊಳಿಸುವುದರಿಂದ ತ್ಯಾಜ್ಯ ಸಂಗ್ರಹ, ಸಾಗಾಟ ಮತ್ತು ವಿಲೇವಾರಿ ವೆಚ್ಚ ಕಡಿಮೆಯಾಗುತ್ತದೆ. ಜೊತೆಗೆ ಆರೋಗ್ಯ, ಪರಿಸರ, ಉತ್ಪಾದನಾ ವೆಚ್ಚ ಕಡಿತ ದೃಷ್ಟಿಯಿಂದಲೂ ಉತ್ತಮ. ಇದಕ್ಕಾಗಿ ಕೈಗಾರಿಕೆಗಳು ಅನಾವಶ್ಯಕ ಪ್ಯಾಕಿಂಗ್ ವ್ಯವಸ್ಥೆಗಳನ್ನು ಕೈ ಬಿಡಬೇಕು. ಮರುಬಳಕೆ, ಮರು ಸಂಗ್ರಹ ಮತ್ತು ಮರು ಆವರ್ತನೀಯ ವಿಧಾನಗಳಿಗೆ ಆದ್ಯತೆ ನೀಡಬೇಕು. ಕೈಗಾರಿಕೆಗಳು ತ್ಯಾಜ್ಯಗಳನ್ನು ಉಪ–ಉತ್ಪಾದನಾ ಚಟುವಟಿಕೆಗಳಲ್ಲಿ ಬಳಸಿಕೊಳ್ಳಬೇಕು. ಉದಾಹರಣೆಗೆ ಉಷ್ಣ ವಿದ್ಯುತ್ ಸ್ಥಾವರಗಳ ಹಾರುಬೂದಿಯನ್ನು ಸಿಮೆಂಟ್ ತಯಾರಿಕೆಯಲ್ಲಿ, ಪ್ಲಾಸ್ಟಿಕ್ ತ್ಯಾಜ್ಯವನ್ನು ಕೃತಕ ಮರದ ಉತ್ಪಾದನೆಗೆ, ಆಹಾರ ತ್ಯಾಜ್ಯವನ್ನು ಪಶು ಆಹಾರ ತಯಾರಿಕೆಯಲ್ಲಿ ಬಳಸಿಕೊಳ್ಳಬಹುದು. ತ್ಯಾಜ್ಯಗಳ ಪರಿಣಾಮಕಾರಿ ಮರು ಬಳಕೆ ಮತ್ತು ಮರು ಉತ್ಪಾದನಾ ದೃಷ್ಟಿಯಿಂದ ತ್ಯಾಜ್ಯ ವಿನಿಮಯ ಮಾಹಿತಿ ವ್ಯವಸ್ಥೆಯನ್ನು ಹೊಂದುವ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಲಿಂಗರಾಜ ಪತ್ರಾವೊ (2012)[76] ಸಂಪಾದಿತ ಕೃತಿ 'ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್' ಇದರಲ್ಲಿ ಬಾದಲ್ ದಾಸ್ ಮತ್ತು ದುಲೈ ತೂದು ಇವರು ಒರಿಸ್ಸಾದ ಭುವನೇಶ್ವರ ನಗರದಿಂದ 35 ಕಿ.ಮೀ ದೂರದ ಒಲ್ಲಾಪುರ ಗ್ರಾಮದಲ್ಲಿ ಅಧ್ಯಯನವನ್ನು ಕೈಗೊಂಡಿದ್ದು, ಗ್ರಾಮದ ಇಡೀ ಜನಸಂಖ್ಯೆಯನ್ನು ಉದ್ಯೋಗಿಗಳು ಮತ್ತು ನಿರುದ್ಯೋಗಿಗಳೆಂದು ವಿಂಗಡಿಸಿದ್ದಾರೆ. ಈ ಅಧ್ಯಯನದಲ್ಲಿ ಗೃಹತ್ಯಾಜ್ಯ ನಿರ್ವಹಣೆಯನ್ನು ಮಾತ್ರ ಅಧ್ಯಯನಕ್ಕೆ ಅಳವಡಿಸಲಾಗಿದೆ. ಈ ಅಧ್ಯಯನದ ಪ್ರಕಾರ ಉದ್ಯೋಗಿಗಳೆಂದರೆ ಸರಕಾರಿ ಮತ್ತು ಸಂಘಟಿತ ವಲಯಗಳಲ್ಲಿ ದುಡಿಯುವವರು ಮಾತ್ರ. ಇಲ್ಲಿ ಆಹಾರ ತ್ಯಾಜ್ಯದ ಉತ್ಪಾದನೆ ಅಶಿಕ್ಷಿತ ನಿರುದ್ಯೋಗಿಗಳಲ್ಲಿ ಹೆಚ್ಚಾಗಿದ್ದರೆ, ಪೇಪರ್, ಪ್ಲಾಸ್ಟಿಕ್, ಗ್ಲಾಸ್ ಮುಂತಾದ ತ್ಯಾಜ್ಯಗಳ ಪ್ರಮಾಣ ಸುಶಿಕ್ಷಿತ ಉದ್ಯೋಗಿಗಳಲ್ಲಿ ಹೆಚ್ಚಾಗಿದೆ. ನಿರುದ್ಯೋಗಿಗಳಲ್ಲಿ ತ್ಯಾಜ್ಯ ವಿಭಜನೆ ಮತ್ತು ಸಂಗ್ರಹದ ಬಗ್ಗೆ ಹೆಚ್ಚಿನ ಕಾಳಜಿ ಇಲ್ಲದಿರುವುದು ಅಧ್ಯಯನದಲ್ಲಿ ಕಂಡು ಬಂದಿದೆ. ಜನರ ಆದಾಯ ಹಾಗೂ ತ್ಯಾಜ್ಯದ ಉತ್ಪಾದನೆಗೆ ನೇರ ಸಂಬಂಧ ಇರುವುದು ತಿಳಿದು ಬಂದಿದೆ. ಈ ಅಧ್ಯಯನದ ಆಧಾರದ ಮೇಲೆ ಕೆಲವು ಸಲಹೆ ಗಳನ್ನು ನೀಡಲಾಗಿದೆ. ರಸ್ತೆಗಳಲ್ಲಿ ತ್ಯಾಜ್ಯ ಎಸೆಯುವುದನ್ನು ನಿಷೇಧಿಸಬೇಕು, ಪ್ರತಿನಿತ್ಯ ರಸ್ತೆಯನ್ನು ಗುಡಿಸಬೇಕು, ಸಾರ್ವಜನಿಕ ಸ್ಥಳಗಳಲ್ಲಿ ಕಸದ ತೊಟ್ಟಿಗಳನ್ನು ಅಳವಡಿಸಬೇಕು. ತೆರೆದ ತ್ಯಾಜ್ಯ ಸಂಗ್ರಹ ವಿಧಾನವನ್ನು ನಿಷೇಧಿಸಬೇಕು, ಸಾರ್ವಜನಿಕರಲ್ಲಿ ಜಾಗೃತಿಯನ್ನು ಮೂಡಿಸಬೇಕು, ಸ್ಥಳೀಯ ಸಂಸ್ಥೆಗಳಲ್ಲಿ ಹೆಚ್ಚಿನ ಆರ್ಥಿಕ ನೆರವನ್ನು ನೀಡಬೇಕು ಇತ್ಯಾದಿ ಸಲಹೆಗಳನ್ನು ನೀಡಿದ್ದಾರೆ.

ಲಿಂಗರಾಜ ಪತ್ರಾವೊ (2012)[77] ಇವರ "ಸೋಲಿಡ್ ವೇಸ್ಟ್ ಮ್ಯಾನೇಜ್‌ಮೆಂಟ್" ಎನ್ನುವ ಸಂಪಾದಿತ ಕೃತಿಯಲ್ಲಿ, ಉದ್ಯಮ ಸಾಮರ್ಥ್ಯಕ್ಕೆ ಸಂಬಂಧಿಸಿದ ಐ ಎಸ್ ಒ 14001 ಮಾನ್ಯತೆಯನ್ನು ಪಡೆಯಲು ತ್ಯಾಜ್ಯ ನಿರ್ವಹಣೆ ಒಂದು ಪ್ರಮುಖ ಅಂಶವೆಂದು ತಿಳಿಸಿದ್ದಾರೆ. ಉತ್ಪಾದನೆ ಹೆಚ್ಚಿದಷ್ಟೂ ಉತ್ಪಾದನಾ ವೆಚ್ಚ ಕಡಿಮೆಯಾಗುತ್ತದೆ ಎನ್ನುವ ಅರ್ಥಶಾಸ್ತ್ರದ ಈ ನಿಯಮವು ತ್ಯಾಜ್ಯ ವಿಲೇವಾರಿಗೂ ಅನ್ವಯಿಸುತ್ತದೆ. ತ್ಯಾಜ್ಯ ಭೂ ಭರ್ತಿ ಪ್ರದೇಶದ ರಚನೆ, ಕಾರ್ಯ ಮತ್ತು ನಿರ್ವಹಣೆಯ ಸರಾಸರಿ ವೆಚ್ಚವು ತ್ಯಾಜ್ಯವನ್ನು ಹಾಕುವ ಪ್ರಮಾಣವು ಹೆಚ್ಚಿದಷ್ಟೂ ಕಡಿಮೆಯಾಗುತ್ತದೆ ಎಂದಿದ್ದಾರೆ.

ಅಗರ್ವಾಲ್ ಸುನೀತಾ ಮತ್ತು ಅರೋರಾ ಲಲಿತ (2013)[78] ಭಾರತದಲ್ಲಿ ಪ್ರತಿದಿನ 1990ರಲ್ಲಿ ನಗರ ಮತ್ತು ಪಟ್ಟಣಗಳಲ್ಲಿ ಅಂದಾಜು 25 ಮಿಲಿಯನ್ ಟನ್‌ಗಳಷ್ಟು ಘನತ್ಯಾಜ್ಯವು ಉತ್ಪಾದನೆಯಾದರೆ, 1997ರಲ್ಲಿ 48 ಮಿಲಿಯನ್ ಟನ್‌ಗೆ ಏರಿತ್ತು. ಇದು 2050ರ ವೇಳೆಗೆ 300 ಮಿಲಿಯನ್ ಟನ್‌ಗೆ ಏರಲಿದೆ ಹಾಗೂ ಸುಮಾರು 170 ಚದರ ಕಿ.ಮೀನಷ್ಟು ಜಾಗವನ್ನು

ಭೂಭರ್ತಿಗಾಗಿ ಆಕ್ರಮಿಸಲಿದೆ. ಗೃಹತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ಜಾಗೃತಿ ಮಟ್ಟವನ್ನು ಮಾಪನ ಮಾಡುವ ದೃಷ್ಟಿಯಿಂದ ರಾಜಸ್ಥಾನ ವಿ.ವಿ.ವ್ಯಾಪ್ತಿಯ ಎಲ್ಲಾ ವಿದ್ಯಾರ್ಥಿನಿ ನಿಲಯಗಳನ್ನು ಆಯ್ಕೆ ಮಾಡಲಾಯಿತು. ವಿದ್ಯಾರ್ಥಿನಿಯರು ಭವಿಷ್ಯದ ಗೃಹಿಣಿಯರು. ಅವರಿಗೆ ಗೃಹತ್ಯಾಜ್ಯ ನಿರ್ವಹಣೆ ಬಗ್ಗೆ ತಿಳುವಳಿಕೆ ನೀಡಿದರೆ ಹೆಚ್ಚು ಪರಿಣಾಮಕಾರಿಯಾದೀತು ಎನ್ನುವ ಕಾರಣದಿಂದ ಅವರಿಗೆ ಗೃಹತ್ಯಾಜ್ಯ ನಿರ್ವಹಣೆ ಬಗ್ಗೆ ಶೈಕ್ಷಣಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಫೋಲ್ಡರ್‌ಗಳ ರಚನೆ, ಪೋಸ್ಟರ್ ರಚನಾ ಸ್ಪರ್ಧೆ, ತ್ಯಾಜ್ಯ ವಿಭಜನೆ ಮುಂತಾದ ಸ್ಪರ್ಧೆಗಳನ್ನು ನಡೆಸಲಾಯಿತು. ಇದಾದ ನಾಲ್ಕು ತಿಂಗಳ ನಂತರ ಅವರ ಹಿಂದಿನ ಜ್ಞಾನ ಹಾಗೂ ಈಗಿರುವ ಜ್ಞಾನದ ಅಂತರವನ್ನು ತಿಳಿಯುವ ದೃಷ್ಟಿಯಿಂದ ಮತ್ತೊಮ್ಮೆ ಅವರನ್ನು ಅಧ್ಯಯನಕ್ಕೆ ಒಳಪಡಿಸಲಾಯಿತು. ವಿದ್ಯಾರ್ಥಿನಿಯರಲ್ಲಿ ತ್ಯಾಜ್ಯ ನಿರ್ವಹಣೆ ಮತ್ತು ಆರೋಗ್ಯದ ಬಗ್ಗೆ ಕಾಳಜಿ ಹೆಚ್ಚಾಗಿರುವುದು ಅಧ್ಯಯನದಲ್ಲಿ ಕಂಡು ಬಂದಿರುತ್ತದೆ.

ಮಾನಸಿ (2013)[79] ಕಸದ ರಾಶಿ ಹಾಕುವ ವೈಜ್ಞಾನಿಕ ವಿಧಾನದ ಅನುಪಸ್ಥಿತಿ ಬೆಂಗಳೂರು ನಗರಪಾಲಿಕೆಯಲ್ಲಿದೆ. ಎಲೆಕ್ಟ್ರಾನಿಕ್ ತ್ಯಾಜ್ಯಗಳನ್ನು ಸಂಗ್ರಹಿಸುವವರಿಗೆ ಸರಿಯಾದ ತರಬೇತಿ ಅಗತ್ಯವಿದೆ. ಶಾಲಾ ಮಕ್ಕಳಿಗೆ ಮತ್ತು ಸಾರ್ವಜನಿಕರಿಗೆ ಜಾಗೃತಿ ಮೂಡಿಸುವುದರ ಮೂಲಕವೂ ತ್ಯಾಜ್ಯ ಉತ್ಪಾದನೆ ಮತ್ತು ನಿರ್ವಹಣಾ ಸಮಸ್ಯೆಗಳನ್ನು ಕಡಿತಗೊಳಿಸಬಹುದು ಎಂದಿದ್ದಾರೆ.

ಗೋಪಾಲ ಅತ್ತಾವರ (2014)[80] ರ ಲೇಖನದಲ್ಲಿ ಬೆಂಗಳೂರಿನ ಮಾವಳ್ಳಿಪುರದ ಕಸದ ಗುಡ್ಡೆಯ ಕಥಾನಕವನ್ನು ವಿವರಿಸಲಾಗಿದೆ. ಬಿ.ಬಿ.ಎಂ.ಪಿ ಕಸದ ನಿರ್ವಹಣೆಗೆ ಕೆಲಸ ವಹಿಸಿಕೊಟ್ಟ ರಾಮ್‌ಕೀ ಇನ್‌ಫ್ರಾಸ್ಟ್ರಕ್ಚರ್ ಯಾವುದೇ ವೈಜ್ಞಾನಿಕ ನಿರ್ವಹಣಾ ವಿಧಾನಗಳನ್ನು ಅನುಸರಿಸದೆ ತ್ಯಾಜ್ಯದ ವಿಷಕಾರಿ ರಾಸಾಯನಿಕಗಳು, ನೀರು, ಗಾಳಿ ಮತ್ತು ನೆಲವನ್ನು ಕಲುಷಿತಗೊಳಿಸುವದನ್ನು ತಡೆಯಲು ಯಾವುದೇ ಕ್ರಮ ಕೈಗೊಂಡಿಲ್ಲ. ಮಾವಳ್ಳಿಪುರದ ಕಸದ ಗುಡ್ಡೆ ಯಲಹಂಕ ವಾಯುಸೇನಾ ನೆಲೆಯಿಂದ ಕೇವಲ ಐದುವರೆ ಕಿಲೋ ಮೀಟರ್ ದೂರದಲ್ಲಿದ್ದು ಅಲ್ಲಿ ನಡೆದಿರುವ ಅನೇಕ ಅಪಘಾತಗಳಿಗೆ ಕಸದ ಗುಡ್ಡೆ ಕಾರಣವಾಗಿರಬಹುದು ಎಂದು ಸಂಶಯ ವ್ಯಕ್ತವಾಗಿದೆ. ತ್ಯಾಜ್ಯ ನಗರದಲ್ಲಿ ಸೃಷ್ಟಿಯಾದರೂ ಸಮಸ್ಯೆ ಹಳ್ಳಿಗಳಿಗೆ ವ್ಯಾಪಿಸಿರುವುದು ಮತ್ತು ಹಳ್ಳಿಗಳಲ್ಲಿ ಸಾಕಷ್ಟು ಜಾಗೃತಿ ಇಲ್ಲದಿರುವುದನ್ನು ಈ ಅಧ್ಯಯನವು ತಿಳಿಸುತ್ತದೆ. ಚೆನ್ನೈಯ ಹೊರವಲಯದ ಕೊಡುಂಗೈಯೂರು, ಕೊಲ್ಕತ್ತಾದ ದಾಪಾ ಮತ್ತು ರಾಜಾರ್ಹಾಟ್ ಕಸದ ರಾಶಿಗಳಲ್ಲೂ ವೈಜ್ಞಾನಿಕ ನಿರ್ವಹಣಾ ವಿಧಾನದ ಕೊರತೆಯನ್ನು ವಿವರಿಸಲಾಗಿದೆ. ವೆಲ್ಲೂರಿನ ಮಾದರಿ: ಶ್ರೀನಿವಾಸನ್ ಇವರ ನೇತೃತ್ವದಲ್ಲಿ 'ಇಂಡಿಯನ್ ಗ್ರೀನ್ ಸರ್ವಿಸ್' ಎಂಬ ಪರ್ಯಾವರಣ ಸಂಘಟನೆಯು ಕೋಳಿ, ಕಪ್ಪೆ, ಬಾತು ಕೋಳಿ ಹಾಗೂ ಹಾಲು ಕೊಡದ ಬರಡು ದನಗಳ ಮೂಲಕ ತ್ಯಾಜ್ಯ

ನಿರ್ವಹಣೆ ಮಾಡುವ ವಿನೂತನ ವಿಧಾನವನ್ನು ಗೋಪಾಲ ಅತ್ತಾವರ ಇವರ ಲೇಖನದಲ್ಲಿ ವಿವರಿಸಲಾಗಿದೆ. ಶ್ರೀನಿವಾಸನ್ ಇವರು ಇದನ್ನು ತ್ಯಾಜ್ಯ ನಿರ್ವಹಣೆ ಎಂದು ಕರೆಯದೆ, ಘನ ಮತ್ತು ದ್ರವರೂಪದ ಸಂಪನ್ಮೂಲಗಳ ನಿರ್ವಹಣೆ ಎಂದು ಕರೆಯುತ್ತಾರೆ.

ಸಂಯುಕ್ತ ಕರ್ನಾಟಕ (2014)[81] ವರದಿಯಲ್ಲಿ ಭಾರತೀಯ ಮಾಲಿನ್ಯ ಸುಧಾರಕ ಮಂಡಳಿಯ 2013ರ ಗಣತಿಯಂತೆ ದೆಹಲಿ, ಮುಂಬೈ, ಕೊಲ್ಕತ್ತಾ, ಚೆನ್ನೈ, ಬೆಂಗಳೂರು, ಹೈದರಾಬಾದ್, ಲಕ್ನೋ ಸೇರಿದಂತೆ ದೇಶದ ಹಲವಾರು ಪ್ರಮುಖ ನಗರಗಳಲ್ಲಿ ದಿನನಿತ್ಯ 16,846 ಟನ್ ಪ್ಲಾಸ್ಟಿಕ್ ತ್ಯಾಜ್ಯ ಹೊರಬೀಳುತ್ತಿದೆ. ಇದು ಜಾಗತಿಕ ತಾಪಮಾನ ಮತ್ತು ಓಜೋನ್ ಪದರ ಶಿಥಿಲಗೊಳ್ಳಲು ಕಾರಣವಾಗಿದೆ ಎಂದು ತಿಳಿಸಿದೆ. ಅಂದರೆ ನಗರೀಕರಣ ಹಾಗೂ ಏರುತ್ತಿರುವ ಜನಸಂಖ್ಯೆ ಇದಕ್ಕೆ ಮುಖ್ಯ ಕಾರಣವಾಗಿದೆ. ತುಮಕೂರಿನ ಸಿದ್ಧಗಂಗಾ ತಾಂತ್ರಿಕ ವಿದ್ಯಾಲಯದ ಇಂಜಿನಿಯರಿಂಗ್ ವಿದ್ಯಾರ್ಥಿಗಳು ತಮ್ಮ ಸಂಶೋಧನೆಯಲ್ಲಿ 1 ಕಿ.ಗ್ರಾಂ. ಪ್ಲಾಸ್ಟಿಕ್‌ನಿಂದ 980 ಮಿಲಿ ಲೀಟರ್ ಇಂಧನ ತಯಾರಿಸಬಹುದು, ಇದರಿಂದ ಶೇಕಡ 60 ಪೆಟ್ರೋಲ್, ಶೇಕಡ 40 ಡೀಸೆಲ್‌ನ್ನು ಬೇರ್ಪಡಿಸಬಹುದು ಎಂಬುದಾಗಿ ತಿಳಿಸಿದ್ದಾರೆ. ಪ್ಲಾಸ್ಟಿಕ್ ಮಾಲಿನ್ಯ ತಡೆಗಟ್ಟುವುದರೊಂದಿಗೆ ಆದಾಯವನ್ನೂ ತಂದುಕೊಡುವ ಈ ಸಂಶೋಧನೆ ಅತ್ಯಂತ ಉಪಯುಕ್ತವಾದುದು.

ಬಾಲ ಸುಬ್ರಮಣ್ಯನ್ (2015)[82] ಇವರು ಘನತ್ಯಾಜ್ಯದ ನಿರ್ವಹಣೆಗೆ ಸಂಬಂಧಿಸಿ, ಒಟ್ಟು ತ್ಯಾಜ್ಯ ಪ್ರಮಾಣ, ಭೂಭರ್ತಿ ಪ್ರದೇಶ, ಹಾಗೂ ಇತರ ನಿರ್ವಹಣಾ ವಿಧಾನಕ್ಕೆ ಸಂಬಂಧಿಸಿ ನಿಖರವಾದ ಅಂಕಿ–ಅಂಶಗಳಿಲ್ಲದಿರುವುದನ್ನು ಗುರುತಿಸಿದ್ದಾರೆ. ಆದುದರಿಂದ ತ್ಯಾಜ್ಯ ನಿರ್ವಹಣಾ ವೆಚ್ಚ ಮತ್ತು ಲಾಭದ ಪ್ರಮಾಣವನ್ನು ನಿಖರವಾಗಿ ಮಾಪನ ಮಾಡುವುದು ಸಾಧ್ಯವಿಲ್ಲ. ಭಾರತದಲ್ಲಿ ತ್ಯಾಜ್ಯ ನಿರ್ವಹಣಾ ವೆಚ್ಚದ ಸರಿಯಾದ ಮಾಹಿತಿ ಇಲ್ಲ. ವಸ್ತುಗಳ ಗುಣಮಟ್ಟ ಆಧಾರದಲ್ಲಿ ತೆರಿಗೆ, ಠೇವಣಿ ವಾಪಾಸ್ಸು ಯೋಜನೆಗಳು ಮತ್ತು ಪರಿಮಾಣ ಆಧಾರಿತ ತ್ಯಾಜ್ಯ ಸಂಗ್ರಹಣಾ ಶುಲ್ಕ ಇತ್ಯಾದಿ ಆರ್ಥಿಕ ಕ್ರಮಗಳನ್ನು ಅನುಸರಿಸಬೇಕು. ಇದರಿಂದ ತ್ಯಾಜ್ಯ ಉಂಟಾಗುವ ಪ್ರಮಾಣ ಕಡಿಮೆಯಾಗುತ್ತದೆ. ತ್ಯಾಜ್ಯ ವಿಲೇವಾರಿಗಿಂತ ಹೆಚ್ಚು ಪುನರುತ್ಪಾದನೆ, ಪುನರ್ಬಳಕೆಗೆ ಉಪಯೋಗಿಸಲ್ಪಡುತ್ತದೆ ಹಾಗೂ ತ್ಯಾಜ್ಯದಿಂದ ಶಕ್ತಿ ಉತ್ಪಾದನೆ ಮಾಡುವ ಪ್ರಮಾಣವು ಹೆಚ್ಚುತ್ತದೆ. ಜೊತೆಗೆ ಪರಿಸರ ಗುಣಮಟ್ಟ ಮತ್ತು ಆರೋಗ್ಯ (ನಾಗರಿಕರ ಹಾಗೂ ತ್ಯಾಜ್ಯ ನಿರ್ವಹಣಾ ಕಾರ್ಯದಲ್ಲಿ ತೊಡಗಿರುವ ನೌಕರರ) ಸಮಸ್ಯೆಗಳನ್ನು ಕಡಿಮೆ ಮಾಡುತ್ತವೆ. ಬಡತನ ರೇಖೆಗಿಂತ ಕೆಳಗಿರುವ ಜನರು ತ್ಯಾಜ್ಯ ಸಂಗ್ರಹ ನಿರ್ವಹಣೆಗೆ ಸಂಬಂಧಿಸಿದ ಅಸಾಂಪ್ರದಾಯಿಕ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಅವರ ಜೀವನ ಮಟ್ಟವನ್ನು ಸುಧಾರಿಸು

ವುದು ಹಾಗೂ ತ್ಯಾಜ್ಯವನ್ನು ಮರು ಉತ್ಪಾದನೆಯಲ್ಲಿ ತೊಡಗಿಸಿಕೊಳ್ಳುವುದು ಬೆಳೆಯುತ್ತಿರುವ ನಗರಗಳ ಮುಂದಿರುವ ದೊಡ್ಡ ಸವಾಲು. ಅಸಂಘಟಿತ ಮತ್ತು ತ್ಯಾಜ್ಯ ನಿಧಿ ಸಂಗ್ರಹ/ ನಿರ್ವಹಣೆಯಲ್ಲಿ ಅಸಾಂಪ್ರಾದಾಯಿಕವಾಗಿ ತೊಡಗಿಸಿಕೊಂಡಿರುವ ಅಸಂಘಟಿತ ಕಾರ್ಮಿಕರ ಬಗ್ಗೆಯೂ ನಿಖರವಾದ ಮಾಹಿತಿ ಹಾಗೂ ಅವರ ಜೀವನ ಮಟ್ಟ ಸುಧಾರಣೆಗೆ ಗಮನ ಹರಿಸದಿರುವುದನ್ನು ಇವರ ಅಧ್ಯಯನವು ಗುರುತಿಸಿದೆ.

ಚಂದ್ರ ಪೂಜಾರಿ ಎಂ. (2015)[83] ತಮ್ಮ ಲೇಖನದಲ್ಲಿ ಬಡಜನರಿರುವ ಪ್ರದೇಶಗಳಲ್ಲಿ ಸ್ವಚ್ಛತೆಯ ಕೊರತೆಗೆ ಅಲ್ಲಿರುವ ಜನರಲ್ಲ, ಅನುಕೂಲಸ್ಥರು. ಕಾರಣ ಇವರು ಸೃಷ್ಟಿಸಿದ ತ್ಯಾಜ್ಯವನ್ನು ದೂರ ಸಾಗಿಸಲು ಮುಚ್ಚಿದ ಚರಂಡಿಗಳ ವ್ಯವಸ್ಥೆಗಳಿವೆ. ಆದರೆ ಬಡವರು ಸೃಷ್ಟಿಸುವ ಅಲ್ಪ ಪ್ರಮಾಣದ ತ್ಯಾಜ್ಯವನ್ನು ಸಾಗಿಸಲು ಸರಿಯಾದ ವ್ಯವಸ್ಥೆಗಳಿಲ್ಲ. ಬಡವರು ವಾಸಿಸುವ ಪ್ರದೇಶಗಳ ಸ್ವಚ್ಛತೆಗೆ ಸರಕಾರ ಮಾಡುವ ಖರ್ಚು ನಗಣ್ಯ. ಅನುಕೂಲಸ್ಥರು ಸೃಷ್ಟಿಸುವ ದೊಡ್ಡ ಪ್ರಮಾಣದ ತ್ಯಾಜ್ಯಗಳನ್ನು ವಿಲೇವಾರಿ ಮಾಡಲು ಸರಕಾರ ಹೆಚ್ಚು ಖರ್ಚು ಮಾಡುತ್ತದೆ. ಅನುಕೂಲಸ್ಥರು ಸೃಷ್ಟಿಸುವ ತ್ಯಾಜ್ಯದ ವಿಲೇವಾರಿಗೆ ಇಡೀ ಸಮಾಜವನ್ನು ಜವಾಬ್ದಾರಿ ಮಾಡುವುದಕ್ಕಿಂತ ಅನುಕೂಲಸ್ಥರನ್ನು ಮಾತ್ರ ಜವಾಬ್ದಾರಿಯನ್ನಾಗಿ ಮಾಡುವುದು ಸೂಕ್ತ ಎನ್ನುವ ಅಭಿಪ್ರಾಯವನ್ನು ಮಂಡಿಸಿದ್ದಾರೆ.

ಪ್ರಶಾಂತ್ ಎಚ್ ಡಿ (2015)[84] ತಮ್ಮ "ಮಾರುಕಟ್ಟೆ ಆರ್ಥಿಕ ವಿಜ್ಞಾನ: ಶಾಲಾ ಶಿಕ್ಷಣ ಮತ್ತು ಭಾಷೆ" ಎನ್ನುವ ಲೇಖನದಲ್ಲಿ ನೀಡಿದ ಅಭಿಪ್ರಾಯದಂತೆ ಜಾಗತಿಕ ಮಾರುಕಟ್ಟೆಯು ಕೇವಲ ಆರ್ಥಿಕ ಸಂಸ್ಥೆಗಳನ್ನು ಮಾತ್ರ ನಿಯಂತ್ರಣಕ್ಕೆ ಒಳಪಡಿಸದೆ ಸ್ಥಳೀಯ ಸಾಮಾಜಿಕ, ಸಾಂಸ್ಕೃತಿಕ ಅಂಶಗಳನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತದೆ. ಕಾರ್ಪೋರೇಟ್ ಸಂಸ್ಥೆಗಳ ಮೂಲ ಉದ್ದೇಶ ಲಾಭದ ಮೂಲಕ ತನ್ನ ಷೇರುದಾರರನ್ನು ಮತ್ತು ತನಗೆ ಬೆಂಬಲಿಸುವ ಮೇಲ್ ಮಧ್ಯಮ ವರ್ಗವನ್ನು ಹಾಗೂ ಆಳುವ ವರ್ಗವನ್ನು ಪೋಷಿಸುವುದು. ಆದ್ದರಿಂದ ಮಾರುಕಟ್ಟೆ ಸೃಷ್ಟಿಸುತ್ತಿರುವ ಅಸಮಾನತೆಯ ಅಪಾಯಗಳನ್ನು ದೂರದೃಷ್ಟಿ ನೆಲೆಯಲ್ಲಿ ವಿಶ್ಲೇಷಣೆಗೆ ಒಳಪಡಿಸಬೇಕು ಎನ್ನುವ ಅಭಿಪ್ರಾಯ ನೀಡಿದ್ದಾರೆ. ಇವರು ಶಾಲಾ ಶಿಕ್ಷಣ ಮತ್ತು ಕಲಿಕಾ ಮಾಧ್ಯಮದ ಹಿನ್ನೆಲೆಯಲ್ಲಿ ವಾದಿಸಿದ್ದರೂ ತ್ಯಾಜ್ಯ ಉತ್ಪಾದನೆಯ ದೃಷ್ಟಿಯಿಂದಲೂ ಇದನ್ನು ವಿಶ್ಲೇಷಿಸಬಹುದಾಗಿದೆ. ತ್ಯಾಜ್ಯ ಉತ್ಪಾದನೆಯಲ್ಲಿ ಕಾರ್ಪೋರೇಟ್ ಸಂಸ್ಥೆಗಳ ಪಾಲು ಹಾಗೂ ಮಧ್ಯಮ ಮತ್ತು ಶ್ರೀಮಂತ ವರ್ಗಗಳನ್ನು ಅವು ಹೆಚ್ಚು ಬೆಂಬಲಿಸುವುದರೊಂದಿಗೆ ಅಸಮಾನತೆಯನ್ನು ಸೃಷ್ಟಿಸುತ್ತವೆಯೇ ಎಂಬ ಅಂಶವನ್ನು ಅಧ್ಯಯನಕ್ಕೆ ಒಳಪಡಿಸಬೇಕಾಗಿದೆ.

ಮಂಜುನಾಥ ಉವತ್ತಿ ಶೆಟ್ಟರ್ (2015)[85] ಇವರು ತಮ್ಮ 'ಸಮಸ್ಯೆಯೇ ಅಲ್ಲದ ಸಮಸ್ಯೆ-ಕಸ' ಎಂಬ ಅಂಕಣದಲ್ಲಿ ಚಾಣಕ್ಯ ನೀತಿಯನ್ನು ಉದಾಹರಿಸಿದ್ದಾರೆ. "ನಮ್ಮ ಸಮಸ್ಯೆಗಳೆಲ್ಲ ತುಂಬ ಸರಳವಾಗಿರುತ್ತವೆ. ಅವುಗಳನ್ನು ಪರಿಹರಿಸುವಾಗಲಷ್ಟೇ ಕಷ್ಟ ಕಾಣಿಸಿಕೊಳ್ಳುತ್ತದೆ". ಭಾರತದಲ್ಲಿ 2019 ರ ಹೊತ್ತಿಗೆ ನಗರವಾಸಿಗಳ ಸಂಖ್ಯೆ 38 ಕೋಟಿಗೆ ಏರಲಿದ್ದು ಒಟ್ಟು 4041 ನಗರ, ಪಟ್ಟಣಗಳಲ್ಲಿ ಪ್ರತಿ ದಿನ 6.7 ಕೋಟಿ ಟನ್ ಕಸ ಉತ್ಪಾದನೆಯಾಗಲಿದೆ. ಇದಕ್ಕೆ ಈಗಾಗಲೇ ಕೇಂದ್ರ ಸರ್ಕಾರವು ರೂ.62,000 ಕೋಟಿ ಹಣದ ಅವಶ್ಯಕತೆ ಇದೆ ಎಂದು ಅಂದಾಜಿಸಿದೆ. ಘನತ್ಯಾಜ್ಯ ಸಮಸ್ಯೆ/ ನಿರ್ವಹಣೆ ನಮ್ಮ ದೇಶದ ಸಮಸ್ಯೆಯಷ್ಟೆ ಅಲ್ಲ, ಇದೊಂದು ಜಾಗತಿಕ ಸಮಸ್ಯೆ ನಮ್ಮ ದೇಶದಲ್ಲಿ ನಗರವಾಸಿಯೊಬ್ಬನ ಸರಾಸರಿ ತ್ಯಾಜ್ಯ ಉತ್ಪಾದನೆ 370 ಗ್ರಾಂನಿಂದ 500 ಗ್ರಾಂ ಗಳಾದರೆ ಡೆನ್ಮಾರ್ಕ್‌ನಲ್ಲಿ 2.2 ಕಿ.ಗ್ರಾಂ, ಅಮೇರಿಕಾ 2 ಕಿ.ಗ್ರಾಂ, ಚೀನಾ 700 ಗ್ರಾಂ ಆಗಿದೆ. 2013-14ನೇ ಸಾಲಿನ ವರದಿಯ ಪ್ರಕಾರ ಜಗತ್ತಿನಾದ್ಯಂತ ಪ್ರತೀ ವರ್ಷ ಉತ್ಪತ್ತಿಯಾಗುತ್ತಿರುವ ತ್ಯಾಜ್ಯದ ಪ್ರಮಾಣ 1.96 ಶತಕೋಟಿ ಟನ್‌ಗಳು. ಶ್ರೀಮಂತ ದೇಶಗಳಲ್ಲಿ ಶೇ.98 ರಷ್ಟು ತ್ಯಾಜ್ಯವನ್ನು ಸಂಸ್ಕರಿಸಿ ವಿಲೇವಾರಿ ಮಾಡಲಾಗುತ್ತಿದೆ. ಕಸದಿಂದ ವಿದ್ಯುತ್ ಉತ್ಪಾದನೆ ಮಾಡುವ ಸ್ಥಾವರಗಳು ಜಗತ್ತಿನಾದ್ಯಂತ ಒಟ್ಟು 2246 ಇದ್ದು ಅವುಗಳ ಅತೀ ಹೆಚ್ಚು ಐರೋಪ್ಯ ಒಕ್ಕೂಟದಲ್ಲಿ ಅಂದರೆ 445, ಚೀನಾದಲ್ಲಿ 150, ಅಮೇರಿಕಾದಲ್ಲಿ 86, ಭಾರತದಲ್ಲಿ ಕೇವಲ ಎಂಟು ಸ್ಥಾವರಗಳಿವೆ. ಭಾರತದಲ್ಲಿ ಪ್ರತಿನಿತ್ಯ ಉತ್ಪತ್ತಿಯಾಗುವ 36420 ಟನ್ ಕಸ ದಹಿಸಿ 452 ಮೆಗಾವ್ಯಾಟ್ ವಿದ್ಯುತ್ ಉತ್ಪಾದಿಸಬಹುದೆಂದು ಅಂದಾಜಿಸಲಾಗಿದೆ.

ದಿ ಹಿಂದು, (2016)[86] ವರದಿಯಂತೆ ಕರ್ನಾಟಕದ ಉಡುಪಿ ಜಿಲ್ಲೆಯ 19 ಗ್ರಾಮ ಪಂಚಾಯತ್‌ಗಳು ಘನತ್ಯಾಜ್ಯ ನಿರ್ವಹಣಾ ಘಟಕಗಳನ್ನು ಸ್ಥಾಪಿಸಲು ಯೋಜನೆಯನ್ನು ತಯಾರಿಸಿವೆ. ಸ್ವಚ್ಛ ಭಾರತ ಅಭಿಯಾನದ ಮೂಲಕ ಒಟ್ಟು 3 ಕೋಟಿ ರೂಪಾಯಿ ವೆಚ್ಚದಲ್ಲಿ ಈ ಘಟಕಗಳು ಸ್ಥಾಪನೆಯಾಗಲಿವೆ. ಪ್ರತಿ ಗ್ರಾಮ ಪಂಚಾಯತ್‌ಗೆ ರೂ 13 ಲಕ್ಷದವರೆಗೆ ನೀಡಲಾಗುವುದು. ಇದಲ್ಲದೆ ವಾಹನ ಸಂಚಾರ ಸಾಧ್ಯವಿಲ್ಲದ ಹಳ್ಳಿಗಳಿಗೆ ಕೊಳವೆ ಗೊಬ್ಬರ ಮತ್ತು ದ್ರವ ತ್ಯಾಜ್ಯ ನಿರ್ವಹಣೆಗಾಗಿ ಹೀರುಗುಂಡಿಗಳನ್ನು(ಸೋಕ್ ಪಿಟ್) ರಚಿಸಲು ಪಂಚಾಯತ್‌ಗಳ ಮೂಲಕ ಜನರಿಗೆ ಅನುದಾನವನ್ನು ನೀಡುವ ತೀರ್ಮಾನ ಜಿಲ್ಲಾ ಪಂಚಾಯತ್ ತೆಗೆದುಕೊಂಡಿದೆ.ಈ ಯೋಜನೆ ಯಶಸ್ವಿಯಾದರೆ, ಮುಂದೆ ಎಲ್ಲಾ ಗ್ರಾಮ ಪಂಚಾಯತ್‌ಗಳು ಈ ಯೋಜನೆಯನ್ನು ಕಾರ್ಯಗತಗೊಳಿಸುವುದರ ಮೂಲಕ ಘನ ಹಾಗೂ ದ್ರವ ತ್ಯಾಜ್ಯ ನಿರ್ವಹಣೆ ಯಶಸ್ವಿಯಾಗಲಿದೆ.

ವೇಸ್ಟ್ ಮೆನೇಜ್‌ಮೆಂಟ್ ವರ್ಲ್ಡ್, (2016)[87] ವರದಿಯಂತೆ 2012ರಲ್ಲಿ 288 ಮಿಲಿಯನ್ ಟನ್ ಪ್ಲಾಸ್ಟಿಕ್ ಉತ್ಪಾದನೆಯಾಗಿದೆ. ಅದರಲ್ಲಿ 15 ಮಿಲಿಯನ್ ಟನ್ ಪ್ಲಾಸ್ಟಿಕ್ ತ್ಯಾಜ್ಯವನ್ನು ಮಾರಾಟ ಮಾಡಲಾಗಿದೆ. ಶೇಕಡ 87ರಷ್ಟು (ತೂಕದ) ಯುರೋಪಿಯನ್ ಯೂನಿಯನ್‌ನ ಪ್ಲಾಸ್ಟಿಕ್ ತ್ಯಾಜ್ಯವನ್ನು ಚೈನಾಕ್ಕೆ ರಫ್ತು ಮಾಡಲಾಗಿದೆ. ಶೇಕಡ 5ಕ್ಕಿಂತ ಹೆಚ್ಚು ಹೊಸ ಪ್ಲಾಸ್ಟಿಕ್ ಉತ್ಪನ್ನಗಳನ್ನು ತ್ಯಾಜ್ಯ ಪ್ಲಾಸ್ಟಿಕ್‌ನಿಂದ ತಯಾರಿಸಿ ಮಾರಾಟ ಮಾಡಲಾಗಿದೆ. ಹಾಗೆಯೇ 2014 ರಲ್ಲಿ ಲ್ಯಾಟಿನ್ ಅಮೇರಿಕ ಒಂದರಲ್ಲೇ 4 ಮಿಲಿಯನ್ ಟನ್‌ನಷ್ಟು ಇಲೆಕ್ಟ್ರಾನಿಕ್ ತ್ಯಾಜ್ಯ ಉತ್ಪಾದನೆಯಾಗಿದೆ. ಅದರಲ್ಲಿ ಕೇವಲ 17,000 ಟನ್ ಮೊಬೈಲ್ ಫೋನ್ ತ್ಯಾಜ್ಯ ಅಂದರೆ ಇದರ ಪ್ರಮಾಣ ಶೇಕಡ 0.5ಕ್ಕಿಂತಲೂ ಕಡಿಮೆ. ಹೆಚ್ಚಿನ ರಾಷ್ಟ್ರಗಳಲ್ಲಿ ಇ–ವೇಸ್ಟನ್ನು ಅಪಾಯಕಾರಿ ತ್ಯಾಜ್ಯ ನೀತಿ ಅಡಿಯಲ್ಲಿ ಸೇರಿಸಲಾಗಿದೆ. ಆದರೆ ಲ್ಯಾಟಿನ್ ಅಮೇರಿಕದಲ್ಲಿ (ಮುಖ್ಯವಾಗಿ ಬ್ರೆಜಿಲ್) ಪ್ರತ್ಯೇಕ ಇ–ವೇಸ್ಟ್ ನಿಯಮಾವಳಿಗಳನ್ನು ರೂಪಿಸಲಾಗಿದೆ.

## 2.3. ತ್ಯಾಜ್ಯ ನಿರ್ವಹಣೆಯ ನೀತಿ ನಿಯಮಾವಳಿಗಳ ಬಗೆಗಿನ ಸಾಹಿತ್ಯ ವಿಮರ್ಶೆ

ರಾಮಚಂದ್ರ ಟಿ.ವಿ., (2002)[88] ಪ್ರಕಾರ ಇತ್ತೀಚಿನ ದಿನಗಳಲ್ಲಿ ಮೂಲದಲ್ಲಿ ತ್ಯಾಜ್ಯದಲ್ಲಿ ಕಡಿತಗೊಳಿಸುವುದು ಅಥವಾ ತ್ಯಾಜ್ಯ ಉಂಟಾಗದಂತೆ ತಡೆಯುವ ಕ್ರಮವು ಹೆಚ್ಚಾಗುತ್ತಿದೆ. ತ್ಯಾಜ್ಯವನ್ನು ಮೂಲದಲ್ಲಿ ಕಡಿತಗೊಳಿಸುವ ವಿಧಾನವು ಇತರ ತ್ಯಾಜ್ಯ ನಿರ್ವಹಣಾ ವಿಧಾನಗಳಿಗಿಂತ ಭಿನ್ನವಾದುದು. ಕಾರಣ ಇದು ನಿರ್ವಹಣಾ ವಿಧಾನಕ್ಕೆ ತ್ಯಾಜ್ಯವನ್ನೇ ಸಿಗದಂತೆ ಮಾಡುತ್ತಿದೆ. ತ್ಯಾಜ್ಯ ಕಡಿತಗೊಳಿಸುವ ಬಗ್ಗೆ ಯೋಜನೆಯನ್ನು ತಯಾರಿಸುವುದು, ನಿರ್ದಿಷ್ಟ ಗುರಿಯನ್ನು ನಿಗದಿಪಡಿಸುವುದು ಮತ್ತು ಮಾಪನ ವಿಧಾನವನ್ನು ಅಳವಡಿಸುವುದು ತ್ಯಾಜ್ಯವನ್ನು ಮೂಲದಲ್ಲಿ ಕಡಿತಗೊಳಿಸಲು ಅವಶ್ಯ ಕ್ರಮಗಳಾಗಿವೆ. ಅನುಷ್ಠಾನ ಗೊಳಿಸಲು ಸಮರ್ಥ ಆಡಳಿತ ವ್ಯವಸ್ಥೆಯ ಅಗತ್ಯವೂ ಇದೆ. ವಿಷಯುಕ್ತ ತ್ಯಾಜ್ಯದ ನಿರ್ವಹಣೆಗೆ ವಿಶೇಷ ನೀತಿ ಅನುಷ್ಠಾನಗೊಳಿಸಬೇಕಾಗಿದೆ. ವಿಷಯುಕ್ತ ರಾಸಾಯನಿಕ ವಸ್ತುಗಳನ್ನು ಸಾರ್ವಜನಿಕ ಸ್ಥಳದಲ್ಲಿ ವಿಲೇವಾರಿ ಮಾಡುವುದನ್ನು ನಿಷೇಧಿಸಬೇಕು. ಅವುಗಳನ್ನು ಪ್ರತ್ಯೇಕವಾಗಿ ಸಂಗ್ರಹಿಸುವ ವ್ಯವಸ್ಥೆ ಮಾಡಬೇಕು. ಬ್ಯಾಟರಿ, ಬಲ್ಬು, ಟ್ಯೂಬ್‌ಲೈಟ್, ಸಿ.ಎಫ್.ಎಲ್ ಬಲ್ಬುಗಳು, ಸುಗಂಧ ದ್ರವ್ಯಗಳ ಬಾಟಲಿ, ವಿಷಕಾರಿ ತ್ಯಾಜ್ಯಗಳನ್ನು ಇತ್ಯಾದಿಗಳನ್ನು ಪುನರಾವರ್ತನ ವಿಧಾನದ ಮೂಲಕ ನಿರ್ವಹಣೆ ಮಾಡಬೇಕು. ತ್ಯಾಜ್ಯಗಳ ಜೀವಿತಾವಧಿ, ವಿಷಯುಕ್ತ ವಸ್ತುಗಳ ನಿಷೇಧ, ವಸ್ತುಗಳ ಪ್ಯಾಕೆಟ್ ತಯಾರಿಕಾ ನೀತಿ, ವಸ್ತುಗಳ ಮೇಲೆ ವಿವರಣ ಪಟ್ಟಿಗಳನ್ನು (ಲೇಬಲ್) ಹಾಕುವುದು ಇತ್ಯಾದಿ ಕ್ರಮಗಳ ಮೂಲಕ ತ್ಯಾಜ್ಯ ಪ್ರಮಾಣದ ಹತೋಟಿ ಮತ್ತು ಕಡಿತ ಮಾಡಲು ಸಾಧ್ಯ.

ಜೋರ್ಜ್ ಟ್ಯೊಬ್ಯೊನೋಗ್ಲೌಸ್, ಕೆಲ್ಲಿ ಹಿಲ್ ಮತ್ತು ಜಿಮ್‌ಗ್ಲೆನ್ (2002)[89] ಇವರು ಕಂಡುಕೊಂಡಂತೆ ಘನತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ಕಾನೂನುಗಳು 1960ರಿಂದ ಈಚೆಗೆ ಹೆಚ್ಚಿಗೆ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. 1976ರಲ್ಲಿ ಅಮೆರಿಕದಲ್ಲಿ ಫೆಡರಲ್ ರಿಸೋರ್ಸ್ ಕನ್ಸರ್ವೇಶನ್ ಎಂಡ್ ರಿಕವರಿ ಆಕ್ಟ್ ಜಾರಿಗೆ ಬಂದಿತು.

ಫ್ರಾಂಕ್ ಕ್ರೀತ್ ಇವರ ಪ್ರಕಾರ (2002)[90] ತ್ಯಾಜ್ಯ ದಹನದಿಂದ ಭೂಭರ್ತಿಯ ಪ್ರಮಾಣ ಕಡಿತಗೊಳಿಸುತ್ತದೆ ಹಾಗೂ ಉಷ್ಣ ಮತ್ತು ಶಕ್ತಿಯ ಉತ್ಪಾದನೆ ಸಾಧ್ಯ.ಇದೊಂದು ಕಡಿಮೆ ವೆಚ್ಚದ ನಿರ್ವಹಣಾ ವಿಧಾನ. ಯೂರೋಪಿನ ರಾಷ್ಟ್ರಗಳು, ಜಪಾನ್, ಪರಿಸರವನ್ನು ಅತ್ಯುನ್ನತ ಮಟ್ಟದಲ್ಲಿ ಸಂರಕ್ಷಿಸಿಕೊಂಡಿರುವ ಸ್ವೀಡನ್, ಸ್ವಿಟ್ಜರ್‌ಲ್ಯಾಂಡ್ ಮುಂತಾದ ದೇಶಗಳಲ್ಲಿ ಶೇಕಡ 75ರಷ್ಟು ತ್ಯಾಜ್ಯವನ್ನು ದಹಿಸುತ್ತಾರೆ. ಇದರಿಂದ ಸಾಗಾಟ ವೆಚ್ಚವನ್ನು ಕಡಿತಗೊಳಿಸು ವುದರೊಂದಿಗೆ, ಕಡಿಮೆ ವಿಸ್ತೀರ್ಣದ ವಿಲೇವಾರಿ ಜಾಗ ಸಾಕಾಗುತ್ತದೆ. ನುರಿತ ತಂತ್ರಜ್ಞಾನ ಹಾಗೂ ತಂತ್ರಜ್ಞರ ಅಗತ್ಯ ಇದೆ. ಹಾಗೆಯೇ ಎಲ್ಲಾ ರೀತಿಯ ತ್ಯಾಜ್ಯಗಳನ್ನು ದಹಿಸಲು ಸಾಧ್ಯವಿಲ್ಲ. ಹೆಚ್ಚು ತೇವಾಂಶವಿರುವ ತ್ಯಾಜ್ಯಗಳನ್ನು ದಹಿಸಲು ಹೆಚ್ಚಿನ ಇಂಧನದ ಅವಶ್ಯಕತೆಯಿದೆ.

ಖಾನ್ ಎಚ್ ಇಕ್ಬಾಲ್ ಮತ್ತು ಆಸನ್ ನವೆದ್ (2003)[91] ಇವರು ಪರಿಸರ ಲೆಕ್ಕ ಪರಿಶೋಧನೆ (ಎನ್ವರ್ಮೆಂಟ್ ಆಡಿಟ್) ಬಗ್ಗೆ ವಿವರಣೆ ನೀಡಿದ್ದಾರೆ. ಪರಿಸರ ಲೆಕ್ಕ ಪರಿಶೋಧನೆ ಯೆಂದರೆ ಕಾಲಕಾಲಕ್ಕೆ ತ್ಯಾಜ್ಯ ನಿರ್ವಹಣೆ ಪದ್ಧತಿ ಹೇಗೆ ಕಾರ್ಯ ನಿರ್ವಹಿಸುತ್ತದೆ ಎಂಬುದರ ಪರಿಶೀಲನೆ. ಇದು ತ್ಯಾಜ್ಯ ಉತ್ಪಾದನೆಯನ್ನು ಮೂಲದಲ್ಲಿ ಕಡಿತಗೊಳಿಸುವುದು, ಸಂಪನ್ಮೂಲಗಳ ಸದ್ಬಳಕೆ, ಜನ–ಜಾಗೃತಿ ಕಾರ್ಯಕ್ರಮ, ಕಾನೂನಿನ ಅಗತ್ಯಗಳ ಸೇರ್ಪಡೆ ಮುಂತಾದ ಉದ್ದೇಶಗಳನ್ನು ಈಡೇರಿಸಲು ನೆರವಾಗುತ್ತದೆ. 'ಪರಿಸರ ಲೆಕ್ಕ ಪರಿಶೋಧನೆ'ಯು 1986ರ ಪರಿಸರ ಸಂರಕ್ಷಣಾ ಕಾಯ್ದೆಯ ಪ್ರಕಾರ ಕೈಗಾರಿಕೆಗಳಿಗೆ ಕಡ್ಡಾಯವಾಗಿತ್ತು. ನಂತರ ಅದನ್ನು ಪರಿಸರ ಹೇಳಿಕೆ ಎಂಬುದಾಗಿ ತಿದ್ದುಪಡಿ ಮಾಡಿ ಕಾನೂನಿನಲ್ಲಿ ಸಡಿಲಿಕೆ ಮಾಡಲಾಯಿತು. ಅಂತರಾಷ್ಟ್ರೀಯ ಗುಣಮಟ್ಟ ಸಂಸ್ಥೆ (ಐಎಸ್ ಒ) ಇದರ "ಐಎಸ್ಒ 14001 (ISO 14001) ಪರಿಸರ ನಿರ್ವಹಣಾ ಪದ್ಧತಿಯು ಪರಿಸರ ಲೆಕ್ಕ ಪರಿಶೋಧನೆಯ ಮಾರ್ಗಸೂಚಿ ಮತ್ತು ಸಾಮಾನ್ಯ ತತ್ವಗಳನ್ನು ಒಳಗೊಂಡಿದೆ. ಇದರಲ್ಲಿ ಬೇರೆ ಬೇರೆ ನಿಬಂಧನೆ ಮತ್ತು ಉಪನಿಬಂಧನೆಗಳಿದ್ದು, ಸಂಪನ್ಮೂಲ ಸಂರಕ್ಷಣೆ, ಉಪಕರಣಗಳ ಬಳಕೆ, ಸಿಬ್ಬಂದಿ ನೇಮಕ, ತರಬೇತಿ ಮುಂತಾದ ಅಂಶಗಳೂ ಒಳಗೊಂಡಿವೆ.

ಶ್ರೀನಿವಾಸನ್ ಕೃತಿಕಾ (2006)[92] ಇವರು ಚೆನ್ನೈ ನಗರದಲ್ಲಿ ನಡೆಸಿದ ಅಧ್ಯಯನವು ಘನತ್ಯಾಜ್ಯ ನಿರ್ವಹಣೆಯಲ್ಲಿ ಸ್ಥಳೀಯ ನಾಗರಿಕರು, ಖಾಸಗಿ ಸಂಸ್ಥೆಗಳು, ನಾಗರಿಕ ಸಮುದಾಯಗಳು

ಹಾಗೂ ಸಾರ್ವಜನಿಕ-ಖಾಸಗಿ ಪಾಲುದಾರಿಕೆ ಬಗ್ಗೆ ಪ್ರಸ್ತಾವನೆಯನ್ನು ಮಾಡಿದೆ. ಇಡೀ ದೇಶದಲ್ಲಿ ನ್ಯಾಯಯುತವಾದ ಮತ್ತು ಪರಿಸರ ಸಹ್ಯ ನಿರ್ವಹಣಾ ವ್ಯವಸ್ಥೆಯನ್ನು ಅಳವಡಿಸುವ ಅಗತ್ಯವನ್ನು ತಿಳಿಸಿದ್ದಾರೆ. ತ್ಯಾಜ್ಯ ನಿರ್ವಹಣೆಯ ನೀತಿ ಮತ್ತು ಕೆಳಮಟ್ಟದಲ್ಲಿ ಅನುಷ್ಠಾನ ನಡುವಿನ ಅಂತರವನ್ನು ಅರ್ಥೈಸಿಕೊಳ್ಳುವ ದೃಷ್ಟಿಯಿಂದ, ಭಾರತದಲ್ಲಿ ತ್ಯಾಜ್ಯ ನಿರ್ವಹಣೆಯ ವಿಸ್ತಾರವಾದ ಅಧ್ಯಯನದ ಅಗತ್ಯವಿರುವುದನ್ನು ತಿಳಿಸಿದ್ದಾರೆ.

ಸಿನ್ಹ ಉದಯಪ್ರಕಾಶ್ (2007)[93] ಇವರ ಅಧ್ಯಯನದಲ್ಲಿ ಕಂಡು ಬಂದಂತೆ ಕಳೆದ ಕೆಲವು ದಶಕಗಳಲ್ಲಿ ಪರಿಸರ ಪಾಲನೆ ಹಾಗೂ ರಕ್ಷಣೆಗಾಗಿ ಹಲವಾರು ಕಠಿಣ ಕಾಯಿದೆ ಹಾಗೂ ನಿಯಮಾವಳಿಗಳು ಜಾರಿಗೆ ಬಂದಿವೆ. ಈ ನಿಯಮಾವಳಿಗಳು ಕೇವಲ ನಿಯಂತ್ರಕಗಳು ಮಾತ್ರ.. ಕೈಗಾರಿಕಾ ಚಟುವಟಿಕೆಗಳು ನಿಯಾಮಾವಳಿಗಳಿಗೆ ಅನುಸಾರವಾಗಿ ಕಾರ್ಯನಿರ್ವಹಿಸಬೇಕು. ಭಾರತದಲ್ಲಿ ನ್ಯಾಯಾಂಗ ಮತ್ತು ಸ್ವಯಂಸೇವಾ ಸಂಸ್ಥೆಗಳು ಪರಿಸರ ಸಂರಕ್ಷಣೆ ದೃಷ್ಟಿಯಿಂದ ಬಹಳಷ್ಟು ಎಚ್ಚರಿಕೆಯಿಂದ ಗಮನಿಸುತ್ತಿವೆ ಮತ್ತು ಸೂಕ್ಷ್ಮತೆಯನ್ನು ಹೊಂದಿವೆ. ಇದರ ಪರಿಣಾಮವಾಗಿ ಪರಿಸರಕ್ಕೆ ಸಂಬಂಧಿಸಿ ಅನೇಕ ಸಾರ್ವಜನಿಕ ಹಿತಾಸಕ್ತಿ ದಾವೆಗಳು ಇತ್ತೀಚಿನ ವರ್ಷಗಳಲ್ಲಿ ಹೆಚ್ಚಿವೆ. ಪರಿಸರಕ್ಕೆ ಹಾನಿ ಮಾಡಿದ ಸಾವಿರಾರು ಕೈಗಾರಿಕೆಗಳು ನ್ಯಾಯಾಂಗದ ಆದೇಶಗಳಂತೆ ಮುಚ್ಚಿವೆ ಅಥವಾ ಬೇರೆ ಸುರಕ್ಷಿತ ತಾಣಗಳಿಗೆ ವರ್ಗಾವಣೆಗೊಂಡಿವೆ.

ಸಿನ್ಹ ಉದಯಪ್ರಕಾಶ್ (2007)[94] ಇವರು ಅಧ್ಯಯನದಲ್ಲಿ ಗುರುತಿಸಿದಂತೆ ಪರಿಸರಕ್ಕೆ ಸಂಬಂಧಿಸಿದ ಕಾಯಿದೆ/ಕಾನೂನುಗಳು ಕೈಗಾರಿಕಾಭಿವೃದ್ಧಿಯನ್ನು ತಡೆಯುವ ಉದ್ದೇಶ ಹೊಂದಿಲ್ಲ. ಆದರೆ ಅವುಗಳ ಅನಿಯಂತ್ರಿತ ಬೆಳವಣಿಗೆ ತಡೆಯುವುದು ಹಾಗೂ ಪರಿಸರಕ್ಕೆ ಹಾನಿಯಾಗದಂತೆ ತಡೆಯುವ ಉದ್ದೇಶಗಳನ್ನು ಹೊಂದಿವೆ. ಆದರೂ ಕೆಲವು ಅಭಿಪ್ರಾಯದ ಪ್ರಕಾರ ಈ ನಿಯಮಾವಳಿಗಳು ಅಭಿವೃದ್ಧಿ ವಿರೋಧಿ ಧೋರಣೆಗಳನ್ನು ಹೊಂದಿವೆ. ನಮ್ಮ ಆದ್ಯತೆ ಪರಿಸರ ಸಂರಕ್ಷಣೆಯೇ ಅಥವಾ ಅಭಿವೃದ್ಧಿಯೇ ಎಂಬ ಪ್ರಶ್ನೆ ಉದ್ಭವಿಸುತ್ತಿದೆ. ಪರಿಸರಕ್ಕೆ ಹಾನಿಯಾಗದೆ ಅಭಿವೃದ್ಧಿ ಸಾಧ್ಯವೇ ಮುಂತಾದ ಪ್ರಶ್ನೆಗಳಿಗೆ ಬ್ರಂಟ್‌ಲ್ಯಾಂಡ್ ವರದಿ ತನ್ನ **'ಸಹ್ಯ ಅಭಿವೃದ್ಧಿ'**[95] ವ್ಯಾಖ್ಯೆಯ ಮೂಲಕ ಉತ್ತರ ನೀಡಿದೆ.

ಭಾಟಿಯ ಎಸ್ ಸಿ (2007)[96] ಇವರ ಅಧ್ಯಯನದ ಪ್ರಕಾರ ತ್ಯಾಜ್ಯ ನಿರ್ವಹಣಾ ವಿಧಾನದಲ್ಲಿ ಗೊಬ್ಬರ ತಯಾರಿಕಾ ವಿಧಾನವು ಪ್ರಮುಖವಾದುದು. ನಿರ್ವಹಣೆ ವೆಚ್ಚವು ತ್ಯಾಜ್ಯ ವಿಲೇವಾರಿ ಹಾಗೂ ವಸ್ತುಗಳ ಮಾರುಕಟ್ಟೆಯನ್ನು ಅವಲಂಬಿಸಿದೆ. ಗೊಬ್ಬರ ತಯಾರಿಕಾ ವಿಧಾನದ ಅನುಕೂಲತೆಗಳೆಂದರೆ, ಇದು ಅನಾವಶ್ಯಕ ವೆಚ್ಚವನ್ನು ನಿಲ್ಲಿಸುತ್ತದೆ. ಗೊಬ್ಬರವನ್ನು

ಮಾರಾಟ ಮಾಡಿ ಆದಾಯವನ್ನು ಗಳಿಸಬಹುದು ಹಾಗು ಸಾರ್ವಜನಿಕರಿಂದ ತ್ಯಾಜ್ಯ ಸಂಗ್ರಹಣಾ ವೆಚ್ಚವನ್ನು ಸಂಗ್ರಹಿಸಬಹುದು. ತ್ಯಾಜ್ಯ ನಿರ್ವಹಣೆಯ ಆರ್ಥಿಕತೆಯನ್ನು ವೆಚ್ಚ ಮತ್ತು ಆದಾಯದ ಆಧಾರದಲ್ಲಿ ಅಳೆಯಬಹುದು. ತ್ಯಾಜ್ಯ ಮೂಲಗಳಿಂದ ಉತ್ಪಾದಿಸಿದ ಗೊಬ್ಬರದಲ್ಲಿ ವಿಷಕಾರಿಯಾದ ವಸ್ತುಗಳು ಸೇರದಂತೆ ಜಾಗ್ರತೆ ವಹಿಸಬೇಕು. ಆಹಾರ ಸರಪಣಿಯ ಮೂಲಕ ಅದು ಜನರ ಹಾಗೂ ಪ್ರಾಣಿಗಳ ದೇಹವನ್ನು ಸೇರಿ ಆರೋಗ್ಯ ಸಮಸ್ಯೆಗಳಿಗೆ ಕಾರಣವಾಗುತ್ತವೆ. ಸಾವಯವ ತ್ಯಾಜ್ಯವನ್ನು ಕ್ಲಪ್ತಕಾಲದಲ್ಲಿ ಸಂಗ್ರಹಿಸಿ ವಿಲೇವಾರಿ ಮಾಡದೇ ಹೋದಲ್ಲಿ ನೊಣ, ಸೊಳ್ಳೆ, ಇಲಿ, ಹೆಗ್ಗಣ ಮುಂತಾದುವುಗಳ ಪ್ರಮಾಣ ಹೆಚ್ಚಾಗುತ್ತವೆ ಹಾಗೂ ಇದು ಆರೋಗ್ಯ ಸಮಸ್ಯೆಗೆ ಕಾರಣವಾಗುತ್ತದೆ. ಹಾಗೆಯೇ ಭರ್ತಿಮಾಡುವ ಸಂದರ್ಭದಲ್ಲಿಯೂ ಸಹ ಇಲಿ, ಹೆಗ್ಗಣ, ನೊಣ, ಸೊಳ್ಳೆ ಮುಂತಾದುವುಗಳಿಗೆ ಬೆಳೆಯಲು ಅವಕಾಶ ನೀಡಬಾರದು. ಇವುಗಳ ನಿಯಂತ್ರಣಕ್ಕೆ ತ್ಯಾಜ್ಯದ ರಾಶಿಗೆ ಸರಿಯಾದ ಮಣ್ಣಿನ ಹೊದಿಕೆ ಮಾಡಬೇಕು ಮತ್ತು ವೈಜ್ಞಾನಿಕ ವಿಧಾನಗಳನ್ನು ಅನುಸರಿಸಬೇಕು.

ಆಡಳಿತ ತರಬೇತಿ ಸಂಸ್ಥೆ ಆವರಣ, ಮೈಸೂರು ಪ್ರಕಟಪಡಿಸಿದ ಕೈಪಿಡಿಯಲ್ಲಿ (2009)[97] ಸಮಗ್ರ ಘನತ್ಯಾಜ್ಯ ವಸ್ತುಗಳ ನಿರ್ವಹಣೆಯಲ್ಲಿ ಮುಖ್ಯವಾಗಿ ನಿರ್ವಹಿಸಬೇಕಾದ ಚಟುವಟಿಕೆಗಳ ಬಗ್ಗೆ ಮಾಹಿತಿ ನೀಡಲಾಗಿದೆ. ಘನತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದಂತೆ ಭಾರತದಲ್ಲಿ ಜಾರಿ ಯಲ್ಲಿರುವ ನಿಯಮ, ಕಾಯ್ದೆಗಳ ಬಗ್ಗೆಯೂ ಮಾಹಿತಿಯನ್ನು ಈ ಕೈಪಿಡಿಯಲ್ಲಿ ನೀಡಲಾಗಿದೆ. ಮುನಿಸಿಪಾಲ್ ಘನತ್ಯಾಜ್ಯ ವಸ್ತು ನಿರ್ವಹಣೆಯ ಆರ್ಥಿಕತೆ ಕುರಿತು ನೀಡಲಾಗಿರುವ ಮಾಹಿತಿಯು ಅಧ್ಯಯನಕ್ಕೆ ಹೆಚ್ಚು ಉಪಯುಕ್ತವಾಗಿದೆ. ವೆಚ್ಚದ ಮೂಲಗಳು ಹಾಗೂ ವೆಚ್ಚ ಕಡಿತಗೊಳಿಸುವ ಯುಕ್ತಿಗಳ ಕುರಿತಾಗಿಯೂ ಮಾಹಿತಿ ಇದೆ.

ಸುಭಾಶ್ ಆನಂದ್ (2010)[98] ಇವರು ತ್ಯಾಜ್ಯ ವಿಭಜನೆಯನ್ನು ಕಡ್ಡಾಯಗೊಳಿಸಬೇಕೆಂದು ಸಲಹೆ ನೀಡಿದ್ದಾರೆ. ಮನೆಯಿಂದ ಕೊನೆಯ ಭೂಭರ್ತಿ ಅಥವಾ ನಿರ್ವಹಣೆ ಹಂತದವರೆಗೆ ಈ ವಿಭಜನಾ ಸರಪಣಿಯು ಮುಂದುವರಿಯಬೇಕು. ಸಾವಯವ ತ್ಯಾಜ್ಯಗಳನ್ನು ಗೊಬ್ಬರವಾಗಿ ಉಪಯೋಗಿಸಬೇಕು. ಕಡಿಮೆ ಆದಾಯ ಹೊಂದಿದ ಹಾಗೂ ಹಿಂದುಳಿದ ಪ್ರದೇಶಗಳ ತ್ಯಾಜ್ಯ ನಿರ್ವಹಣೆಗೆ ಆದ್ಯತೆ ನೀಡಬೇಕು ಎಂದಿದ್ದಾರೆ.

ಶ್ರೇಜಿಯಾಂಗ್ (2010)[99] ಇವರ ಅಧ್ಯಯನದಲ್ಲಿ "ತ್ಯಾಜ್ಯ ನಿರ್ವಹಣೆಗೆ ಉತ್ತಮ ಉದಾಹರಣೆ ಭಾರತ ಸರಕಾರ ದೆಹಲಿಯ ಮೆಟ್ರೋ ರೈಲ್ವೆ ನಿಲ್ದಾಣಗಳಲ್ಲಿ ಅಳವಡಿಸಿರುವ "ಶೂನ್ಯ ಸಹನೆ ನೀತಿ", ಇದರ ಪ್ರಕಾರ ರೈಲ್ವೆ ನಿಲ್ದಾಣದ ಒಳಗೆ ಯಾವುದೇ ತಿಂಡಿ, ಪಾನೀಯಗಳನ್ನು ಸೇವಿಸುವಂತಿಲ್ಲ. ಇದು ಇಡೀ ವಿಶ್ವಕ್ಕೆ ಮಾದರಿಯಾಗಿದೆ" ಎಂದಿದ್ದಾರೆ.

ಮಾಲಿಕ್ ಲೋಕೇಂದ್ರ (2010)[100] ಇವರ ಪ್ರಕಾರ ಭಾರತದಾದ್ಯಂತ ಎಲ್ಲಾ ನಗರಗಳಲ್ಲಿ ಗೃಹತ್ಯಾಜ್ಯ ನಿರ್ವಹಣೆಯು ನಿಯಮ 2000ದ ಅಡಿಯಲ್ಲಿ ಸ್ಥಳೀಯ ಸರಕಾರಗಳ ನೇತೃತ್ವದಲ್ಲಿ ನಡೆಯುತ್ತಿದೆ. ಜನರ ಸಹಭಾಗಿತ್ವ, ಆಡಳಿತದ ಕಾರ್ಯವೈಖರಿ, ಹವಾಗುಣ, ತ್ಯಾಜ್ಯದ ಮೂಲಗಳು, ಹಣಕಾಸಿನ ದೊರೆಯುವಿಕೆ ಮುಂತಾದ ಕಾರಣಗಳಿಂದ ನಿರ್ವಹಣೆಯಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಅನೇಕ ಲೋಪದೋಷಗಳು ಕಂಡುಬರುತ್ತವೆ. ಈ ಬಗ್ಗೆ ನಡೆದ ಬೇರೆ ಬೇರೆ ಅಧ್ಯಯನಗಳು, ಹಲವಾರು ಯೋಜನೆಗಳು, ನಿಯಮಾವಳಿಗಳು ಮತ್ತು ಇತರ ಅಂಶಗಳ ಉಲ್ಲೇಖವನ್ನು ಈ ಭಾಗದಲ್ಲಿ ಕಾಣಬಹುದು. ಘನತ್ಯಾಜ್ಯ ನಿರ್ವಹಣೆ ಸೇವೆಗಳಿಗೆ ಸಂಬಂಧಿಸಿ, ಆಯಾಯ ಮುನ್ಸಿಪಾಲ್‌ಗಳು ತಮ್ಮದೇ ನಿಯಮಗಳನ್ನು ರೂಪಿಸಿಕೊಂಡಿವೆ. ಆದರೆ ಹೆಚ್ಚಿನ ನಿಯಮಗಳು ತುಂಬಾ ಹಳೆಯದಾದ ಕಾರಣ ತಿದ್ದುಪಡಿ ಮಾಡುವ ಅವಶ್ಯಕತೆ ಇದೆ. ಭಾರತೀಯ ದಂಡ ಸಂಹಿತೆ, ಅಪರಾಧ ನಿಯಮ ಸಂಹಿತೆ ಮತ್ತು ಭಾರತೀಯ ಸಂವಿಧಾನದಲ್ಲಿ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ಕಾನೂನಿನ ಹಾಗೂ ಸಾಂಸ್ಥಿಕ ಚೌಕಟ್ಟು ನೀಡಲಾಗಿದೆ ಎಂದಿದ್ದಾರೆ.

ರೋಬರ್ಟ್ ಜೋನ್ ಎಸ್.(2011)[101] ಇವರು ಆಂಧ್ರಪ್ರದೇಶದ ಹೈದರಾಬಾದ್ ನಗರದಲ್ಲಿ ಇಲೆಕ್ಟ್ರಾನಿಕ್ ವಸ್ತುಗಳ ತ್ಯಾಜ್ಯ, ಆಸ್ಪತ್ರೆ ತ್ಯಾಜ್ಯ ಮತ್ತು ಅಪಾಯಕಾರಿ ತ್ಯಾಜ್ಯಗಳ ಕುರಿತು ಅಧ್ಯಯನ ನಡೆಸಿದ್ದಾರೆ. ಹೈದರಾಬಾದ್ ನಗರ ತ್ಯಾಜ್ಯಕ್ಕೆ ಸಂಬಂಧಿಸಿ ಎದುರಿಸುತ್ತಿರುವ ಸಮಸ್ಯೆಗಳು, ಹಾಗೂ ನಿರ್ವಹಣೆಗೆ ಸಂಬಂಧಿಸಿ ವಿವಿಧ ನಿಯಮಾವಳಿಗಳ ಬಗ್ಗೆಯೂ ಮಾಹಿತಿ ಒದಗಿಸಿದ್ದಾರೆ. ಇ–ವೇಸ್ಟ್ ಅಥವಾ ಇಲೆಕ್ಟ್ರಾನಿಕ್ ತ್ಯಾಜ್ಯಗಳ ಬಗ್ಗೆ ಯಾವುದೇ ಪ್ರತ್ಯೇಕ ನಿಯಮಾವಳಿ ಇಲ್ಲದಿರುವುದನ್ನು ಗುರುತಿಸಿದ್ದಾರೆ. ಇವರು 'ತ್ಯಾಜ್ಯ ವಿನಿಮಯ ಬ್ಯಾಂಕ್' ಅಥವಾ ಕೇಂದ್ರವನ್ನು ಸ್ಥಾಪಿಸುವ ಬಗ್ಗೆ ಸಲಹೆ ನೀಡಿದ್ದಾರೆ. ಇದರಿಂದ ತ್ಯಾಜ್ಯಗಳ ಮರುಬಳಕೆಗೆ, ಮರು ಉತ್ಪಾದನೆಗೆ, ಸಂಗ್ರಹಕ್ಕೆ ಅನುಕೂಲವಾಗುತ್ತದೆ. ನಗರದಲ್ಲಿ ಚಿಂದಿ ಹೆಕ್ಕುವವರ ಪ್ರಮಾಣ ಹೆಚ್ಚಾಗುತ್ತಿದೆ ಜೊತೆಗೆ ತ್ಯಾಜ್ಯ ಪ್ರಮಾಣವೂ ಏರುಗತಿಯಲ್ಲಿದೆ, ಆದರೆ ಜನರ ಭಾಗವಹಿಸುವಿಕೆ ತೃಪ್ತಿಕರವಾಗಿಲ್ಲ ಎಂಬುದನ್ನು ತಮ್ಮ ಅಧ್ಯಯನದಲ್ಲಿ ಕಂಡುಕೊಂಡಿದ್ದಾರೆ.

ಶ್ವೇತ ಎಸ್. ದೇಶಪಾಂಡೆ(2012)[102] ಇವರ ಲೀಗಲ್ ರೆಗ್ಯುಲೇಶನ್ ಆಫ್ ವೇಸ್ಟ್ ಮೆನೇಜ್‌ಮೆಂಟ್ ಇನ್ ಇಂಡಿಯ ಎನ್ನುವ ಕೃತಿಯಲ್ಲಿ ತಿಳಿಸಿದಂತೆ 1980ರಲ್ಲಿ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಂದ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಿಗೆ ಅಪಾಯಕಾರಿ ತ್ಯಾಜ್ಯಗಳ ಸಾಗಾಟ ನಡೆಯಿತು ಹಾಗೂ ಹೆಚ್ಚಿನ ತ್ಯಾಜ್ಯಗಳು ದಕ್ಷಿಣ ಆಫ್ರಿಕಾಕ್ಕೆ ರಫ್ತಾದ ಕಾರಣದಿಂದ ಆಫ್ರಿಕಾದ ಸರಕಾರ ಇದಕ್ಕೆ ತೀರ ವಿರೋಧ ವ್ಯಕ್ತಪಡಿಸಿತು, ಪರಿಣಾಮವಾಗಿ ಮುಂದಿನ

ದಿನಗಳಲ್ಲಿ ತ್ಯಾಜ್ಯ ಸಾಗಾಟದ ಕುರಿತು ಅಂತರಾಷ್ಟ್ರೀಯ ಮಟ್ಟದಲ್ಲಿ ಅನೇಕ ಚರ್ಚೆ, ಗೋಷ್ಠಿ, ಸಮ್ಮೇಳನಗಳು ನಡೆದವು ಮತ್ತು ಅನೇಕ ದ್ವಿರಾಷ್ಟ್ರೀಯ ಮತ್ತು ಬಹು ರಾಷ್ಟ್ರೀಯ ಒಪ್ಪಂದಗಳಿಗೆ ಕಾರಣವಾಯಿತು. ತ್ಯಾಜ್ಯ ನಿರ್ವಹಣೆ ಹಾಗು ವಿಲೇವಾರಿಗೆ ಸಂಬಂಧಿಸಿ ಭಾರತದಲ್ಲಿ ಇರುವ ಕಾನೂನು ಮತ್ತು ನಿಯಮಾವಳಿಗಳ ಬಗ್ಗೆ ಈ ಕೃತಿಯಲ್ಲಿ ವಿವರಣೆ ನೀಡಲಾಗಿದೆ. ಭಾರತದಲ್ಲಿ ರಾಸಾಯನಿಕ ಹಾಗೂ ಅಪಾಯಕಾರಿ ತ್ಯಾಜ್ಯ ನೀತಿ ಜಾರಿಗೆ ಬರಲು 1984 ಬೋಪಾಲ್ ಅನಿಲ ದುರಂತ ಮತ್ತು 1995ರಲ್ಲಿ ದೆಹಲಿಯಲ್ಲಿ ಉಂಟಾದ ಓಲಿಯಂ ಅನಿಲ ಸೋರಿಕೆ ಪ್ರಕರಣಗಳು ಮುಖ್ಯ ಕಾರಣವೆಂದು ತಿಳಿಸಿದ್ದಾರೆ. ತ್ಯಾಜ್ಯ ಉತ್ಪಾದನೆ ಮತ್ತು ಸಂಗ್ರಹಣೆಯ ಅವಧಿಯ ಮಧ್ಯೆ ತ್ಯಾಜ್ಯವನ್ನು ಸರಿಯಾದ ರೀತಿಯಲ್ಲಿ ಕೂಡಿಡುವುದು ಅಗತ್ಯ ಎಂದಿದ್ದಾರೆ. ತ್ಯಾಜ್ಯ ನಿರ್ವಹಣೆಯಲ್ಲಿ ನಾಗರಿಕರ ಸಹಕಾರವು ತ್ಯಾಜ್ಯವನ್ನು ಬೇರ್ಪಡಿಸುವಿಕೆ, ಸಾರ್ವಜನಿಕ ತೊಟ್ಟಿಯಲ್ಲಿ ಎಸೆಯುವಿಕೆ ಹಾಗೂ ಇನ್ನಿತರ ಸಾರ್ವಜನಿಕ ಸ್ಥಳಗಳಲ್ಲಿ ಸಮರ್ಪಕ ಕಸ ನಿರ್ವಹಣೆ ಯಲ್ಲಿ ಅಗತ್ಯ ಎಂದಿದ್ದಾರೆ. ಭಾರತದಲ್ಲಿ ಮಲ ಹೊರುವ ಪದ್ಧತಿಯ ವಿರುದ್ಧ ಗಾಂಧೀಜಿಯವರು ನಡೆಸಿದ ಹೋರಾಟದ ನಂತರ ಆಧುನಿಕ ಒಳಚರಂಡಿ ವ್ಯವಸ್ಥೆಗೆ ಹೆಚ್ಚಿನ ಪ್ರಾಧಾನ್ಯತೆ ಬಂದಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇವರ ಪ್ರಕಾರ ಕಾನೂನು ಮತ್ತು ನಿಯಮಾವಳಿಗಳನ್ನು ಸರಿಯಾಗಿ ಕಾರ್ಯರೂಪಕ್ಕೆ ತರಲು ವ್ಯವಸ್ಥೆಯಾಗಬೇಕು. ಸರಿಯಾದ ಪರಿಹಾರವನ್ನು ತೊಂದರೆ ಗೊಳಗಾದ ವ್ಯಕ್ತಿಗಳಿಗೆ ನೀಡದೆ ಹೋದರೆ ಕಾನೂನಿಗೆ ಯಾವುದೇ ಅರ್ಥ ಇಲ್ಲದಂತಾಗುತ್ತದೆ.

ಶ್ವೇತ ಎಸ್. ದೇಶಪಾಂಡೆ (2012)[103] ಇವರು ತ್ಯಾಜ್ಯ ವಿಲೇವಾರಿಗೆ ಸಂಬಂಧಿಸಿದ ಕಾನೂನಿನ ಅಂಶಗಳನ್ನು ಪ್ರಸ್ತಾಪಿಸುತ್ತಾ, ಮುನ್ಸಿಪಾಲ್ ತ್ಯಾಜ್ಯದ ಪ್ರಮಾಣವನ್ನು ಕಡಿಮೆಗೊಳಿಸಲು ಅನಾವಶ್ಯಕ ವಸ್ತುಗಳನ್ನು ಪೊಟ್ಟಣಗಳಲ್ಲಿ ಕಟ್ಟುವುದನ್ನು (ಪ್ಯಾಕೆಜಿಂಗ್) ತಡೆಯಬೇಕು, ಅಪಾಯಕಾರಿ ತ್ಯಾಜ್ಯಗಳನ್ನು ವೈಜ್ಞಾನಿಕ ಕ್ರಮದಿಂದ ವಿಲೇವಾರಿ ಮಾಡಬೇಕು ಮತ್ತು ತ್ಯಾಜ್ಯ ಪುನರ್ಬಳಕೆ–ಪುನರಾವರ್ತನೆ ಉದ್ಯಮಗಳಿಗೆ ಸರಕಾರ ಉತ್ತೇಜನ ನೀಡಬೇಕು ಹಾಗೂ ಇದರೊಂದಿಗೆ ತ್ಯಾಜ್ಯ ವಿಲೇವಾರಿ ಕಾರ್ಯದಲ್ಲಿ ತೊಡಗಿರುವ ಸ್ವಯಂಸೇವಾ ಸಂಘಟನೆಗಳನ್ನು ಪ್ರೋತ್ಸಾಹಿಸಬೇಕು, ನಿಯಮಾವಳಿಗಳನ್ನು ಅನುಷ್ಠಾನಗೊಳಿಸದಿರುವ ನಿಗಮ/ಮಂಡಳಿಗಳನ್ನು ಹೊಣೆಗಾರರನ್ನಾಗಿ ಮಾಡಬೇಕು. ಮಾಧ್ಯಮವನ್ನು ಸೂಕ್ತವಾಗಿ ಪ್ರಚಾರಕ್ಕಾಗಿ ಬಳಸಿಕೊಳ್ಳಬೇಕು ಮುಂತಾದ ಸಲಹೆಗಳನ್ನು ನೀಡಿದ್ದಾರೆ. ಕಾನೂನಿನಲ್ಲಿ ತ್ಯಾಜ್ಯ ಹಾಗೂ ಮಾಲಿನ್ಯ ತಡೆಗೆ ಸಂಬಂಧಿಸಿ ತಪ್ಪಿತಸ್ಥರ ವಿರುದ್ಧ ಸಾರ್ವಜನಿಕ ಹಿತಾಸಕ್ತಿ ದಾವೆಯನ್ನು ಹೂಡಲು ಹಾಗೂ ಸಾರ್ವಜನಿಕ ತೊಂದರೆ ಆಧಾರದಲ್ಲಿ ಕಾನೂನು ಕ್ರಮ ಕೈಗೊಳ್ಳಲು ಅವಕಾಶವಿರುವುದನ್ನು ಗುಜರಾತ್ ಹೈಕೋರ್ಟ್ ಮತ್ತು ಮಧ್ಯಪ್ರದೇಶ ಹೈಕೋರ್ಟ್ (ಉಚ್ಚ ನ್ಯಾಯಾಲಯ) ಹೇಳಿದೆ. ಕರ್ತವ್ಯ ಲೋಪ ಎಸಗಿದ ಉತ್ತರ ಪ್ರದೇಶದ

ಅಲಹಾಬಾದ್ ನಗರದ ಪೌರಕಾರ್ಮಿಕರ ವಿರುದ್ಧ ಕಠಿಣ ಶಿಸ್ತುಕ್ರಮ ಕೈಗೊಳ್ಳುವಂತೆ ಅಲಹಾಬಾದ್ ನಗರಪಾಲಿಕೆಗೆ ಉತ್ತರ ಪ್ರದೇಶದ ಉಚ್ಚನ್ಯಾಯಾಲಯವು ನಿರ್ದೇಶನ ನೀಡಿರುವುದನ್ನು ಉಲ್ಲೇಖಿಸಿದ್ದಾರೆ.

ಅಬ್ರಹಾಂ ಅನ್ಸು (2012)[104] ಅವರು ತ್ಯಾಜ್ಯ ನಿರ್ವಹಣೆಯಲ್ಲಿ ಕಾನೂನಿನ ಪಾತ್ರದ ಕುರಿತಾಗಿ ವಿಶ್ಲೇಷಿಸಿದ್ದಾರೆ. 2010ರಲ್ಲಿ ವಿಶ್ವಸಂಸ್ಥೆಯು ನೀರು ಪೂರೈಕೆ ಮತ್ತು ಸ್ವಾಸ್ಥ್ಯ ಪರಿಪಾಲನೆಯನ್ನು ಮಾನವ ಹಕ್ಕುಗಳನ್ನು ಸೇರಿಸಿದೆ. ಪರಿಸರ ಮಲಿನಗೊಳ್ಳಲು ಅನಾಗರಿಕ ರೀತಿಯಲ್ಲಿ ತ್ಯಾಜ್ಯಗಳನ್ನು ಎಸೆಯುವುದು ಕಾರಣವಾಗಿದೆ. ಸ್ವಚ್ಛ, ಸಭ್ಯ ಮತ್ತು ಗೌರವಯುತವಾದ ಬದುಕಿಗೆ ಅಸಮರ್ಪಕ ತ್ಯಾಜ್ಯ ನಿರ್ವಹಣೆ ತಡೆಯೊಡ್ಡಿದೆ. ಭಾರತದ ಸಂವಿಧಾನದ 21ನೇ ಆರ್ಟಿಕಲ್ ಪ್ರಕಾರ ವೈಯಕ್ತಿಕ ಸ್ವಾತಂತ್ರ್ಯ ಮತ್ತು ಜೀವ ರಕ್ಷಣೆ ಸಂಬಂಧಿಸಿ ಮಾಲಿನ್ಯ ರಹಿತ ಪರಿಸರವನ್ನು ಹೊಂದುವುದೇ ಮೂಲಭೂತ ಹಕ್ಕಾಗಿದೆ. ರಾಜ್ಯ ನೀತಿ ನಿರ್ದೇಶಕ ತತ್ವಗಳಲ್ಲಿ– ಆರ್ಟಿಕಲ್ 48ಎ ಮತ್ತು ಮೂಲಭೂತ ಕರ್ತವ್ಯ ಆರ್ಟಿಕಲ್ 51ಎ ಪರಿಸರ ಸಂರಕ್ಷಣೆಯನ್ನು ಉಲ್ಲೇಖಿಸಿದೆ. ಭಾರತೀಯ ಅಪರಾಧ ಕಾನೂನು ಐ.ಪಿ.ಸಿ ಕೋಡ್ 1860 ಮತ್ತು ಅಪರಾಧ ನಿಯಮಾವಳಿ ಕೋಡ್ 1973ರಲ್ಲಿ ಘನತ್ಯಾಜ್ಯ ನಿರ್ವಹಣೆ ಕಾನೂನಿನ ಪರಿಪಾಲನೆ ದೃಷ್ಟಿಯಿಂದಲೂ ಅಗತ್ಯ ಎನ್ನುವುದನ್ನು ಸ್ಪಷ್ಟೀಕರಿಸಿದೆ. ಆದ್ದರಿಂದ ಭೂಭರ್ತಿ, ತ್ಯಾಜ್ಯ ಸಂಗ್ರಹ ತೊಟ್ಟಿ, ತ್ಯಾಜ್ಯ ವಿಲೇವಾರಿ, ತ್ಯಾಜ್ಯ ಸಂಗ್ರಹಗಾರಗಳ ಸ್ಥಳಗಳನ್ನು ಆಯ್ಕೆ ಮಾಡುವಾಗ ಮಾನವ ಹಕ್ಕು ಮತ್ತು ಪರಿಸರ ಕಾನೂನಗಳನ್ನು ಪಾಲಿಸಲಾಗಿದೆಯೇ ಎನ್ನುವುದನ್ನು ಕ್ಷೇತ್ರಕಾರ್ಯದಲ್ಲಿ ಪರಿಶೀಲಿಸಬೇಕಾಗಿದೆ. ಘನತ್ಯಾಜ್ಯ ನಿರ್ವಹಣೆಯ ಅಗತ್ಯ ಕೇವಲ ಮಾನವ ಹಕ್ಕುಗಳಿಗೆ ಮಾತ್ರ ಸಂಬಂಧಿಸಿದ್ದಲ್ಲ, ಅದು ಪ್ರಾಣಿ ಹಕ್ಕುಗಳಿಗೂ ಸಂಬಂಧಿಸಿದ ವಿಚಾರವಾಗಿದೆ ಎನ್ನುವ ಅಂಶವನ್ನು ಎಂ.ಧನಂಜಯ ಇವರ 2012ರ ಲೇಖನವನ್ನು ಆಧರಿಸಿ ಉಲ್ಲೇಖಿಸಿದ್ದಾರೆ.

ಅಗರ್ವಾಲ್ ಸುನೀತಾ ಮತ್ತು ಆರೋರಾ ಲಲಿತಾ (2013)[105] ಇವರ ಪ್ರಕಾರ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಕೈಗಾರಿಕೀಕರಣದಿಂದಾಗಿ ಘನತ್ಯಾಜ್ಯ ಪ್ರಮಾಣ ತೀವ್ರಗತಿಯಲ್ಲಿ ಹೆಚ್ಚಾಗುತ್ತಿದೆ. ವಸತಿ ಪ್ರದೇಶಗಳ ಖಾಲಿ ಮತ್ತು ನಿರುಪಯುಕ್ತ ಜಾಗಗಳಲ್ಲಿ ತ್ಯಾಜ್ಯಗಳನ್ನು ರಾಶಿ ಹಾಕುವುದರಿಂದ ಆರೋಗ್ಯ ಸಮಸ್ಯೆಗಳು ಹಾಗೂ ಸಾಂಕ್ರಾಮಿಕ ರೋಗಗಳು ಕಂಡುಬಂದಿವೆ. ಸಾವಯವ ತ್ಯಾಜ್ಯಗಳನ್ನು ಸರಿಯಾಗಿ ನಿರ್ವಹಣೆ ಮಾಡದೇ ಹೋದರೆ ಅವುಗಳು ಕೊಳೆಯುವುದರಿಂದ ಕೆಟ್ಟ ವಾಸನೆ, ನೊಣ–ನುಸಿಗಳ ಹಾವಳಿ ಹೆಚ್ಚಾಗಿ ಮಲೇರಿಯ, ಆಮಶಂಕೆ, ಕಾಲರ ಮುಂತಾದ ಸಾಂಕ್ರಾಮಿಕ ರೋಗಗಳು ಬಹುಬೇಗ ಉಂಟಾಗುತ್ತವೆ.

ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ವಾರ್ಷಿಕ ವರದಿ (2013–14)[106] ಮುನ್ಸಿಪಾಲ್ ಘನತ್ಯಾಜ್ಯ ನಿರ್ವಹಣೆ ಸಮಿತಿಯ ಸಭೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ತೆಗೆದುಕೊಂಡ ಪ್ರಮುಖ ನಿರ್ಣಯಗಳೆಂದರೆ: 1. ಶೈಕ್ಷಣಿಕ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಮಾರ್ಗದರ್ಶಿ ಸೂತ್ರಗಳನ್ನು ಅಳವಡಿಸುವುದು. 2. ಭೂಭರ್ತಿ ಪ್ರದೇಶಗಳ ಸುತ್ತಮುತ್ತ ಅಭಿವೃದ್ಧಿ ರಹಿತ ವಲಯಗಳನ್ನಾಗಿ ಮಾಡುವಂತೆ ಮಾರ್ಗದರ್ಶಿ ಸೂತ್ರಗಳನ್ನು ನೀಡುವುದು. 3. ಕಸಾಯಿಖಾನೆಗಳಲ್ಲಿ ತ್ಯಾಜ್ಯ ನಿರ್ವಹಣೆ ಬಗ್ಗೆ ನಿರ್ದೇಶನಗಳನ್ನು ರೂಪಿಸುವುದು. 4. ಕಟ್ಟಡ ನಿರ್ಮಾಣ ಮತ್ತು ನೆಲಸಮಗೊಳಿಸುವ ಕಾರ್ಯಗಳಲ್ಲಿ ಉಂಟಾಗುವ ತ್ಯಾಜ್ಯ ನಿರ್ವಹಣೆ ಬಗ್ಗೆ ನಗರ ಸ್ಥಳೀಯ ಸಂಸ್ಥೆಗಳು ಅನುಸರಿಸಬೇಕಾದ ನಿಯಮಗಳನ್ನು ರಚಿಸುವುದು, ಇತ್ಯಾದಿ.

ಉಷಾಕುಮಾರಿ ಎಂ. ಮತ್ತು ಫೆಮಿಲಾ ಡಾರ್ಲಿಂಗ್ (2015)[107] ಇವರ ಅಧ್ಯಯನದಂತೆ, 'ಶೂನ್ಯ ತ್ಯಾಜ್ಯ' ಎಂದರೆ ಎಲ್ಲಾ ತ್ಯಾಜ್ಯಗಳನ್ನು ಸಮರ್ಪಕವಾಗಿ ಬಳಕೆ ಮಾಡುವುದು. ಒಂದು ಅಂದಾಜಿನ ಪ್ರಕಾರ (ತೋಂಪ್ಸನ್ ಎಸ್.ದಿ ಎನ್ವಿರಾನ್‌ಮೆಂಟ್ ಆಂಡ್ ಫ್ಯೂಚರ್ ಟ್ರೆಂಡ್ಸ್. ಫಿಲೋಸೋಪಿಕಲ್ ಟ್ರ್ಯಾನ್ಸಾಕ್ಷನ್ಸ್ ಆಫ್ ದಿ ರಾಯಲ್ ಸೊಸೈಟಿ, 2009 ಡಿಸೆಂಬರ್) 28 ಶೇಕಡ ಘನತ್ಯಾಜ್ಯವನ್ನು ಪುನರಾವರ್ತನ ವಿಧಾನದ ಮೂಲಕ ಬಳಸಲಾಗುತ್ತಿದೆ, 15 ಶೇಕಡ ದಹಿಸಲ್ಪಡುತ್ತದೆ, ಉಳಿದ 57 ಶೇಕಡ ನಿಷ್ಪ್ರಯೋಜಕವಾಗಿ ಭೂಭರ್ತಿ ಮಾಡಲಾಗುತ್ತಿದೆ. ತಮಿಳುನಾಡಿನ ಕೊಳಾಚೆಲ್ ಮುನ್ಸಿಪಾಲಿಟಿ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣಾ ಜಾಗೃತಿಯ ಕುರಿತು ನಡೆಸಿದ ಅಧ್ಯಯನದಲ್ಲಿ ಎರಡು ರೀತಿಯಲ್ಲಿ ಪರೀಕ್ಷಿಸಲಾಯಿತು. ಜಾಗೃತಿ ಕಾರ್ಯಕ್ರಮ ನೀಡುವ ಮೊದಲು ಜನರ ಪ್ರತಿಕ್ರಿಯೆ ಹಾಗೂ ನೀಡಿದ ನಂತರದ ಪ್ರತಿಕ್ರಿಯೆ. ಅಧ್ಯಯನದ ಪ್ರಕಾರ ವೀಡಿಯೋ ಮಾಹಿತಿ ಕಾರ್ಯಕ್ರಮವು ಶೂನ್ಯ ತ್ಯಾಜ್ಯ ನಿರ್ವಹಣೆ ಬಗ್ಗೆ ವಯಸ್ಕರಲ್ಲಿ ಹೆಚ್ಚಿನ ಜಾಗೃತಿಯನ್ನು ಮೂಡಿಸಿದೆ. ತ್ಯಾಜ್ಯ ನಿರ್ವಹಣಾ ಶಿಕ್ಷಣದ ಅವಶ್ಯಕತೆಯಿರುವುದನ್ನು ಈ ಅಧ್ಯಯನವು ಗುರುತಿಸಿದೆ. ಅವರ ಆದಾಯ ಮತ್ತು ಶಿಕ್ಷಣಮಟ್ಟ ತ್ಯಾಜ್ಯ ನಿರ್ವಹಣೆಯಲ್ಲಿ ಧನಾತ್ಮಕವಾಗಿ ಕಾರ್ಯ ನಿರ್ವಹಿಸಿರುವುದು ಕಂಡುಬಂದಿದೆ.

ಬಾಲ ಸುಬ್ರಮಣ್ಯನ್ (2015)[108] ಇವರು ಘನತ್ಯಾಜ್ಯದ ನಿರ್ವಹಣೆಗೆ ಸಂಬಂಧಿಸಿ, ಒಟ್ಟು ತ್ಯಾಜ್ಯ ಪ್ರಮಾಣ, ಭೂ ಭರ್ತಿ ಪ್ರದೇಶ, ಹಾಗೂ ಇತರ ನಿರ್ವಹಣಾ ವಿಧಾನಕ್ಕೆ ಸಂಬಂಧಿಸಿ ನಿಖರವಾದ ಅಂಕಿ–ಅಂಶಗಳಿಲ್ಲದಿರುವುದನ್ನು ಗುರುತಿಸಿದ್ದಾರೆ. ಆದುದರಿಂದ ತ್ಯಾಜ್ಯ ನಿರ್ವಹಣಾ ವೆಚ್ಚ ಮತ್ತು ಲಾಭದ ಪ್ರಮಾಣವನ್ನು ನಿಖರವಾಗಿ ಮಾಪನ ಮಾಡುವುದು ಸಾಧ್ಯವಿಲ್ಲ. ಭಾರತದಲ್ಲಿ ತ್ಯಾಜ್ಯ ನಿರ್ವಹಣಾ ವೆಚ್ಚದ ಸರಿಯಾದ ಮಾಹಿತಿ ಇಲ್ಲ. ವಸ್ತುಗಳ ಗುಣಮಟ್ಟ ಆಧಾರದಲ್ಲಿ ತೆರಿಗೆ, ಠೇವಣಿ ವಾಪಾಸು ಯೋಜನೆಗಳು ಮತ್ತು ಪರಿಮಾಣ

ಆಧಾರಿತ ತ್ಯಾಜ್ಯ ಸಂಗ್ರಹಣಾ ಶುಲ್ಕ ಇತ್ಯಾದಿ ಆರ್ಥಿಕ ಕ್ರಮಗಳನ್ನು ಅನುಸರಿಸಬೇಕು. ಇದರಿಂದ ತ್ಯಾಜ್ಯ ಉಂಟಾಗುವ ಪ್ರಮಾಣ ಕಡಿಮೆಯಾಗುತ್ತದೆ, ತ್ಯಾಜ್ಯ ವಿಲೇವಾರಿಗಿಂತ ಹೆಚ್ಚು ಪುನರುತ್ಪಾದನೆ, ಪುನರ್ಬಳಕೆಗೆ ಉಪಯೋಗಿಸಲ್ಪಡುತ್ತದೆ ಹಾಗೂ ತ್ಯಾಜ್ಯದಿಂದ ಶಕ್ತಿ ಉತ್ಪಾದನೆ ಮಾಡುವ ಪ್ರಮಾಣವು ಹೆಚ್ಚುತ್ತದೆ, ಜೊತೆಗೆ ಪರಿಸರ ಗುಣಮಟ್ಟ ಮತ್ತು ಆರೋಗ್ಯ(ನಾಗರಿಕರ ಹಾಗೂ ತ್ಯಾಜ್ಯ ನಿರ್ವಹಣಾ ಕಾರ್ಯದಲ್ಲಿ ತೊಡಗಿರುವ ನೌಕರರ) ಸಮಸ್ಯೆಗಳನ್ನು ಕಡಿಮೆ ಮಾಡುತ್ತವೆ. ಬಡತನ ರೇಖೆಗಿಂತ ಕೆಳಗಿರುವ ಜನರು ತ್ಯಾಜ್ಯ ಸಂಗ್ರಹ ನಿರ್ವಹಣೆಗೆ ಸಂಬಂಧಿಸಿದ ಅಸಾಂಪ್ರದಾಯಿಕ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಅವರ ಜೀವನ ಮಟ್ಟವನ್ನು ಸುಧಾರಿಸು ವುದು ಹಾಗೂ ತ್ಯಾಜ್ಯವನ್ನು ಮರು ಉತ್ಪಾದನೆಯಲ್ಲಿ ತೊಡಗಿಸಿಕೊಳ್ಳುವುದು ಬೆಳೆಯುತ್ತಿರುವ ನಗರಗಳ ಮುಂದಿರುವ ದೊಡ್ಡ ಸವಾಲು. ಅಸಂಘಟಿತ ಮತ್ತು ತ್ಯಾಜ್ಯ ನಿಧಿ ಸಂಗ್ರಹ/ ನಿರ್ವಹಣೆಯಲ್ಲಿ ಅಸಾಂಪ್ರದಾಯಿಕವಾಗಿ ತೊಡಗಿಸಿಕೊಂಡಿರುವ ಅಸಂಘಟಿತ ಕಾರ್ಮಿಕರ ಬಗ್ಗೆಯೂ ನಿಖರವಾದ ಮಾಹಿತಿ ಹಾಗೂ ಅವರ ಜೀವನ ಮಟ್ಟ ಸುಧಾರಣೆಗೆ ಗಮನ ಹರಿಸದಿರುವುದನ್ನು ಇವರ ಅಧ್ಯಯನವು ಗುರುತಿಸಿದೆ.

ಭವ್ಯದೊರೆ (2016)[109] ಇವರು ಮಹಾರಾಷ್ಟ್ರದ 6 ನಗರಗಳಾದ ಲೋನಾವಾಲ, ಶಿರೂರು, ಡಿಯೋಲಾಲಿ ಪ್ರವಾರ, ಉಮ್ರೇದ್, ವೆಂಗುರ್ಲಾ ಮತ್ತು ಸಂಗೋಲಗಳಲ್ಲಿ ಪರಿಣಾಮಕಾರಿ ತ್ಯಾಜ್ಯ ಸಂಗ್ರಹ, ವಿಭಜನೆ ಮತ್ತು ನಿರ್ವಹಣೆಯ ಬಗ್ಗೆ ನಡೆಸಿದ ಅಧ್ಯಯನದ ಪ್ರಕಾರ ಈ ನಗರಗಳಲ್ಲಿ ನೈರ್ಮಲ್ಯೀಕರಣಕ್ಕಾಗಿ ನಗರ ಸ್ಥಳೀಯ ಸಂಸ್ಥೆಗಳು ವಿಭಿನ್ನ ಕಾರ್ಯಕ್ರಮಗಳನ್ನು ಮತ್ತು ಯೋಜನೆಗಳನ್ನು ಜಾರಿಗೊಳಿಸಿರುವುದನ್ನು ದಾಖಲಿಸಿದ್ದಾರೆ. ಪೌರ ಕಾರ್ಮಿಕರಿಗೆ ಸರಿಯಾದ ಸಮಯದಲ್ಲಿ ವೇತನ ಪಾವತಿ, ಶುಲ್ಕ ರಹಿತ ಸಹಾಯವಾಣಿ ಮತ್ತು ಶೈಕ್ಷಣಿಕ ಸಂಸ್ಥೆಗಳಲ್ಲಿ ಜಾಗೃತಿ ಕಾರ್ಯಕ್ರಮಗಳ ಮೂಲಕ ತ್ಯಾಜ್ಯ ನಿರ್ವಹಣೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ನಗರ ಸಂಸ್ಥೆಗಳು ಮುಂದಾಗಿರುವುದನ್ನು ಉಲ್ಲೇಖಿಸಿದ್ದಾರೆ. ಸಂಗೋಲ ನಗರದಲ್ಲಿ ನೂರಾರು ಮನೆಗಳಿಗೆ ಹಸಿ ಕಸ ಮತ್ತು ಒಣ ಕಸ ಬೇರ್ಪಡಿಸಲು ಪ್ರತ್ಯೇಕ ತ್ಯಾಜ್ಯ ಸಂಗ್ರಹ ಬಕೆಟುಗಳನ್ನು ನೀಡಲಾಯಿತು. ಲೋನಾವಾಲ ನಗರದಲ್ಲಿ ತ್ಯಾಜ್ಯ ವಿಲೇವಾರಿಗೆ ಸಂಬಂಧಿಸಿದ ದೂರು ದಾಖಲಿಸಲು ವಾಟ್ಸ್‌ಆಪ್(WhatsApp)ವ್ಯವಸ್ಥೆಯನ್ನು ಮತ್ತು ತ್ಯಾಜ್ಯ ಸಂಗ್ರಹ ವಾಹನಗಳಿಗೆ ಜಿ.ಪಿ.ಎಸ್(GPS)ಅನ್ನು ಅಳವಡಿಸಲಾಯಿತು. ಸಾರ್ವಜನಿಕ ಜಾಗಗಳ ಸ್ವಚ್ಛತೆಗಾಗಿ ಹಲವಾರು ಪ್ರಯೋಗಗಳನ್ನು ಸಂಗೋಲ ನಗರಪಾಲಿಕೆ ಹಮ್ಮಿಕೊಂಡಿತು. ತಪ್ಪಿತಸ್ಥರ ಹೆಸರುಗಳನ್ನು ಸಾರ್ವಜನಿಕ ಜಾಗಗಳಲ್ಲಿ ಪೋಸ್ಟರ್/ಬ್ಯಾನರುಗಳ ಮೂಲಕ ಪ್ರಕಟಿಸುವುದು, ಪತ್ರಿಕೆಯಲ್ಲಿ ಪ್ರಕಟಿಸುವುದು ಮುಂತಾದ ನಕಾರಾತ್ಮಕ ವಿಧಾನಗಳನ್ನು ಜಾರಿಗೊಳಿಸಿದರು.

ಹಾಗೆಯೇ ಗುಲಾಬಿ ಹೂವು ನೀಡುವುದರ ಮೂಲಕ ಮನಪರಿವರ್ತನೆಗೊಳಿಸುವ ಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಈ ಎಲ್ಲಾ ವಿಧಾನಗಳು ಹೆಚ್ಚು ಫಲಕಾರಿಯಾಗದ ಕಾರಣ ಕೆಲವು ಸಂದರ್ಭಗಳಲ್ಲಿ ಪೊಲೀಸ್ ಇಲಾಖೆ ಮೊದಲ ತನಿಖಾ ವರದಿ (FIR) ಹಾಕುವ ಕ್ರಮವನ್ನು ಕೈಗೊಳ್ಳಲಾಯಿತು. ವೆಂಗುರ್ಲಿ ನಗರದಲ್ಲಿ ಚಲಿಸುವ ಶೌಚಾಲಯವನ್ನು ಸ್ಥಾಪಿಸಲಾಯಿತು. ತಪ್ಪಿತಸ್ಥರಿಗೆ ದಂಡ ವಿಧಿಸುವ ಕ್ರಮವನ್ನು ಜಾರಿಗೊಳಿಸಲಾಯಿತು. ಪೌರಕಾರ್ಮಿಕರಿಗೆ ಕೈಗೆ ಕೈ ಕವಚ, ಮುಖ ಮಾಸ್ಕ್ ಮತ್ತು ಇನ್ನಿತರ ಸ್ವಚ್ಛತಾ ಸಲಕರಣೆಗಳನ್ನು ನೀಡಲಾಯಿತು.

## ಪರಾಮರ್ಶನ ಗ್ರಂಥಗಳುಮತ್ತು ಕೊನೆ ಟಿಪ್ಪಣಿಗಳು


1. ತೊಹೊಬಾಂಗ್ಲಾಸ್ ಜಾರ್ಜ್ ಮತ್ತು ಹಿಲರಿ ತೈಸೇನ್ ಮತ್ತು ಸ್ಯಾಮುಯೆಲ್ ಎ.ವಿ.ಜಿಲ್., ಇಂಟಿಗ್ರಲ್ ಸಾಲಿಡ್ ವೇಸ್ಟ್ ಮೆನೇಜ್‌ಮೆಂಟ್ ಇಂಜಿನಿಯರಿಂಗ್ ಪ್ರಿನ್ಸಿಪ್‌ಲ್ಸ್ ಎಂಡ್ ಮೆನೇಜ್‌ಮೆಂಟ್ ಇಸ್ಸ್ಯೂಸ್, ನ್ಯೂಡೆಲ್ಲಿ: ಮೆಕ್ ಗ್ರೊ ಹಿಲ್, 1993. ಪು.65–92

2. ಶೇಖರ್ ಮಧುಶ್ರೀ. (1998). ಅರ್ಬನ್ ವೇಸ್ಟ್ ಮ್ಯಾನೇಜ್‌ಮೆಂಟ್: ಆ್ಯನ್ ಇಂಡಿಯನ್ ಪರ್ಸ್‌ಪೆಕ್ಟಿವ್. ಐ ಎಸ್‌ಇ ಸಿ, ಬೆಂಗಳೂರು, ಪು.45–52.

3. ಸಿನ್ಹ, ಆರ್.ಕೆ., ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಇನ್ ಇಂಡಿಯ, ಡೆಲ್ಲಿ: ಇಂಡಿಯನ್ ಪಬ್ಲಿಷರ್ಸ್ ಅಂಡ್ ಡಿಸ್ಟ್ರಿಬ್ಯೂಟರ್ಸ್, 2000, ಪು.48–64.

4. ಅಬ್ಬಾಸಿ ಎಸ್.ಎ. ಮತ್ತು ರಾಮಸ್ವಾಮಿ ಇ.ವಿ. (2001). ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ವಿದ್ ಅರ್ಥ್‌ವರ್ಮ್ಸ್, ಡಿಸ್ಕವರಿ ಪಬ್ಲಿಷಿಂಗ್ ಹೌಸ್, ನ್ಯೂಡೆಲ್ಲಿ, ಪು.38–48.

5. ಅದೇ, ಪು.65–78.

6. ಪ್ರಭಾಕರ್ ವಿ.ಕೆ., ಸೋಲಿಡ್ ವೇಸ್ಟ್ ಮ್ಯಾನೆಜ್‌ಮೆಂಟ್, ನ್ಯೂ ಡೆಲ್ಲಿ: ಅನ್‌ಮೋಲ್ ಪಬ್ಲಿಕೇಷನ್ಸ್ ಪ್ರೈ.ಲಿ, 2001, ಪು.112–126.

7. ರಾವ್ ಎಂ.ಎನ್. ಮತ್ತು ರಜಿಯಾ ಸುಲ್ತಾನ್., ಸೋಲಿಡ್ ಅಂಡ್ ಹಾಝುರ್‌ಡಸ್ ವೇಸ್ಟ್ ಮ್ಯಾನೇಜ್‌ಮೆಂಟ್, ಹೈದರಾಬಾದ್: ಬಿ.ಎಸ್. ಪಬ್ಲಿಕೇಷನ್ಸ್, 2012, ಪು.97–115.

8. ಅದೇ, ಪು.142–164.

9. ಜೋರ್ಜ್ ಟೋಬ್ಯಾನೋಗ್ಲೌಸ್ ಮತ್ತು ಪ್ರಾಂಕ್ ಕ್ರೀತ್., ಹ್ಯಾಂಡ್ ಬುಕ್ ಆಫ್ ಸಾಲಿಡ್ ವೇಸ್ಟ್ ಮೆನೇಜ್‌ಮೆಂಟ್ ನ್ಯೂಡೆಲ್ಲಿ: ಮೆಕ್‌ಗ್ರೋಹಿಲ್ ಪಬ್ಲಿಕೇಷನ್, 2002, ಪು.212–254.

10. ರಘುನಂದನ್ ಎಂ.ಆರ್.(2004).ಸಾಲಿಡ್ ವೇಸ್ಟ್ ಮೆನೆಜ್‌ಮೆಂಟ್. ಸೆಂಟರ್ ಫಾರ್ ಡೆವಲಪ್‌ಮೆಂಟ್ ಸ್ಟಡೀಸ್, ತಿರುವನಂತಪುರಂ: ಸಿ.ಎಫ್.ಡಿ.ಎಸ್., 2004, ಪು.112–118.

11. ಅದೇ, ಪು.132–146.

12. ಪೌಲ್ ಟಿ. ವಿಲಿಯ್ಸಂ., ವೇಸ್ಟ್ ಟ್ರೀಟ್‌ಮೆಂಟ್ ಅಂಡ್ ಡಿಸ್‌ಪೋಸಲ್, ನ್ಯೂಡೆಲ್ಲಿ: ವಿಲ್ಲೈ ಇಂಡಿಯ ಪ್ರೈ ಲಿ, 2005, ಪು.72–84.

13. ಅದೇ, ಪು.92–116.

14. ಅದೇ, ಪು.167–184.

15. ಬರುಚಾ ಇರಾಚ್, ಎನ್ವಿರಾನಮೆಂಟಲ್ ಸ್ಟಡೀಸ್, ಹೈದರಾಬಾದ್: ಯೂನಿವರ್ಸಿಟೀಸ್ ಪ್ರೆಸ್, ಇಂಡಿಯ ಪ್ರೈ.ಲಿ., 2005, ಪು.214–224.

16 ಉಪಾಧ್ಯಾಯ ವಿ.ಎ, ಪ್ರಸಾದ್, ಎಂ.ಆರ್, ಶ್ರೀವಾಸ್ತವ ವಿ ಮತ್ತು ಸಿಂಗ್ ಕೆ (2005) "ಇಕೋ ಟೂಲ್ಸ್ ಫಾರ್ ಅರ್ಬನ್ ವೇಸ್ಟ್ ಮೆನೇಜ್‌ಮೆಂಟ್ ಇನ್ ಇಂಡಿಯ" ಜರ್ನಲ್ ಆಫ್ ಹ್ಯೂಮನ್ ಇಕಾಲಜಿ, ವಾಲ್ಯೂಮ್.18, ಸಂಖ್ಯೆ 4, ಪು.253–269.

17. ರಾಮಚಂದ್ರ ಟಿ.ವಿ., ಮೆನೆಜ್‌ಮೆಂಟ್ ಆಫ್ ಮುನ್ಸಿಪಾಲ್ ಸೋಲಿಡ್ ವೇಸ್ಟ್, ನ್ಯೂಡೆಲ್ಲಿ: ಕ್ಯಾಪಿಟಲ್ ಪಬ್ಲಿಷಿಂಗ್ ಕಂಪೆನಿ, 2006, ಪು.78–88.

18. ಹೊಸೆಟ್ಟಿ ಬಿ.ಬಿ., ಪ್ರೋಸ್‌ಪೆಕ್ಟಸ್ ಆ್ಯಂಡ್ ಪರ್ಸ್‌ಪೆಕ್ಟಿವ್ಸ್ ಆಫ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್. ನ್ಯೂಡೆಲ್ಲಿ: ನ್ಯೂ ಏಜ್ ಇಂಟರ್ ನ್ಯಾಷನಲ್ ಪಬ್ಲಿಷರ್, 2006, ಪು.218–228.

19. ವೇಸ್ಟ್ ಮೆನೇಜ್‌ಮೆಂಟ್ ವರ್ಲ್ಡ್, ಇಂಡಸ್ಟ್ರಿಯಮ್ ಮ್ಯಾಗಸಿನ್, ವಿಯೆನ್ನಾ, ಆಸ್ಟ್ರೀಯ ಸೆಪ್ಟಂಬರ್–ಅಕ್ಟೋಬರ್, 2016, ಆವೃತ್ತಿ 17, ಸಂಖ್ಯೆ5, ಪು.20–25

20. ಬಾಟಿಯ.ಎಸ್.ಸಿ., ಸಾಲಿಡ್ ಆ್ಯಂಡ್ ಹೆಸಾರ್ಡಸ್ ವೇಸ್ಟ್ ಮೆನೇಜ್‌ಮೆಂಟ್, ನ್ಯೂಡೆಲ್ಲಿ: ಅಂಟ್ಲಾಂಟಿಕ್ ಪಬ್ಲಿಷರ್ ಮತ್ತು ಡಿಸ್ಟ್ರಿಬ್ಯೂಟರ್ಸ್, ಪ್ರೈ.ಲಿಮಿಟೆಡ್, 2007. ಪು.48–60.

21. ಅದೇ, ಪು.61–70.

22. ಪೋತಿಮಮಕ ಜೆ (2008); "ಕಮ್ಯೂನಿಟಿ ಲೆರ್ನಿಂಗ್ ಪ್ರೊಸೆಸ್: ಎ ಮೊಡೆಲ್ ಆಫ್ ಸಾಲಿಡ್ ವೇಸ್ಟ್ ರಿಡಕ್ಷನ್ ಅಂಡ್ ಸಪರೇಷನ್", ಎನ್ವಿರಾನ್‌ಮೆಂಟಲ್ ಏಷ್ಯಾ (ಡಬ್ಲೂ ಡಬ್ಲೂ ಡಬ್ಲ್ಯೂ. ಟಿ.ಎಸ್.ಹೆಚ್. ಒಆರ್ಜಿ/ಇಎ) ಪು.43–48.

23. ಬೇಗಮ್ ಅರಾ, ರೊಶನ್ ಅಂಡ್ ಪಿರೇರಾ, ಜಾಕಲಿನ್, ಜೋಯ್. (2008); "ಎವೇರ್‌ನೆಸ್ ಎಟಟ್ಯೂಡ್ ಅಂಡ್ ಬಿಹೇವಿಯರಲ್ ಸ್ಟೇಟಸ್ ಆಫ್ ವೇಸ್ಟ್ ಮೆನೇಜ್ ಮೆಂಟ್: ಎ ಪ್ರೋಫೈಲ್ ಆಫ್ ಮಲೇಸಿಯನ್ ಕಾಂಟ್ರೆಕ್ಟರ್ಸ್" ಎಷ್ಯ ಜರ್ನಲ್ ಆಫವಾಟರ್, ಎನ್ವಿರಾನ್‌ಮೆಂಟ್ ಆ್ಯಂಡ್ ಪೊಲ್ಯೂಷನ್. ವಾಲ್ಯುಮ್. 5(3), ಪು.15–22.

24. ಪೊಸಿಶನ್ ಪೇಪರ್ ಆನ್ ದಿ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಸೆಕ್ಟರ್ ಇನ್ ಇಂಡಿಯಾ, ಡಿಪಾರ್ಟ್‌ಮೆಂಟ್ ಆಫ್ ಇಕನಾಮಿಕ್ ಎಫೇರ್ಸ್, ಹಣಕಾಸು ಖಾತೆ, ಭಾರತ ಸರಕಾರ (2009), ಪು.35–65

25. ಸೋಮಶೇಖರ ಕೆ.ಕೆ. ಆ್ಯನ್ ಇಕನಾಮಿಕ್ ಇವಾಲ್ಯುವೇಶನ್ ಆಫ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಸರ್ವಿಸಸ್ ಇನ್‌ಸಿಟೀಸ್: ಎ ಕೇಸ್ ಸ್ಟಡಿ ಆಫ್ ಮಂಗಳೂರು ಸಿಟಿ ಕೋರ್ಪರೇಶನ್, ಅಪ್ರಕಟಿತ ಪಿ.ಎಚ್.ಡಿ. ಮಹಾಪ್ರಬಂಧ, ಮಂಗಳೂರು ವಿಶ್ವವಿದ್ಯಾಲಯ, 2010, ಪು.122–136.

26. ಬಾಬು ಸುರೇಶ್ ಬಿ.ಕೆ, ತೇಜಸ್ವಿನಿ ವಿ. ಶರತ್ ಎಚ್.ಎಸ್. ಮತ್ತು ವಸಂತ್ ಬಿ.ಎಸ್ (2011), ಜಿ.ಪಿ.ಎಸ್.ಬೇಸ್‌ಡ್ ಅಟೋಮ್ಯಾಟಿಕ್ ಫ್ಲೀಟ್ ಮೆನೇಜ್‌ಮೆಂಟ್ ಆಫ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ವೆಹಿಕಲ್ಸ್ ಆಫ್ ಮೈಸೂರು ಸಿಟಿ ಇನ್: ಘೋಷ್ ಕೆ ಸಾಧನ್. (ಸಂಪ) ಸಸ್ಟೇನೇಬಲ್ ವೇಸ್ಟ್ ಮ್ಯಾನೇಜ್‌ಮೆಂಟ್ ವೋಲ್ಯುಂ–1. ಆಕ್ಸ್‌ಫರ್ಡ್ ಪಬ್ಲಿಶಿಂಗ್ ಹೌಸ್, ಕೋಲ್ಕತ್ತ, ಪು.79–92.

27. ಅಮೃತಾ (2011). ಇಂಟಿಗ್ರೇಟೆಡ್ ವೇಸ್ಟ್ ಮೆನೇಜ್‌ಮೆಂಟ್ ಆಂಡ್ ಎಂಪ್ಲಾಯ್ಮೆಂಟ್ ಜನರೇಶನ್. ಇನ್: ಘೋಷ್ ಕೆ ಸಾಧನ್. (ಸಂಪ). ಸಸ್ಟೇನೇಬಲ್ ವೇಸ್ಟ್ ಮ್ಯಾನೇಜ್‌ಮೆಂಟ್ ವೋಲ್ಯುಂ–1, ಆಕ್ಸಫರ್ಡ್ ಪಬ್ಲಿಶಿಂಗ್ ಹೌಸ್, ಕೋಲ್ಕತ್ತ, ಪು.112–116

28. ಗ್ಯಾಂಗ್, ಬೋಸೆಂಗ್, ಮಿಂಗ್ ಜಿಯಾಂಗ್, ಮತ್ತು ಇತರರು (2011) ಎ ಸ್ಟ್ರೀಮ್ ಡ್ರೈಡ್ ಮುನಿಸಿಫಲ್ ಸೋಲಿಡ್ ವೇಸ್ಟ್ ಗ್ಯಾಫಿಕೇಶನ್ ಎಂಡ್ ಮೆಲ್ಟಿಂಗ್ ಪ್ರೊಸೆಸ್.ಫ್ರಂಟ್.ಎನ್ವಯರ್ನ್.ಇಂಜಿನ್.ಚೈನಾ2011, 5(2); (Front.Environ.Engin.China 2011. 5(2); ಪು.193–204.

29. ನಾಗ್ ಎ.ಮತ್ತು ವಿಜಯಕುಮಾರ್ ಕೆ. (2012). ಎನ್ವಿರಾನ್‌ಮೆಂಟಲ್ ಎಜುಕೇಶನ್ ಎಂಡ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್. ನ್ಯೂ ಏಜ್ ಇಂಟರ್‌ನ್ಯಾಷನಲ್ (ಪ್ರೈ) ಲಿಮಿಟೆಡ್, ನ್ಯೂಡೆಲ್ಲಿ ಪು.12–22.

30. ಸೇತ್ ಸಿಂಡ್ಲರ್, ಫೆದರಿಕೊ ಡೆಮಾರಿಯಾ ಮತ್ತು ಶಶಿ ಬಿ.ಪಂಡಿತ್ (2012), "ಡೆಲ್ಲಿ ವೇಸ್ಟ್ ಕೋನ್‌ಫ್ಲಿಕ್ಟ್", ಇಕನಾಮಿಕ್ ಎಂಡ್ ಪೊಲಿಟಿಕಲ್ ವೀಕ್ಲಿ, ಸಂಪುಟ ಸಂಖ್ಯೆ 42. ಪು.18–21.

31. ಪತ್ರವೊ ಲಿಂಗರಾಜ್, ಸೋಲಿಡ್ ವೇಸ್ಟ್ ಮ್ಯಾನೇಜ್‌ಮೆಂಟ್(ಸಂ.) ನ್ಯೂಡೆಲ್ಲಿ: ಸೊನಾಲಿ ಪಬ್ಲಿಕೇಷನ್ಸ್, 2012, ಪು.134–139.

32. ಆನಂದ್ ಸುಭಾಶ್, ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್, ನ್ಯೂಡೆಲ್ಲಿ: ಮಿತ್ತಲ್ ಪಬ್ಲಿಕೇಶನ್ಸ್, 2010, ಪು.212–122.

33. ಪೈರೋಲಿಸಿಸ್– ಸುಮಾರು 900 ಡಿಗ್ರಿ ಸೆಲ್ಸಿಯಸ್‌ಗಿಂತಲೂ ಹೆಚ್ಚಿನ ಪ್ರಮಾಣದ ಉಷ್ಣತೆಯಲ್ಲಿ ಆಮ್ಲಜನಕ– ಗಾಳಿ ಬಳಸದೆ ಅಥವಾ ನಿರ್ವಾತದಲ್ಲಿ ತ್ಯಾಜ್ಯಗಳನ್ನು ಕರಗಿಸುವುದು. ಈ ಪ್ರಕ್ರಿಯೆಯಲ್ಲಿ ಉರಿಯುವ ಅನಿಲಗಳಾದ ಕಾರ್ಬನ್ ಮೊನಾಕ್ಸೈಡ್, ಮಿಥೇನ್, ಹೈಡ್ರೋಜನ್ ಮತ್ತು ಇಥೇನ್ ಉತ್ಪತ್ತಿಯಾಗುತ್ತದೆ. ಇದರೊಂದಿಗೆ ಉರಿಯದ ಕಾರ್ಬನ್ ಡೈ ಆಕ್ಸೈಡ್, ನೀರು ಮತ್ತು ನೈಟ್ರೋಜನ್ ಅನಿಲಗಳು ಉತ್ಪತ್ತಿಯಾಗುತ್ತವೆ.

34. ಗ್ಯಾಸಿಫಿಕೇಶನ್ ವಿಧಾನದಲ್ಲಿ 1000 ಡಿಗ್ರಿ ಸೆಲ್ಸಿಯಸ್‌ಗಿಂತಲೂ ಹೆಚ್ಚಿನ ಉಷ್ಣತೆಯಲ್ಲಿ ಸ್ವಲ್ಪ ಆಮ್ಲಜನಕ/ಗಾಳಿ ಬಳಸಿ ಸಾವಯವ ತ್ಯಾಜ್ಯಗಳನ್ನು ಕರಗಿಸಿ ದಹಿಸುವ ಮತ್ತು ದಹಿಸದ ಅನಿಲ/ವಸ್ತುಗಳನ್ನು ಉತ್ಪಾದಿಸುವುದು. ಬಯೊ ಮಿಥೆನೈಸೇಷನ್ ಎಂದರೆ ಸಾವಯವ ತ್ಯಾಜ್ಯಗಳನ್ನು ಮಿಥೇನ್ ಆರ್ಗ್ಯಾನಿಕ್ ಬ್ಯಾಕ್ಟೀರಿಯ ಬಳಸಿ, ಬಯೋರಿಯಾಕ್ಟಾನ್‌ನಲ್ಲಿ ಕೊಳೆಸಿ, ಜೈವಿಕ ಅನಿಲವನ್ನು ಉತ್ಪಾದಿಸುವುದು.

35. ಪತ್ರವೊ ಲಿಂಗರಾಜ್, ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್–(ಸಂ.) ನ್ಯೂಡೆಲ್ಲಿ: ಸೊನಾಲಿ ಪಬ್ಲಿಕೇಷನ್ಸ್, 2012, ಪು.156–162.

36. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ವರ್ಕ್‌ಶಾಪ್ ಆನ್ ಎಸ್ ಡಬ್ಲ್ಯು ಎಮ್ & ಸಿ.ಎಸ್.ಪಿ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬಿ ಬಿ ಎಂ ಪಿ ಅಧಿಕಾರಿಗಳಿಗೆ ಮತ್ತು ಭಾಗಿದಾರರಿಗೆ ನೀಡಿರುವ ಕೈಪಿಡಿ–2012.

37. ಬಾನು ಶಮೀಮ್ ಎಸ್.(2013) ಏನ್ ಇಕನಾಮಿಕ್ ಸ್ಟಡಿ ಆಫ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಇನ್ ಮದುರೈ ಸಿಟಿ–ಸಬ್‌ಮಿಟೆಡ್ ಪಿ ಹೆಚ್ ಡಿ ಥಿಸಿಸ್ ಟು ಮದುರೈ ಕಾಮರಾಜ್ ಯುನಿವರ್ಸಿಟಿ ಇನ್ 2013, ಪು.301–311.

38. ಅಗರವಾಲ್ ಸುನೀತಾ ಮತ್ತು ಲಲಿತಾ ಅರೋರ, "ಡೊಮೆಸ್ಟಿಕ್ ವೇಸ್ಟ್ ಮೆನೇಜ್ ಮೆಂಟ್", ಜೈಪುರ ಆವಿಷ್ಕಾರ್ ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್, 2013 ಪು.35–45.

39. ಭಾಸ್ಕರ್ ಪವನ್ ಕುಮಾರ್ ಮತ್ತು ಕುಮಾರ್ ವಿ.ಕೆ. (2013). ಇಂಟಿಗ್ರೇಟೆಡ್ ಸಾಲಿಡ್ ವೇಸ್ಟ್ ಮ್ಯಾನೇಜ್‌ಮೆಂಟ್ ಸಿಸ್ಟಮ್: ಆನ್ ಒವರ್‌ವೀವ್ ಆಫ್ ಅಲ್ಲಹಬಾದ್ ಸಿಟಿ. ನ್ಯಾಷನಲ್ ಜಿಯೋಗ್ರಾಫಿಕಲ್ ಜರ್ನಲ್ಸ್ ಆಫ್ ಇಂಡಿಯ. ವೊಲ್ಯೂಂ 59, ನಂ–1, ನವೆಂಬರ್, ಪು.23–30.

40. ದಿ ಹಿಂದು, ದಿನಾಂಕ 5.8.2014, ಮಂಗಳೂರು ಪ್ರತಿ, ಪು.3,

41. ಸುಮತಿ ವಿ.ಆರ್., 'ಪರ್‌ಸ್ಪೆಕ್ಟಿವ್ ಡೆವಲಪ್‌ಮೆಂಟ್ ಪ್ಲಾನ್ ಷೇರ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಇನ್ ಪಾಂಡಿಚೇರಿ– ಅಪ್ರಕಟಿತ ಸಂಶೋಧನಾ ಮಹಾಪ್ರಬಂಧ– ಅಣ್ಣ ವಿವಿ ತಮಿಳ್‌ನಾಡು 2014. ಪು.3–17, 27& 165–168

42. ವಾಲೀಕಾರ ಪಿ.ಡಿ (2014) ವಿಜ್ಞಾನ ಸಂಗಾತಿ ಪ್ರಸಾರಾಂಗ "ತ್ಯಾಜ್ಯ ವಸ್ತುಗಳ ವಿಲೇವಾರಿ– ಹೇಗೆ? ಏಕೆ?"ಕನ್ನಡ ವಿಶ್ವವಿದ್ಯಾಲಯ, ಹಂಪಿ ಸಂಪುಟ–19, ಸಂಚಿಕೆ–7, ಮೇ 2014, ಪು.13–18.

43. ಉಷಾಕುಮಾರಿ ಎಂ. ಮತ್ತು ಪೆಮಿಲಾ ಡಾರ್ಲಿಂಗ್ (2015), ಎಫೆಕ್ಟಿವ್‌ನೆಸ್ ಆಫ್ ವಿಡಿಯೊ ಇನ್ಸ್ಟ್ರಕ್ಷನಲ್ ಮೊಡ್ಯೂಲ್... ಕನ್ಯಾಕುಮಾರಿ ಡಿಸ್ಟ್ರಿಕ್ಟ್", ಇಂಟರ್ನಲ್ ಜರ್ನಲ್ ಆಫ್ ನರ್ಸಿಂಗ್ ಎಜುಕೇಷನ್, ಜುಲೈ–ಸಪ್ಟಂಬರ್, ಸಂಪುಟ.7, ನಂ.3, ಪು.148–153

44. ದಿ ಹಿಂದು, ದಿನಾಂಕ 5.9.2016, ಮಂಗಳೂರು ಪ್ರತಿ, ಪು.3.

45. ಸಂಗೀತಾ ಸಾಹ್ನಿ (2016) ಕಮರ್ಷಿಯಲ್ ಎಫೆಕ್ಟ್ಸ್ ಆಫ್ ವೇಸ್ಟ್ ಮೆನೇಜ್‌ಮೆಂಟ್ ಇನ್ ಗ್ವಾಲಿಯರ್, ಅಪ್ರಕಟಿತ ಪಿಎಚ್.ಡಿ.ಪ್ರಬಂಧ, ಶಿವಾಜಿ ವಿಶ್ವವಿದ್ಯಾನಿಲಯ, ಗ್ವಾಲಿಯರ್. ಪು.146–151

46. ರೊಬರ್ಟ್ ಜೆ ಏಂಡರ್ಸ್‌ನ್ (1964) "ದಿ ಪಬ್ಲಿಕ್ ಹೆಲ್ತ್ ಏಸ್ಪೆಕ್ಟ್ಸ್ ಆಫ್ ಸಾಲಿಡ್ ವೇಸ್ಟ್ ಡಿಸ್ಪೋಸಲ್", ಪಬ್ಲಿಕ್ ಹೆಲ್ತ್ ರಿಪೋರ್ಟ್, ಸಂಪುಟ 79, ಸಂಖ್ಯೆ 2, ಪು.93–96.

47. ತೋಮಸ್ ಹೆನ್ರಿ ಡೈಕೆ ವಾನ್, ಅವರ್ ಎನ್ವಿರಾನ್‌ಮೆಂಟ್, ಪಾತ್ ವೇಯ್ಸ್ ಟು ಸೊಲ್ಯೂಷನ್, ಮೆಸಚುಸೆಟ್ಸ್: ಗಿನ್ ಎಂಡ್ ಕಂಪೆನಿ, 1972, ಪು.75–86.

48. ಶುಕ್ಲ ಎಸ್.ಕೆ ಮತ್ತು ಪಿ.ಆರ್.ಶ್ರೀ ವಾಸ್ತವ., ವೇಸ್ಟ್ ಮ್ಯಾನೇಜ್‌ಮೆಂಟ್ ಆಂಡ್ ಕಂಟ್ರೋಲ್, ನ್ಯೂಡೆಲ್ಲಿ: ಇಂಡಿಯ ಕಾಮನ್ ವೆಲ್ತ್ ಪಬ್ಲಿಶರ್ಸ್, 1992, ಪು.54–59.

49. ಅದೇ, ಪು.84–92.

50. ಹ್ಯೂಸ್‌ಮನ್ ಮಾರಿಕ್ ಮತ್ತು ವೇಲು ಜೈ ಎಸ್. (1994). ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಬೈ ದಿ ಬೆಂಗಳೂರು ಕೋರ್ಪರೇಶನ್. ಇನ್: ಬೌದ್ ಇಸಾ ಆಂಡ್ ಶೆಂಕ್ ಹನ್ಸ್(ಸಂ) (1994) ಸಾಲಿಡ್ ವೇಸ್ಟ್.ಮ್ಯಾನೇಜ್‌ಮೆಂಟ್. ಮನೋಹರ್ ಪಬ್ಲಿಷರ್ಸ್ ಆ್ಯಂಡ್ ಡಿಸ್ಟ್ರಿಬ್ಯೂಟರ್ಸ್, ನ್ಯೂಡೆಲ್ಲಿ, ಪು.65–69.

51. ಬೌದ್ ಇಸಾ ಆಂಡ್ ಶೆಂಕ್ ಹನ್ಸ್(ಸಂಪ) (1994). ಸೋಲಿಡ್ ವೇಸ್ಟ್.ಮ್ಯಾನೇಜ್‌ಮೆಂಟ್. ಮನೋಹರ್ ಪಬ್ಲಿಷರ್ಸ್ ಎಂಡ್ ಡಿಸ್ಟ್ರಿಬ್ಯೂಟರ್, ನ್ಯೂಡೆಲ್ಲಿ, ಪು.68–72.

52. ಅದೇ, ಪು.34–38.

53. ಡೇವಿಡ್ ಎನ್ ಬೀಡೆ ಮತ್ತು ಡೇವಿಡ್ ಇ ಬ್ಲೂಮ್ (1995). "ದಿ ಇಕನಾಮಿಕ್ಸ್ ಆಫ್ ಮುನ್ಸಿಪಲ್ ಸೋಲಿಡ್ ವೇಸ್ಟ್", ಆಕ್ಸ್‌ಫರ್ಡ್ ಜರ್ನಲ್ಸ್, ಆಗಸ್ಟ್ 1995, ಸಂಪುಟ 10, ಸಂಖ್ಯೆ 2, ಪು.113–150.

54. ರವಿಚಂದ್ರನ್ ಎಂ. ಮತ್ತು ಆರ್. ಪೂಂಗೊಡಿ (1992), "*ಇಕಾನಾಮಿಕ್ಸ್ ಆಫ್ ಅರ್ಬನ್ ಸೋಲಿಡ್ ವೇಸ್ಟ್‌ಮ್ಯಾನೇಜ್‌ಮೆಂಟ್*", ನಗರ ಲೋಕ, 31, ಸಂಖ್ಯೆ 2, ಪು.52–58.

55. ಯೆಡ್ಲಾ ಸುಧಾಕರ್ ಮತ್ತು ಪಾರಿಖ್ ಕೆ ಜ್ಯೋತಿ (2000). ಇಕನಾಮಿಕ್ ಇವಾಲ್ಯೂವೇಷನ್ ಆಫ್ ಲ್ಯಾಂಡ್‌ಫಿಲ್ ವಿದ್ ಗ್ಯಾಸ್ ರಕವರಿ ಫಾರ್ ಮುನ್ಸಿಪಾಲ್ ಸೋಲಿಡ್ ವೇಸ್ಟ್ ಮ್ಯಾನೇಜ್‌ಮೆಂಟ್.ಎ ಕೇಸ್ ಸ್ಟಡಿ. ಇಂದಿರಾಗಾಂಧಿ ಇನ್ಸಿಟ್ಯೂಟ್ ಆಫ್ ಡೆವಲಪ್‌ಮೆಂಟ್ ರಿಸರ್ಚ್, ಮುಂಬೈ. ಪು.192–196.

56. ಸಮೀರ್‌ದಾಸ್ ಟಿ., ಇಕನಾಮಿಕ್ಸ್ ಆಫ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಇನ್ ಕ್ಯಾಲಿಕಟ್ ಕಾರ್ಪೋರೇಷನ್, ಅಪ್ರಕಟಿತ ಪಿ.ಎಚ್.ಡಿ.ಮಹಾಪ್ರಬಂಧ, ಪಾಂಡಿಚೇರಿ, ವಿಶ್ವವಿದ್ಯಾನಿಲಯ, 2002, ಪು.72–88.

57. ಚಂದೋರ್ಕರ್ ಎ.ಜಿ ಮತ್ತು ನಾಗೋಬ ಬಿ ಎಸ್, ಹೋಸ್ಪಿಟಲ್ ವೇಸ್ಟ್ ಮೆನೇಜ್‌ಮೆಂಟ್, ಹೈದರಾಬಾದ್: ಪರಾಸ್ ಮೆಡಿಕಲ್ ಪಬ್ಲಿಷರ್, 2003, ಪು.64–68.

58. ದಮಿಜ ಎಸ್. (2005). "ಲ್ಯಾಂಡ್ ಸ್ಕೇಪ್ ಪೊಲ್ಯೂಷನ್ ಅಂಡ್ ಸಾಲಿಡ್ ವೇಸ್ಟ್ ಮೆನೇಜ್‌ಮೆಂಟ್." ಎನ್ವಿರಾನ್‌ಮೆಂಟಲ್ ಇಂಜಿನಿಯರಿಂಗ್ ಅಂಡ್ ಮೆನೇಜ್‌ಮೆಂಟ್. ಕತಾರಿಯ ಅಂಡ್ ಸನ್ಸ್ ಪಬ್ಲಿಷರ್ಸ್, ನ್ಯೂಡೆಲ್ಲಿ, ಪು.211–220.

59. ರಾಜ್ ಗೋಪಾಲನ್ ಆರ್.(2005) "ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್. "ಎನ್ವಿರಾನ್ ಮೆಂಟಲ್ ಸ್ಟಡೀಸ್ ಫ್ರಾಮ್ ಕ್ರೈಸಿಸ್ ಟು ಕ್ಯೂರ್".ಆಕ್ಸಫರ್ಡ್ ಯುನಿವರ್ಸಿಟಿ ಪ್ರೆಸ್. ನ್ಯೂಡೆಲ್ಲಿ; ಪು.202–216.

60. ರಾಮಚಂದ್ರ ಟಿ.ವಿ., ಮೆನೇಜ್‌ಮೆಂಟ್ ಆಫ್ ಮುನ್ಸಿಪಾಲ್ ಸೋಲಿಡ್ ವೇಸ್ಟ್, ನ್ಯೂಡೆಲ್ಲಿ: ಕ್ಯಾಪಿಟಲ್ ಪಬ್ಲಿಷಿಂಗ್ ಕಂಪೆನಿ, 2006. ಪು.75–81.

61. ಸಿನ್ಹಾ ಉದಯ ಪ್ರಕಾಶ್, ಇಕನಾಮಿಕ್ಸ್ ಆಫ್ ಸೋಷಿಯಲ್ ಸೆಕ್ಟರ್ ಆ್ಯಂಡ್ ಎನ್ವಿರಾನ್‌ಮೆಂಟ್, ನ್ಯೂಡೆಲ್ಲಿ: ಕೋನ್ಸೆಪ್ಟ್ ಪಬ್ಲಿಷಿಂಗ್ ಕಂಪೆನಿ, 2007, ಪು.143–156.

62. ಅನಂತ ಪದ್ಮನಾಭನ್, ಶ್ರೀನಿವಾಸ ಕೆ ಮತ್ತು ವಿನುತಾ ಗೋಪಾಲ್ 'ಹೈಡಿಂಗ್ ಬಿಹೈಂಡ್ ದಿ ಪುವರ್' ಗ್ರೀನ್ ಪೀಸ್ ಇಂಡಿಯ ವರದಿ, ಅಕ್ಟೋಬರ್ 2007, ಪು.34–45.

63. ಜುಅ, ಡಾ, ಅಸ್ನಾನಿ ಮತ್ತು ಇತರರು (2007) "ಇಂಪ್ರೂವಿಂಗ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಇನ್ ಇಂಡಿಯ: ಎ ಸೋರ್ಸ್ ಬುಕ್ ಫಾರ್ ಪಾಲಿಸಿ ಮೇಕರ್ಸ್ ಎಂಡ್ ಪ್ರಾಕ್ಟೀಶನರ್ಸ್" ಹೆರ್ಡನ್ ವಿ ಎ, ಯು ಎಸ್ ಎ: ವರ್ಲ್ಡ್ ಬ್ಯಾಂಕ್ ಪಬ್ಲಿಕೇಶನ್ಸ್., ಪು.87–92.

64. ನಾರಾಯಣ್ ಉಮೇಶ್, ಎನ್ವಿರಾನ್‌ಮೆಂಟಲ್ ಸ್ಟಡೀಸ್, ನ್ಯೂಡೆಲ್ಲಿ: ರಜತ್ ಪಬ್ಲಿಕೇಶನ್ಸ್, 2008 ಪು.123–136.

65. ಬೆನ್ನಿ ಜೋಸೆಫ್, ಎನ್ವಿರಾನಮೆಂಟಲ್ ಸ್ಟಡೀಸ್, ನ್ಯೂಡೆಲ್ಲಿ: ಟಾಟಾ ಮೆಕ್‌ಗ್ರೊ ಹಿಲ್ ಪಬ್ಲಿಷಿಂಗ್ ಕಂ.ಲಿ., 2009, ಪು.120–125.

66. ಅದೇ, ಪು.143–156.

67. ಸಹಾ ಸಂತನು.(2011). *ಒಪ್ಟಿಮೈಸೇಶನ್ ಆಫ್ ಮುನ್ಸಿಪಾಲ್ ಸಾಲಿಡ್ ವೇಸ್ಟ್ ಟ್ರಾನ್ಸ್ ಪೋರ್ಟೆಷನ್ ಸಿಸ್ಟಂ ಇನ್ ಕೊಲ್ಕತ್ತಾ.* ಇನ್: ಘೋಶ್ ಕೆ. ಸಾಧನ್.(ಸಂಪ) ಸಸ್ಟೆನೆಬಲ್ ವೇಸ್ಟ್ ಮ್ಯಾನೆಜ್‌ಮೆಂಟ್, ಸಂಪುಟ–1. ಆಕ್ಸ್‌ಫೋರ್ಡ್ ಪಬ್ಲಿಷಿಂಗ್ ಹೌಸ್, ಕೊಲ್ಕತ್ತಾ., ಪು.114–122.

68. ಬೋಜಿಂಗ್ ಜೋಸೆಫ್ ಮಾರ್ಪೊ ಮತ್ತು ಔಸು ವಿಕ್ಟರ್ (2011). ಸೋಶಿಯೋ–ಇಕಾನಾಮಿಕ್ ಡಿಟರ್‌ಮಿನೆಂಟ್ಸ್ ಆಫ್ ಹೌಸ್‌ಹೋಲ್ಡ್ ಪಾರ್ಟಿಸಿಪೇಶನ್ ಇನ್ ಸಾಲಿಡ್ ವೇಸ್ಟ್ ಕಲೆಕ್ಷನ್ ಸಿಸ್ಟಮ್ಸ್ ಇನ್ ಘಾನ. ಇನ್: ಘೋಶ್ ಕೆ ಸದನ್. (ಸಂಪ)

ಸಸ್ಟೆನೇಬಲ್ ವೇಸ್ಟ್ ಮ್ಯಾನೇಜ್‌ಮೆಂಟ್, ಆಕ್ಸ್‌ಫರ್ಡ್ ಪಬ್ಲಿಶಿಂಗ್ ಹೌಸ್, ಕೊಲ್ಕತ್ತಾ, ವ್ಯಾಲ್ಯುಂ-1. ಪು.132-152.

69. ಸಾಧನ್ ಕೆ ಘೋಷ್ (2011). ಸಸ್ಟೈನೆಬಲ್ ವೇಸ್ಟ್ ಮ್ಯಾನೆಜ್‌ಮೆಂಟ್, ಪ್ರೊಸೀಡಿಂಗ್ಸ್ ಆಫ್ ದ ಸೆಕೆಂಡ್ ಇಂಟರ್‌ನ್ಯಾಷನಲ್ ಕಾನಫರೆನ್ಸ್ ಆನ್ ಸೋಲಿಡ್ ವೇಸ್ಟ್ ಮ್ಯಾನೇಜ್ ಮೆಂಟ್, ಕೊಲ್ಕತ್ತಾ: ಓಕ್ಸ್‌ಫರ್ಡ್ ಪಬ್ಲಿಷಿಂಗ್ ಹೌಸ್, ವ್ಯಾಲುಂ-1, ಪು.15-19.

70. ಅಹ್ಮದ್ ಮೊಹಮ್ಮದ್ ಇಜಾರ್ ಮತ್ತು ವಾಸಿಕ ಟಿ. ಆರ್. (2011). ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಇನ್ ದಿ ಡೆವಲಪಿಂಗ್ ಕಂಟ್ರೀಸ್. ಇನ್: ಘೋಷ್ ಕೆ ಸಾಧನ್.(ಸಂಪ). ಸಸ್ಟೆನೇಬಲ್ ವೇಸ್ಟ್ ಮೆನೇಜ್‌ಮೆಂಟ್ ವ್ಯಾಲ್ಯುಂ-1.ಆಕ್ಸಫರ್ಡ್ ಓಕ್ಸ್‌ಪರ್ಡ್ ಪಬ್ಲಿಷಿಂಗ್ ಹೌಸ್, ಸಂಖ್ಯೆ 9, ಪು.45-56.

71. ಪತ್ರಾವೊ ಲಿಂಗರಾಜ್, ಸೋಲಿಡ್ ವೇಸ್ಟ್ ಮೆನೆಜ್‌ಮೆಂಟ್-(ಸಂ.)ನ್ಯೂಡೆಲ್ಲಿ: ಸೊನಾಲಿ ಪಬ್ಲಿಕೇಷನ್ಸ್, 2012, ಪು.92-118.

72. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ವರ್ಕ್‌ಶಾಪ್ ಆನ್ ಎಸ್ ಡಬ್ಲ್ಯು ಎಮ್ & ಸಿ.ಎಸ್.ಪಿ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬಿ ಬಿ ಎಂ ಪಿ ಅಧಿಕಾರಿಗಳಿಗೆ ಮತ್ತು ಭಾಗೀದಾರರಿಗೆ ನೀಡಿರುವ ಕೈಪಿಡಿ-2012, ಪು.56-65.

73. ಕರ್ಪಗಮ್ ಎಮ್, *ಎನ್ವಿರಾನಮೆಂಟಲ್ ಇಕಾನಾಮಿಕ್ಸ್*, ನ್ಯೂ ಡೆಲ್ಲಿ: ಸ್ಟರ್ಲಿಂಗ್ ಪಬ್ಲಿಷರ್ಸ್ ಪ್ರೈ.ಲಿ., 2007, ಪು.12-15.

74. ಹರಿಗೋವಿಂದ ರಾಜ್ ಜಿ. ಮತ್ತು ಸೇಕ್ರಟೀಸ್ ಜೆ (2012). "ಸೋಲಿಡ್ ವೇಸ್ಟ್ ಮೆನೇಜ್ ಮೆಂಟ್", ಸದರ್ನ್ ಇಕಾನಾಮಿಸ್ಟ್, ಸಂಪುಟ 50, ಸಂಖ್ಯೆ 20, ಪು.34-38.

75. ರಾವ್ ಎಂ.ಎನ್. ಮತ್ತು ರಜಿಯಾ ಸುಲ್ತಾನ್., ಸೋಲಿಡ್ ಅಂಡ್ ಹೆಸಾರ್ಡಸ್ ವೇಸ್ಟ್ ಮೆನೇಜ್‌ಮೆಂಟ್, ಹೈದರಾಬಾದ್: ಬಿ.ಎಸ್. ಪಬ್ಲಿಕೇಷನ್ಸ್, 2012, ಪು.92-99.

76. ಪತ್ರಾವೊ ಲಿಂಗರಾಜ್, ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್(ಸಂ.) ನ್ಯೂಡೆಲ್ಲಿ: ಸೊನಾಲಿ ಪಬ್ಲಿಕೇಷನ್ಸ್, 2012, ಪು.24-28.

77. ಅದೇ, ಪು.72-79.

78. ಅಗರವಾಲ್ ಸುನೀತಾ ಮತ್ತು ಲಲಿತಾ ಅರೋರ, ಡೊಮೆಸ್ಟಿಕ್ ವೇಸ್ಟ್ ಮೆನೇಜ್ ಮೆಂಟ್, ಜೈಪುರ ಆವಿಷ್ಕಾರ್ ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್, 2013, ಪು.56-67.

79. ಮಾನಸಿ ಎಸ್. ನಾಯಕ್, ಪ್ರಸಾದ ಒ. ಬಿ. ಮತ್ತು ಲತಾ ಎನ್.ಸಿ.ಇ.ಇ.ಎನ್.ಆರ್. (2010). ಇಕೊ-ಥ್ರೆಟ್ಸ್ ಆಫ್ ಇ-ವೇಸ್ಟ್: ಎ ಕೇಸ್ ಸ್ಟಡಿ ಆಫ್ ಬೆಂಗಳೂರು ಸಿಟಿ. ಐಸೆಕ್, ಬೆಂಗಳೂರು, ಪು.112-117.

80. ಗೋಪಾಲ್ ಅತ್ತಾವರ (2014). ಕಸ ಎಂಬ ಕಾರ್ಕೋಟಕ ವಿಷ. ತರಂಗ. ಸಂಪುಟ 32, ಸಂಖ್ಯೆ 18, ಮೇ, ಪು.12-21.

81. ಸಂಯುಕ್ತ ಕರ್ನಾಟಕ, ಕನ್ನಡ ದಿನ ಪತ್ರಿಕೆ ವರದಿ, 5, ಆಗಸ್ಟ್, 2014, ಪು.5.

82. ಬಾಲ ಸುಬ್ರಮಣ್ಯನ್ (2015). "ಇಕಾನಾಮಿಕ್ಸ್ ಆಫ್ ಸೋಲಿಡ್ ವೇಸ್ಟ್ ಇನ್ ಇಂಡಿಯ", ಇಕನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ, ಜೂನ್ 20, , ಸಂಪುಟ 50, ಸಂಚಿಕೆ 25.

83. ಚಂದ್ರ ಪೂಜಾರಿ ಎಂ., "ತಪ್ಪು ತಿಳುವಳಿಕೆಗೆ ತುತ್ತಾದ ಮಾಲಿನ್ಯದ ಹುಟ್ಟು, ಕನ್ನಡ ಪ್ರಭ, ದಿನಾಂಕ 28.08.2015, ಪು.4.

84. ಪ್ರಶಾಂತ್ ಎಚ್.ಡಿ., "ಮಾರುಕಟ್ಟೆ ಆರ್ಥಿಕ ವಿಜ್ಞಾನ: ಶಾಲಾ ಶಿಕ್ಷಣ ಮತ್ತು ಭಾಷೆ" ಸಂವಾದ-ಮಾಸಪತ್ರಿಕೆ, ಸಂಪುಟ 13, ಸಂಚಿಕೆ 10, ಅಗಸ್ಟ್ 15, ಪು.28-33.

85. ಮಂಜುನಾಥ ಉವತ್ತಿ ಶೆಟ್ಟರ್ (2015), ಸಂಪಾದಕೀಯ ವಿಭಾಗ ಉದಯವಾಣಿ-ಬೆಂಗಳೂರು, ದಿನಾಂಕ-29.9.2015. ಪು.6

86. ದಿ ಹಿಂದು, ದಿನಾಂಕ 5.9.2016, ಮಂಗಳೂರು ಪ್ರತಿ, ಪುಟ 3, ದಿ ಹಿಂದು, ಶುಕ್ರವಾರ, ಮಾರ್ಚ್, 25.2016, ಮಂಗಳೂರು ಪ್ರತಿ,ಪುಟ-3, ದಿ ಹಿಂದು, ಶುಕ್ರವಾರ, ಜೂನ್ 24, 2016, ಮಂಗಳೂರು ಪ್ರತಿ, ಪು.2.

87. ವೇಸ್ಟ್ ಮೆನೇಜ್‌ಮೆಂಟ್ ವರ್ಲ್ಡ್, ಇಂಡಸ್ಟ್ರಿಯಮ್ ಮ್ಯಾಗಸಿನ್, ವಿಯೆನ್ನಾ, ಆಸ್ಟ್ರೀಯ, ಮೇ-ಜೂನ್ 2016, ಆವೃತ್ತಿ 17, ಸಂಖ್ಯೆ 3, ಪು.10-11.

88. ರಾಮಚಂದ್ರ ಟಿ.ವಿ., ಮೆನೇಜ್‌ಮೆಂಟ್ ಆಫ್ ಮುನ್ಸಿಪಾಲ್ ಸೋಲಿಡ್ ವೇಸ್ಟ್, ನ್ಯೂಡೆಲ್ಲಿ: ಕ್ಯಾಪಿಟಲ್ ಪಬ್ಲಿಷಿಂಗ್ ಕಂಪೆನಿ, 2006. ಪು.25-35.

89. ಜೋರ್ಜ್ ಟೋಬ್ಯಾನೋಗ್ಲೌಸ್ ಮತ್ತು ಪ್ರಾಂಕ್ ಕ್ರೇತ್ ಹ್ಯಾಂಡ್ ಬುಕ್ ಆಫ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ನ್ಯೂಡೆಲ್ಲಿ: ಮೆಕ್‌ಗ್ರೋಹಿಲ್ ಪಬ್ಲಿಕೇಷನ್, 2002, ಪು.34-56

90. ಅದೇ, ಪು.112-114

91. ಖಾನ್ ಎಚ್ ಇಕ್ಬಾಲ್ ಮತ್ತು ಆಶನ್ ನವೇದ್, *ಟೆಕ್ಸ್ಟ್‌ಬುಕ್ ಆಫ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್*, ನ್ಯೂಡೆಲ್ಲಿ: ಸಿಬಿಎಸ್ ಪಬ್ಲಿಷರ್ಸ್ ಆಂಡ್ ಡಿಸ್ಟ್ರಿಬ್ಯೂಟರ್ಸ್ ಪ್ರೈ.ಲಿಮಿಟೆಡ್, 2003, ಪು.180–186.

92. ಶ್ರೀನಿವಾಸನ್ ಕಾರ್ತಿಕಾ (2006). "ಪಬ್ಲಿಕ್, ಪ್ರೈವೇಟ್ ಎಂಡ್ ವಾಲಂಟರಿ ಏಜನ್ಸೀಸ್ ಇನ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್– ಎ ಸ್ಟಡೀ ಇನ್ ಚೆನ್ನೈ ಸಿಟಿ", ವಾಲ್ಯೂಮ್ 41, ಸಂಖ್ಯೆ 22, ಜೂನ್. ಪು.18–23.

93. ಸಿನ್ಹಾ ಉದಯ ಪ್ರಕಾಶ್ (2007). ಇಕನಾಮಿಕ್ಸ್ ಆಫ್ ಸೋಷಿಯಲ್ ಸೆಕ್ಟರ್ ಎಂಡ್ ಎನ್ವಿರಾನ್‌ಮೆಂಟ್, ಕೋನ್ಸೆಪ್ಟ್ ಪಬ್ಲಿಷಿಂಗ್ ಕಂಪೆನಿ, ನ್ಯೂಡೆಲ್ಲಿ. ಪು.78–92

94. ಅದೇ, ಪು.112–116

95. ಪರಿಸರ ಮತ್ತು ಅಭಿವೃದ್ಧಿಯ ಜಾಗತಿಕ ಅಯೋಗವು 1980ರಲ್ಲಿ ಮಂಡಿಸಿದ "ನಮ್ಮ ಸಮಾನ ಭವಿಷ್ಯ" ಎಂಬ ಬ್ರಂಟ್ ಲ್ಯಾಂಡ್ ಕಮಿಷನ್ ವರದಿಯಲ್ಲಿ 'ಸಹ್ಯ ಅಭಿವೃದ್ಧಿ' ಎಂದರೆ "ಭವಿಷ್ಯದ ಪೀಳಿಗೆಯ ಸ್ವಂತ ಅಗತ್ಯಗಳ ಪೂರೈಕೆ ಸಾಮರ್ಥ್ಯದೊಡನೆ ರಾಜಿ ಮಾಡಿಕೊಳ್ಳದೆ ಇಂದಿನ ಅಗತ್ಯಗಳನ್ನು ಪೂರೈಸಿಕೊಳ್ಳುವ ಅಭಿವೃದ್ಧಿ ಪ್ರಕ್ರಿಯೆ' ಎಂದು ವ್ಯಾಖ್ಯಾನಿಸಲಾಗಿದೆ.

96. ಭಾಟಿಯ ಎಸ್.ಸಿ., ಸೋಲಿಡ್ ಅಂಡ್ ಹಾಝುರ್‌ಡಸ್ ವೇಸ್ಟ್ ಮೆನೇಜ್‌ಮೆಂಟ್, ನ್ಯೂಡೆಲ್ಲಿ: ಅಟ್ಲಾಂಟಿಕ್ ಪಬ್ಲಿಷರ್ಸ್ ಅಂಡ್ ಡಿಸ್ಟ್ರಿಬ್ಯೂಟರ್ಸ್ ಪ್ರೈ.ಲಿ, 2007, ಪು.150–189.

97. ಎಸ್.ಡಬ್ಲ್ಯೂ.ಎಂ–ಟ್ರೈನಿಂಗ್ ಪ್ರೋಗ್ರಾಂ–ಎ.ಟಿ.ಐ ಕ್ಯಾಂಪಸ್–ಮೈಸೂರ್ (2010). ರೀಡಿಂಗ್ ಮೆಟೀರಿಯಲ್. ಮೈಸೂರ್: ಸ್ಟೇಟ್ ಇನ್‌ಸ್ಟಿಟ್ಯೂಟ್ ಫಾರ್ ಅರ್ಬನ್ ಡೆವಲಪ್‌ಮೆಂಟ್– ಎ.ಟಿ.ಐ ಕ್ಯಾಂಪಸ್, ಲಲಿತ್ ಮಹಲ್ ರೋಡ್, ಪು.28–30.

98. ಆನಂದ್ ಸುಭಾಶ್, ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್, ನ್ಯೂಡೆಲ್ಲಿ: ಮಿತ್ತಲ್ ಪಬ್ಲಿಕೇಶನ್ಸ್, 2010, ಪು.180–210.

99. ಶ್ರೇಜಿಯಾಂಗ್ ಜೋನ್, "ಪ್ರೆಸೆಂಟ್ ಆಂಡ್ ಫ್ಯೂಚರ್ ಚಾಲೆಂಜೆಸ್ ಇನ್ ರಿಸೈಕ್ಲಿಂಗ್ ಆಂಡ್ ಮೆನೇಜ್‌ಮೆಂಟ್ ಆಫ್ ಸೋಲಿಡ್ ವೇಸ್ಟ್", ಜಗಬೀರ್ ಸಿಂಗ್ ಮತ್ತು ಆರ್. ರಾಮನಾಥನ್(ಸಂ.), ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್–ಪ್ರೆಸೆಂಟ್ ಆಂಡ್ ಫ್ಯೂಚರ್ ಚಾಲೆಂಜೆಸ್, ಬೆಂಗಳೂರು: ಐ.ಕೆ. ಇಂಟರ್ ನ್ಯಾಷನಲ್ ಪಬ್ಲಿಷಿಂಗ್ ಹೌಸ್, 2010, ಪು.114–124.

100. ಮಾಲಿಕ್ ಲೋಕೇಂದ್ರ (2010). *"ಸೋಲಿಡ್ ವೇಸ್ಟ್ ಮ್ಯಾನೇಜ್‌ಮೆಂಟ್ ಆ್ಯಂಡ್ ಸಸ್ಟೈನೇಬಲ್ ಸಿಟೀಸ್ ಇನ್ ಇಂಡಿಯಾ: ಎ ಕ್ರಿಟಿಕ್"*, ನಗರಲೋಕ, 42, ಸಂಖ್ಯೆ 4. ಪು.41–48.

101. ರೋಬರ್ಟ್ ಜೋನ್ ಎಸ್.(2011). ಟೋಟಲ್ ವೇಸ್ಟ್ ಮೆನೇಜ್‌ಮೆಂಟ್ ಇನ್ ಹೈದರಾಬಾದ್, ಆಂಧ್ರಪ್ರದೇಶ: ಅಪ್ರಕಟಿತ ಪಿಎಚ್‌ಡಿ ಪ್ರಬಂಧ, ಮಧುರೈ ಕಾಮರಾಜ ವಿಶ್ವವಿದ್ಯಾನಿಲಯ, ಪು.175–180

102. ಶ್ವೇತ ಎಸ್.ದೇಶಪಾಂಡೆ, ಲೀಗಲ್ ರೆಗ್ಯುಲೇಶನ್ ಆಫ್ ವೇಸ್ಟ್ ಮೆನೇಜ್‌ಮೆಂಟ್ ಇನ್ ಇಂಡಿಯ ಆಗ್ರಾ–ಯು.ಪಿ: ಕರೆಂಟ್ ಪಬ್ಲಿಕೇಶನ್ಸ್, 2012, ಪು.36–44

103. ಅದೇ, ಪು.56–72.

104. ಅಬ್ರಹಾಂ ಅನ್ಸು (2012), "ಮುನಿಪಾಲ್ ಸೋಲಿಡ್ ವೇಸ್ಟ್: ಎ ಹ್ಯೂಮನ್ ರೈಟ್ಸ್ ಇಶ್ಯೂ", ವಿಕಾಸವಾಣಿ: ಜರ್ನಲ್, ಆವೃತಿ 6, ಸಂಖ್ಯೆ 2, ಏಪ್ರಿಲ್–ಜೂನ್ 2012, ಪು.1–13.

105. ಅಗರವಾಲ್ ಸುನೀತಾ ಮತ್ತು ಲಲಿತಾ ಅರೋರ, "ಡೊಮೆಸ್ಟಿಕ್ ವೇಸ್ಟ್ ಮೆನೇಜ್ ಮೆಂಟ್", ಜೈಪುರ ಆವಿಷ್ಕಾರ್ ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್, 2013, ಪು.18–26.

106. ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ವಾರ್ಷಿಕ ವರದಿ (2013–14), ಪು.34–46.

107. ಉಷಾಕುಮಾರಿ ಎಂ. ಮತ್ತು ಪೆಮಿಲಾ ಡಾರ್ಲಿಂಗ್ (2015). ಎಫೆಕ್ಟಿವ್‌ನೆಸ್ ಆಫ್ ವೀಡಿಯೊ ಇನ್ಸ್ಟ್ರಕ್ಷನಲ್ ಮೊಡ್ಯೂಲ್... ಕನ್ಯಾಕುಮಾರಿ ಡಿಸ್ಟ್ರಿಕ್ಟ್", ಇಂಟರ್ನಲ್ ಜರ್ನಲ್ ಆಫ್ ನರ್ಸಿಂಗ್ ಎಜುಕೇಷನ್, ಜುಲೈ–ಸೆಪ್ಟೆಂಬರ್, ಸಂಪುಟ.7, ನಂ.3, ಪು.148–153.

108. ಬಾಲ ಸುಬ್ರಮಣ್ಯನ್ (2015). "ಇಕಾನಾಮಿಕ್ಸ್ ಆಫ್ ಸೋಲಿಡ್ ವೇಸ್ಟ್ ಇನ್ ಇಂಡಿಯ", ಇಕನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ, ಜೂನ್ 20, ಸಂಪುಟ 50, ಸಂಚಿಕೆ 25, ಪು.35–44.

109. ಭವ್ಯ ದೊರೆ (2016). "ಇನ್ನೋವೇಟಿಂಗ್ ವೇಸ್ಟ್ ಮೆನೇಜ್‌ಮೆಂಟ್" ಇಕನಾಮಿಕ್ ಆ್ಯಂಡ್ ಪೋಲಿಟಿಕಲ್ ವೀಕ್ಲಿ, ಏಪ್ರಿಲ್ 16, 2016, ಸಂಪುಟ 51, ಸಂಚಿಕೆ 16, ಪು. 18–22.

# ಅಧ್ಯಾಯ: ಮೂರು

## ಅಧ್ಯಯನದ ಪ್ರದೇಶ ಪರಿಚಯ

3.1. ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ

3.2. ಭೌಗೋಳಿಕ ಪರಿಚಯ

3.3. ಜನಸಂಖ್ಯಾ ಚಿತ್ರಣ

3.4. ಆರ್ಥಿಕತೆ ಮತ್ತು ಮೂಲ ಸೌಲಭ್ಯಗಳು

3.5. ಮಾನವ ಅಭಿವೃದ್ಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ

## ಅಧ್ಯಾಯ: ಮೂರು

# ಅಧ್ಯಯನದ ಪ್ರದೇಶ ಪರಿಚಯ

### ಪ್ರವೇಶ

ಘನತ್ಯಾಜ್ಯ ನಿರ್ವಹಣೆಯ ಆರ್ಥಿಕಾಂಶಗಳ ಬಗ್ಗೆ ನಿರ್ದಿಷ್ಟ ಉದ್ದೇಶಗಳನ್ನಿಟ್ಟುಕೊಂಡು ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಅಧ್ಯಯನ ನಡೆಸಲಾಗಿದೆ.ಈ ಜಿಲ್ಲೆಯಲ್ಲಿ ಮಂಗಳೂರು, ಬಂಟ್ವಾಳ, ಬೆಳ್ತಂಗಡಿ, ಪುತ್ತೂರು ಮತ್ತು ಸುಳ್ಯ ಸೇರಿದಂತೆ 5 ತಾಲೂಕುಗಳಿದ್ದು, 2017–18ನೇ ಸಾಲಿನಲ್ಲಿ ಸುಗಮ ಆಡಳಿತಕ್ಕಾಗಿ ಮಂಗಳೂರು ತಾಲೂಕಿನಲ್ಲಿರುವ ಮೂಡಬಿದ್ರಿ ಮತ್ತು ಪುತ್ತೂರು ತಾಲೂಕಿನ ವ್ಯಾಪ್ತಿಯಲ್ಲಿರುವ ಕಡಬ ವಲಯಗಳನ್ನು ತಾಲೂಕು ಕೇಂದ್ರಗಳಾಗಿ ಕರ್ನಾಟಕ ಸರಕಾರ ಘೋಷಿಸಿರುವುದರಿಂದ ಪ್ರಸ್ತುತ ಜಿಲ್ಲೆಯಲ್ಲಿ ಏಳು ತಾಲೂಕುಗಳಿವೆ. ದಕ್ಷಿಣ ಕನ್ನಡ ಜಿಲ್ಲೆಯು ಬಹು ಸಂಸ್ಕೃತಿಯ ನಾಡಾಗಿದ್ದು 2011ರ ಜನಗಣತಿ ಪ್ರಕಾರ 88.57 ರಷ್ಟು ಸಾಕ್ಷರತೆಯನ್ನು ಹೊಂದಿದೆ. ಶಿಕ್ಷಣ, ಆರೋಗ್ಯ ಮತ್ತು ಬ್ಯಾಂಕಿಂಗ್ ಕ್ಷೇತ್ರದಲ್ಲಿ ದೇಶದಲ್ಲಿಯೇ ಗುರುತಿಸಿಕೊಂಡ ಈ ಜಿಲ್ಲೆಯು ಮಾದರಿ ಜಿಲ್ಲೆ ಎನಿಸಿಕೊಂಡಿದೆ. ಆದರೆ ಜಿಲ್ಲೆಯ ವಿವಿಧ ಭಾಗಗಳನ್ನು ಸ್ವಚ್ಛತೆ ಮತ್ತು ತ್ಯಾಜ್ಯ ನಿರ್ವಹಣೆ ದೃಷ್ಟಿಯಿಂದ ಅವಲೋಕಿಸಿದರೆ, ಹಲವಾರು ಸಮಸ್ಯೆಗಳು ಗೋಚರಿಸುತ್ತವೆ. ದಿನಪತ್ರಿಕೆಗಳಲ್ಲಿ ಮತ್ತು ಇತರ ಮಾಧ್ಯಮಗಳಲ್ಲಿ ತ್ಯಾಜ್ಯ ವಿಲೇವಾರಿಗೆ ಸಂಬಂಧಿಸಿದ ಚರ್ಚೆಗಳು ಹಾಗೂ ಸಾರ್ವಜನಿಕರ ಅಹವಾಲುಗಳು ಸರ್ವೇ ಸಾಮಾನ್ಯವಾಗಿವೆ. ಜಿಲ್ಲೆಯಾದ್ಯಂತ ಆಭಿವೃದ್ಧಿಯಲ್ಲಿ ಅಸಮತೋಲನವು ಎದ್ದು ಕಾಣುತ್ತಿದ್ದು, ಮಂಗಳೂರು ಮತ್ತು ಬಂಟ್ವಾಳ ತಾಲೂಕುಗಳು ಬಹುಪಾಲು ಅಭಿವೃದ್ಧಿ ಹೊಂದಿದ್ದರೆ, ಉಳಿದ ಮೂರು ತಾಲೂಕುಗಳು ಕೇಂದ್ರ ಸ್ಥಳಗಳನ್ನು ಹೊರತುಪಡಿಸಿ ಎಲ್ಲಾ ರಂಗಗಳಲ್ಲಿಯೂ ಹಿಂದುಳಿದಿರುವುದು ದ.ಕ ಜಿಲ್ಲಾ ಮಾನವ ಅಭಿವೃದ್ಧಿ ವರದಿ 2014 ಮತ್ತು ಇತರ ವಿವಿಧ ಮೂಲಗಳಿಂದ ತಿಳಿಯುತ್ತದೆ.

ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ಜಿಲ್ಲಾ ವ್ಯಾಪ್ತಿಯಲ್ಲಿ ಅಧ್ಯಯನ ಕೈಗೊಳ್ಳುವ ಸಂದರ್ಭದಲ್ಲಿ ಜಿಲ್ಲೆಯ ಐತಿಹಾಸಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಗಳನ್ನು ಅರಿತುಕೊಳ್ಳುವುದರಿಂದ ವಿಷಯವನ್ನು ಅರ್ಥೈಸಿ ವಿಶ್ಲೇಷಣೆ ಮಾಡಲು ಹೆಚ್ಚು ಅನುಕೂಲವಾಗಬಹುದು. ಜಿಲ್ಲೆಗೆ ಸಂಬಂಧಿಸಿದ ಮಾಹಿತಿಗಳನ್ನು ಇತಿಹಾಸಕ್ಕೆ ಸಂಬಂಧಪಟ್ಟ ಪುಸ್ತಕಗಳಿಂದ, ಜನಗಣತಿ ವರದಿಗಳಿಂದ, ದಕ್ಷಿಣ ಕನ್ನಡ ಜಿಲ್ಲಾ ಮಾನವ ಅಭಿವೃದ್ಧಿ ವರದಿ 2014 ಹಾಗೂ ಬೇರೆ ಬೇರೆ ಸಂದರ್ಭಗಳಲ್ಲಿ ನಿಯತ ಕಾಲಿಕೆಗಳು ಮತ್ತು ದಿನಪತ್ರಿಕೆಗಳಲ್ಲಿ ಪ್ರಕಟವಾದ ವರದಿ–ಲೇಖನಗಳಿಂದ ಸಂಗ್ರಹಿಸಲಾಗಿದೆ. ಈ ದೃಷ್ಟಿಯಿಂದ ಪ್ರಸ್ತುತ ಅಧ್ಯಾಯವನ್ನು ಐದು ಭಾಗಗಳಾಗಿ ವಿಭಾಗಿಸಲಾಗಿದೆ. ಮೊದಲ ಭಾಗವು ಜಿಲ್ಲೆಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಚಿತ್ರಣವನ್ನು ನೀಡುತ್ತದೆ. ಎರಡನೆಯ ಭಾಗವು ಭೌಗೋಳಿಕ ಪರಿಚಯವನ್ನು ಒಳಗೊಂಡಿದೆ. ಮೂರನೆ ಭಾಗವು ಜನಸಂಖ್ಯಾ ಲಕ್ಷಣಗಳನ್ನು ವಿವರಿಸುತ್ತದೆ. ನಾಲ್ಕನೆ ಭಾಗದಲ್ಲಿ ಆರ್ಥಿಕ ಮತ್ತು ಮೂಲಭೂತ ಸೌಲಭ್ಯಗಳ ಕುರಿತು ಮಾಹಿತಿ ಇದ್ದು, ಕೊನೆಯ ಐದನೇ ಭಾಗದಲ್ಲಿ ಮಾನವ ಅಭಿವೃದ್ಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸಾಧನೆ ಮತ್ತು ವೈಫಲ್ಯಗಳನ್ನು ಮಾನವ ಅಭಿವೃದ್ಧಿಯ ವಿವಿಧ ಸೂಚಿಗಳ ಸಹಾಯದಿಂದ ವಿಶ್ಲೇಷಿಸಲಾಗಿದೆ.

## 3.1. ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ

ದಕ್ಷಿಣ ಕನ್ನಡ ಜಿಲ್ಲೆಯು 1860ಕ್ಕಿಂತ ಮೊದಲು ಮದ್ರಾಸು ಪ್ರಾಂತ್ಯದ ಆಡಳಿತಕ್ಕೆ ಒಳಪಟ್ಟಿತ್ತು. ಆಡಳಿತಾತ್ಮಕ ಕಾರಣಗಳಿಗೋಸ್ಕರ ಬ್ರಿಟೀಷ್ ಆಡಳಿತವು 1860ರಲ್ಲಿ ಇದನ್ನು 'ನಾರ್ತ್ ಕೆನರಾ' ಮತ್ತು 'ಸೌತ್ ಕೆನರಾ' ಎಂದು ವಿಭಜಿಸಿ ಸೌತ್ ಕೆನರಾವನ್ನು ಮದ್ರಾಸು ಪ್ರಾಂತ್ಯಕ್ಕೆ ಮತ್ತು ನಾರ್ತ್ ಕೆನರಾವನ್ನು ಬಾಂಬೆ ಪ್ರಾಂತ್ಯಕ್ಕೆ ಸೇರಿಸಿತು. 1956ರಲ್ಲಿ ಭಾಷಾವಾರು ನೆಲೆಗಳಲ್ಲಿ ರಾಜ್ಯಗಳನ್ನು ಪುನರ್‌ವಿಂಗಡಿಸಿದ ಸಂದರ್ಭದಲ್ಲಿ ನಾರ್ತ್ ಕೆನರಾ ಮತು ಸೌತ್ ಕೆನರಾ ಜಿಲ್ಲೆಗಳನ್ನು ಹೊಸದಾಗಿ ರಚನೆಯಾದ ಮೈಸೂರು ರಾಜ್ಯಕ್ಕೆ ಸೇರಿಸಿ ಕ್ರಮವಾಗಿ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಎಂದು ಪುನರ್‌ನಾಮಕರಣ ಮಾಡಲಾಯಿತು.[1] ಈ ಸಂದರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು 8 ತಾಲೂಕುಗಳಿದ್ದವು. 1997ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯನ್ನು ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳೆಂದು ವಿಭಜಿಸಲಾಯಿತು. ಉಡುಪಿ ಜಿಲ್ಲೆಯು ಕುಂದಾಪುರ, ಉಡುಪಿ ಮತ್ತು ಕಾರ್ಕಳ ತಾಲೂಕುಗಳನ್ನು ಹೊಂದಿದ್ದು ದಕ್ಷಿಣ ಕನ್ನಡ ಜಿಲ್ಲೆಯು ಮಂಗಳೂರು, ಬಂಟ್ವಾಳ, ಬೆಳ್ತಂಗಡಿ, ಪುತ್ತೂರು ಮತ್ತು ಸುಳ್ಯ ತಾಲೂಕುಗಳನ್ನು ಒಳಗೊಂಡಿದೆ.

ವಿಲಿಯಂ ಪಾಯಸ್ ಮತ್ತು ವಿನ್ಸೆಂಟ್ ಮೆಂಡೋನ್ಸಾರವರು 'ದ ಲ್ಯಾಂಡ್ ಕಾಲ್ಡ್ ಸೌತ್ ಕೆನರಾ' ಎಂಬ ತಮ್ಮ ಗ್ರಂಥದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಬೆಳೆದುಬಂದ ರೀತಿ, ಇಲ್ಲಿಯ ಆಚರಣೆಗಳು, ಜನರ ಜೀವನಕ್ರಮ ಮತ್ತು ಹಬ್ಬಗಳ ಬಗ್ಗೆ ಕುತೂಹಲಕಾರಿ ಮಾಹಿತಿಯನ್ನು ನೀಡಿರುತ್ತಾರೆ. ಹದಿನೇಳು ಮತ್ತು ಹದಿನೆಂಟನೆಯ ಶತಮಾನದಲ್ಲಿ ಪಶ್ಚಿಮ ಕರಾವಳಿ ಪ್ರದೇಶಗಳಲ್ಲಿ ವ್ಯಾಪಾರದ ಕಾರಣಕ್ಕಾಗಿ ಬಂದಂತಹ ಪೋರ್ಚುಗೀಸರು ಈ ಪ್ರದೇಶದಲ್ಲಿ ಜನರ ಆಡುಭಾಷೆ ಕನ್ನಡ ಆಗಿರುವುದನ್ನು ಕಾಣುತ್ತಾರೆ. ಪೋರ್ಚುಗೀಸ್ ಭಾಷೆಯಲ್ಲಿ 'ಡ' ಎಂಬ ಅಕ್ಷರದ ಉಚ್ಚಾರ ಇಲ್ಲದೇ ಇದ್ದುದರಿಂದ ಅವರು ಈ ಪ್ರದೇಶಗಳನ್ನು 'ಕೆನರಾ' ಎಂಬುದಾಗಿ ಕರೆಯಲು ಆರಂಭಿಸಿದರು ಎಂದು ಉಲ್ಲೇಖಿಸಿರುತ್ತಾರೆ. ಕರಾವಳಿ ಪ್ರದೇಶದ ಆಡಳಿತದ ನಿಯಂತ್ರಣವನ್ನು ಹೊಂದಿದ್ದ ಟಿಪ್ಪು ಸುಲ್ತಾನ್‌ನನ್ನು ಮೈಸೂರು ಕದನದ ಮೂಲಕ 1799ರಲ್ಲಿ ಸೋಲಿಸಿ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಉಡುಪಿ ಹಾಗೂ ಕಾಸರಗೋಡು ಪ್ರದೇಶವನ್ನೊಳಗೊಂಡ ಆಡಳಿತವನ್ನು ಬ್ರಿಟೀಷರು ತಮ್ಮ ವಶಕ್ಕೆ ತೆಗೆದುಕೊಂಡರು.[2] ಇದರೊಂದಿಗೆ ಕರಾವಳಿ ಪ್ರದೇಶದಲ್ಲಿ ಬ್ರಿಟೀಷರ ವಸಾಹತುಶಾಹಿ ಆಡಳಿತ ವ್ಯವಸ್ಥೆಯ ಉದಯವಾಯಿತು. ಕೆನರಾ ಪ್ರದೇಶವನ್ನು ಸ್ವಾಧೀನಪಡಿಸುವುದರೊಂದಿಗೆ ಬ್ರಿಟಿಷ್ ಆಡಳಿತ ವ್ಯವಸ್ಥೆಗೆ, ಮದ್ರಾಸಿನಿಂದ ಬಾಂಬೆ ಪ್ರಾಂತ್ಯದವರೆಗಿನ ವ್ಯೂಹಾತ್ಮಕವಾಗಿ ಅತ್ಯಂತ ಪ್ರಾಮುಖ್ಯತೆಯನ್ನು ಒಳಗೊಂಡ ಕರಾವಳಿ ಭೂಪ್ರದೇಶಗಳು ದೊರಕಿವೆ. ವ್ಯಾಪಾರದ ದೃಷ್ಟಿಯಿಂದ ಬ್ರಿಟೀಷರಿಗೆ ದಕ್ಷಿಣ ಕನ್ನಡದ ಸ್ವಾಧೀನ ಪ್ರಮುಖ ಲಾಭವನ್ನು ತಂದಿತ್ತು.'ವ್ಯಾಪಾರವು ಬೆಳವಣಿಗೆಯ ಪ್ರಮುಖ ಯಂತ್ರವಾಗಿರುತ್ತದೆ' ಎಂಬ ಅರ್ಥಶಾಸ್ತ್ರದ ಸಾಂಪ್ರದಾಯಿಕ ಜನಪ್ರಿಯ ಘೋಷಣೆಯು ಬ್ರಿಟೀಷ್ ವಸಾಹತುಶಾಹಿ ವ್ಯವಸ್ಥೆಯ ಅರಿವಿಗೆ 1799ರಲ್ಲಿಯೇ ಬಂದಿತ್ತು.

ಕೆನರಾ ಪ್ರದೇಶದ ಪ್ರಥಮ ಕಲೆಕ್ಟರ್ ಆಗಿದ್ದಂತಹ ಸರ್. ಥಾಮಸ್ ಮುನ್ರೋರವರು 1800ರಲ್ಲಿ ಮದ್ರಾಸ್‌ನ ಕಂದಾಯ ಇಲಾಖೆಗೆ ಬರೆದ ಎರಡು ಪತ್ರಗಳಲ್ಲಿ ತಮ್ಮ ವಸಾಹತುಶಾಹಿ ಧೋರಣೆಯನ್ನು ಪ್ರದರ್ಶಿಸುತ್ತಾ, ಕೆನರಾ ಪ್ರದೇಶವು ಯಾವತ್ತಿಗೂ ಒಂದು ಉತ್ಪಾದನಾ ಚಟುವಟಿಕೆಗಳಿಗೆ ಪೂರಕವಾದ ಪ್ರದೇಶವಾಗಿರುವುದಿಲ್ಲವೆಂದು ಉಲ್ಲೇಖಿಸುತ್ತಾ, 'ಕೆನರಾ ಪ್ರದೇಶವು ಪ್ರಾಯಶಃ ಉತ್ಪಾದನೆಗೆ ಪೂರಕವಾದ ಪ್ರದೇಶವಾಗಿರುವುದಿಲ್ಲ. ಕೈಗಾರಿಕೆಗಳ ಬೆಳವಣಿಗೆಗೆ ಸಹಕಾರಿಯಾದ ಯಾವುದೇ ಕಚ್ಚಾ ಸಾಮಾಗ್ರಿಗಳನ್ನು ಅದು ಉತ್ಪಾದಿಸುವುದಿಲ್ಲ. ಈ ಭಾಗದಲ್ಲಿ ವರ್ಷದ ಹೆಚ್ಚಿನ ತಿಂಗಳು ಭಾರೀ ಪ್ರಮಾಣದಲ್ಲಿ ಮಳೆಯಾಗುವ ಕಾರಣ ಹಾಗೂ ಕೈಗಾರಿಕೆಗಳ ಅಭಿವೃದ್ಧಿಗೆ ಶುಭ್ರ ಆಕಾಶ, ತೆರೆದ ಬಯಲು ಪ್ರದೇಶದ ಅವಶ್ಯಕತೆ ಹೆಚ್ಚಿರುವ ಕಾರಣದಿಂದಾಗಿ ಈ ಪ್ರದೇಶವು ಯಾವತ್ತಿಗೂ ಕೈಗಾರಿಕೆಗಳ ಬೆಳವಣಿಗೆಗೆ ಪೂರಕ ವಾತಾವರಣವನ್ನು ಹೊಂದಿರುವುದಿಲ್ಲ"[3] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು ತಿಳಿದುಬರುತ್ತದೆ.

ಈ ಪ್ರದೇಶದಲ್ಲಿ ಬಹುಪಾಲು ಜನರು ತುಳು ಭಾಷೆಯನ್ನು ಮಾತನಾಡುವವರು ಆಗಿದ್ದು 8 ಮತ್ತು 14ನೇ ಶತಮಾನದ ಮಧ್ಯದಲ್ಲಿ ಅಲುಪ ದೊರೆಗಳು ರಾಜ್ಯಭಾರ ಮಾಡಿರುವ ಉಲ್ಲೇಖವಿದೆ. ಬಂಟರು, ಬಿಲ್ಲವರು, ಗೌಡರು, ಕೊಂಕಣಿಗರು, ಬ್ರಾಹ್ಮಣರು, ಮೊಗವೀರರು, ಕುಲಾಲರು, ದೇವಾಡಿಗರು, ದೇವಾಂಗ ಸಮಾಜದವರು, ಕ್ಷೌರಿಕರು, ಮಡಿವಾಳರು ಮತ್ತು ಗಾಣಿಗರು ಪ್ರಮುಖವಾಗಿ ಕಾಣಿಸಿಕೊಳ್ಳುವ ಜಾತಿಗಳು. ಕ್ರೈಸ್ತರು ಹಾಗೂ ಮುಸ್ಲಿಂ ಧರ್ಮದವರು ಎಲ್ಲಾ ತಾಲೂಕುಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಜಿಲ್ಲೆಯ ಬೆಳ್ತಂಗಡಿ, ಉಜಿರೆ, ಧರ್ಮಸ್ಥಳ, ವೇಣೂರು, ಕಾರ್ಕಳ ಹಾಗೂ ಮೂಡಬಿದ್ರೆ ಪ್ರದೇಶಗಳಲ್ಲಿ ಜೈನರು ಅಧಿಕ ಸಂಖ್ಯೆಯಲ್ಲಿದ್ದಾರೆ. ಉಳಿದ ಧರ್ಮಗಳ ಜನರು ಬೆರಳೆಣಿಕೆಯಷ್ಟು ಮಾತ್ರ ಇದ್ದಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಜನರು ಜಿಲ್ಲೆಯಾದ್ಯಂತ ಇದ್ದು ಹೆಚ್ಚಾಗಿ ತುಳು ಆಡುಭಾಷೆಯವರಾಗಿದ್ದು, ಈಗಲೂ ತಮ್ಮ ಕುಲಕಸುಬುಗಳನ್ನು ಮುಂದುವರಿಸಿಕೊಂಡು ಬಂದಿರುವುದು ಕಂಡು ಬರುತ್ತದೆ.

ತುಳು ಭಾಷೆಯು ಜನಸಾಮಾನ್ಯರ ಆಡು ಭಾಷೆಯಾಗಿದ್ದು ಲಿಪಿಯು ಬಳಕೆಯಲ್ಲಿಲ್ಲ. ಬೇರೆ ಬೇರೆ ಸಮುದಾಯಗಳು ತಮ್ಮದೇ ಆದ ಭಾಷೆಯನ್ನು ಹೊಂದಿರುವುದು ಜಿಲ್ಲೆಯ ಬಹು ಸಂಸ್ಕೃತಿಯ ಲಕ್ಷಣಗಳಲ್ಲಿ ಒಂದು. ಸುಳ್ಯ ತಾಲೂಕಿನ ಗೌಡ ಜನಾಂಗದವರಿಗೆ ಅರೆ ಭಾಷೆ, ಕ್ರೈಸ್ತರು (ರೋಮನ್ ಕೆಥೋಲಿಕ್) ಮತ್ತು ಕೊಂಕಣಿಗರಿಗೆ (ಗೌಡ ಸಾರಸ್ವತ ಮತ್ತು ರಜಪೂತ ಸಾರಸ್ವತ) ಕೊಂಕಣಿ ಭಾಷೆ, ಮಲೆಯಾಳಿ ಮುಸ್ಲಿಮರಿಗೆ ಬ್ಯಾರಿ ಭಾಷೆ ಮತ್ತು ಬ್ರಾಹ್ಮಣರಿಗೆ ಹವ್ಯಕ ಭಾಷೆ ಮಾತೃ ಭಾಷೆಯಾಗಿದ್ದು ಇವುಗಳು ಸ್ವಂತ ಲಿಪಿಯನ್ನು ಹೊಂದಿರುವುದಿಲ್ಲ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳು ತುಳು ಮಿಶ್ರಿತ ಗ್ರಾಮ್ಯ ಭಾಷೆಗಳನ್ನು ಆಡುತ್ತಿದ್ದು ಬಿಲ್ಲವರು ಮತ್ತು ಬಂಟರು ಬಹುತೇಕ ತುಳು ಮಾತೃಭಾಷಿಕರಾಗಿದ್ದಾರೆ. ಮಲೆಯಾಳಿ ಭಾಷೆ ಮಾತನಾಡುವ ಸಮುದಾಯಗಳೂ ಇಲ್ಲಿವೆ. ನಗರ ಪ್ರದೇಶಗಳ ಜನರ ಮೇಲೆ ಇಂಗ್ಲೀಷ್ ಹಾಗೂ ಹಿಂದಿಯ ಪ್ರಭಾವ ಹೆಚ್ಚಿರುವುದು ಕಂಡು ಬರುತ್ತದೆ.

ದಕ್ಷಿಣ ಕನ್ನಡ ಬಹು ಸಂಸ್ಕೃತಿಯ ನಾಡು. ಇಲ್ಲಿ ಅನೇಕ ಪ್ರಸಿದ್ಧ ದೇವಸ್ಥಾನಗಳು, ಮಸೀದಿಗಳು, ಜೈನ ಬಸದಿಗಳು ಮತ್ತು ಚರ್ಚುಗಳಿವೆ. ಹಿಂದುಗಳು ನಾಗಾರಾಧನೆಗೆ ಪ್ರಾಧಾನ್ಯತೆ ನೀಡುತ್ತಿದ್ದು ನಾಗಮಂಡಲ ಪ್ರದರ್ಶನ ಕಲೆ ಇಲ್ಲಿಯ ವಿಶೇಷತೆ. ಭೂತಾರಾಧನೆ ಖಾಸಗಿ ಹಾಗೂ ಸಾರ್ವಜನಿಕವಾಗಿ ಆಚರಿಸಲ್ಪಡುತ್ತಿದೆ. ಕೋಣಗಳ ಓಟದ ಸ್ಪರ್ಧೆ 'ಕಂಬಳ' ಜಿಲ್ಲೆಯ ಪ್ರಮುಖ ಜಾನಪದ ಕ್ರೀಡೆ. ಕೋಳಿಕಟ್ಟ (ಕೋಳಿಕಾಳಗ) ಸಹ ಪ್ರಮುಖ ಜಾನಪದ ಕ್ರೀಡೆಯಾಗಿದ್ದರೂ ದುರಾದೃಷ್ಟವಶಾತ್ ಅದು ಜೂಜುಗಾರಿಕೆಗೆ ಆಸ್ಪದ ಮಾಡಿಕೊಟ್ಟಿದೆ. ಕೋಳಿ, ಹಂದಿ, ಕುರಿ ಮುಂತಾದ ಪ್ರಾಣಿ ಬಲಿ ಆಚರಣೆ ಚಾಲ್ತಿಯಲ್ಲಿದೆ. ಜಿಲ್ಲೆಯಲ್ಲಿ ಅನೇಕ ಜಾನಪದ ಕಲಾ

ಪ್ರಕಾರಗಳು ಪ್ರದರ್ಶನಗೊಳ್ಳುತ್ತಿದ್ದು ಯಕ್ಷಗಾನ, ಸಿದ್ಧೇಷ, ಹುಲಿವೇಷಗಳು ಹೆಚ್ಚು ಜನಪ್ರಿಯವಾಗಿವೆ. ಗಣೇಶೋತ್ಸವ ಮತ್ತು ಕೃಷ್ಣಾಷ್ಟಮಿಗಳನ್ನು ಹಿಂದುಗಳು ಸಾರ್ವಜನಿಕವಾಗಿ ಅದ್ದೂರಿಯಿಂದ ಆಚರಿಸಿದರೆ, ಕ್ರೈಸ್ತರು 'ಸಾಂತ್‌ಮಾರಿ' ಮತ್ತು ಮುಸ್ಲಿಮರು 'ಉರೂಸ್' ಹಬ್ಬವನ್ನು ಅಷ್ಟೇ ಸಂಭ್ರಮದಿಂದ ಆಚರಿಸುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯು ಸಾಂಪ್ರಾದಾಯಿಕ ಮತ್ತು ಆಧುನಿಕ ಜೀವನ ಶೈಲಿಗಳೆರಡನ್ನೂ ಅನುಭವಿಸಿಕೊಂಡು ಬರುತ್ತಿದ್ದು ನಾಗಾರಾಧನೆ, ವಿಶು ಹಬ್ಬ, ಭೂತಾರಾಧನೆಯಂತಹ ಧಾರ್ಮಿಕ ಅಚರಣೆಗಳ ಮೂಲಕ ಸ್ವಚ್ಛತೆ ಹಾಗೂ ಪ್ರಕೃತಿಗೆ ಆದ್ಯತೆ ನೀಡಿರುವುದನ್ನು ಗಮನಿಸಬಹುದು. ಜಿಲ್ಲೆಯ ಸಾಮಾಜಿಕ ಸ್ಥಿತಿಗತಿಯನ್ನು ಅವಲೋಕಿಸಿದಾಗ ಬಿಲ್ಲವರು (ಪೂಜಾರಿ), ಬಂಟರು (ಶೆಟ್ಟಿ), ಗೌಡ ಹಾಗೂ ಮೊಗವೀರ ಸಮುದಾಯಕ್ಕೆ ಸೇರಿದ ಜನರ ಸಂಖ್ಯೆ ಹೆಚ್ಚಾಗಿರುವುದು ಕಂಡುಬರುತ್ತದೆ. ಕೃಷಿ, ಮೀನುಗಾರಿಕೆ, ಬೀಡಿ ಉದ್ಯಮ ಮುಂತಾದುವು ಇಲ್ಲಿಯ ಬಹುಮುಖ್ಯ ಆರ್ಥಿಕ ಚಟುವಟಿಕೆಗಳಾಗಿವೆ. ಬಿಲ್ಲವರು ಹಿಂದೆ ಹಾಗೂ ಇಂದಿಗೂ ಹೆಚ್ಚಿನ ಸಂಖ್ಯೆಯಲ್ಲಿದ್ದು, ಸಮುದಾಯದಲ್ಲಿ ಹೆಚ್ಚಿನವರು ಕೃಷಿ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೂ, ಸ್ಥಳೀಯ ಇತಿಹಾಸಕಾರರು ಅವರ ಸಾಂಪ್ರದಾಯಿಕ ಉದ್ಯೋಗ ಕೃಷಿ ಹಾಗೂ ತಾಳೆಯ ಮತ್ತು ತೆಂಗಿನ ಮರಗಳಿಂದ ಶೇಂದಿ ತೆಗೆಯುವುದಾಗಿತ್ತು ಎಂದು ಉಲ್ಲೇಖಿಸಿರುತ್ತಾರೆ.[4] ಮೊಗವೀರರು ಜಿಲ್ಲೆಯಲ್ಲಿ ವ್ಯಾಪಿಸಿರುವ ಅರವತ್ತು ಕಿ.ಮೀ.ನಷ್ಟು ಸಮುದ್ರದಲ್ಲಿ ಮತ್ತು ಕರಾವಳಿ ಜಿಲ್ಲೆಯ ಜೀವನದಿಗಳಾದ ನೇತ್ರಾವತಿ, ಫಲ್ಗುಣಿ ಮತ್ತು ಶಾಂಭವಿಯಲ್ಲಿ ಒಳನಾಡು ಮೀನುಗಾರಿಕೆ ಯನ್ನು ತಮ್ಮ ಮುಖ್ಯ ಕಸುಬನ್ನಾಗಿ ಮಾಡಿಕೊಂಡಿರುತ್ತಾರೆ. ಅಂಕಿ-ಅಂಶಗಳ ಪ್ರಕಾರ ಸುಮಾರು ಒಂದು ಲಕ್ಷದಷ್ಟು ಜನರು ಜಿಲ್ಲೆಯಲ್ಲಿ ಮೀನುಗಾರಿಕಾ ಚಟುವಟಿಕೆಗಳಲ್ಲಿ ನೇರವಾಗಿ ತೊಡಗಿಸಿಕೊಂಡಿದ್ದರೆ, ಸುಮಾರು 2.5 ಲಕ್ಷದಷ್ಟು ಮಂದಿ ಪರೋಕ್ಷವಾಗಿ ಮೀನು ಮಾರಾಟ ಮತ್ತು ಇತರ ಮೀನುಗಾರಿಕಾ ಸಂಬಂಧಿ ಉದ್ಯೋಗಗಳಲ್ಲಿ ತೊಡಗಿಸಿಕೊಂಡಿರುತ್ತಾರೆ. ಜಿಲ್ಲೆಯಲ್ಲಿರುವ ಮತ್ತೊಂದು ಪ್ರಮುಖ ಸಮುದಾಯ ಬಂಟರು. ಇವರು ಮೂಲತಃ ಭೂಮಾಲೀಕರಾಗಿದ್ದು, ಕೃಷಿ ಚಟುವಟಿಕೆಗಳಲ್ಲಿ ಗೇಣಿದಾರರು ಮತ್ತು ಹಿಂದುಳಿದ ಜಾತಿ, ವರ್ಗಗಳ ಜನರನ್ನು ಬಳಸಿಕೊಂಡು ಕೃಷಿ ಚಟುವಟಿಕೆಗಳ ಉಸ್ತುವಾರಿಯನ್ನು ಹಿಂದೆ ನಡೆಸಿಕೊಂಡು ಬಂದಿದ್ದವರು.[5] ಈ ಕಾರಣದಿಂದಾಗಿ ಬಹಳ ಪ್ರಭಾವಶಾಲಿಗಳಾಗಿ ಇತರ ಸಮುದಾಯದವರನ್ನು ತಮ್ಮ ಹಿಡಿತದಲ್ಲಿ ಇರಿಸಿಕೊಂಡಿದ್ದರು. 1974ರಲ್ಲಿ ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ಶ್ರೀ ದೇವರಾಜ್ ಅರಸುರವರು ಭೂಸುಧಾರಣಾ ಕಾಯಿದೆಗೆ ಅನುಗುಣವಾಗಿ ಜಾರಿಗೆ ತಂದ "ಉಳುವವನೇ ಹೊಲದೊಡೆಯ" ಎಂಬ ಕಾನೂನಿನಿಂದಾಗಿ ಜಿಲ್ಲೆಯ ಭೂಹಂಚಿಕೆ ವ್ಯವಸ್ಥೆಯಲ್ಲಿ ಭಾರೀ

ಬದಲಾವಣೆಗಳಾಗಿ ಹಿಂದೆ ಭೂಮಿಯ ಒಡೆಯರಾಗಿದ್ದ ಬ್ರಾಹ್ಮಣರು, ಬಂಟರು ಮತ್ತು ಜೈನರು ತಮ್ಮ ಕೃಷಿ ಭೂಮಿಯನ್ನು ಉಳುವ ವರ್ಗದವರಾದ ಹಿಂದುಳಿದ ಜಾತಿ ಮತ್ತು ವರ್ಗದ ಜನರಿಗೆ ಕೊಡಬೇಕಾಯಿತು. ಇದರಿಂದಾಗಿ ಜಿಲ್ಲೆಯಲ್ಲಿ ದೊಡ್ಡ ಭೂಹಿಡುವಳಿದಾರರ ಸಂಖ್ಯೆಯಲ್ಲಿ ಭಾರೀ ಪ್ರಮಾಣದ ಕಡಿತವಾಗಿ, ಸಣ್ಣ ಹಿಡುವಳಿದಾರರ ಸಂಖ್ಯೆ ಹೆಚ್ಚಾಯಿತು. ಇತ್ತೀಚಿನ ವರ್ಷಗಳಲ್ಲಿ ಸರಕಾರದ ಅಕ್ರಮ-ಸಕ್ರಮ ಕಾನೂನಿನಿಂದಲೂ ಅನೇಕ ಭೂರಹಿತರು ಸ್ವಂತ ಮನೆ ಮತ್ತು ಸ್ವಂತ ಕೃಷಿ ಜಮೀನು ಹೊಂದಲು ಸಾಧ್ಯವಾಗಿದೆ. ಗ್ರಾಮೀಣ ಮತ್ತು ನಗರಗಳ ಸಾಮಾಜಿಕ ಸ್ಥಿತಿಯಲ್ಲಿ ಗಮನಾರ್ಹವಾದ ವ್ಯತ್ಯಾಸಗಳಿಲ್ಲದಿದ್ದರೂ ಆರ್ಥಿಕ ವಿಚಾರಗಳಲ್ಲಿ ದೊಡ್ಡ ಪ್ರಮಾಣದ ವ್ಯತ್ಯಾಸಗಳು ಕಂಡುಬರುತ್ತವೆ. ದೇಶದ ಎಲ್ಲೆಡೆಯಂತೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೂ ಜನರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿರುವುದು ದಾಖಲಾಗಿದೆ. 1931ರ ಆಗೋಸ್ಟ್ ತಿಂಗಳಿನಲ್ಲಿ ಮಹಾತ್ಮ ಗಾಂಧೀಜಿಯವರು ಮಂಗಳೂರು ಮತ್ತು ಉಡುಪಿ ನಗರಗಳಿಗೆ ಆಗಮಿಸಿ ಜಿಲ್ಲೆಯ ಜನರು ಸಕ್ರಿಯವಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗುವಂತೆ ಪ್ರೇರೇಪಿಸಿದರು ಹಾಗೂ ಸ್ವಾತಂತ್ರ್ಯ ಹೋರಾಟದಲ್ಲಿ ಕಾರ್ನಾಡು ಸದಾಶಿವರಾಯರು, ಎಂ.ಉಮೇಶ್ ರಾಯರು, ಹಿರಿಯಡ್ಕ ರಾಮರಾಯರು, ಎಸ್.ಎನ್. ಹೊಳ್ಳ, ನಾರಾಯಣ ಕಿಲ್ಲೆ, ಅಮ್ಮೆಂಬಳ ಬಾಳಪ್ಪ, ಕೆ.ಕೆ.ಶೆಟ್ಟಿ ಮೊದಲಾದವರು ಪಾಲ್ಗೊಂಡಿರುವುದು ಕಂಡುಬರುತ್ತದೆ. ಕುದ್ಮಲ್ ರಂಗರಾಯರು ದಲಿತರ ಉದ್ಧಾರ ಮತ್ತು ಅವರ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿ ಅರಿವು ಮೂಡಿಸುವ ಕಾರ್ಯವನ್ನು ಕೈಗೊಂಡಿದ್ದರು. ಜಿಲ್ಲೆಯಲ್ಲಿ ಅನೇಕ ಸಾಮಾಜಿಕ ಮತ್ತು ಧಾರ್ಮಿಕ ಚಳುವಳಿಗಳು ನಡೆದಿದ್ದು, 19ನೇ ಮತ್ತು 20ನೇ ಶತಮಾನದಲ್ಲಿ ಬ್ರಹ್ಮ ಸಮಾಜ, ಥಿಯೋಸಾಫಿಕಲ್ ಸೊಸೈಟಿ, ದಲಿತ ಚಳುವಳಿ, ಶಾಲೆ ಮತ್ತು ಕಾಲೇಜುಗಳು, ಆಸ್ಪತ್ರೆಗಳು ಮತ್ತು ಬ್ಯಾಂಕ್‌ಗಳು ಆರಂಭವಾಗಿ, ಜಿಲ್ಲೆಯಲ್ಲಿ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಗೆ ಮಹತ್ತರವಾದ ಕೊಡುಗೆಗಳನ್ನು ನೀಡಿವೆ. ಹೆಂಚಿನ ಕಾರ್ಖಾನೆ, ಗೇರುಬೀಜ ಸಂಸ್ಕರಣೆ, ಬೀಡಿ ಉದ್ಯಮ ಮುಂತಾದುವು ಜಿಲ್ಲೆಯಲ್ಲಿನ ಕೆಳ ಮತ್ತು ಮಧ್ಯಮ ವರ್ಗದ ಜನರಿಗೆ ಉದ್ಯೋಗಾವಕಾಶಗಳನ್ನು ಸೃಷ್ಟಿಸಿವೆ. ಇಪ್ಪತ್ತನೆಯ ಶತಮಾನದ ಮಧ್ಯಭಾಗದಲ್ಲಿ ಸಹಕಾರಿ ಚಟುವಟಿಕೆಗಳು ಆರಂಭವಾಗಿ ಮಧ್ಯಮ ಮತ್ತು ಬಡ ಜನರ, ಅದರಲ್ಲಿಯೂ ರೈತರ ಆರ್ಥಿಕ ಸಬಲೀಕರಣಕ್ಕೆ ಕಾರಣವಾಗಿರುತ್ತದೆ. ಕೃಷಿ ಕಾರ್ಮಿಕರು, ಮೀನುಗಾರರು, ಶೇಂದಿ ತೆಗೆಯುವವರು, ಕುಂಬಾರರು ಮುಂತಾದ ಹಿಂದುಳಿದ ಮತ್ತು ಪರಿಶಿಷ್ಟ ಜಾತಿ, ಜನಾಂಗಕ್ಕೆ ಸೇರಿದ ಜನರೂ ಸಹಕಾರಿ ಚಳುವಳಿಯ ಫಲಾನುಭವಿಗಳಾಗಿ ದ್ದಾರೆ. ಜನರ ಆರ್ಥಿಕ ಸಬಲೀಕರಣಕ್ಕೆ ಮತ್ತು ಜಿಲ್ಲೆಯ ಆರ್ಥಿಕ ಅಭಿವೃದ್ಧಿಗೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ತಮ್ಮ ಕೊಡುಗೆಯನ್ನು ಸಹಕಾರಿ ಸಂಘಗಳು ಸಲ್ಲಿಸಿವೆ.

## ಮಂಗಳೂರಿನ ಇತಿಹಾಸ ಮತ್ತು ಸಮಾಜೋ-ಆರ್ಥಿಕ ಪರಿಚಯ

ಮಂಗಳೂರು ನಗರಕ್ಕೆ ಈ ಹೆಸರು ಮಂಗಳಾದೇವಿ ಎಂಬ ಸ್ತ್ರೀ ದೇವತೆಯಿಂದ ಬಂದಿದೆ ಎಂಬುದಾಗಿ ಪ್ರತೀತಿ ಇದೆ. ಮಂಗಳೂರು ಎಂದರೆ ಇಲ್ಲಿಯ ಸ್ಥಳೀಯ ಕನ್ನಡ ಭಾಷೆಯಲ್ಲಿ ' ಮಂಗಳಕರ ನಗರ' ಎಂಬ ಸಾಹಿತ್ಯಕ ಅರ್ಥ ಬರುತ್ತದೆ. ಮಂಗಳೂರು ನಗರಕ್ಕೆ ತುಳು ಭಾಷೆಯಲ್ಲಿ 'ಕುಡ್ಲಾ' ಎಂದು ಕರೆಯುತ್ತಾರೆ, ಕ್ರಿಶ್ಚಿಯನ್ ಬಾಂಧವರು 'ಕೊಡಿಯಾಲ' ಎಂದೂ, ತುಳು ಭಾಷೆ ಇಲ್ಲಿಯ ತಾಯ್ನುಡಿಯಾದುದರಿಂದ 'ತುಳುನಾಡು' ಎಂದೂ, ಕಾಸರಗೋಡು ಹಾಗೂ ಮಂಜೇಶ್ವರ ಕಡೆಯ ಮಲೆಯಾಳಿ ಮುಸ್ಲಿಮರು 'ಮೈಕಾಲ' ಎಂದೂ, ಹೀಗೆ ಇಲ್ಲಿಯ ಬೇರೆ ಬೇರೆ ಜಾತಿ, ಭಾಷೆ, ಧರ್ಮಕ್ಕೆ ಸೇರಿದ ಜನರು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಒಂದು ಹಳೆಯ ಉಲ್ಲೇಖದ ಪ್ರಕಾರ ಕ್ರಿ.ಶ. 715ರಲ್ಲಿ ಪಾಂಡ್ಯ ಅರಸ ಚೆಟ್ಟಿಯಾನ್ ಈ ಪ್ರದೇಶವನ್ನು 'ಮಂಗಳಾಪುರಂ' ಎಂದು ಕರೆದಿದ್ದಾನೆ. 11ನೇ ಶತಮಾನದಲ್ಲಿ ಅರೇಬಿಯನ್ ಪ್ರವಾಸಿ ಇಬನ್ ಬಟೂಟನು ತನ್ನ ಪ್ರವಾಸ ಕಥನದಲ್ಲಿ ಈ ಪ್ರದೇಶವನ್ನು 'ಮಂಜರೂರು' ಎಂದು ಕರೆದಿದ್ದಾನೆ ಎನ್ನುವ ಇನ್ನೊಂದು ಐತಿಹಾಸಿಕ ಉಲ್ಲೇಖವಿದೆ.[6]

ಪಶ್ಚಿಮ ಕರಾವಳಿ ತೀರ ಪ್ರದೇಶವು ಪೌರಾಣಿಕ ಪುರುಷ ಪರಶುರಾಮನ ಸೃಷ್ಟಿ ಎಂದು ದಂತಕಥೆಗಳಿದ್ದು ಮಂಗಳೂರು ಕೂಡಾ ಇದರ ಒಂದು ಭಾಗವಾಗಿದೆ. ಇನ್ನೊಂದು ದಂತ ಕಥೆಯ ಪ್ರಕಾರ ರಾಮಾಯಣ ಕಾಲದ ಶ್ರೀರಾಮನು ಕೂಡಾ ತುಳುನಾಡನ್ನು ಆಳಿರುವನು. ಪಾಂಡವರಲ್ಲೇ ಕಿರಿಯವನಾದ ಸಹದೇವನು ಮಹಾಭಾರತದ ಕಾಲದಲ್ಲಿ ತುಳುನಾಡಿನ ರಾಜಪಾಲನಾಗಿದ್ದ ಎಂದು ಕೂಡಾ ನಂಬಲಾಗುತ್ತದೆ. ಅಲುಪ, ಚೌಟ, ಬಂಗ ಮುಂತಾದ ಅರಸು ಮನೆತನದವರು ಇಲ್ಲಿ ಆಳ್ವಿಕೆ ನಡೆಸಿದ್ದಾರೆ. 15ನೇ ಶತಮಾನದಲ್ಲಿ ಈ ಪ್ರದೇಶ ಪೋರ್ಚುಗೀಸರ ವಶವಾದಾಗ ಉಳ್ಳಾಲದ ರಾಣಿ ಅಬ್ಬಕ್ಕ ದೇವಿಯು ಅವರನ್ನು ಹೊಡೆದಟ್ಟಿ ವಶಪಡಿಸಿಕೊಂಡಿದ್ದಳು. 1799ರಲ್ಲಿ ಟಿಪ್ಪುವಿನ ಅವಸಾನದ ನಂತರ ಈ ಪ್ರದೇಶ ಸಂಪೂರ್ಣವಾಗಿ ಬ್ರಿಟೀಷರ ಸ್ವಾಧೀನವಾಯಿತು. 1866ರಲ್ಲಿ ಬ್ರಿಟೀಷರು ಮಂಗಳೂರು ನಗರಸಭೆಯನ್ನು ರಚನೆ ಮಾಡಿದರು. 'ಚರಿತ್ರೆಯ ಪುಟಗಳಲ್ಲಿ ಕಂಡು ಬರುವಂತೆ ಕರಾವಳಿ ಕರ್ನಾಟಕವು ಸಾಗರೋತ್ತರ ವ್ಯಾಪಾರದಲ್ಲಿ ಬಹಳ ಮುಂದುವರಿದಿತ್ತು. ದಿ. ಹೆಚ್.ಎಲ್.ನಾಗೇಗೌಡರು ತಮ್ಮ "ಪ್ರವಾಸಿ ಕಂಡ ಇಂಡಿಯಾ" ಪುಸ್ತಕದಲ್ಲಿ, ಕ್ರಿಸ್ತಶಕ ಒಂದನೇ ಶತಮಾನದ ಗ್ರೀಕ್ ನಾಟಕವೊಂದರಲ್ಲಿ ಈ ಪ್ರದೇಶದ ಬಗ್ಗೆ ಬರೆದ ಅನೇಕ ವಿದೇಶೀ ಪ್ರವಾಸಿಗರ ವರದಿಗಳನ್ನು ದಾಖಲಿಸಿದ್ದಾರೆ. ಹದಿನಾಲ್ಕನೇ ಶತಮಾನದಲ್ಲಿ ಅಲೂಪ ವಂಶದ ಅರಸರ ಕಾಲದಲ್ಲಿ ಪ್ರವಾಸಿಯಾಗಿ ಬಂದ ಇಬ್ನಾ ಬಟೂಟನು ಇಲ್ಲಿನ ಜನರ ಆಚಾರ ವಿಚಾರಗಳನ್ನು ಮೆಚ್ಚಿ ಬರೆದಿದ್ದಾನೆ. ಹದಿನೈದನೇ

ಶತಮಾನದಲ್ಲಿ ಬಂದ ಪರ್ಷಿಯದ ರಾಯಭಾರಿ ಅಬ್ದುಲ್ ರಜಾಕನು ಇಲ್ಲಿನ ವ್ಯಾಪಾರ ವಹಿವಾಟುಗಳ ಬಗೆಗೆ ವಿಸ್ತಾರವಾಗಿ ಬರೆದಿದ್ದಾನೆ.[7] ಸ್ವಾತಂತ್ರ್ಯಾನಂತರ 1956ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯಾದಾಗ ಮಂಗಳೂರು ನಗರವು ಉಡುಪಿ ಸಹಿತವಾದ ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯ ಕೇಂದ್ರಸ್ಥಳವಾಗಿ ರೂಪುಗೊಂಡಿತು. 1997ರಲ್ಲಿ ದಕ್ಷಿಣಕನ್ನಡ ಮತ್ತು ಉಡುಪಿ ಜಿಲ್ಲೆಗಳಾಗಿ ವಿಭಜನೆಗೊಂಡಾಗ ಮಂಗಳೂರು ದಕ್ಷಿಣಕನ್ನಡ ಜಿಲ್ಲೆಯ ಕೇಂದ್ರವಾಗಿ ಉಳಿಯಿತು.[8]

ಹೀಗೆ ಮಂಗಳೂರು ನಗರ ಧಾರ್ಮಿಕ, ಪೌರಾಣಿಕ ಹಾಗೂ ಐತಿಹಾಸಿಕ ಹಿನ್ನೆಲೆಯಿರುವ ನಾಡಾಗಿದೆ. ಈ ನಗರವು ಶಿಕ್ಷಣ, ಬ್ಯಾಂಕಿಂಗ್, ಆರೋಗ್ಯ, ಕೈಗಾರಿಕೆ, ಹೊಟೇಲ್, ಪ್ರವಾಸ, ವಾಣಿಜ್ಯ, ಉದ್ಯಮ ಮುಂತಾದ ಎಲ್ಲಾ ರಂಗಗಳಲ್ಲೂ ತ್ವರಿತಗತಿಯಲ್ಲಿ ಬೆಳೆಯುತ್ತಿದೆ. ಕೆಲವು ದಶಕಗಳ ಹಿಂದೆ ಮಂಗಳೂರು ಔದ್ಯೋಗಿಕವಾಗಿ ಕೇವಲ ಮೀನುಗಾರಿಕೆ ಹಾಗು ಹಂಚಿನ ಕೈಗಾರಿಕೆಗೆ ಹೆಸರುವಾಸಿಯಾಗಿತ್ತು. ಈ ಪರಿಸರ ಸ್ನೇಹಿ ಉದ್ದಿಮೆಗಳಿಂದ ಪರಿಸರಕ್ಕೆ ಯಾವುದೇ ಹೆಚ್ಚಿನ ತೊಂದರೆಗಳಿರಲಿಲ್ಲ. ನಂತರ ನಿಧಾನವಾಗಿ ಅಗಾಧ ಪ್ರಮಾಣದಲ್ಲಿ ವಿದೇಶಿ ವಿನಿಮಯವನ್ನು ತಂದುಕೊಡಬಲ್ಲ ಗೇರು ಉದ್ದಿಮೆ ಮತ್ತು ತೆಂಗಿನ ವಿವಿಧ ಉತ್ಪನ್ನಗಳ ತಯಾರಿಕಾ ಇಂದು ಘಟಕಗಳು ಈ ಪ್ರದೇಶದಲ್ಲಿ ಹುಟ್ಟಿಕೊಂಡವು. ಇಂದು ಇಲ್ಲಿನ ಮಣ್ಣಿನಲ್ಲಿ ಹುಟ್ಟಿ ಬೃಹದಾಕಾರವಾಗಿ ಬೆಳೆದ ಐದು ಬ್ಯಾಂಕುಗಳಿವೆ. ಕೆನರಾ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್, ವಿಜಯ ಬ್ಯಾಂಕ್ ಮತ್ತು ಕಾರ್ಪೋರೇಶನ್ ಬ್ಯಾಂಕ್. ಇವು ರಾಷ್ಟ್ರೀಕೃತ ಬ್ಯಾಂಕುಗಳು ಹಾಗೂ ಖಾಸಗಿ ಒಡೆತನದ ದಿ ಕರ್ಣಾಟಕ ಬ್ಯಾಂಕ್. ಇವು ಕರ್ನಾಟಕದ ಬ್ಯಾಂಕಿಂಗ್ ಕ್ಷೇತ್ರದ ಪಂಚಪಾಂಡವರು. ಸಹಕಾರಿ ಕ್ಷೇತ್ರದಲ್ಲಿಯೂ ಈ ನಾಡು ಗಣನೀಯ ಪ್ರಗತಿ ಸಾಧಿಸಿದೆ. ನಗರದ ವಿಸ್ತಾರಕ್ಕೆ ಹೋಲಿಸಿದರೆ ದೇಶದಲ್ಲಿಯೆ ಅತೀ ಹೆಚ್ಚು ವೈದ್ಯಕೀಯ, ತಾಂತ್ರಿಕ ಹಾಗು ಇತರ ಶೈಕ್ಷಣಿಕ ಸಂಸ್ಥೆಗಳನ್ನು ಹೊಂದಿರುವ ಪ್ರದೇಶವಿದು. ಮೀನುಗಾರಿಕೆ, ಪ್ರವಾಸೋದ್ಯಮ, ಆರೋಗ್ಯಪಾಲನೆ, ಬ್ಯಾಂಕಿಂಗ್ ಮತ್ತು ಜ್ಞಾನ–ಕೇಂದ್ರಿತ ಉದ್ದಿಮೆಗಳ ಸಾಮರ್ಥ್ಯ–ಸಂಪತ್ತುಳ್ಳ ನಗರ ಮಂಗಳೂರು.[9] ಇತ್ತೀಚಿನ ವರ್ಷಗಳಿಂದ ಮಂಗಳೂರು ವಿಶೇಷ ವಿತ್ತ (ಎಮ್ ಎಸ್ ಇ ಝೆಡ್) ವಲಯವೆಂದು ಗುರುತಿಸಿಕೊಂಡ ಕಾರಣದಿಂದ ಅಭಿವೃದ್ಧಿಯ ವೇಗ ಮತ್ತಷ್ಟು ಹೆಚ್ಚಾಗಿದೆ. ಪರಿಸರವಾದಿಗಳ ಸತತ ಹೋರಾಟ ಹಾಗೂ ಎಚ್ಚರಿಕೆಯ ಫಲವಾಗಿ ಅನೇಕ ಕೈಗಾರಿಕೆಗಳು ಇಲ್ಲಿಂದ ಕಾಲ್ಕಿತ್ತರೂ ಎಮ್‌ಆರ್‌ಪಿಎಲ್, ಒಎನ್‌ಜಿಸಿ, ಕೆಐಒಸಿಎಲ್, ಎಮ್‌ಸಿಎಫ್ ಮುಂತಾದ ಘನ ಕೈಗಾರಿಕೆಗಳು ಪರಿಸರ ಸಂರಕ್ಷಣೆಯ ದೃಷ್ಟಿಯಿಂದ ಒಂದು ದೊಡ್ಡ ಸವಾಲೇ ಆಗಿದೆ. ಶೈಕ್ಷಣಿಕ ಗುಣಮಟ್ಟ, ವ್ಯಾವಹಾರಿಕಾ ಚಾಕಚಕ್ಯತೆ ಹೆಚ್ಚುತ್ತಿದರೂ, ಆಧುನಿಕ ಮೂಲಸೌಕರ್ಯ, ವಿಸ್ತೃತ ಪ್ರಾದೇಶಿಕ

ಅಭಿವೃದ್ಧಿ, ನಾಗರಿಕ ಸಮಾಜದ ಪೂರ್ಣ ಭಾಗಿತ್ವದ ಕೊರತೆ ಮುಂತಾದವು ಇಲ್ಲಿನ ಸಮಸ್ಯಾತ್ಮಕ ವಿಚಾರಗಳಲ್ಲಿ ಒಳಗೊಂಡಿವೆ. ಬದಲಾಗುತ್ತಿರುವ ಪರಿಸರ ಪರಿಸ್ಥಿತಿಯ ಸಂದರ್ಭದಲ್ಲಿ ಇವುಗಳ ಕಡೆಗೆ ಸಂಶೋಧಕರೂ, ನೀತಿ–ರೂಪಿಸುವವರು/ಆಡಳಿತಗಾರರೂ ತ್ವರಿತ ಗಮನ ಹರಿಸುವುದು ಅಗತ್ಯ.[10] "ಮನುಷ್ಯ ಮನಸ್ಸು ಮಾಡಿದರೆ ಮರುಭೂಮಿಯನ್ನು ಕೂಡ ಒಂದು ಸುಂದರ ನಂದನವನವನ್ನಾಗಿ ಮಾರ್ಪಡಿಸಬಲ್ಲ. ಹಾಗೆಯೇ ನಂದನವನದಂತಹ ತೋಟವನ್ನು ವ್ಯಕ್ತಿಯು ಉಳಿಸಿಕೊಳ್ಳುವಲ್ಲಿ ನಿರಾಸಕ್ತನಾದಲ್ಲಿ ಅದನ್ನು ಮರುಭೂಮಿಯನ್ನಾಗಿ ಪರಿವರ್ತಿಸಬಲ್ಲ. ಹಾಗೆಯೇ ಅಭಿವೃದ್ಧಿಯನ್ನು ಬಯಸುವ ಜನರಿದ್ದಾಗ ಮಾತ್ರ ಒಂದು ಪ್ರದೇಶವು ಅಭಿವೃದ್ಧಿಯನ್ನು ಕಾಣಲು ಸಾಧ್ಯವಾಗುತ್ತದೆ".[11] ಕೈಗಾರಿಕೀಕರಣ ಹಾಗೂ ನಗರೀಕರಣದ ಫಲವಾಗಿ ಮಂಗಳೂರು ನಗರಕ್ಕೆ ಹೊರಗಿನಿಂದ ವಲಸೆ ಬರುವವರ ಸಂಖ್ಯೆ ಹೆಚ್ಚಾಗಿದೆ. ಅನುಭೋಗಶಾಹಿತ್ವವೂ ಇದರ ಜೊತೆ ಜೊತೆಗೇ ಇರುವ ಕಾರಣದಿಂದ ತಲಾವಾರು ಹಾಗೂ ಒಟ್ಟು ತ್ಯಾಜ್ಯ ಪ್ರಮಾಣವೂ ಗಣನೀಯವಾಗಿ ಹೆಚ್ಚಾಗುತ್ತಿರುವುದನ್ನು ಗಮನಿಸಬಹುದು. ಬೃಹತ್ ಕೈಗಾರಿಕೆಗಳು ಕೇವಲ ಮಂಗಳೂರಿಗೆ ಸೀಮಿತವಾಗಿದ್ದರೂ ಅಭಿವೃದ್ಧಿಯಲ್ಲಿ ಉಳಿದ ನಗರಗಳಾದ ಬಂಟ್ವಾಳ, ಪುತ್ತೂರು, ಸುಳ್ಯ, ಬೆಳ್ತಂಗಡಿ ಮತ್ತು ಮೂಡಬಿದ್ರಿ ಹಿಂದೆ ಬಿದ್ದಿಲ್ಲ. ಉದ್ಯೋಗಾವಕಾಶಗಳು ಹೆಚ್ಚಾಗುತ್ತಿದ್ದು, ಜನಸಂಖ್ಯೆ ಬೆಳವಣಿಗೆಯೂ ಏರುಗತಿಯಲ್ಲಿದೆ. ಈ ಕಾರಣದಿಂದ ಮಂಗಳೂರು ನಗರದಂತೆಯೆ ಇಲ್ಲಿಯೂ ತಲಾವಾರು ಹಾಗೂ ಒಟ್ಟು ತ್ಯಾಜ್ಯ ಪ್ರಮಾಣವೂ ಗಣನೀಯವಾಗಿ ಹೆಚ್ಚಾಗುತ್ತಿರುವುದು ಕಂಡುಬಂದಿದೆ.

## 3.2 ಭೌಗೋಳಿಕ ಪರಿಚಯ

ದಕ್ಷಿಣ ಕನ್ನಡ ಜಿಲ್ಲೆಯ ಉತ್ತರಕ್ಕೆ ಉಡುಪಿ ಜಿಲ್ಲೆ, ದಕ್ಷಿಣದಲ್ಲಿ ಕೊಡಗು, ಹಾಸನ ಹಾಗೂ ಕೇರಳ ರಾಜ್ಯದ ಕಾಸರಗೋಡು ಜಿಲ್ಲೆಯಿರುತ್ತದೆ. ಪೂರ್ವದಲ್ಲಿ ಪಶ್ಚಿಮಘಟ್ಟ ಪ್ರದೇಶ ಹಾಗೂ ಚಿಕ್ಕಮಗಳೂರು ಜಿಲ್ಲೆಯೊಂದಿಗೆ ಗಡಿಯನ್ನು ಹಂಚಿಕೊಂಡಿದ್ದು, ಪಶ್ಚಿಮದ ಭಾಗದಲ್ಲಿ 60ಕಿ.ಮೀನಷ್ಟು ಕರಾವಳಿ ತೀರವನ್ನು ಹೊಂದಿರುತ್ತದೆ. ಒಟ್ಟು 4559ಕಿ.ಮೀ. ವ್ಯಾಪ್ತಿಯ ಭೂಪ್ರದೇಶವನ್ನು ಹೊಂದಿರುವ ದಕ್ಷಿಣ ಕನ್ನಡ ಜಿಲ್ಲೆಯು ಅನೇಕ ವೈವಿಧ್ಯತೆಗಳನ್ನು ಹೊಂದಿರುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ಕೇಂದ್ರಸ್ಥಳ ಮಂಗಳೂರು ನಗರವು ನೇತ್ರಾವತಿ ಹಾಗೂ ಗುರುಪುರ ನದಿಗಳ ಸಂಗಮದಲ್ಲಿದೆ. ಜಿಲ್ಲೆಯು 12.57°ರಿಂದ 13.50° ಉತ್ತರ ಅಕ್ಷಾಂಶಗಳ ಮತ್ತು 74° ರಿಂದ 75.5° ಪೂರ್ವ ರೇಖಾಂಶಗಳ ನಡುವಿನಲ್ಲಿದೆ. ಭೌಗೋಳಿಕವಾಗಿ ಜಿಲ್ಲೆಯನ್ನು ಕರಾವಳಿ, ಮಧ್ಯದ ವಿಸ್ತಾರ ಪ್ರದೇಶ ಮತ್ತು ಪಶ್ಚಿಮ ಘಟ್ಟದ ಮಲೆನಾಡು ಪ್ರದೇಶಗಳೆಂಬ ಮೂರು

ವಲಯಗಳಾಗಿ ವಿಂಗಡಿಸಬಹುದು. ಇದರಲ್ಲಿ ಅಗಲ ಕಡಿಮೆ ಇರುವ ಕರಾವಳಿ ಪ್ರದೇಶವು ಹೆಚ್ಚು ಜನಸಾಂದ್ರತೆಯನ್ನು ಹೊಂದಿದ್ದು ಸಮುದ್ರಕಿನಾರೆಗಳು, ಹಿನ್ನೀರು ಜವುಗು ಪ್ರದೇಶಗಳು ಮತ್ತು ಅನೇಕ ಉಪನದಿಗಳನ್ನು ಹೊಂದಿದೆ.[12] ಜಿಲ್ಲೆಯ ಪೂರ್ವದ ಮೇರೆಯಲ್ಲಿರುವ ಪಶ್ಚಿಮ




ನಕ್ಷೆ 3.1 ಕರ್ನಾಟಕ ರಾಜ್ಯದ ಜಿಲ್ಲಾ ನಕ್ಷೆ



ನಕ್ಷೆ 3.2 ಕರ್ನಾಟಕ ರಾಜ್ಯದಲ್ಲಿ ದಕ್ಷಿಣ ಕನ್ನಡ




ನಕ್ಷೆ 3.3 ದಕ್ಷಿಣ ಕನ್ನಡ ಜಿಲ್ಲೆಯ ತಾಲೂಕು ನಕ್ಷೆ

ಘಟ್ಟಗಳು ನಿತ್ಯಹರಿದ್ವರ್ಣದ ಕಾಡುಗಳಿಂದ ಕೂಡಿದ್ದು, ಅಡಿಕೆ, ರಬ್ಬರ್ ಮುಂತಾದ ವಾಣಿಜ್ಯ ಬೆಳೆಗಳನ್ನು ಇಲ್ಲಿ ಕಾಣಬಹುದು.

ದಕ್ಷಿಣ ಕನ್ನಡ ಜಿಲ್ಲೆಯು ರಾಜ್ಯದ ಒಟ್ಟು ವಿಸ್ತೀರ್ಣದ ಶೇಕಡ 2.53ರಷ್ಟಿದ್ದು ಜಿಲ್ಲೆಯ ತಾಲೂಕುಗಳ ವಿಸ್ತೀರ್ಣ ಮತ್ತು ಶೇಕಡ ಭಾಗವನ್ನು ಕೋಷ್ಟಕ 3.1ರಲ್ಲಿ ನೀಡಲಾಗಿದೆ.

**ಕೋಷ್ಟಕ: 3.1**

**ದಕ್ಷಿಣ ಕನ್ನಡ ಜಿಲ್ಲೆಯ ತಾಲೂಕುವಾರು ಭೌಗೋಳಿಕ ವಿಸ್ತೀರ್ಣ**

| ತಾಲೂಕು/ಜಿಲ್ಲೆ | ಭೌಗೋಳಿಕ ವಿಸ್ತೀರ್ಣ (ಚ.ಕಿ.ಮೀಗಳಲ್ಲಿ) | ಜಿಲ್ಲೆಯಲ್ಲಿನ ಭಾಗ |
|---|---|---|
| ಬಂಟ್ವಾಳ | 735 | 15.13 |
| ಬೆಳ್ತಂಗಡಿ | 1375 | 28.30 |
| ಮಂಗಳೂರು | 923 | 18.99 |
| ಪುತ್ತೂರು | 1000 | 20.58 |
| ಸುಳ್ಯ | 826 | 17.00 |
| ದಕ್ಷಿಣಕನ್ನಡ ಜಿಲ್ಲೆ | 4859 | 100 |
| ರಾಜ್ಯ | 191791 | 2.53 |

**ಆಧಾರ:** ದಕ್ಷಿಣ ಕನ್ನಡ ಜಿಲ್ಲಾ ಅಂಕಿ-ಅಂಶಗಳ ನೋಟ, 2012-13.

ದಕ್ಷಿಣ ಕನ್ನಡ ಜಿಲ್ಲೆಯು ಉಷ್ಣವಲಯದ ಮಾನ್ಸೂನ್ ಹವಾಮಾನವನ್ನು ಹೊಂದಿದ್ದು ಹವಾಮಾನ ಏರಿಳಿತಗಳಿಂದ ಕೂಡಿದೆ. ಇಂತಹ ವಾತಾವರಣದಲ್ಲಿ ತ್ಯಾಜ್ಯ ವಿಭಜನೆ ಮತ್ತು ನಿರ್ವಹಣೆಯ ಏಕರೀತಿಯ ವಿಧಾನ ಅಳವಡಿಸುವುದು ಪರಿಣಾಮಕಾರಿಯಾಗಲಾರದು. ಕಾಲ ಮಾನಕ್ಕೆ ಅನುಗುಣವಾಗಿ ಜೈವಿಕ ತ್ಯಾಜ್ಯಗಳನ್ನು ವಿಲೇವಾರಿಗೊಳಿಸುವುದು ಹೆಚ್ಚು ವೆಚ್ಚದಾಯಕ ವಾಗಿದೆ. ಕರಾವಳಿ ತೀರದಲ್ಲಿ ಆರ್ದ್ರ ವಾತಾವರಣವಿದ್ದರೆ, ಮಧ್ಯದ ವಲಯದಲ್ಲಿ ಬೆಚ್ಚಗಿನ ವಾತಾವರಣ ಹಾಗೂ ಘಟ್ಟ ಪ್ರದೇಶದಲ್ಲಿ ತಂಪಾದ ವಾತಾವರಣವಿರುತ್ತದೆ. ಜಿಲ್ಲೆಯಲ್ಲಿ ನಾಲ್ಕು ರೀತಿಯ ಹವಾಮಾನವನ್ನು ಗುರುತಿಸಬಹುದು. ಜೂನ್‌ನಿಂದ ಸಪ್ಟಂಬರ್‌ವರೆಗೆ ಮಳೆಗಾಲವಿದ್ದು, ಅಕ್ಟೋಬರ್ ಮತ್ತು ನವಂಬರ್ ಎರಡು ತಿಂಗಳಲ್ಲಿ ತುಸು ಬೆಚ್ಚಗಿನ ವಾತಾವರಣವಿರುತ್ತದೆ. ಡಿಸೆಂಬರ್ ಮತ್ತು ಫೆಬ್ರವರಿ ನಡುವಿನ ಮೂರು ತಿಂಗಳು ಹಿತಮಿತವಾದ ತಂಪಗಿನ

ವಾತಾವರಣವಿರುತ್ತದೆ.ಮಾರ್ಚ್ ತಿಂಗಳಿಂದ ಮೇ ತಿಂಗಳವರೆಗೆ ಬಿಸಿ ಹಾಗೂ ಬೇಗೆಯ ವಾತಾವರಣವನ್ನು ಕಾಣಬಹುದಾಗಿದೆ. ಜಿಲ್ಲೆಯಲ್ಲಿ ಸರಾಸರಿ ವಾರ್ಷಿಕ 3912 ಮಿಲಿ ಮೀಟರ್ ಮಳೆಯಾಗುತ್ತಿದ್ದರೆ, ರಾಜ್ಯದ ಸರಾಸರಿ ಮಳೆ ಕೇವಲ 1144 ಮಿಲಿ ಮೀಟರ್‌ನಷ್ಟಿದೆ. ಬೆಳ್ತಂಗಡಿ, ಪುತ್ತೂರು ಮತ್ತು ಸುಳ್ಯ ತಾಲೂಕುಗಳ ವ್ಯಾಪ್ತಿಯಲ್ಲಿ ವಾರ್ಷಿಕ ಸರಾಸರಿ 4000 ಮಿಲಿ ಮೀಟರ್‌ಗಳಷ್ಟು ಮಳೆ ಬೀಳುತ್ತಿದೆ. ಜಿಲ್ಲೆಯ ಭೂಮಿ ಬಳಕೆಯ ರೀತಿಯು ತೋರಿಸುವಂತೆ ಒಟ್ಟು 4.77 ಲಕ್ಷ ಹೆಕ್ಟೇರು ಭೂಮಿಯಲ್ಲಿ 1.29 ಲಕ್ಷ ಹೆಕ್ಟೇರು (27%) ಭೂಮಿಯು ಅರಣ್ಯ ಪ್ರದೇಶವಾಗಿದೆ. ಕೃಷಿ ಭೂಮಿಯು 1.31 ಲಕ್ಷ ಹೆಕ್ಟೇರುಗಳಿದ್ದು (28%) 11774 ಹೆಕ್ಟೇರು ಭೂಮಿ (2.5%) ಪಾಳು ಬಿದ್ದಿದೆ. ಬೆಳ್ತಂಗಡಿ ತಾಲೂಕಿನಲ್ಲಿ ಅತೀ ಹೆಚ್ಚು ಅರಣ್ಯ ಪ್ರದೇಶವಿದ್ದು ನಂತರದ ಸ್ಥಾನವನ್ನು ಸುಳ್ಯ ಹಾಗೂ ಪುತ್ತೂರು ತಾಲೂಕುಗಳು ಕ್ರಮವಾಗಿ ಪಡೆದುಕೊಂಡಿವೆ. ಸುಳ್ಯದಲ್ಲಿ ಒಟ್ಟು ವಿಸ್ತೀರ್ಣದ ಅರ್ಧಕ್ಕಿಂತ ಸ್ವಲ್ಪ ಹೆಚ್ಚೇ ಭೂ ಪ್ರದೇಶವು ಅರಣ್ಯ ಪ್ರದೇಶವಾಗಿದೆ. ಮಂಗಳೂರು ತಾಲೂಕು ಜಿಲ್ಲೆಯಲ್ಲಿಯೇ ಅತೀ ಕಡಿಮೆ ಅರಣ್ಯ ಪ್ರದೇಶವಿರುವ ತಾಲೂಕು.[13]

### 3.3. ಜನಸಂಖ್ಯಾ ಚಿತ್ರಣ

1956ರಲ್ಲಿ ರಾಜ್ಯಗಳನ್ನು ಭಾಷಾವಾರು ನೆಲೆಗಳಾಗಿ ಪುನರ್‌ವಿಂಗಡಿಸುವುದಕ್ಕಿಂತ ಪೂರ್ವದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಒಟ್ಟು ಜನಸಂಖ್ಯೆ 17,48,991 ಆಗಿತ್ತು. ಇದರಲ್ಲಿ ಪುರುಷರ ಸಂಖ್ಯೆ 8,41,009 ಹಾಗೂ ಮಹಿಳೆಯರ ಸಂಖ್ಯೆ 9,07,982 ಇದ್ದುದು ಕಾಣಸಿಗುತ್ತದೆ. ಹಿಂದಿನಿಂದಲೂ ಜನಸಂಖ್ಯೆಯ ಲಿಂಗಾನುಪಾತವನ್ನು ಗಮನಿಸಿದಾಗ ಜಿಲ್ಲೆಯಲ್ಲಿ ಪುರುಷರಿಗಿಂತ ಮಹಿಳೆಯರ ಪ್ರಮಾಣ ಹೆಚ್ಚಿರುವುದನ್ನು ಗಮನಿಸಬಹುದು. 1991ರ ಜನಗಣತಿಗೆ ಅನುಗುಣವಾಗಿ ಜಿಲ್ಲೆಯನ್ನು ಉಡುಪಿ ಹಾಗೂ ದಕ್ಷಿಣ ಕನ್ನಡ ಎಂಬುದಾಗಿ ಅಧಿಕೃತವಾಗಿ ವಿಭಜಿಸುವುದಕ್ಕಿಂತ ಮೊದಲಿನ ಒಟ್ಟು ಜನಸಂಖ್ಯೆ 19,31,670 ಆಗಿದ್ದು, ಇದರಲ್ಲಿ 9,25,369 ಪುರುಷರು ಹಾಗೂ 10,06,301 ಮಹಿಳೆಯರಾಗಿದ್ದರು. ಕೆಳಗಿನ ಕೋಷ್ಟಕ 3.2ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಜನಸಂಖ್ಯೆಯ ಸಾಮಾನ್ಯ ವಿವರಗಳನ್ನು ಕರ್ನಾಟಕದ ಅಂಕಿ–ಅಂಶಗಳೊಂದಿಗೆ ಹೋಲಿಕೆ ಮಾಡಲಾಗಿದೆ.

## ಕೋಷ್ಟಕ: 3.2

### ದಕ್ಷಿಣ ಕನ್ನಡ ಜಿಲ್ಲೆಯ ಸಾಮಾನ್ಯ ಅಂಕಿ-ಅಂಶಗಳ ವಿವರಗಳು

| ವಿವರಗಳು | ಕರ್ನಾಟಕ ರಾಜ್ಯ (2011) | ದಕ್ಷಿಣ ಕನ್ನಡ (2011) |
|---|---|---|
| ಜನಸಂಖ್ಯೆ | 6,11,30,709 | 20,89,649 |
| ವಿಸ್ತೀರ್ಣ (ಚ.ಕಿ.ಮೀ.ಗಳಲ್ಲಿ) | 1,91,791 | 4,559 |
| ಜನಸಾಂದ್ರತೆ (ಪ್ರತಿ ಕಿ.ಮೀ.ಗೆ) | 319 | 457 |
| ಸಾಕ್ಷರತೆಯ ಮಟ್ಟ | 75.60% | 88.62% |
| ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಪಡೆದಿರುವ ಸ್ಥಾನ | 07 (ರಾಜ್ಯಗಳಲ್ಲಿ) | 02 (ಜಿಲ್ಲೆಗಳಲ್ಲಿ) |
| ತಲಾ ವರಮಾನ | 36,954 | 47,151 |
| ಒಟ್ಟು ಆದಾಯ (ಲಕ್ಷಗಳಲ್ಲಿ) | 2,11,66,253 | 9,69,984 |

**ಆಧಾರ:** 2011ರ ಜನಗಣತಿ

2011ರ ಜನಗಣತಿಯ ಪ್ರಕಾರ, ದಕ್ಷಿಣ ಕನ್ನಡ ಜಿಲ್ಲೆಯು (ವಿಭಜಿತ) ಒಟ್ಟು 20,89,649 ಜನಸಂಖ್ಯೆಯನ್ನು ಹೊಂದಿದ್ದು, 4,861 ಚದರ ಕಿ.ಮೀ. ವಿಸ್ತೀರ್ಣವನ್ನು ಹೊಂದಿದೆ. ಇವರಲ್ಲಿ ಪುರುಷರ ಸಂಖ್ಯೆ ಒಟ್ಟು 10,34,714 ಮತ್ತು ಮಹಿಳೆಯರ ಸಂಖ್ಯೆ ಒಟ್ಟು 10,54,935 ಆಗಿದೆ. ಜನಸಂಖ್ಯೆಯಲ್ಲಿ ಶೇಕಡ 78 ಹಿಂದೂ ಧರ್ಮಕ್ಕೆ ಸೇರಿದವರಾಗಿದ್ದು, ಶೇಕಡ 12 ಮುಸ್ಲಿಮರು, ಶೇಕಡ 8 ಕ್ರೈಸ್ತ ಧರ್ಮದವರು, ಶೇಕಡ 1ರಷ್ಟು ಜನರು ಜೈನರಾಗಿದ್ದು, ಶೇಕಡ 1 ಇತರ ಧರ್ಮವನ್ನು ಅನುಸರಿಸುವವರಾಗಿದ್ದಾರೆ.[14]

ಜನಸಾಂದ್ರತೆಯ ಪ್ರಮಾಣವು ಜಿಲ್ಲೆಯಲ್ಲಿ ಅತೀ ಹೆಚ್ಚಾಗಿದ್ದು ಒಂದು ಕಿ.ಮೀ. ವ್ಯಾಪ್ತಿಯಲ್ಲಿ 457 (2011 ರ ಜನಗಣತಿ) ಜನರು ವಾಸಿಸುತ್ತಿದ್ದರು. ಜನಸಂಖ್ಯೆಯ ಸಾಂದ್ರತೆಗೆ ಹೋಲಿಸಿದರೆ ದಕ್ಷಿಣ ಕನ್ನಡ ಜಿಲ್ಲೆಯು ಕರ್ನಾಟಕದಲ್ಲಿ ಬೆಂಗಳೂರು ನಗರ ಜಿಲ್ಲೆಯ ನಂತರದ ಅಂದರೆ ಎರಡನೇ ಸ್ಥಾನದಲ್ಲಿದೆ. ರಾಜ್ಯ ಜನಗಣತಿ ಇಲಾಖೆಯ ಮಾಹಿತಿಯ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯು ಜನಸಾಂದ್ರತೆಯ ಪ್ರಮಾಣದಲ್ಲಿ 2001 ಮತ್ತು 2011ರ ಜನಗಣತಿಯ ಪ್ರಕಾರ ದ್ವಿತೀಯ ಸ್ಥಾನದಲ್ಲಿದೆಯೆಂಬುದನ್ನು ತಿಳಿಸುತ್ತದೆ.[15]

2001ರ ಒಟ್ಟು ಜನಸಂಖ್ಯೆಗಿಂತ, 2011ರಲ್ಲಿ ಶೇಕಡ 10.11ರಷ್ಟು ಏರಿಕೆ ಆಗಿದೆ.ಆದರೆ ಈ ಪ್ರಮಾಣ 1991-2001ರ ನಡುವೆ ಶೇಕಡ 14.59ರಷ್ಟಿತ್ತು. 2011ರಲ್ಲಿ ಜಿಲ್ಲೆಯ ಸಾಕ್ಷರತಾ ಪ್ರಮಾಣ ಶೇಕಡ 88.62 ಆಗಿದ್ದರೆ, 2001ರಲ್ಲಿ ಈ ಪ್ರಮಾಣ ಶೇಕಡ 83.35ರಷ್ಟಿತ್ತು. 2011ರಲ್ಲಿ

ಪುರುಷರ ಸಾಕ್ಷರತಾ ಪ್ರಮಾಣ ಶೇಕಡ 93.13 ಆಗಿದ್ದರೆ, ಮಹಿಳೆಯರ ಸಾಕ್ಷರತಾ ಪ್ರಮಾಣ ಶೇಕಡ 84.13ರಷ್ಟಿದೆ. 2001ರಲ್ಲಿ ಈ ಪ್ರಮಾಣವು ಪುರುಷರಲ್ಲಿ ಶೇಕಡ 89.70 ಮತ್ತು ಮಹಿಳೆಯರಲ್ಲಿ ಶೇಕಡ 77.21 ಆಗಿತ್ತು. 2011ರಲ್ಲಿ ಜಿಲ್ಲೆಯ ಒಟ್ಟು ಸಾಕ್ಷರತೆಯ ಸಂಖ್ಯೆ 16,66,232 ಆಗಿದೆ. ಇವರಲ್ಲಿ 8,64,019 ಪುರುಷರು ಮತ್ತು 8,02,304 ಮಹಿಳೆಯರು ಸೇರಿದ್ದಾರೆ. 2001ರಲ್ಲಿ ಒಟ್ಟು ಸಾಕ್ಷರತೆಯ ಸಂಖ್ಯೆ 13,91,738 ಆಗಿತ್ತು. ಜಿಲ್ಲೆಯ ಸಾಕ್ಷರತೆಯ ಮಟ್ಟ, ರಾಷ್ಟ್ರೀಯ ಸಾಕ್ಷರತೆಯ ಮಟ್ಟಕ್ಕಿಂತ ಹೆಚ್ಚಿದ್ದು, ವೃತ್ತಿಪರ ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚಿನ ಸಾಧನೆಯನ್ನು ಮಾಡಿದ್ದು, ದೇಶ ವಿದೇಶಗಳ ಸಾವಿರಾರು ವಿದ್ಯಾರ್ಥಿಗಳು ಇಲ್ಲಿ ಉನ್ನತ ವ್ಯಾಸಂಗದಲ್ಲಿ ತೊಡಗಿರುತ್ತಾರೆ.[16] 2011ರ ಜನಗಣತಿಯ ಪ್ರಕಾರ, ಜಿಲ್ಲೆಯು 1000 ಪುರುಷರಿಗೆ 1,020 ಮಹಿಳೆಯರ ಲಿಂಗಾನುಪಾತವನ್ನು ಹೊಂದಿದೆ. 2001ರಲ್ಲಿ ಈ ಪ್ರಮಾಣವು 1,022 ಆಗಿತ್ತು. 2011ರ ಪ್ರಕಾರ ಭಾರತದ ಸರಾಸರಿ ಲಿಂಗಾನುಪಾತವು 940 ಆಗಿದೆ. ಅಂತೆಯೇ ಜಿಲ್ಲೆಯ ಮಕ್ಕಳ ಲಿಂಗಾನುಪಾತವು 1000 ಹುಡುಗರಿಗೆ 947 ಹುಡುಗಿಯರ ಪ್ರಮಾಣವಿದೆ. 2001ರಲ್ಲಿ 1000 ಹುಡುಗರಿಗೆ 952 ಹುಡುಗಿಯರ ಪ್ರಮಾಣವಿತ್ತು. ಇತೀಚಿನ ವರ್ಷಗಳಲ್ಲಿ ಲಿಂಗಾನುಪಾತ ಕ್ಷೀಣಿಸುತ್ತಿದೆ. ಆದರೆ ಜನಸಾಂದ್ರತೆಯು 2011ರಲ್ಲಿ 416 ಇದ್ದು 2011ರಲ್ಲಿ 457ಕ್ಕೆ ಏರಿಕೆಯಾಗಿದೆ.

ಕೋಷ್ಟಕ 3.3ರಲ್ಲಿ ಜಿಲ್ಲೆಗೆ ಸಂಬಂಧಿಸಿದ ಕೆಲವು ಆಯ್ದ ಅಂಕಿ-ಅಂಶಗಳನ್ನು 2001 ಮತ್ತು 2011ರ ಜನಗಣತಿಯ ಆಧಾರದಲ್ಲಿ ನೀಡಲಾಗಿದೆ.

**ಕೋಷ್ಟಕ: 3.3**

**ದಕ್ಷಿಣ ಕನ್ನಡ ಜಿಲ್ಲೆಯ 2001-2011ರ ಜನಸಂಖ್ಯಾ ಅಂಕಿ-ಅಂಶಗಳ ವಿವರ**

| ವಿವರಗಳು | 2001 | 2011 |
|---|---|---|
| ಜನಸಂಖ್ಯೆ | 18,97,730 | 20,83,625 |
| ಪುರುಷರು | 9.38,434 | 10.32,577 |
| ಮಹಿಳೆಯರು | 9.59,296 | 10,51,048 |
| ಜನಸಂಖ್ಯಾ ಬೆಳವಣಿಗೆ | 14.59% | 9.80 |
| ಜನಸಾಂದ್ರತೆ/ಚ.ಕಿಮೀ | 416 | 457 |
| ಸಾಕ್ಷರತಾ ಪ್ರಮಾಣ | 83.35 | 88.62 |
| ಪುರುಷ ಸಾಕ್ಷರರು | 89.70 | 93.31 |
| ಮಹಿಳಾ ಸಾಕ್ಷರರು | 77.21 | 84.04 |
| ಲಿಂಗ ಪ್ರಮಾಣ(1000ಕ್ಕೆ) | 1022 | 1018 |
| ಕರ್ನಾಟಕದ ಜನಸಂಖ್ಯೆಯಲ್ಲಿ ಪಾಲು | 3.59 | 3.41 |

**ಆಧಾರ:** ದಕ್ಷಿಣ ಕನ್ನಡ ಜಿಲ್ಲಾ ಅಂಕಿ-ಅಂಶಗಳ ನೋಟ, 2012-13.

2011ರಲ್ಲಿ ಜಿಲ್ಲೆಯ ಒಟ್ಟು ಜನಸಂಖ್ಯೆ 2089649 ಆಗಿದ್ದು.ಅವರಲ್ಲಿ 1034714 ಪುರುಷರು ಮತ್ತು 1054935 ಮಹಿಳೆಯರು. ಇದರಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ವಾಸಿಸುತ್ತಿದ್ದವರ ಸಂಖ್ಯೆ ಹೆಚ್ಚಾಗಿತ್ತು. ಗ್ರಾಮಾಂತರ ಪ್ರದೇಶದಲ್ಲಿ ವಾಸಿಸುತ್ತಿದ್ದ ಜನರ ಪ್ರಮಾಣ 1093563 ಆಗಿದ್ದರೆ, ನಗರ ಪ್ರದೇಶಗಳಲ್ಲಿ 996086 ಜನರು ವಾಸಿಸುತ್ತಿದ್ದುದು ಕಂಡುಬರುತ್ತದೆ. ಕೆಳಗಿನ ಕೋಷ್ಟಕ 3.4ರಲ್ಲಿ 2011ರ ಜನಗಣತಿ ಪ್ರಕಾರ ಗ್ರಾಮೀಣ–ನಗರ ಜನಸಂಖ್ಯಾ ಚಿತ್ರಣವನ್ನು ನೀಡಲಾಗಿದೆ.

**ಕೋಷ್ಟಕ: 3.4**

**ದಕ್ಷಿಣ ಕನ್ನಡ ಜಿಲ್ಲೆಯ ತಾಲೂಕುವಾರು ಗ್ರಾಮೀಣ–ನಗರ ಜನಸಂಖ್ಯೆ 2011ರ ವಿವರ**

| ತಾಲೂಕು | ಗ್ರಾಮೀಣ | ಗ್ರಾಮೀಣ ಶೇಕಡ | ನಗರ | ನಗರ ಶೇಕಡ | ಒಟ್ಟು |
|---|---|---|---|---|---|
| ಬಂಟ್ವಾಳ | 279482 | 70.69 | 115898 | 29.31 | 395380 |
| ಬೆಳ್ತಂಗಡಿ | 251802 | 94.45 | 14787 | 5.55 | 266589 |
| ಮಂಗಳೂರು | 210033 | 21.12 | 784569 | 78.88 | 994602 |
| ಪುತ್ತೂರು | 226977 | 78.85 | 60874 | 21.15 | 287851 |
| ಸುಳ್ಯ | 125269 | 86.26 | 19958 | 13.74 | 145227 |
| ದಕ್ಷಿಣಕನ್ನಡ ಜಿಲ್ಲೆ | 1093563 | 52.33 | 996086 | 47.67 | 2089649 |
| ರಾಜ್ಯ | 37469100 | 61.37 | 23626197 | 38.63 | 61095297 |

**ಆಧಾರ: 2011ರ ಜನಗಣತಿ**

ತಾಲೂಕುವಾರು ಗಣನೆಗೆ ತೆಗೆದುಕೊಂಡಾಗ ಮಂಗಳೂರು ತಾಲೂಕು(9.95ಲಕ್ಷ) ಅತೀ ಹೆಚ್ಚು ಜನಸಂಖ್ಯೆಯನ್ನು ಹೊಂದಿದ್ದು, ಎರಡನೆಯ ಸ್ಥಾನವನ್ನು ಬಂಟ್ವಾಳ (3.95 ಲಕ್ಷ) ಮತ್ತು ಆ ಬಳಿಕ ಪುತ್ತೂರು 2.88 ಜನಸಂಖ್ಯೆಯನ್ನು ಹೊಂದಿದೆ. ಬೆಳ್ತಂಗಡಿ ಒಟ್ಟು ಜನಸಂಖ್ಯೆ 2.67 ಲಕ್ಷಗಳಾಗಿದ್ದು ಸುಳ್ಯ ತಾಲೂಕಿನಲ್ಲಿ 1.45 ಲಕ್ಷ ಜನಸಂಖ್ಯೆಯಿದೆ. ಎಲ್ಲಾ ತಾಲೂಕುಗಳಲ್ಲಿಯೂ 2001–2011ರ ದಶವಾರ್ಷಿಕ ಬೆಳವಣಿಗೆಯಲ್ಲಿ ಗಣನೀಯ ಇಳಿಕೆಯು ದಾಖಲಾಗಿದೆ. ಮಂಗಳೂರು ತಾಲೂಕಿನಲ್ಲಿ ಅತೀ ಹೆಚ್ಚು ಬೆಳವಣಿಗೆ ಇದ್ದು, ಸುಳ್ಯ ತಾಲೂಕಿನಲ್ಲಿ ಅತೀ ಕಡಿಮೆ (3.18) ದಶವಾರ್ಷಿಕ ಜನಸಂಖ್ಯಾ ಬೆಳವಣಿಗೆಯನ್ನು ಕಾಣಬಹುದು. ಕುತೂಹಲದ ವಿಷಯವೆಂದರೆ ದಶಕದ ಒಟ್ಟು ಜನಸಂಖ್ಯಾ ಬೆಳವಣಿಗೆಯಲ್ಲಿ ಸ್ತ್ರೀ–ಪುರುಷರ ಸಂಯೋಜನೆಯಲ್ಲಿ ವ್ಯತ್ಯಾಸವೇನೂ ಕಂಡುಬಂದಿಲ್ಲ.[17]

ಜಿಲ್ಲೆಯಲ್ಲಿ ನಗರ ಜನಸಂಖ್ಯೆಯು 2001ರಲ್ಲಿ ಶೇಕಡ 38.4 ಇದ್ದು 2011ರಲ್ಲಿ 47.7ಕ್ಕೆ ಏರಿದೆ. ಇದೇ ಅವಧಿಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಜನಸಂಖ್ಯೆಯು ಶೇಕಡ 7ರಷ್ಟು ಇಳಿಕೆಯಾಗಿದೆ.

ಮಂಗಳೂರು ತಾಲೂಕನ್ನು ಹೊರತುಪಡಿಸಿ, ಉಳಿದಂತೆ ಎಲ್ಲಾ ತಾಲೂಕುಗಳಲ್ಲಿಯೂ ಗ್ರಾಮೀಣ ಜನಸಂಖ್ಯೆಯು ಪ್ರತಿಶತ 70ಕ್ಕಿಂತ ಹೆಚ್ಚು ಇದೆ. ತ್ಯಾಜ್ಯ ಉತ್ಪಾದನೆ ಹಾಗೂ ಜನಸಂಖ್ಯೆ ಬೆಳವಣಿಗೆಗೆ ನೇರ ಸಂಬಂಧ ಇರುವುದರಿಂದ ಅಧ್ಯಯನ ಕೈಗೊಂಡ ಕ್ಷೇತ್ರದ ಜನಸಂಖ್ಯಾ ಚಿತ್ರಣವನ್ನು ನೀಡಲಾಗಿದೆ. ಜನಸಂಖ್ಯಾ ಪ್ರಮಾಣವನ್ನು ವಿಶ್ಲೇಷಿಸಿದಾಗ ತ್ಯಾಜ್ಯ ಉತ್ಪಾದನೆಯು ನಗರ ಪ್ರದೇಶಗಳಂತೆ ಗ್ರಾಮೀಣ ಪ್ರದೇಶಗಳಲ್ಲಿಯೂ ಹೆಚ್ಚಿರಬಹುದೆಂಬ ಊಹೆಯಿಂದ ನಗರ ಹಾಗೂ ಗ್ರಾಮೀಣ ಪ್ರದೇಶಗಳೆರಡನ್ನೂ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### 3.4. ಆರ್ಥಿಕತೆ ಮತ್ತು ಮೂಲ ಸೌಲಭ್ಯಗಳು

ದಕ್ಷಿಣ ಕನ್ನಡ ಜಿಲ್ಲೆಯ ಆರ್ಥಿಕ ಅಭಿವೃದ್ಧಿಯನ್ನು ಗಮನಿಸಿದಾಗ 1970ರ ದಶಕದಲ್ಲಿ ಜಿಲ್ಲೆಯಲ್ಲಿ ಪರಸ್ಪರ ಎರಡು ವಿರೋಧಾಭಾಸದ ದೃಶ್ಯಗಳು ಕಂಡುಬಂದಿರುವುದನ್ನು ಗಮನಿಸಬಹುದು. ಅವುಗಳೆಂದರೆ, ಕೈಗಾರಿಕಾ ಕ್ಷೇತ್ರದಲ್ಲಿ ಹಿಂದುಳಿದಿದ್ದ ಜಿಲ್ಲೆ 1974ರ ನಂತರ ನವಮಂಗಳೂರು ಬಂದರಿನ ಉದ್ಘಾಟನೆಯೊಂದಿಗೆ ಕೈಗಾರಿಕಾ ಕ್ಷೇತ್ರದಲ್ಲಿ ಅಭಿವೃದ್ಧಿಯನ್ನು ಸಾಧಿಸಲು ಆರಂಭಿಸಿತು. ಆದರೆ, ಅಲ್ಲಿಯವರೆಗೆ ಕೃಷಿ ಪ್ರಧಾನವಾಗಿದ್ದ ವ್ಯವಸ್ಥೆಯಲ್ಲಿ ಕೃಷಿ ಚಟುವಟಿಕೆಗಳು ಕ್ಷೀಣಿಸಲು ಆರಂಭವಾದ ಚಿತ್ರಣ ಜಿಲ್ಲೆಯಲ್ಲಿ ದೊರಕುತ್ತದೆ. ಆ ಸಂದರ್ಭದಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿವಿಧ ಕೈಗಾರಿಕೆಗಳು ಕಾರ್ಯಾರಂಭವನ್ನು ಮಾಡಿರುವುದು ಕಂಡುಬಂದಿರುತ್ತದೆ. ಕರ್ನಾಟಕ ಸರಕಾರದ ಯೋಜನಾ ಇಲಾಖೆ 1960–61ರಿಂದ 1970–71ರ ಅವಧಿಯಲ್ಲಿ ಅಭಿವೃದ್ಧಿಯ ಪ್ರಮುಖ ಮಾಪನಗಳಾದ ಕೃಷಿ, ಕೈಗಾರಿಕೆ, ಮೂಲಭೂತ ಸೌಕರ್ಯಗಳ ಅಭಿವೃದ್ಧಿಗಳನ್ನು ಪರಿಗಣಿಸಿ ರಾಜ್ಯದ ಎಲ್ಲಾ ಜಿಲ್ಲೆಗಳ ಅಭಿವೃದ್ಧಿ ಚಟುವಟಿಕೆಗಳು ಮತ್ತು ಪ್ರಗತಿಯ ವಿಶ್ಲೇಷಣೆಯನ್ನು ಮಾಡಿತ್ತು. ಯೋಜನಾ ಇಲಾಖೆ ಮಾಡಿದ ವರ್ಗೀಕರಣಕ್ಕೆ ಅನುಗುಣವಾಗಿ ಕೈಗಾರಿಕಾ ಅಭಿವೃದ್ಧಿಯನ್ನು ಸಾಧಿಸಿರುವ ಮೈಸೂರು ಜಿಲ್ಲೆಯಂತೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯೂ ಕೈಗಾರಿಕಾ ಕ್ಷೇತ್ರದಲ್ಲಿ ಮುಂದುವರಿದಿರುತ್ತದೆ. ಆದರೆ ಕೃಷಿ ಚಟುವಟಿಕೆಗಳಲ್ಲಿ ಧಾರವಾಡ ಜಿಲ್ಲೆಯಷ್ಟು ಪ್ರಗತಿಯನ್ನು ಸಾಧಿಸಿಲ್ಲ ಎಂಬ ವರದಿಯನ್ನು ನೀಡಿತ್ತು. ಮುನ್ರೋರವರ ಕಲ್ಪನೆಯಂತೆ ಕೈಗಾರಿಕೆಗಳ ಬೆಳವಣಿಗೆಗೆ ಸಾಧ್ಯತೆ ಇಲ್ಲದ ಪ್ರದೇಶದಲ್ಲಿ 1970ರ ದಶಕದ ಬಳಿಕ ಕೈಗಾರಿಕೆಗಳು ಆರಂಭವಾಗಿ ಪ್ರಗತಿ ಸಾಧಿಸಿರುವುದನ್ನು ಕಾಣಬಹುದು.

ಮಹಾರಾಷ್ಟ್ರದ ಪಾನ್ವೆಲ್‌ನಿಂದ ಕನ್ಯಾಕುಮಾರಿವರೆಗೆ ಸಂಪರ್ಕ ಕಲ್ಪಿಸುವ 1296 ಕಿ.ಮೀ ಉದ್ದದ ಭಾರತದ ಏಳನೇ ಅತೀದೊಡ್ಡ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 66 (ಹಳೆ ಸಂಖ್ಯೆ 17), ಮಂಗಳೂರು ಹಾಗೂ ಬೆಂಗಳೂರು ನಡುವಿನ ಸಂಪರ್ಕ ಕಲ್ಪಿಸುವ 328 ಕಿ.ಮೀ. ಉದ್ದದ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 75 (ಹಳೆ ಸಂಖ್ಯೆ 48) ಮತ್ತು ಮಂಗಳೂರು ಮತ್ತು ಮಹಾರಾಷ್ಟ್ರದ

ಶೋಲಾಪುರದ ನಡುವೆ ಸಂಪರ್ಕ ಕಲ್ಪಿಸುವ 691 ಕಿ.ಮೀ. ಉದ್ದದ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ. 169 (ಹಳೆ ಸಂಖ್ಯೆ 13) ಇವು ಈ ನಗರವನ್ನು ಸಂಪರ್ಕಿಸುತ್ತವೆ. ಮಂಗಳೂರು ನಗರದಿಂದ 15 ಕಿ.ಮೀ. ದೂರ ಇರುವ ಕೆಂಜಾರು ಎಂಬ ಪ್ರದೇಶದಲ್ಲಿ ನೂತನವಾಗಿ ನಿರ್ಮಿಸಿದ ಮುಂಬಾಯಿ, ಬೆಂಗಳೂರು ಹಾಗೂ ಕೊಲ್ಲಿರಾಷ್ಟ್ರಗಳಿಗೆ ಸಂಪರ್ಕ ಕಲ್ಪಿಸುವ ಅಂತರ್ರಾಷ್ಟ್ರೀಯ ಮಟ್ಟದ ವಿಮಾನ ನಿಲ್ದಾಣವಿದೆ. ಇದಲ್ಲದೆ ಕೊಂಕಣ್ ರೈಲ್ವೆ ಸಹಿತ ಮಂಗಳೂರಿನಿಂದ ದೇಶದ ಹಲವು ಪ್ರಮುಖ ನಗರಗಳಿಗೆ ಸಂಪರ್ಕ ಕಲ್ಪಿಸುವ ರೈಲು ವ್ಯವಸ್ಥೆಯೂ ಇಲ್ಲಿದೆ. ಇದರೊಂದಿಗೆ ಕರಾವಳಿ ಪ್ರದೇಶದ ಎಲ್ಲಾ ಪ್ರಮುಖ ಕೈಗಾರಿಕೆಗಳಿಗೆ ಆಧಾರ ಸ್ಥಂಭವಾಗಿ ಆಧುನಿಕ ಸೌಲಭ್ಯಗಳನ್ನು ಹೊಂದಿದ ನವಮಂಗಳೂರು ಬಂದರು ಮಂಗಳೂರನ್ನು ಪ್ರಪಂಚದ ನಕ್ಷೆಯಲ್ಲಿ ಗುರುತಿಸುವಂತೆ ಮಾಡಿದೆ. ಜೋಶಿಯವರು ತಮ್ಮ ಲೇಖನದಲ್ಲಿ "ಕರ್ನಾಟಕ ಸರಕಾರದ ಯೋಜನಾ ವಿಭಾಗ 1970–71ರಲ್ಲಿ ಕೃಷಿ, ಕೈಗಾರಿಕೆ, ಬ್ಯಾಂಕಿಂಗ್ ಮತ್ತು ಮೂಲಭೂತ ಸೌಕರ್ಯಗಳಂತಹ ಮಹತ್ವದ ಸೂಚಿಗಳನ್ನು ಪರಿಗಣಿಸಿ ದಕ್ಷಿಣ ಕನ್ನಡವು ರಾಜ್ಯದಲ್ಲಿ ಔದ್ಯಮಿಕವಾಗಿ ಪ್ರಗತಿ ಹೊಂದಿದ ಜಿಲ್ಲೆಗಳಲ್ಲಿ ಒಂದು ಎಂದು ವರದಿ ಮಾಡಿತ್ತು"[18] ಎಂದಿದ್ದಾರೆ.

ಜಿಲ್ಲೆಯ ಒಟ್ಟು ವಾರ್ಷಿಕ ತಲಾ ವರಮಾನವು 2006–07ರಲ್ಲಿ ರೂ.56,869 ಇದ್ದು 2010–11 ರಲ್ಲಿ ರೂ.94,145 (ಪ್ರಸ್ತುತ ಬೆಲೆಗಳಲ್ಲಿ) ಆಗಿರುತ್ತದೆ. ಗರಿಷ್ಠ ವಾರ್ಷಿಕ ಆದಾಯ ಮತ್ತು ತಲಾ ವರಮಾನದ ಲೆಕ್ಕಾಚಾರದಲ್ಲಿ ಬೆಂಗಳೂರು ನಗರ ಜಿಲ್ಲೆಯ ನಂತರದ ಸ್ಥಾನವನ್ನು ದಕ್ಷಿಣ ಕನ್ನಡ ಜಿಲ್ಲೆಯು ಪಡೆದಿರುತ್ತದೆ. ಕೃಷಿ ಕ್ಷೇತ್ರದ ಅವಲಂಬನೆಯಿಂದ ಹೊರಬಂದು ಇತರ ಕ್ಷೇತ್ರಗಳಲ್ಲಿ ವಿಶೇಷವಾಗಿ ಕೈಗಾರಿಕೆಗಳ ಸ್ಥಾಪನೆಯ ಚಟುವಟಿಕೆಗಳು ಆರಂಭವಾದ ನಂತರ ಜಿಲ್ಲೆಯ ತಲಾ ವರಮಾನವು ಏರಿಕೆಯಾಗಲು ಕಾರಣವಾಗಿರುತ್ತದೆ. ಮಾನವ ಅಭಿವೃದ್ಧಿ ಸೂಚ್ಯಂಕಗಳಿಗೆ ಸಂಬಂಧಪಟ್ಟಂತೆ ಜಿಲ್ಲೆಯು ರಾಜ್ಯದಲ್ಲಿ ದ್ವಿತೀಯ ಸ್ಥಾನವನ್ನು ಹೊಂದಿದ್ದು ಮೌಲ್ಯವು 0.722 ಆಗಿರುತ್ತದೆ. ರಾಜ್ಯ ಸರಕಾರ ನೇಮಿಸಿದ ಪ್ರಾದೇಶಿಕ ಅಸಮತೋಲನದ ಅಧ್ಯಯನಕ್ಕೆ ಸಂಬಂಧಪಟ್ಟಂತಹ ಉನ್ನತ ಅಧಿಕಾರದ ಸಮಿತಿಯ ವರದಿಯು ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಸಂಖ್ಯೆ ಜಿಲ್ಲೆಯಲ್ಲಿ ಶೇಕಡ 15.40 ಆಗಿರುತ್ತದೆಯೆಂದು ತಿಳಿಸುತ್ತದೆ. ಮಂಗಳೂರು ತಾಲೂಕಿನಲ್ಲಿ ಶೇಕಡ 8 ಕುಟುಂಬಗಳು ಬಡತನ ರೇಖೆಗಿಂತ ಕೆಳಗಿವೆ ಎಂದು ವರದಿ ಮಾಡಿದೆ.[19]

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 2011–12ರ ದ.ಕ. ಜಿಲ್ಲಾ ಅಂಕಿ–ಅಂಶಗಳ ಪ್ರಕಾರ ಶೇಕಡ 60ರಷ್ಟು ಜನರು ಕೃಷಿಯನ್ನು ತಮ್ಮ ಜೀವನ ನಿರ್ವಹಣೆಗಾಗಿ ಹಿಂದೆ ಅವಲಂಬಿಸಿದ್ದರು. ಇಲ್ಲಿ

ಬೆಳೆಯುತ್ತಿದ್ದ ಅಕ್ಕಿ, ತೆಂಗು, ಅಡಿಕೆ, ಗೇರು ಮುಂತಾದ ಕೃಷಿ ಉತ್ಪನ್ನಗಳು, ಹೇರಳವಾಗಿ ಸಿಗುವ ಮೀನುಗಳು ಇಲ್ಲಿಯ ಆರ್ಥಿಕತೆಯ ಬುನಾದಿ. ಮಾನವ ವಿಕಾಸ ಸೂಚ್ಯಂಕದಲ್ಲಿ ಕರಾವಳಿ ಜಿಲ್ಲೆಗಳು ರಾಜ್ಯದ ಇತರ ಜಿಲ್ಲೆಗಳಿಗಿಂತ ಮೇಲ್ಮಟ್ಟದಲ್ಲಿವೆ. ಕೃಷಿ ಕ್ಷೇತ್ರದಲ್ಲಿ ವಾಣಿಜ್ಯೀಕರಣ ವನ್ನು ಸಾಧಿಸಿದ ಕರ್ನಾಟಕ ರಾಜ್ಯದ ಜಿಲ್ಲೆಗಳಲ್ಲಿ ದಕ್ಷಿಣ ಕನ್ನಡವು ಪ್ರಮುಖವಾಗಿರುತ್ತದೆ. 1980–81ರವರೆಗೆ ಭತ್ತದ ಬೆಳೆಯನ್ನು ಇಲ್ಲಿನ ಕೃಷಿಕರು ಹೆಚ್ಚಾಗಿ ಬೆಳೆಯುತ್ತಿದ್ದರು. ಶೇಕಡ 60ರಷ್ಟು ಜನರು ಗ್ರಾಮಾಂತರ ಪ್ರದೇಶದಲ್ಲಿ ತಮ್ಮ ಜೀವನೋಪಾಯಕ್ಕಾಗಿ 1970ರ ಮೊದಲು ಕೃಷಿ ಚಟುವಟಿಕೆಗಳನ್ನೇ ನೆಚ್ಚಿಕೊಂಡಿದ್ದರು. ನಂತರದಲ್ಲಿ ಕೃಷಿ ಚಟುವಟಿಕೆಗಳು ವಾಣಿಜ್ಯೀಕರಣ ಗೊಂಡು ಮಾರುಕಟ್ಟೆಯಲ್ಲಿ ಹೆಚ್ಚು ಮೌಲ್ಯವನ್ನು ತರುವ ಅಡಿಕೆ, ಕೋಕೊ, ರಬ್ಬರ್, ವೆನಿಲ್ಲಾ ಬೆಳೆಯನ್ನು ಬೆಳೆಸುವುದಕ್ಕೆ ಇಲ್ಲಿನ ಕೃಷಿಕರು ಹೆಚ್ಚಿನ ಒಲವನ್ನು ತೋರಿರುವುದನ್ನು ಗಮನಿಸಬಹುದು. 2010–11ರಲ್ಲಿ ಕೃಷಿ ಚಟುವಟಿಕೆಗಳು ನಡೆಯುತ್ತಿದ್ದ ಭೂಮಿಗಳಲ್ಲಿ ಶೇಕಡ 35 ಮಾತ್ರ ಭತ್ತದ ಬೆಳೆಯನ್ನು ಬೆಳೆಯುತ್ತಿದ್ದರೆ, 1980–81ರ ಮಾಹಿತಿಯ ಪ್ರಕಾರ ಒಟ್ಟು ಶೇಕಡ 55 ಕೃಷಿ ಭೂಮಿಯಲ್ಲಿ ರೈತರು ಭತ್ತದ ಬೆಳೆ ತೆಗೆಯುತ್ತಿದ್ದುದು ಕಾಣಸಿಗುತ್ತದೆ. 2013–14ರಲ್ಲಿ ಜಿಲ್ಲೆಯಲ್ಲಿ ಕೃಷಿ ಚಟುವಟಿಕೆಗಳಿಗೆ ಉಪಯೋಗಿಸಲ್ಪಡುತ್ತಿರುವ ಭೂಮಿಗಳಲ್ಲಿ ಶೇಕಡ 27 ಭಾಗದಲ್ಲಿ ಮಾತ್ರ ಭತ್ತವನ್ನು ಬೆಳೆಯಲಾಗುತ್ತಿದೆ ಯೆಂಬ ಮಾಹಿತಿ ಸಿಗುತ್ತದೆ.ಸ್ವಾತಂತ್ರ್ಯಾ ನಂತರ 1960ರ ದಶಕದಲ್ಲಿ ಶೇಕಡ 60ಕ್ಕಿಂತಲೂ ಹೆಚ್ಚಿನ ಭೂಮಿಯಲ್ಲಿ ಭತ್ತವನ್ನು ಬೆಳೆಯುತ್ತಿರುವ ಪ್ರದೇಶದಲ್ಲಿ ಇಂದು ಕೇವಲ ಶೇಕಡ 27 ಭೂಮಿಯಲ್ಲಿ ಮಾತ್ರ ಭತ್ತದ ಬೆಳೆ ತೆಗೆಯಲಾಗುತ್ತಿದೆಯೆಂಬ ಅಂಶವು ಪ್ರಮುಖವಾಗಿ ಎರಡು ವಿಚಾರಗಳನ್ನು ಸ್ಪಷ್ಟಪಡಿಸುತ್ತದೆ. ಪ್ರಥಮವಾಗಿ ಕೃಷಿಕರು ಹೆಚ್ಚು ಲಾಭವನ್ನು ತರುವ ವಾಣಿಜ್ಯ ಬೆಳೆಗಳಿಗೆ ಪ್ರಾಶಸ್ತ್ಯ ನೀಡಿರುವುದು ಕಾರಣವಾದರೆ, ಕೈಗಾರಿಕೆಗಳ ಸ್ಥಾಪನೆ, ಕೃಷಿ ಕಾರ್ಮಿಕರ ಕೊರತೆ, ಗ್ರಾಮೀಣ ಯುವಕರು ನಗರಗಳಿಗೆ ವಲಸೆ ಹೋಗುವುದು, ನಗರಗಳ ವಿಸ್ತರಣೆ, ರಿಯಲ್ ಎಸ್ಟೇಟ್ ಉದ್ಯಮಗಳು ಬೆಳೆದಿರುವುದು ಕೃಷಿ ಚಟುವಟಿಕೆಯು ಅದರಲ್ಲಿಯೂ ಪ್ರಮುಖವಾಗಿ ಭತ್ತದ ಕೃಷಿ ಕುಂಠಿತಗೊಳ್ಳಲು ಕಾರಣವಾಗಿರುತ್ತದೆ ಯೆಂಬುದನ್ನು ತಿಳಿಸುತ್ತದೆ.[20]

ದಕ್ಷಿಣ ಕನ್ನಡ ಜಿಲ್ಲೆಯು ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿದೆ. ಅಂತಾರಾಷ್ಟ್ರೀಯ ಮಟ್ಟದ ಅತ್ಯಾಧುನಿಕ ಆಸ್ಪತ್ರೆಗಳಿವೆ. ರಾಜೀವ್ ಗಾಂಧಿ ಆರೋಗ್ಯ ವಿಶ್ವವಿದ್ಯಾನಿಲಯದ ಪ್ರಕಾರ ಬೆಂಗಳೂರು ಜಿಲ್ಲೆಯ ನಂತರ ಅತೀ ಹೆಚ್ಚು ವೈದ್ಯಕೀಯ ಕಾಲೇಜುಗಳಿರುವ ಜಿಲ್ಲೆ ದಕ್ಷಿಣ ಕನ್ನಡ. 19ನೇ ಶತಮಾನದಲ್ಲಿ ಬಾಸೆಲ್ ಮಿಷನರೀಸ್‌ನವರು ಸ್ಥಳೀಯರಿಗೆ ಉದಾರವಾಗಿ ಇಂಗ್ಲೀಷ್ ಶಿಕ್ಷಣವನ್ನು ನೀಡುವುದಕ್ಕಾಗಿ ಪ್ರಥಮವಾಗಿ ಶಿಕ್ಷಣ

ಸಂಸ್ಥೆಗಳನ್ನು ಆರಂಭಿಸಿದರು. ಅಲ್ಲದೇ ಇತರ ಧರ್ಮಗಳಿಂದ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡ ಜನರನ್ನು ಆರ್ಥಿಕವಾಗಿ ಸಬಲರನ್ನಾಗಿಸಲು ಹಂಚಿನ ಕಾರ್ಖಾನೆ, ಮುದ್ರಣಾಲಯ, ಇತ್ಯಾದಿ ಕೈಗಾರಿಕೆಗಳನ್ನೂ ಸ್ಥಾಪಿಸಿ ಕೈಗಾರಿಕೀಕರಣ ಪ್ರಕ್ರಿಯೆಗೆ ಚಾಲನೆ ನೀಡಿದರು. ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯು ಶೈಕ್ಷಣಿಕ ಕ್ಷೇತ್ರದಲ್ಲಿ ಅಸಾಧಾರಣವಾದ ಸಾಧನೆಯನ್ನು ಮಾಡಿ ಜಗತ್ತಿನ ನಕಾಶೆಯಲ್ಲಿ ವಿಶೇಷ ಸ್ಥಾನ ಪಡೆದುಕೊಂಡಿರುತ್ತದೆ. ಜಿಲ್ಲೆಯಾದ್ಯಂತ ಅನೇಕ ವೈದ್ಯಕೀಯ ಹಾಗೂ ತಾಂತ್ರಿಕ ಕಾಲೇಜುಗಳು ಗುಣಮಟ್ಟದ ಶಿಕ್ಷಣವನ್ನು ಒದಗಿಸುತ್ತಿವೆ. ದೇಶ ವಿದೇಶಗಳ ಸಾವಿರಾರು ವಿದ್ಯಾರ್ಥಿಗಳು ಜಿಲ್ಲೆಯಲ್ಲಿ ತಮ್ಮ ಅಧ್ಯಯನವನ್ನು ಮುಂದುವರಿಸಿರುತ್ತಾರೆ. ರಾಷ್ಟ್ರದಲ್ಲಿಯೇ ಪ್ರಸಿದ್ಧಿಯನ್ನು ಪಡೆದಿರುವ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ (ಎನ್.ಐ.ಟಿ.ಕೆ), ಜಿಲ್ಲೆಯಲ್ಲಿ ಹನ್ನೆರಡು ವೈದ್ಯಕೀಯ, ಐದು ದಂತ ವೈದ್ಯಕೀಯ, ಹದಿನೆಂಟು ಇಂಜಿನಿಯರಿಂಗ್, ಒಂದುನೂರ ನಲವತ್ತೆಂಟು ಪದವಿ ಮತ್ತು ವೃತ್ತಿಪರ ಶಿಕ್ಷಣದ ಕಾಲೇಜುಗಳು ಕಾರ್ಯನಿರ್ವಹಿಸುತ್ತಿರುವುದು ಜಿಲ್ಲೆಯಲ್ಲಿ ಶೈಕ್ಷಣಿಕ ಕ್ಷೇತ್ರಕ್ಕೆ ನೀಡಲಾದ ಮಹತ್ವವನ್ನು ಸಾರುತ್ತದೆ. ಆರೋಗ್ಯ ಕ್ಷೇತ್ರದಲ್ಲಿಯೂ ಜಿಲ್ಲೆ ಹೆಸರುವಾಸಿಯಾಗಿದ್ದು, ಸರಕಾರಿ ಮತ್ತು ಖಾಸಗಿ ಕ್ಷೇತ್ರದ ಆಸ್ಪತ್ರೆಗಳು ಸ್ಥಳೀಯರಿಗೆ ಆರೋಗ್ಯ ಸೌಲಭ್ಯಗಳನ್ನು ನೀಡುವುದರೊಂದಿಗೆ, ಕರ್ನಾಟಕದ ಇತರ ಜಿಲ್ಲೆಗಳ ಮತ್ತು ಕೇರಳದ ಜನರಿಗೂ ಉತ್ತಮ ಹೊರರೋಗಿ ಆರೋಗ್ಯ ಚಿಕಿತ್ಸೆಯ ಸೌಲಭ್ಯಗಳನ್ನು ಒದಗಿಸಿರುತ್ತದೆ. ಫಾದರ್ ಮುಲ್ಲರ್, ಕೆ ಎಂ ಸಿ, ಎ ಜೆ ಶೆಟ್ಟಿ ಆಸ್ಪತ್ರೆ, ಏನೆಪೋಯ, ಕೆ ಎಸ್ ಹೆಗ್ಡೆ, ಶ್ರೀನಿವಾಸ, ಎಸ್ ಡಿ ಎಂ ಆಯುರ್ವೇದಿಕ್, ಕೆ ವಿ ಜಿ ಮುಂತಾದ ವೈದ್ಯಕೀಯ ಕಾಲೇಜುಗಳು ಆರೋಗ್ಯ ಶಿಕ್ಷಣ ಮಾತ್ರವಲ್ಲದೆ ಉತ್ತಮ ಆರೋಗ್ಯ ಸೇವೆಗಳನ್ನೂ ನೀಡುತ್ತಿವೆ. ಇದರೊಂದಿಗೆ ಒಮೆಗಾ, ಕೊಲಸೋ, ಸಿಟಿ, ಇಂದಿರಾ, ಅಥೆನಾ, ಆದರ್ಶ, ಕೆವಿಜಿ, ಎಸ್‌ಸಿಎಸ್, ವಿಜಯ ಕ್ಲಿನಿಕ್, ಗಿರಿಜಾ ಕ್ಲಿನಿಕ್, ಫಸ್ಟ್ ನ್ಯೂರೋ, ತೇಜಸ್ವಿನಿ ಮುಂತಾದ ಆಸ್ಪತ್ರೆಗಳು ಆರೋಗ್ಯ ಸೇವೆಯಲ್ಲಿ ಮುಂಚೂಣಿಯಲ್ಲಿವೆ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು 'ಬ್ಯಾಂಕ್‌ಗಳ ತವರೂರು' ಎಂಬುದಾಗಿ ಕರೆಯಲಾಗುತ್ತದೆ. ಬ್ಯಾಂಕಿಂಗ್ ಕ್ಷೇತ್ರದಲ್ಲಿ ಜಿಲ್ಲೆಯು ಅದ್ಭುತ ಸಾಧನೆಯನ್ನು ಮಾಡಿದ್ದು ರಾಷ್ಟ್ರದ ಆರ್ಥಿಕತೆಯ ಅಭಿವೃದ್ಧಿಗೆ ಪೂರಕ ವಾತಾವರಣವನ್ನು ಸೃಷ್ಟಿಸಿದ ಇಪ್ಪತ್ತು ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಕೆನರಾ, ಸಿಂಡಿಕೇಟ್, ಕಾರ್ಪೊರೇಶನ್ ಮತ್ತು ವಿಜಯಾ ಬ್ಯಾಂಕ್‌ಗಳ ಹುಟ್ಟು ಮತ್ತು ಬೆಳವಣಿಗೆಯಾದದ್ದು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ. ಖಾಸಗಿ ಬ್ಯಾಂಕಿಂಗ್ ಸೇವಾ ಕ್ಷೇತ್ರದಲ್ಲಿ ಪ್ರಸಿದ್ಧವಾಗಿ ರಾಷ್ಟ್ರಾದ್ಯಂತ ಸುಮಾರು 750ಕ್ಕಿಂತಲೂ ಹೆಚ್ಚು ಶಾಖೆಗಳನ್ನು ಒಳಗೊಂಡ ಕರ್ನಾಟಕ ಬ್ಯಾಂಕ್ ಹುಟ್ಟಿಕೊಂಡದ್ದು ಮಂಗಳೂರು ನಗರದಲ್ಲಿ. ರಾಷ್ಟ್ರೀಕೃತ ಬ್ಯಾಂಕ್‌ಗಳ 450 ಶಾಖೆಗಳು, ಪ್ರಾದೇಶಿಕ

ಗ್ರಾಮಾಂತರ ಬ್ಯಾಂಕ್‌ಗಳ 45 ಶಾಖೆಗಳು ಮತ್ತು ಖಾಸಗಿ ಬ್ಯಾಂಕಿಂಗ್ ಸೇವಾ ಕ್ಷೇತ್ರದ 52 ಶಾಖೆಗಳು ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಜಿಲ್ಲೆಯ ಆರ್ಥಿಕ ಬೆಳವಣಿಗೆಗೆ ಮಹತ್ವದ ಕೊಡುಗೆಯನ್ನು ನೀಡಿರುತ್ತದೆ. ಇವುಗಳಿಗೆ ಪೂರಕವಾಗಿ ಜಿಲ್ಲಾ ಸಹಕಾರಿ ಬ್ಯಾಂಕಿನ 62, ಭೂ ಅಭಿವೃದ್ಧಿ ಬ್ಯಾಂಕಿನ 5 ಮತ್ತು 128 ಪತ್ತಿನ ಸಹಕಾರಿ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದೆ. ಜಿಲ್ಲೆಯು ಹೊಟೇಲ್ ಉದ್ಯಮಕ್ಕೂ ಹೆಸರುವಾಸಿಯಾಗಿದ್ದು ಇಲ್ಲಿನ ಜನರು ಖ್ಯಾತಿ ಪಡೆದಿರುವಂತಹ ಹೊಟೇಲುಗಳನ್ನು ಮುಂಬೈ, ಪೂನಾ ಮತ್ತು ರಾಷ್ಟ್ರಾದ್ಯಂತ ಸ್ಥಾಪಿಸಿ ಜಿಲ್ಲೆಗೆ ಹೆಸರನ್ನು ತಂದಿರುತ್ತಾರೆ. ವಿದೇಶಗಳಲ್ಲಿ, ವಿಶೇಷವಾಗಿ ಕೊಲ್ಲಿ ರಾಷ್ಟ್ರಗಳಲ್ಲಿ ಜಿಲ್ಲೆಯ ಲಕ್ಷಾಂತರ ಮಂದಿ ಉದ್ಯೋಗದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು ಜಿಲ್ಲೆಯ ತಲಾ ವರಮಾನ ಮತ್ತು ಆರ್ಥಿಕಾಭಿವೃದ್ಧಿಗೆ ಮಹತ್ತರ ಕೊಡುಗೆಗಳನ್ನು ನೀಡಿರುತ್ತಾರೆ.[21]

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೈಗಾರಿಕೆಗಳ ಅಭಿವೃದ್ಧಿಗೆ ವಿಪುಲ ಅವಕಾಶ ಇದ್ದುದರಿಂದ ಹಲವಾರು ಬೃಹತ್ ಕೈಗಾರಿಕೆಗಳು ಆರಂಭಿಸಲ್ಪಟ್ಟಿವೆ ಹಾಗೂ ಸ್ಥಾಪನೆಯಾಗುವ ಹಂತದಲ್ಲಿದೆ. 1981ರಲ್ಲಿ ಮಂಗಳೂರು ರಸಗೊಬ್ಬರ ಕಾರ್ಖಾನೆಯ ಸ್ಥಾಪನೆಯಾಗಿ ಕೈಗಾರಿಕೆಗಳ ಅಭಿವೃದ್ಧಿಗೆ ಮುನ್ನುಡಿಯನ್ನು ಬರೆಯಿತು. 1994–95ರಲ್ಲಿ ರಾಷ್ಟ್ರೀಯ ಇಂಧನ ಮತ್ತು ನೈಸರ್ಗಿಕ ಅನಿಲ ನಿಗಮದ ಪ್ರಾಯೋಜಕತ್ವದಲ್ಲಿ ಮಂಗಳೂರು ರಿಫೈನರಿ ಮತ್ತು ಪೆಟ್ರೋಕೆಮಿಕಲ್ಸ್ ಸಂಸ್ಥೆ ಆರಂಭವಾಯಿತು. ಸುಮಾರು 35 ಸಾವಿರ ಕೋಟಿ ರೂಪಾಯಿಗಳ ವೆಚ್ಚದಲ್ಲಿ ಆಯಿಲ್ ಎಂಡ್ ನ್ಯಾಚುರಲ್ ಗ್ಯಾಸ್ ಕಾರ್ಪೊರೇಶನ್ ಪ್ರಾಯೋಜಕತ್ವದಲ್ಲಿ ರಫ್ತು ಆಧಾರಿತ ಬಹು ಉತ್ಪನ್ನ ವಿಶೇಷ ಆರ್ಥಿಕ ವಲಯ ಜಿಲ್ಲೆಯ ಮಂಗಳೂರು ತಾಲೂಕಿನ ತೋಕೂರು, ಕಳವಾರು, ಪೆರ್ಮುದೆ, ಬಾಳ, ಬಜ್ಪೆ, ತೆಂಕ ಎಕ್ಕಾರು ಹಾಗೂ ಕುತ್ತೆತ್ತೂರು ಗ್ರಾಮಗಳಲ್ಲಿ ಅಸ್ತಿತ್ವಕ್ಕೆ ಬರುತ್ತಿದೆ. ನವಮಂಗಳೂರು ಬಂದರು, ಮಂಗಳೂರು ರಸಗೊಬ್ಬರ ಕಾರ್ಖಾನೆ, ಬಜ್ಪೆ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ, ಎಂ.ಆರ್.ಪಿ.ಎಲ್., ಸುಜ್ಲಾನ್, ನಾಗಾರ್ಜುನ ಪವರ್ ಕಾರ್ಪೊರೇಷನ್, ಇನ್ಫೋಸಿಸ್, ಕೊಂಕಣ ರೈಲ್ವೆ, ಮಂಗಳೂರು ಕೆಮಿಕಲ್ಸ್ ಎಂಡ್ ಫರ್ಟಿಲೈಸರ್ಸ್, ಕುದುರೆಮುಖ ಐಯರ್ನ್ ಓರ್ ಕಂಪೆನಿ, ಬಿ.ಎ.ಎಸ್.ಎಫ್, ಇ.ಎಲ್.ಎಫ್ ಗ್ಯಾಸ್, ಭಾರತಿ ಶಿಪ್‌ಯಾರ್ಡ್ ಲಿಮಿಟೆಡ್ ಜಿಲ್ಲೆಯ ಪ್ರಮುಖ ಉದ್ದಿಮೆಗಳು. ಮಾಹಿತಿ ತಂತ್ರಜ್ಞಾನ ಮತ್ತು ಹೊರಗುತ್ತಿಗೆ ಕಂಪೆನಿಗಳು ಜಿಲ್ಲೆಯಲ್ಲಿ ತಮ್ಮ ನೆಲೆಯನ್ನು ಸ್ಥಾಪಿಸಲಾರಂಭಿಸಿದೆ. ಇನ್ಫೋಸಿಸ್, ಲೇಸರ್‌ಸೋಫ್ಟ್, ಇನ್ಫೋ ಸಿಸ್ಟಮ್ಸ್, ಎಂಫಸಿಸ್, ಹಿಂದೂಜಾ ಗ್ಲೋಬಲ್ ಸೊಲ್ಯೂಷನ್ಸ್ ಇವುಗಳಲ್ಲಿ ಪ್ರಮುಖವಾದವುಗಳು. ವಿಪ್ರೋ ಕಂಪನಿ ಶೀಘ್ರದಲ್ಲಿ ಮಂಗಳೂರಿನಲ್ಲಿ ತನ್ನ ಉದ್ಯಮವನ್ನು ಸ್ಥಾಪಿಸುವ ಹಂತದಲ್ಲಿದೆ. ಮೂರು ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳು ನಿರ್ಮಾಣ ಹಂತದಲ್ಲಿದ್ದು,

ಮಂಗಳೂರು ತಾಲೂಕಿನ ಗಂಜೀಮಠದಲ್ಲಿ ರಫ್ತು ಆಧಾರಿತ ಕೈಗಾರಿಕಾ ಘಟಕ, ಮಂಗಳೂರು ವಿಶ್ವವಿದ್ಯಾನಿಲಯ ಸಮೀಪದ ಮುಡಿಪು ಹಾಗೂ ಬಂಟ್ವಾಳದ ತುಂಬೆ ಗ್ರಾಮದಲ್ಲಿ ಮಾಹಿತಿ ತಂತ್ರಜ್ಞಾನ ಆಧಾರಿತ ವಿಶೇಷ ಆರ್ಥಿಕ ವಲಯಗಳು ರಚಿಸಲ್ಪಡುತ್ತಿವೆ. ಜಿಲ್ಲೆಯಲ್ಲಿ ಉದ್ಯೋಗವಕಾಶ ಗಳು ಹೆಚ್ಚಾಗುತ್ತಿದ್ದು, ಆರ್ಥಿಕತೆ ಬಲಾಢ್ಯಗೊಳ್ಳುತ್ತಿದೆ. ಈ ಕಾರಣದಿಂದ ಜನಸಂಖ್ಯೆಯೂ ಏರುತ್ತಿದ್ದು ಪರಿಸರಕ್ಕೆ ಎಲ್ಲಾ ದಿಕ್ಕುಗಳಿಂದಲೂ ಅಪಾಯ ಬಂದೊದಗಿದೆ. ವಾಯುಮಾಲಿನ್ಯ, ಜಲಮಾಲಿನ್ಯ ಇತ್ಯಾದಿ ದಿನೇ ದಿನೆ ಹೆಚ್ಚಾಗುತ್ತಿದ್ದು ತ್ಯಾಜ್ಯ ನಿರ್ವಹಣೆ (ಘನ ಮತ್ತು ದ್ರವ) ಕೈಗಾರಿಕೆಗಳಿಗೆ, ಆಸ್ಪತ್ರೆಗಳಿಗೆ, ವಾಣಿಜ್ಯ ಸಂಕೀರ್ಣಗಳಿಗೆ ಮತ್ತು ಮುಖ್ಯವಾಗಿ ಎಲ್ಲಾ ನಗರ ಹಾಗೂ ಗ್ರಾಮೀಣ ಸ್ಥಳೀಯ ಸಂಸ್ಥೆಗಳಿಗೆ ಸವಾಲಾಗಿದೆ. ಅಭಿವೃದ್ಧಿ ಮತ್ತು ಪರಿಸರದ ನಡುವೆ ಸಮತೋಲನ ಕಾಯ್ದುಕೊಂಡು ಸಹ್ಯ ಅಭಿವೃದ್ಧಿಯನ್ನು ಹೊಂದಬೇಕಾಗಿದೆ.

### 3.5. ಮಾನವ ಅಭಿವೃದ್ಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ

ಮಾನವ ಅಭಿವೃದ್ಧಿ ಸೂಚಿಯಲ್ಲಿ ಪರಿಸರ, ಆರೋಗ್ಯ, ನಗರ ಅಭಿವೃದ್ಧಿ ಮತ್ತು ಗ್ರಾಮೀಣಾಭಿವೃದ್ಧಿ ಅಂಶಗಳು ಒಳಗೊಂಡಿದ್ದು, ಇವು ಘನತ್ಯಾಜ್ಯ ನಿರ್ವಹಣೆಗೆ ನೇರ ಸಂಬಂಧ ಹೊಂದಿರುವುದರಿಂದ ಜಿಲ್ಲೆಯ ಮಾನವ ಅಭಿವೃದ್ಧಿ ಸೂಚಿಯ ವಿಶ್ಲೇಷಣೆ ಇಲ್ಲಿ ಪ್ರಸ್ತುತ.

ದಕ್ಷಿಣ ಕನ್ನಡ ಜಿಲ್ಲೆಯ ಮಾನವ ಅಭಿವೃದ್ಧಿ ಸೂಚಿಯು(ದಕ್ಷಿಣ ಕನ್ನಡ ಜಿಲ್ಲಾ ಮಾನವ ಅಭಿವೃದ್ಧಿ ವರದಿ–2014) 0.687 ಇದೆ. ಶಿಕ್ಷಣ 0.809, ಜೀವನ ಮಟ್ಟ 0.708, ಮೌಲ್ಯವನ್ನು ಹೊಂದಿದ್ದು ಉನ್ನತ ಮಟ್ಟದ ನಿರ್ವಹಣೆಯನ್ನು ತೋರಿದೆ. ಆದರೆ ಆರೋಗ್ಯದ ಮೌಲ್ಯ 0.567 ರಷ್ಟು ಕಡಿಮೆ ಇದೆ. ತಾಲೂಕುವಾರು ನೋಡಿದಾಗ ಮಂಗಳೂರು ತಾಲೂಕು ಅತೀ ಹೆಚ್ಚು ಅಂದರೆ 0.830 ಮಾನವ ಅಭಿವೃದ್ಧಿ ಸೂಚಿಯನ್ನು ಹೊಂದಿದ್ದು 'ಅತ್ಯುತ್ತಮ' ವರ್ಗದಲ್ಲಿದೆ. ಬೆಳ್ತಂಗಡಿಯು ಕೊನೆಯ ಸ್ಥಾನದಲ್ಲಿದ್ದು 0.399 ಮಾನವ ಅಭಿವೃದ್ಧಿ ಸೂಚಿಯನ್ನು ಹೊಂದಿದೆ. ಉಳಿದಂತೆ ಪುತ್ತೂರು 0.459, ಬಂಟ್ವಾಳ 0.452 ಮತ್ತು ಸುಳ್ಯ 0.468 ಕ್ರಮವಾಗಿ 2,3 ಮತ್ತು ನಾಲ್ಕನೇ ಸ್ಥಾನವನ್ನು ಹೊಂದಿವೆ. ಸಾಕ್ಷರತಾ ಪ್ರಮಾಣದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯು ಗಮನಾರ್ಹ ಸಾಧನೆಯನ್ನು ಮಾಡಿದೆ. ಜಿಲ್ಲೆಯು 2011ರ ಜನಗಣತಿಯ ಪ್ರಕಾರ ರಾಜ್ಯದಲ್ಲೇ ಅತೀ ಹೆಚ್ಚು ಸಾಕ್ಷರತಾ ಪ್ರಮಾಣ (ಶೇಕಡ 88.57) ವನ್ನು ಹೊಂದಿದೆ.ಬೆಳ್ತಂಗಡಿ ತಾಲೂಕಿನಲ್ಲಿ 83.92 ಶೇಕಡ, ಪುತ್ತೂರು ತಾಲೂಕಿನಲ್ಲಿ 85.92, ಮಂಗಳೂರು ತಾಲೂಕಿನಲ್ಲಿ 91.67, ಬಂಟ್ವಾಳ 86.76 ಮತ್ತು ಸುಳ್ಯ ತಾಲೂಕಿನಲ್ಲಿ 86.35 ಶೇಕಡ ಇದೆ. ಸಾಕ್ಷರತಾ ಪ್ರಮಾಣವನ್ನು ಲಿಂಗವಾರು ವಿಭಜಿಸಿ ನೋಡಿದಾಗ ಪುರುಷರಲ್ಲಿ ಪ್ರತಿಶತ 93.1ರಷ್ಟು ಮತ್ತು ಮಹಿಳೆಯರಲ್ಲಿ 84.13 ರಷ್ಟು ಸಾಕ್ಷರರಿದ್ದಾರೆ. ಸಾಕ್ಷರತೆಯಲ್ಲಿ ಲಿಂಗವಾರು ವ್ಯತ್ಯಾಸವು ಪ್ರತಿಶತ 9ರಷ್ಟು ಇದೆ

ಹಾಗೂ ಇದು ಕೂಡಾ ರಾಜ್ಯದಲ್ಲಿ ಅತೀ ಕಡಿಮೆಯೆಂದು ದಾಖಲಾಗಿದೆ. ಸಾಕ್ಷರತೆಯಲ್ಲಿ ತಾಲೂಕುಗಳ ನಡುವೆ ಹೆಚ್ಚಿನ ವ್ಯತ್ಯಾಸವೇನೂ ಇಲ್ಲ. ಬೆಳ್ತಂಗಡಿ ತಾಲೂಕಿನಲ್ಲಿ ಅತೀ ಕಡಿಮೆ ಸಾಕ್ಷರತಾ ಪ್ರಮಾಣವಿದ್ದು (83.92) ಮಂಗಳೂರು ತಾಲೂಕಿನಲ್ಲಿ 91.67ರಷ್ಟಿದ್ದು ಇದು ಅತೀ ಹೆಚ್ಚಿನ ಪ್ರಮಾಣವಾಗಿದೆ. ಹಾಗೆಯೇ ಗ್ರಾಮೀಣ ಮತ್ತು ನಗರಗಳಲ್ಲಿಯೂ ಹೆಚ್ಚಿನ ವ್ಯತ್ಯಾಸ ಕಂಡುಬರುವುದಿಲ್ಲ. ಗ್ರಾಮೀಣ ಪ್ರದೇಶದಲ್ಲಿ ಸರಾಸರಿ 85.33 ಶೇಕಡದಷ್ಟಿದ್ದರೆ, ನಗರದಲ್ಲಿ ಸರಾಸರಿ 92.12ರಷ್ಟಿದೆ. ಜಿಲ್ಲೆಯು ಕೇವಲ ಪ್ರೌಢಶಾಲಾ ಹಂತ ಮಾತ್ರವಲ್ಲದೆ ಉನ್ನತ ಶಿಕ್ಷಣ ದಲ್ಲಿಯೂ ಬಹಳ ದೊಡ್ಡ ಸಾಧನೆ ಮಾಡಿದೆ.[22]

ಲಿಂಗ ಸಮಾನತೆಯಲ್ಲಿ ಜಿಲ್ಲೆಯು ಅತ್ಯುತ್ತಮ ವರ್ಗದಲ್ಲಿದೆ. ಜಿಲ್ಲೆಯ ಜಿ ಡಿ ಐ ಯು 0.043 ಆಗಿದ್ದು ಪ್ರತಿಶತ 4ರಷ್ಟು ಮಾತ್ರ ಲಿಂಗ ಅಸಮಾನತೆಯನ್ನು ತೋರಿಸುತ್ತದೆ. ಬೆಳ್ತಂಗಡಿ ತಾಲೂಕು ಅತೀ ಕಡಿಮೆ ಅಸಮಾನತೆಯನ್ನು (0.026) ತೋರಿಸುತ್ತದೆ. ನಂತರ ಮಂಗಳೂರು (0.034) ಮತ್ತು ಸುಳ್ಯ ತಾಲೂಕು (0.046) ಇವೆ. ಬಂಟ್ವಾಳದಲ್ಲಿ ಅತೀ ಹೆಚ್ಚು ಅಸಮಾನತೆ (0.061) ದಾಖಲಾಗಿದೆ.ಇತರ ಸೂಚಿಗಳಲ್ಲಿ ಜಿಲ್ಲೆಯು ಮಕ್ಕಳ ಅಭಿವೃದ್ಧಿ ಸೂಚಿ ಸಿಡಿಐ (0.518). ಆಹಾರ ಭದ್ರತಾ ಸೂಚಿ ಎಫ್ ಎಸ್ ಐ (0.571) ಮತ್ತು ಸಂಯುಕ್ತ ತಾಲೂಕು ಅಭಿವೃದ್ಧಿ ಸೂಚಿ ಸಿ ಟಿ ಡಿ ಐ (0.661) ಇದ್ದು 'ಅತ್ಯುತ್ತಮ' ವರ್ಗದಡಿಯಲ್ಲಿದೆ. ಇತರ ಸೂಚಿಗಳಲ್ಲಿ ಜಿಲ್ಲೆಯು ಸಿಡಿಐ (0.518), ಎಸ್ ಎಫ್ ಐ (0.571) ಮತ್ತು ಸಂಯುಕ್ತ ತಾಲೂಕು ಅಭಿವೃದ್ಧಿ ಸೂಚಿ (0.661)ಗಳ ಉತ್ತಮ ವರ್ಗದಡಿಯಲ್ಲಿವೆ.[23]

ನಗರಾಭಿವೃದ್ಧಿ ಸೂಚಿಯಲ್ಲಿ ಮಂಗಳೂರು ಮಹಾನಗರ ಪಾಲಿಕೆಯು ಅತೀ ಹೆಚ್ಚು ಅಂದರೆ 0.690 ಸೂಚಿ ಮೌಲ್ಯವನ್ನು ಹೊಂದಿದೆ. ಪುರಸಭೆಗಳಲ್ಲಿ ಪುತ್ತೂರು ಪುರಸಭೆಯು 0.562, ಉಳ್ಳಾಲ ಪುರಸಭೆಯು 0.406, ಬಂಟ್ವಾಳ ಪುರಸಭೆ 0.310 ಮತ್ತು ಮೂಡಬಿದ್ರಿ ಪುರಸಭೆ 0.316 ನಗರಾಭಿವೃದ್ಧಿ ಸೂಚಿಯನ್ನು ಹೊಂದಿವೆ. ಬೆಳ್ತಂಗಡಿ ಪಟ್ಟಣ ಪಂಚಾಯತ್ 0.397 ಮತ್ತು ಮುಲ್ಕಿ ಪಟ್ಟಣ ಪಂಚಾಯತ್ ಅತೀ ಕಡಿಮೆ ಅಂದರೆ 0.380 ನಗರಾಭಿವೃದ್ಧಿ ಸೂಚಿಯನ್ನು ಹೊಂದಿದೆ. ತಾಲೂಕುವಾರು ತಲಾದಾಯವನ್ನು ತೆಗೆದುಕೊಂಡರೆ ಪ್ರಸ್ತುತ ಜಿಲ್ಲೆಯಲ್ಲಿ ಮಂಗಳೂರು ತಾಲೂಕಿನಲ್ಲಿ 1.21,317, ಸುಳ್ಯ 93203, ಬೆಳ್ತಂಗಡಿ 90831, ಪುತ್ತೂರು 61313 ಮತ್ತು ಬಂಟ್ವಾಳ 52711 ಇದೆ. ಜಿಲ್ಲೆಯ ಸರಾಸರಿ ತಲಾದಾಯ 94179 ಆಗಿದೆ. ಜಿಲ್ಲೆಯಲ್ಲಿ ಸರಾಸರಿ ಶೇಕಡ 50.13ರಷ್ಟು ಬಡತನ ರೇಖೆಗಿಂತ (ಬಿಪಿಎಲ್) ಕಡಿಮೆ ಇರುವ ಕುಟುಂಬಗಳಿವೆ. ಬಂಟ್ವಾಳ ತಾಲೂಕಿನಲ್ಲಿ ಶೇಕಡ 63.91, ಬೆಳ್ತಂಗಡಿ 59.52, ಸುಳ್ಯ ತಾಲೂಕಿನಲ್ಲಿ 54.52, ಪುತ್ತೂರು ತಾಲೂಕಿನಲ್ಲಿ 53.08 ಮತ್ತು ಮಂಗಳೂರು ತಾಲೂಕಿನಲ್ಲಿ 40.87 ಇದೆ.[24]

ಸುರಕ್ಷಿತ ಕುಡಿಯುವ ನೀರನ್ನು ಗಣನೆಗೆ ತೆಗೆದುಕೊಂಡರೆ ಮಂಗಳೂರು ನಗರ ಹೊರತುಪಡಿಸಿ ಉಳಿದಂತೆ ಬಹುಪಾಲು ಭಾಗಗಳಲ್ಲಿ ತೆರೆದ ಬಾವಿಗಳನ್ನು ಜನ ಅವಲಂಬಿಸಿದ್ದಾರೆ. ನಗರ ಪ್ರದೇಶಗಳಲ್ಲಿ ಬಾವಿ ನೀರು ಸುರಕ್ಷಿತವಾಗಿಲ್ಲ. ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡಂತೆ ಜನರು ತ್ಯಾಜ್ಯವನ್ನು ನದಿಗೆ, ಪಾಳುಬಿದ್ದ ಬಾವಿಗಳಿಗೆ ಎಸೆಯುವುದರಿಂದ ಬಾವಿ ಹಾಗೂ ನದಿನೀರು ಹೆಚ್ಚು ಕಲುಷಿತಗೊಂಡಿದೆ. ಆರೋಗ್ಯದ ದೃಷ್ಟಿಯಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಧುನಿಕ ಸೌಲಭ್ಯಗಳನ್ನು ಹೊಂದಿರುವ ಕುಟುಂಬಗಳ ಅಂಕಿ-ಅಂಶಗಳನ್ನು ತೆಗೆದುಕೊಂಡರೆ 2011ರ ಪ್ರಕಾರ ಶೇಕಡ 34.82 ಜನರು ರೇಡಿಯೋ ಬಳಸುತ್ತಾರೆ. ಶೇಕಡ 60.09 ಜನರು ಟೆಲಿವಿಷನ್, ಶೇಕಡ 88.39 ಜನರು ದೂರವಾಣಿ, ಶೇಕಡ 22.95 ಜನರು ದ್ವಿಚಕ್ರ ಮತ್ತು ಶೇಕಡ 11.20 ಜನರು ನಾಲ್ಕು ಚಕ್ರದ ವಾಹನಗಳನ್ನು ಹೊಂದಿದ್ದಾರೆ. ನೈರ್ಮಲ್ಯದ ಕ್ಷೇತ್ರದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡೂ ಉತ್ತಮ ಸಾಧನೆ ತೋರಿವೆ. ಜಿಲ್ಲೆಯ ಬಹುತೇಕ ಭಾಗ ಬಯಲುಮುಕ್ತ ಶೌಚಾಲಯವಾಗಿರುವುದರಿಂದ ಗಂಭೀರವಾದ ಆರೋಗ್ಯ ಸಮಸ್ಯೆಗಳು ಕೇವಲ ವಲಸೆ ಕಾರ್ಮಿಕರು ವಾಸಿಸುವ ಜಾಗಗಳನ್ನು ಹೊರತುಪಡಿಸಿ ಇತರೆ ಕಡೆ ಕಂಡುಬರುವುದಿಲ್ಲ. ಆದರೆ ಅಡುಗೆಗೆ ಬಳಸುವ ಇಂಧನಗಳ ಪ್ರಮಾಣದಲ್ಲಿ ವ್ಯತ್ಯಾಸವಿದ್ದು, ನಗರ ಪ್ರದೇಶಗಳಲ್ಲಿ ಮೂರನೇ ಎರಡರಷ್ಟು ಕುಟುಂಬಗಳು ಅಡುಗೆ ಅನಿಲವನ್ನು ಬಳಸುತ್ತಿದ್ದರೆ, ಗ್ರಾಮೀಣ ಪ್ರದೇಶಗಳಲ್ಲಿ ಸರಬರಾಜು ಸೇವೆ ಜಾಲದ ಕೊರತೆಯಿಂದಾಗಿ ಕೇವಲ ಮೂರನೇ ಒಂದು ಭಾಗ ಅಡುಗೆ[25]

## ಕೊನೆ ಮಾತು

ಒಟ್ಟಿನಲ್ಲಿ ಜಿಲ್ಲೆಯು ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ, ಆರೋಗ್ಯ ಸೇರಿದಂತೆ ಎಲ್ಲಾ ರಂಗಗಳಲ್ಲಿಯೂ ಮುಂದುವರಿಯುತ್ತಿದ್ದು, ಜಿಲ್ಲೆಯ ಜನಸಂಖ್ಯೆಯೂ ಅಷ್ಟೇ ವೇಗದಲ್ಲಿ ಬೆಳೆಯುತ್ತಿದೆ. ಅಭಿವೃದ್ಧಿ ಎದುರಿಸುತ್ತಿರುವ ಅನೇಕ ಸವಾಲುಗಳಲ್ಲಿ ತ್ಯಾಜ್ಯ ನಿರ್ವಹಣೆಯೂ ಒಂದಾಗಿದ್ದು ಎಲ್ಲಾ ಸ್ಥಳೀಯ ಸಂಸ್ಥೆಗಳು ಏಕಪ್ರಕಾರವಾಗಿ ನಿರ್ವಹಣೆ ಮಾಡದಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಉಳ್ಳಾಲ ನಗರಸಭೆ, ಬಂಟ್ವಾಳ ಪುರಸಭೆ ಸೇರಿದಂತೆ ಕೆಲವು ಗ್ರಾಮ ಪಂಚಾಯತ್‌ಗಳು ಸ್ವಂತ ತ್ಯಾಜ್ಯ ನಿರ್ವಹಣ ಘಟಕ ಹಾಗೂ ಭೂಭರ್ತಿ ಜಾಗಗಳನ್ನು ಹೊಂದಿರದ ಕಾರಣ ಮಂಗಳೂರು ಮಹಾನಗರ ಪಾಲಿಕೆಯೊಂದಿಗೆ ಒಪ್ಪಂದ ಮಾಡಿಕೊಂಡು ಬಾಡಿಗೆ ಅಧಾರದಲ್ಲಿ ಮಂಗಳೂರಿನ ಪಚ್ಚನಾಡಿಯಲ್ಲಿ ತ್ಯಾಜ್ಯ ವಿಲೇವಾರಿ ಮಾಡುತ್ತಿವೆ. ಕಡಬ, ಸುಬ್ರಹ್ಮಣ್ಯ, ಉಜಿರೆ, ಬೆಳ್ತಂಗಡಿ, ಲಾಯಿಲ, ಉಪ್ಪಿನಂಗಡಿ, ಕಿನ್ನಿಗೋಳಿ, ಮೆನ್ನಬೆಟ್ಟು ಮುಂತಾದ ಗ್ರಾಮ ಪಂಚಾಯತ್‌ಗಳು ತ್ಯಾಜ್ಯ ನಿರ್ವಹಣೆಗಾಗಿ ಸ್ವಂತ ಭೂಮಿಯನ್ನು ಹೊಂದಿದ್ದು ತ್ಯಾಜ್ಯ

ಸಮಸ್ಯೆ ಕಡಿಮೆ ಇದೆ. ಆದರೆ ಬಜ್ಪೆ, ಸುಳ್ಯ ಪಟ್ಟಣ ಪಂಚಾಯತ್, ಜಾಲ್ಸೂರ್, ಕಬಕ ಮುಂತಾದ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಜನಸಂಖ್ಯೆ ಹೆಚ್ಚಿದ್ದು ಯೋಗ್ಯ ರೀತಿಯಲ್ಲಿ ನಿರ್ವಹಣೆ ಮಾಡದಿರುವುದು ಕಂಡುಬಂದಿದೆ. ಜನಸಾಮಾನ್ಯರು ಪ್ರತಿನಿತ್ಯ ಸೃಷ್ಟಿಸುವ ವೈವಿಧ್ಯಮಯ ತ್ಯಾಜ್ಯಗಳನ್ನು ವೈಜ್ಞಾನಿಕ ವಿಧಾನಗಳಿಂದ ಮತ್ತು ಸುರಕ್ಷಿತವಾಗಿ ವಿಲೇವಾರಿ ಮಾಡುವ ವ್ಯವಸ್ಥೆಯು ಹೆಚ್ಚಿನ ಸ್ಥಳೀಯ ಸಂಸ್ಥೆಗಳಲ್ಲಿ ಲಭ್ಯವಿಲ್ಲ. ಅದರಲ್ಲೂ ಅತ್ಯಂತ ಅಪಾಯಕಾರಿ ಎನಿಸುವ ಪ್ಲಾಸ್ಟಿಕ್ ತ್ಯಾಜ್ಯಗಳನ್ನು ಸಂಗ್ರಹಿಸಿ ಪುನರ್ ಆವರ್ತನೆಗೊಳಿಸುವ ಅಥವಾ ಮತ್ತೆ ಇದರಿಂದ ಇಂಧನವನ್ನು ಉತ್ಪಾದಿಸುವ ವ್ಯವಸ್ಥೆ ಹೆಚ್ಚಿನ ಕಡೆ ಲಭ್ಯವಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲೂಕಿನ ಬೆಳ್ಳಾರೆಯಲ್ಲಿ ಸುಮಾರು 1.6 ಕೋ.ರೂ ವೆಚ್ಚದಲ್ಲಿ ಸ್ವಚ್ಛವಾಗಿರುವ ಪ್ಲಾಸ್ಟಿಕ್ ತ್ಯಾಜ್ಯಗಳನ್ನು ಸಂಗ್ರಹಿಸಿ, ಇದರಿಂದ ಇಂಧನವನ್ನು ಪಡೆಯುವ ಮೂಲಕ ಪ್ಲಾಸ್ಟಿಕ್ ತ್ಯಾಜ್ಯಗಳ ಸಮಸ್ಯೆಯನ್ನು ಪರಿಹರಿಸುವ ಯೋಜನೆ ಮಾಡಲಾಗಿದೆ. ಈ ಯೋಜನೆ ಸಂಪೂರ್ಣ ಪರಿಸರ ಸ್ನೇಹಿಯಾಗಿದ್ದು, ಪ್ಲಾಸ್ಟಿಕ್ ತ್ಯಾಜ್ಯವನ್ನು ಮರು ಸಂಸ್ಕರಣೆ ಮಾಡುವ ಸಂದರ್ಭದಲ್ಲಿ ಉತ್ಪನ್ನವಾಗುವ ಅನಿಲವನ್ನೇ ಘಟಕದಲ್ಲಿರುವ ಯಂತ್ರಗಳಿಗೆ ಇಂಧನವನ್ನಾಗಿ ಬಳಸುವ ಯೋಜನೆ ಇದಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮ ಪಂಚಾಯತುಗಳ ವ್ಯಾಪ್ತಿಯಲ್ಲಿ ಸಂಗ್ರಹವಾಗುವ ಪ್ಲಾಸ್ಟಿಕ್ ತ್ಯಾಜ್ಯಗಳನ್ನು ಈ ಘಟಕದಲ್ಲಿ ಬಳಸಿಕೊಳ್ಳಲು ಅವಕಾಶ ಇದೆ. ಈ ಯೋಜನೆಯ ಯಶಸ್ಸಿಗೆ ಮುಖ್ಯವಾಗಿ ಜನರ ಸಹಕಾರವನ್ನು ನಿರೀಕ್ಷಿಸಲಾಗಿದೆ. ಮಂಗಳೂರು ಮಹಾನಗರ ಪಾಲಿಕೆಯು 282 ವಿವಿಧ ರೀತಿಯ ವಾಣಿಜ್ಯ ಚಟುವಟಿಕೆಗಳಿಗೆ ಅವುಗಳ ನವೀಕರಣ ಸಂದರ್ಭದಲ್ಲಿ ಘನತ್ಯಾಜ್ಯ ನಿರ್ವಹಣೆ ತೆರಿಗೆಯನ್ನು ಸಂಗ್ರಹಿಸುತ್ತಿದೆ. ಇದರಿಂದ ವಾರ್ಷಿಕ ಸುಮಾರು 3 ಕೋಟಿ ರೂಪಾಯಿ ಆದಾಯವನ್ನು ಗಳಿಸುತ್ತಿದೆ. ಒಟ್ಟು ವಾಣಿಜ್ಯ ಉದ್ದೇಶಕ್ಕೆ ಬಳಸಲಾದ ವಿಸ್ತೀರ್ಣವನ್ನು ಆಧಾರವಾಗಿಟ್ಟುಕೊಂಡು ರೂ 130ರಿಂದ ರೂ 95,820ರವರೆಗೆ ವಿವಿಧ ಹಂತದ (ಸ್ಲ್ಯಾಬ್ ಸಿಸ್ಟಮ್) ತೆರಿಗೆ ದರವು ಜಾರಿಯಲ್ಲಿರುತ್ತದೆ. ಪ್ರಸ್ತುತ ಮನೆ ತೆರಿಗೆದಾರರು ಸ್ವಯಂ ಘೋಷಿತ ಆಸ್ತಿ ತೆರಿಗೆಯಲ್ಲಿ ಪಾವತಿಸುವ ತ್ಯಾಜ್ಯ ಶುಲ್ಕವು ನಗರಪಾಲಿಕೆಯ ವಾರ್ಷಿಕ ಸುಮಾರು 18 ಕೋಟಿ ತ್ಯಾಜ್ಯ ನಿರ್ವಹಣಾ ವೆಚ್ಚವನ್ನು ಭರಿಸಲು ವಿನಿಯೋಗವಾಗುತ್ತಿದೆ. ಹಳೆಯಂಗಡಿ, ಕೆಮ್ರಾಲ್, ಕಿನ್ನಿಗೋಳಿ, ಕಡಬ, ಸುಬ್ರಹ್ಮಣ್ಯ ಸೇರಿದಂತೆ ಕೆಲವು ಗ್ರಾಮ ಪಂಚಾಯತ್‌ಗಳೂ ನಾಗರಿಕರಿಗೆ ನಿರ್ವಹಣಾ ಶುಲ್ಕ ವಿಧಿಸುತ್ತಿವೆ. ಬೆಳಾಲು, ಚಾರ್ಮಾಡಿ, ನಡ, ನಿಡ್ಲೆ, ಪುದು, ಕೇಪು, ಇರಾ, ಪಾವೂರು, ಕೊಯಿಲ, ಕೊಂಬಾರು, ಹರಿಹರ, ದೇವಚಳ್ಳ ಮುಂತಾದ 150 ಕ್ಕೂ ಮಿಕ್ಕಿ ಗ್ರಾಮ ಪಂಚಾಯತ್‌ಗಳ ವ್ಯಾಪ್ತಿಯಲ್ಲಿ ಮೇಲ್ನೋಟಕ್ಕೆ ತ್ಯಾಜ್ಯ ಸಮಸ್ಯೆ ಕಂಡುಬರದ ಕಾರಣ ಇವುಗಳು ತ್ಯಾಜ್ಯ ನಿರ್ವಹಣೆಗೆ ಹೆಚ್ಚಿನ ಆದ್ಯತೆ ನೀಡದಿರುವುದು ಕಂಡುಬಂದಿದೆ.[26] ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ (2015) ಘನ ಮತ್ತು ದ್ರವ ತ್ಯಾಜ್ಯ

ನಿರ್ವಹಣೆ ಕಾರ್ಯಾಗಾರ ದಲ್ಲಿ ಘನತ್ಯಾಜ್ಯ ಘಟಕ ಹೊಂದಿರುವ ಗ್ರಾಮ ಪಂಚಾಯತ್‌ಗಳು ಕೈಗೊಳ್ಳಬೇಕಾದ ಕ್ರಮಗಳನ್ನು ಸೂಚಿಸಿದೆ. ಆದರೆ ತ್ಯಾಜ್ಯ ಸರ್ವವ್ಯಾಪ್ತಿಯಾಗಿದ್ದು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಸೂಕ್ತ ಪರಿಹಾರಗಳನ್ನು ಕಂಡುಕೊಳ್ಳುವ ಅವಶ್ಯಕತೆಯಿದೆ.

**ಪರಾಮರ್ಶನ ಗ್ರಂಥಗಳು ಮತ್ತು ಕೊನೆ ಟಿಪ್ಪಣಿಗಳು**


1. ಎಸ್.ಎ. ಗಿಲಾನಿ (ಸಂ), ದಕ್ಷಿಣ ಕನ್ನಡ ಡಿಸ್ಟ್ರಿಕ್ಟ್ ಗಝೆಟಿಯರ್, ಗವರ್ನ್‌ಮೆಂಟ್ ಆಫ್ ಕರ್ನಾಟಕ, ಕಾವೇರಿ ಭವನ, ಬೆಂಗಳೂರು, 2004. ಪು.5.

2. ಜಿ.ವಿ.ಜೋಷಿ ಮತ್ತು ಸುಧೀರ್‌ರಾಜ್‌ರವರು ತಮ್ಮ ಗ್ರಂಥವಾದ 'ಡೆವಲಪ್‌ಮೆಂಟ್ ಪಾಸಿಬಿಲಿಟೀಸ್ ಇನ್ ಕೋಸ್ಟಲ್ ಕರ್ನಾಟಕ'ದಲ್ಲಿ ಸರ್ ಥಾಮಸ್ ಮುನ್ರೋರವರು ಮದ್ರಾಸಿನ ಕಂದಾಯ ಇಲಾಖೆಗೆ ಜಿಲ್ಲೆಯ ಅಭಿವೃದ್ಧಿ ಸಾಧ್ಯತೆಗಳ ಕುರಿತಾಗಿ ಬರೆದ ಎರಡು ಪತ್ರಗಳ ಬಗ್ಗೆ ಉಲ್ಲೇಖಿಸಿರುತ್ತಾರೆ. ಸೆಂಟರ್ ಫಾರ್ ಡೆವಲಪ್‌ಮೆಂಟ್ ಆಫ್ ಕೋಸ್ಟಲ್ ಕರ್ನಾಟಕ, ಜಸ್ಟಿಸ್ ಕೆ.ಎಸ್.ಹೆಗ್ಡೆ ಇನ್ಸ್ಟಿಟ್ಯೂಟ್ ಆಫ್ ಮೆನೇಜ್‌ಮೆಂಟ್, 2009. ಪು.29–32.

3. ಸ್ಟಾಟೋಕ್ ಜೆ. 'ಮದ್ರಾಸ್ ಡಿಸ್ಟ್ರಿಕ್ಟ್ ಮಾನ್ಯುವಲ್ ಫಾರ್ ಸೌತ್ ಕೆನರಾ', ಮದ್ರಾಸ್, 1894. ಪು.68–73.

4. ಕೇಶವ ಉಚ್ಚಿಲ, 'ಶತಮಾನದ ಬೀಸುನೋಟ' ಇನ್ 'ಪೊಲಿ' ಮುಕುಂದ ಪ್ರಭು(ಸಂ.), ದಕ್ಷಿಣ ಕನ್ನಡ ಜಿಲ್ಲಾಡಳಿತ, ಮಂಗಳೂರು, 2000. ಪು.79–87.

5. ಅದೇ. ಪು.79–87.

6. ತಿಂಗಳಾಯ, ನವೀನ್‌ಚಂದ್ರ, ಕೆ. ಕರಾವಳಿ ಕರ್ನಾಟಕದ ಅಭಿವೃದ್ಧಿ: ಒಂದು ಐತಿಹಾಸಿಕ ದೃಷ್ಟಿ, ಇನ್: ಜೋಶಿ ಜಿ. ವಿ. ಮತ್ತು ನೋರ್ಬರ್ಟ್, ಲೋಬೊ. (ಸಂ.), ಕರಾವಳಿ ಕರ್ನಾಟಕದ ಅರ್ಥವ್ಯವಸ್ಥೆ: ಹಿಂದಿನಿಂದ ಇಂದಿನವರೆಗೆ. ಮಂಗಳ ಪ್ರಕಾಶನ, ಮಂಗಳೂರು, 2009. ಪು.5.

7. ಅದೇ. ಪು.5.

8. ಹರೀಶ್ ಎನ್, ಜಯಶೀಲ ಮತ್ತು ಅರಬಿ ಯು. ಕರಾವಳಿ ಕರ್ನಾಟಕದಲ್ಲಿ ಪ್ರವಾಸೋಧ್ಯಮ: ಅಂದು ಮತ್ತು ಇಂದು, ಇನ್: ಜೋಶಿ ಜಿ. ವಿ. ಮತ್ತು ನೋರ್ಬರ್ಟ್, ಲೋಬೊ. (ಸಂ.), ಕರಾವಳಿ ಕರ್ನಾಟಕದ ಅರ್ಥವ್ಯವಸ್ಥೆ: ಹಿಂದಿನಿಂದ ಇಂದಿನವರೆಗೆ. ಮಂಗಳ ಪ್ರಕಾಶನ, ಮಂಗಳೂರು, 2009. ಪು.27.

9. ಹನ್ಸ್, ವಿ. ಬಾಸಿಲ್.(2007). ಇನ್ಫ್ರಾಸ್ಟ್ರಕ್ಚರ್ ಫಾರ್ ರೂರಲ್ ಡೆವೆಲಪ್‌ಮೆಂಟ್ – ಎ ಕಂಪಾರೆಟಿವ್‌ಸ್ಟಡಿ ಇನ್ ದಕ್ಷಿಣ ಕನ್ನಡ ಡಿಸ್ಟ್ರಿಕ್ಟ್, ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಮಂಗಳೂರುವಿಶ್ವವಿದ್ಯಾನಿಲಯ, ಮಂಗಳೂರು. 2007, ಪು.60–65.

10. ವಿಘ್ನೇಶ್ವರ ವರ್ಮುಡಿ, ಕರಾವಳಿ ಕರ್ನಾಟಕದಲ್ಲಿ ಕೃಷಿ ಮತ್ತು ಅಭಿವೃದ್ಧಿ : ಅಂದು ಮತ್ತು ಇಂದು, ಜೋಶಿ ಜಿ. ವಿ. ಮತ್ತು ನೋರ್ಬರ್ಟ್, ಲೋಬೊ. (ಸಂ.), ಕರಾವಳಿ ಕರ್ನಾಟಕದ ಅರ್ಥ ವ್ಯವಸ್ಥೆ: ಹಿಂದಿನಿಂದ ಇಂದಿನವರೆಗೆ. ಮಂಗಳ ಪ್ರಕಾಶನ, ಮಂಗಳೂರು, 2009. ಪು.51.

11. ಕೆದಿಲಾಯ ರಮೇಶ್ ಎಚ್, ಕರಾವಳಿ ಕರ್ನಾಟಕದ ಮನಸ್ಸು ಮತ್ತು ಅಭಿವೃದ್ಧಿ, ಇನ್ ಜೋಶಿ ಜಿ. ವಿ. ಮತ್ತು ನೋರ್ಬರ್ಟ್ ಲೋಬೊ. (ಸಂ.), ಕರಾವಳಿ ಕರ್ನಾಟಕದ ಅರ್ಥ ವ್ಯವಸ್ಥೆ: ಹಿಂದಿನಿಂದ ಇಂದಿನವರೆಗೆ. ಮಂಗಳ ಪ್ರಕಾಶನ, ಮಂಗಳೂರು, 2009. ಪು.19.

12. ದಕ್ಷಿಣ ಕನ್ನಡ ಜಿಲ್ಲೆ ಮಾನವ ಅಭಿವೃದ್ಧಿ ವರದಿ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಮಂಗಳೂರು ಮತ್ತು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಕರ್ನಾಟಕ ಸರಕಾರ, ಬೆಂಗಳೂರು, 2014. ಪು.035.

13. ಅದೇ. ಪು.036–037.

14. ಅದೇ. ಪು.039.

15. ಅದೇ. ಪು.041.

16. ಅದೇ. ಪು.042.

17. ಅದೇ. ಪು.041.

18. ಜೋಶಿ, ಜಿ. ವಿ. (2009). ಕರಾವಳಿ ಕರ್ನಾಟಕದ ಅರ್ಥವ್ಯವಸ್ಥೆ: ಹಿಂದಿನ ಅನುಭವಗಳು ಮತ್ತು ಇಂದಿನ ವಿದ್ಯಮಾನಗಳು. ಇನ್: ಜೋಶಿ ಜಿ.ವಿ. ಮತ್ತು ನೋರ್ಬರ್ಟ್, ಲೋಬೊ. (ಸಂ.), ಕರಾವಳಿ ಕರ್ನಾಟಕದ ಅರ್ಥವ್ಯವಸ್ಥೆ: ಹಿಂದಿನಿಂದ ಇಂದಿನವರೆಗೆ, ಮಂಗಳ ಪ್ರಕಾಶನ, ಮಂಗಳೂರು, 2009, ಪು.1.

19. ದಕ್ಷಿಣ ಕನ್ನಡ ಜಿಲ್ಲೆ ಮಾನವ ಅಭಿವೃದ್ಧಿ ವರದಿ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಮಂಗಳೂರು ಮತ್ತು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಕರ್ನಾಟಕ ಸರಕಾರ, ಬೆಂಗಳೂರು, 2014. ಪು.043–044.

20. ಅದೇ. ಪು.049.

21. ಅದೇ. ಪು.050.

22. ಅದೇ. ಪು.004.

23. ಅದೇ. ಪು.004.

24. ಅದೇ. ಪು.007.

25. ವಿವಿಧ ದಿನಪತ್ರಿಕೆಗಳಿಂದ

26. ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿ

# ಅಧ್ಯಾಯ: ನಾಲ್ಕು

# ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನ

4.1 ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನ

4.2 ಗ್ರಾಮೀಣ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನ.

4.3 ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ವಿಶ್ಲೇಷಣೆ.

4.4 ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ಬಗ್ಗೆ ಜನರ ಪ್ರತಿಕ್ರಿಯೆ

# ಅಧ್ಯಾಯ: ನಾಲ್ಕು

# ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನ

**ಪೀಠಿಕೆ**

ತ್ಯಾಜ್ಯ ರಾಶಿ ನಗರಗಳಲ್ಲಿ ಮಾತ್ರವಲ್ಲದೆ ಗ್ರಾಮೀಣ ಪ್ರದೇಶಗಳಲ್ಲೂ ಹೆಚ್ಚಾಗುತ್ತಿರುವುದು ಆತಂಕಕಾರಿಯಾಗಿದೆ. ಆಧುನಿಕ ಜೀವನ ಶೈಲಿ ಗ್ರಾಮೀಣ ಪ್ರದೇಶಕ್ಕೂ ದಾಳಿ ಇಟ್ಟಿದೆ. ವಿಶ್ವ ಬ್ಯಾಂಕ್ ವರದಿಯು (1998)[1] 'ನಗರೀಕರಣ ಮತ್ತು ಹೆಚ್ಚುತ್ತಿರುವ ಆದಾಯದಿಂದಾಗಿ ಸಂಪನ್ಮೂಲಗಳ ಬಳಕೆ ಹೆಚ್ಚಿದೆ. ಇದರೊಂದಿಗೆ ತ್ಯಾಜ್ಯ ಉತ್ಪಾದನಾ ಪ್ರಮಾಣವೂ ಹೆಚ್ಚಿದೆ.ನಗರ ಪ್ರದೇಶಗಳ ಜನರು ಉಪಯೋಗಿಸುವ ಸಂಪನ್ಮೂಲಗಳು ಗ್ರಾಮೀಣ ಪ್ರದೇಶಗಳ ಜನರು ಉಪಯೋಗಿಸುವ ಸಂಪನ್ಮೂಲದ ಎರಡರಷ್ಟಿದೆ. ಈ ನಗರ–ಗ್ರಾಮೀಣ ತ್ಯಾಜ್ಯ ಉತ್ಪಾದನಾ ವ್ಯತ್ಯಾಸವು ಇತರ ಏಷ್ಯಾದ ರಾಷ್ಟ್ರಗಳಾದ ಬಾಂಗ್ಲಾದೇಶ, ಪಾಕಿಸ್ಥಾನ, ಶ್ರೀಲಂಕಾಗಳಲ್ಲಿ ಕಂಡುಬರುತ್ತದೆ' ಎಂದು ತಿಳಿಸಿದೆ. ಅಭಿವೃದ್ಧಿ ಮತ್ತು ತ್ಯಾಜ್ಯ ಉತ್ಪಾದನೆಗಿರುವ ನೇರ ಸಂಬಂಧವನ್ನು ವಿಶ್ವಬ್ಯಾಂಕಿನ ಈ ವರದಿ ಸಾಬೀತುಪಡಿಸುತ್ತದೆ.

ಮಹೋಪಾತ್ರ (1999)[2]ಇವರು ತಿಳಿಸಿರುವಂತೆ, ತ್ಯಾಜ್ಯ ನಿರ್ವಹಣೆ ಸ್ಥಳೀಯ ಸರಕಾರಗಳ ಪ್ರಾಥಮಿಕ ಕಾರ್ಯಗಳ ಪಟ್ಟಿಯಲ್ಲಿದೆ. ಇವುಗಳ ತ್ಯಾಜ್ಯ ನಿರ್ವಹಣಾ ಆಡಳಿತ ಕ್ರಮಗಳಲ್ಲಿ ಎರಡು ವಿಧಗಳು. 1. ನಿವಾರಕ ಕ್ರಮಗಳು ಮತ್ತು 2. ಪರಿಹಾರ ಆಡಳಿತ ಕ್ರಮಗಳು. ಇವುಗಳಲ್ಲಿ ನಿವಾರಕ ಕ್ರಮಗಳನ್ನು ಈ ಮೂಲಕ ಕೈಗೊಳ್ಳಬಹುದು. 1. ಹತೋಟಿ ಮತ್ತು ಹಿಡಿತ ಪದ್ಧತಿ 2. ಮಾರುಕಟ್ಟೆ ಆಧಾರಿತ (ತೆರಿಗೆ, ಪ್ರಚಾರ, ಸಹಾಯಧನ, ಉತ್ತೇಜಕಗಳು ಇತ್ಯಾದಿ) ಪರಿಕರಗಳ ಮಾರ್ಗ.ಹಾಗೆಯೇ ಪರಿಹಾರ ಆಡಳಿತ ಕ್ರಮಗಳೆಂದರೆ 1. ಹತೋಟಿ ಮತ್ತು ಹಿಡಿತ ಪದ್ಧತಿ 2. ಮಾರುಕಟ್ಟೆ ಆಧಾರಿತ ಪ್ರಚಾರ, ಪರಿಕರಗಳ ಮಾರ್ಗ ಮತ್ತು 3. ಆಯ್ದ ಸೇವೆಗಳ ಖಾಸಗೀಕರಣ.

ಬರುಚಾ ಇರಾಚ್ (2005)[3] ಇವರ ಅಭಿಪ್ರಾಯದಂತೆ ದೇಶದಾದ್ಯಂತ ನಗರ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ನಿರ್ವಹಣೆಗೆ ಅನಿವಾರ್ಯವಾಗಿ ಆದ್ಯತೆ ನೀಡಲೇಬೇಕಾದ ಪರಿಸ್ಥಿತಿ ಬಂದಿರುವುದರಿಂದ ಸೂಕ್ತ ನಿಯಮಾವಳಿಗಳನ್ನು ಮತ್ತು ಆಡಳಿತ ವ್ಯವಸ್ಥೆಯನ್ನು ರೂಪಿಸಿಕೊಂಡಿವೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳು ಹೊರಡಿಸಿರುವ ನಿಯಮಾವಳಿಗಳನ್ನು ಬಳಸಿಕೊಂಡು ನಿರ್ವಹಣೆ ಮಾಡುತ್ತಿವೆ. ಆರೋಗ್ಯ ಮತ್ತು ಸ್ವಚ್ಛತೆಯ ದೃಷ್ಟಿಯಿಂದ ತ್ಯಾಜ್ಯ ನಿರ್ವಹಣೆಯ ಅನುಷ್ಠಾನ ಕೇವಲ ನಗರಗಳಲ್ಲಿ ಮಾತ್ರವಲ್ಲ, ಗ್ರಾಮೀಣ ಪ್ರದೇಶಗಳಲ್ಲೂ ಆಗಬೇಕಾದ ಅವಶ್ಯಕತೆಯಿದೆ. ಇತ್ತೀಚಿನ ಕೆಲವು ದಶಕಗಳ ಹಿಂದೆ ತ್ಯಾಜ್ಯ ನಿರ್ವಹಣೆಯು ನಗರ ಸಂಸ್ಥೆಗಳು ಹಾಗೂ ಸಾರ್ವಜನಿಕರಿಗೆ ಒಂದು ಪ್ರಮುಖ ವಿಷಯವಾಗಿರಲಿಲ್ಲ. ಮೇಲಾಗಿ ಹೆಚ್ಚಿನ ನಗರಗಳಲ್ಲಿ ತ್ಯಾಜ್ಯ ರಾಶಿ ಹಾಕಲು ಸರಿಯಾದ ಜಾಗಗಳೇ ಸಿಗುತ್ತಿಲ್ಲ. ಆರೋಗ್ಯ ಮತ್ತು ಪರಿಸರದ ದೃಷ್ಟಿಯಿಂದ ತ್ಯಾಜ್ಯವನ್ನು ರಾಶಿ ಹಾಕುವುದು ಅಥವಾ ಸುಡುವುದು ಯೋಗ್ಯವಲ್ಲ. ಗ್ರಾಮೀಣ ಮಟ್ಟದಲ್ಲಿ ಇವತ್ತಿಗೂ ತ್ಯಾಜ್ಯ ನಿರ್ವಹಣೆಯು ಸಮರ್ಪಕವಾಗಿ ನಡೆಯುತ್ತಿಲ್ಲ ಎಂದಿದ್ದಾರೆ.

ಲಿಂಗರಾಜ ಪತ್ರಾವೊ ಮತ್ತು ಇತರರು (2012)[4] ಒರಿಸ್ಸಾದ ಭುವನೇಶ್ವರ್ ಮತ್ತು ಮಹಾರಾಷ್ಟ್ರದ ಮುಂಬೈ ನಗರದಲ್ಲಿ ನಡೆಸಿದ ಅಧ್ಯಯನದ ಪ್ರಕಾರ ಈ ನಗರಗಳಲ್ಲಿ ಶಿಸ್ತುಬದ್ಧವಾದ ಮತ್ತು ವೈಜ್ಞಾನಿಕವಾದ ತ್ಯಾಜ್ಯ ಸಂಗ್ರಹ, ವಿಭಜನೆ, ಸಾಗಾಟ ಮತ್ತು ವಿಲೇವಾರಿ ವಿಧಾನಗಳಿಲ್ಲ. ತ್ಯಾಜ್ಯ ಸಂಗ್ರಹದ ಪ್ರಮಾಣ ತೀರ ಕೆಳಮಟ್ಟದಲ್ಲಿದ್ದು, ಕಾರ್ಮಿಕರ ಬಳಕೆ, ಹಣ ಹಾಗೂ ಯಂತ್ರೋಪಕರಣಗಳ ಬಳಕೆ ತೃಪ್ತಿದಾಯಕವಾಗಿಲ್ಲ. ತೆರೆದ ಚರಂಡಿಗಳಲ್ಲಿ ಘನತ್ಯಾಜ್ಯ ತುಂಬಿರುವ ದೃಶ್ಯಗಳು ತೀರಾ ಸಾಮಾನ್ಯವಾಗಿವೆ. ಇದರಿಂದ ಆ ಪ್ರದೇಶಗಳಲ್ಲಿ ಸೊಳ್ಳೆ ಉತ್ಪತ್ತಿ ಹೆಚ್ಚಾಗಿ ಸಾಂಕ್ರಾಮಿಕ ರೋಗಗಳು ಕಾಣಿಸಿಕೊಂಡಿವೆ, ತೆರೆದ ಪ್ರದೇಶಗಳಲ್ಲಿ ಮನಬಂದಂತೆ ತ್ಯಾಜ್ಯಗಳನ್ನು ವಿಭಜಿಸದೆ ರಾಶಿ ಹಾಕುವುದು, ಅವೈಜ್ಞಾನಿಕ ಭೂಭರ್ತಿ, ತೆರೆದ ಪ್ರದೇಶಗಳಲ್ಲಿ ದಹನ ಕುಲುಮೆಗಳ ಅಳವಡಿಕೆಯಿಂದಾಗಿ ಜಲಮಾಲಿನ್ಯ ಹೆಚ್ಚಾಗಿದೆ. ಆಸ್ಪತ್ರೆ ತ್ಯಾಜ್ಯ ಮುಂತಾದ ಅಪಾಯಕಾರಿ ತ್ಯಾಜ್ಯಗಳ ಸಂಗ್ರಹ ಹಾಗೂ ವಿಲೇವಾರಿಯನ್ನು ಕಡೆಗಣಿಸಲಾಗಿದೆ ಎಂದಿದ್ದಾರೆ.

ಸ್ಥಳೀಯ ಸಂಸ್ಥೆಗಳು ಜನಸಮುದಾಯವನ್ನು ಹೇಗೆ ಸಕ್ರೀಯವಾಗಿ ತೊಡಗಿಸಿಕೊಳ್ಳಬಹುದು ಎನ್ನುವುದಕ್ಕೆ 'ಸೂರ್ಯಪೇಟೆ' ಮಾದರಿ ಒಂದು ಉದಾಹರಣೆ (ಜಗನ್ನಾಥ್, 2008)[5] ಆಂಧ್ರ ಪ್ರದೇಶದ ನೆಲಗೊಂಡ ಜಿಲ್ಲೆಯ 1.3 ಲಕ್ಷ ಜನಸಂಖ್ಯೆ ಹೊಂದಿರುವ 34 ಚ.ಕಿ.ಮೀ ನಗರ ಪ್ರದೇಶದ 'ಸೂರ್ಯಪೇಟೆ'ಯಲ್ಲಿ 2002ರಲ್ಲಿ ನಗರದಲ್ಲಿದ್ದ 360 ಕಸದ ತೊಟ್ಟಿಗಳನ್ನು ಬೀದಿಗಳಿಂದ 235 ಪೌರಕಾರ್ಮಿಕರ ನೆರವಿನಿಂದ ತೆಗೆದುಹಾಕಲಾಯಿತು. ಪ್ರತೀ ದಿನ 42 ಟನ್ನುಗಳ ಕಸವನ್ನು ಸಂಗ್ರಹಿಸಲು, ಮೂಲದಲ್ಲೇ ಕಸ ವಿಭಜನೆಗೊಳಿಸಲು ಬೀದಿ ನಾಟಕ, ಬೀದಿ ಮಟ್ಟದ

ಸಭೆ, ಪ್ರತೀ ಮನೆಗೆ ಕರಪತ್ರ, ನಗರ ಸಭೆ ಸಿಬ್ಬಂದಿ ಮನೆ ಒಡತಿಯರಿಗೆ ಅರಿಶಿನ ಕುಂಕುಮದಿಂದ ಆಹ್ವಾನ ಹೀಗೆ ವಿನೂತನ ಸಾಂಸ್ಕೃತಿಕ ವಿಧಾನಗಳನ್ನು ಬಳಸಿಕೊಂಡು ಜನಸಮುದಾಯವನ್ನು ಸ್ವಚ್ಛತೆಯ ಕಾರ್ಯದಲ್ಲಿ ತೊಡಗಿಸಲಾಯಿತು.

ಕಸ ನಿರ್ವಹಣೆಯಲ್ಲಿ ಜನಸಮುದಾಯವನ್ನು ತೀವ್ರವಾಗಿ ತೊಡಗಿಸಿಕೊಳ್ಳಲು ಸೂರ್ಯಪೇಟೆ ನಗರ ಸಭೆ ಆಯುಕ್ತರು ವಿವಿಧ ಸಾಮಾಜಿಕ ಸಮಸ್ಯೆಗಳನ್ನು ಜನರ ಮುಂದಿಟ್ಟರು. ಮದುವೆಗೆ ಸರಿಯಾದ ವಯಸ್ಸು, ಶಿಕ್ಷಣದ ಮಹತ್ವ, ಕುಟುಂಬ ಯೋಜನೆ ಪಾಲನೆ, ಗರ್ಭಿಣಿಯರಿಗೆ ಆರೋಗ್ಯ ಪಾಲನೆ, ಸಾಂಕ್ರಾಮಿಕ ರೋಗಗಳ ನಿವಾರಣೆ ಮತ್ತಿತರ ಸಾಮಾಜಿಕವಾಗಿ ಪ್ರಸ್ತುತವಾದ ಗಂಭೀರ ವಿಷಯಗಳನ್ನು ಕೈಗೆತ್ತಿಕೊಂಡು ಚರ್ಚೆಗೆ ಸಮುದಾಯಗಳನ್ನು ತೊಡಗಿಸಲಾಯಿತು. ಪರಿಣಾಮವಾಗಿ ಸಾರ್ವಜನಿಕರಲ್ಲಿ ಪರಿಸರ ಪ್ರಜ್ಞೆಯು ಹೆಚ್ಚಾಯಿತು. ಕಸ ಸಂಗ್ರಹಣೆಗಾಗಿ ನಗರ ಸಭೆಯು ಪ್ರತಿಯೊಂದು ಮನೆಗೆ ಸರಾಸರಿ 100 ರೂಪಾಯಿಯಂತೆ ಖರ್ಚು ಮಾಡಿತು. ಕೇವಲ ಬೇರ್ಪಡಿಸಿದ ಪ್ಲಾಸ್ಟಿಕ್ ಕಸದಿಂದ ರೂ 26,000 ಲಾಭವನ್ನು ಮೊದಲ ವರ್ಷದಲ್ಲಿಯೇ ಸೂರ್ಯಪೇಟೆ ಪಡೆಯಿತು. ಸೂರ್ಯಪೇಟೆ ದೇಶದ "ಕಸದ ತೊಟ್ಟಿರಹಿತ–ಶೂನ್ಯ ಕಸ ವಸತಿ ಸ್ಥಳವಾಗಿ" ಅಂತರಾಷ್ಟ್ರೀಯ ಗುಣಕಾತರಿ ಐ ಎಸ್ ಒ–14000–2004 ಅರ್ಹತೆಯನ್ನು ಪಡೆದ ಮೊಟ್ಟ ಮೊದಲ ನಗರವಾಯಿತು.

ತ್ಯಾಜ್ಯ ನಿರ್ವಹಣೆಯ ಅನುಷ್ಠಾನವು ಮುಖ್ಯವಾಗಿ ಮೂಲದಲ್ಲಿ ತ್ಯಾಜ್ಯ ವಿಭಜನೆ, ತ್ಯಾಜ್ಯ ಸಂಗ್ರಹಣೆ, ಸಾಗಾಟ, ತ್ಯಾಜ್ಯ ಬಳಕೆ, ಪುನರುತ್ಪಾದನೆ, ವಿಲೇವಾರಿ ವಿಧಾನಗಳು ಮುಂತಾದ ಅಂಶಗಳನ್ನು ಒಳಗೊಂಡಿವೆ. ಅಧ್ಯಯನ ವ್ಯಾಪ್ತಿಯಲ್ಲಿ ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳು ಯಾವ ರೀತಿ ಅನುಷ್ಠಾನಗೊಳಿಸಿವೆ ಎಂಬುದನ್ನು ಅಧ್ಯಯನ ಮಾಡುವ ಉದ್ದೇಶದಿಂದ 8 ನಗರ ಸ್ಥಳೀಯ ಸಂಸ್ಥೆಗಳು ಹಾಗೂ 21 ಗ್ರಾಮೀಣ ಸ್ಥಳೀಯ ಸಂಸ್ಥೆಗಳನ್ನು ಸಂದರ್ಶಿಸಿ, ಅಧಿಕಾರಿಗಳಿಂದ ಪ್ರಶ್ನಾವಳಿ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಈ ಅಧ್ಯಯನದ ಮುಂದಿನ ಭಾಗದಲ್ಲಿ ಸಂದರ್ಶಿಸಲಾದ ನಗರ ಹಾಗೂ ಗ್ರಾಮೀಣ ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ನಿರ್ವಹಣಾ ಅನುಷ್ಠಾನ ಹೇಗಿದೆ ಎಂಬು ಸ್ಥೂಲ ವಿವರಣೆಯನ್ನು ನೀಡಲಾಗಿದೆ ಮತ್ತು ಕ್ಷೇತ್ರಕಾರ್ಯದಲ್ಲಿ ದೊರೆತ ಅಂಕಿ ಅಂಶಗಳ ಆಧಾರದಲ್ಲಿ ತ್ಯಾಜ್ಯ ನಿರ್ವಹಣೆಯ ವಿವಿಧ ಆಯಾಮಗಳನ್ನು ಚರ್ಚಿಸಲಾಗಿದೆ.

### 4.1. ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಸ್ತುತ (2017) ಒಟ್ಟು 10 ನಗರ ಸ್ಥಳೀಯ ಸಂಸ್ಥೆಗಳಿದ್ದು ಅವುಗಳಲ್ಲಿ ಒಂದು ಮಹಾನಗರ ಪಾಲಿಕೆ, 2 ನಗರಸಭೆ, 3 ಪುರಸಭೆ ಮತ್ತು 4 ಪಟ್ಟಣ

ಪಂಚಾಯತ್‌ಗಳಿವೆ. ಹೊಸದಾಗಿ 2014-15ರಲ್ಲಿ ರಚನೆಗೊಂಡ ವಿಟ್ಲ ಮತ್ತು ಕೋಟೆಕಾರು ಪಟ್ಟಣ ಪಂಚಾಯತ್‌ಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿಲ್ಲ. ಆದರೆ ವಿಟ್ಲ ಗ್ರಾಮ ಪಂಚಾಯತ್ ಆಗಿದ್ದಾಗ ಯಾವ ರೀತಿ ನಿರ್ವಹಣೆ ಮಾಡುತ್ತಿತ್ತು ಎನ್ನುವುದನ್ನು ಅಧ್ಯಯನ ಮಾಡಲಾಗಿದೆ. ಕೋಷ್ಟಕ 4.1 ರಲ್ಲಿ ತಾಲೂಕುವಾರು ನಗರ ಸ್ಥಳೀಯ ಸಂಸ್ಥೆಗಳ ವಿವರಗಳನ್ನು ನೀಡಲಾಗಿದೆ

**ಕೋಷ್ಟಕ: 4.1**

**ದಕ್ಷಿಣ ಕನ್ನಡ ಜಿಲ್ಲೆಯ ತಾಲೂಕುವಾರು ನಗರ ಸ್ಥಳೀಯ ಸಂಸ್ಥೆಗಳ ವಿವರ**

| ಕ್ರ. ಸಂ. | ತಾಲೂಕುಗಳು | ನಗರ ಸ್ಥಳೀಯ ಸಂಸ್ಥೆಗಳು | | | | |
|---|---|---|---|---|---|---|
| | | ನಗರ ಪಾಲಿಕೆ | ನಗರ ಸಭೆ | ಪುರಸಭೆ | ಪಟ್ಟಣ ಪಂಚಾಯತು | ಒಟ್ಟು |
| 1 | ಬಂಟ್ವಾಳ | – | – | ಬಂಟ್ವಾಳ | ವಿಟ್ಲ* | 2 |
| 2 | ಬೆಳ್ತಂಗಡಿ | – | – | – | ಬೆಳ್ತಂಗಡಿ | 1 |
| 3 | ಮಂಗಳೂರು | ಮಂಗಳೂರು | ಉಳ್ಳಾಲ | ಮೂಡಬಿದ್ರಿ ಮುಲ್ಕಿ | ಕೋಟೆಕಾರು* | 5 |
| 4 | ಪುತ್ತೂರು | – | ಪುತ್ತೂರು | – | – | 1 |
| 5 | ಸುಳ್ಯ | – | – | – | ಸುಳ್ಯ | 1 |
| ಒಟ್ಟು | 5 | 1 | 2 | 3 | 4 | 10 |

**ಮೂಲ:** ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ-ಅಂಶಗಳ ನೋಟ–2014–15

**ಪ್ರಕಟಣೆ:** ಜಿಲ್ಲಾ ಸಂಖ್ಯಾ ಸಂಗ್ರಹಣಾ ಅಧಿಕಾರಿ, ದಕ್ಷಿಣ ಕನ್ನಡ, ಮಂಗಳೂರು.

*** ಹೊಸದಾಗಿ 2014–15 ರಲ್ಲಿ ರಚನೆಗೊಂಡ ಪಟ್ಟಣ ಪಂಚಾಯತ್‌ಗಳು**

**ಮಂಗಳೂರು ಮಹಾನಗರ ಪಾಲಿಕೆ**

ಮದ್ರಾಸು ನಗರ ಅಭಿವೃದ್ಧಿ ಕಾಯಿದೆ 1865ರ ಪ್ರಕಾರ 1866 ಮೇ 23ರಂದು ಮಂಗಳೂರು ನಗರವು ಮುನ್ಸಿಪಾಲ್ ಆಡಳಿತಕ್ಕೆ ಒಳಪಟ್ಟಿತು. ಸ್ಥಳೀಯ ಆಡಳಿತ ಜಾರಿಗೆ ಬರುವ ಮೊದಲು ಜಿಲ್ಲಾ ಕಲೆಕ್ಟರ್ ಈ ನಗರದ ಆಡಳಿತ ನಡೆಸುತ್ತಿದ್ದರು. ಮಂಗಳೂರು ನಗರದ ಮುನ್ಸಿಪಾಲ್ ಕೌನ್ಸಿಲಿನ ಪ್ರಥಮ ಅಧ್ಯಕ್ಷರು ಆಗಿನ ಜಿಲ್ಲಾ ಕಲೆಕ್ಟರರು ಆಗಿದ್ದ ಡಬ್ಲ್ಯೂ.ಎಂ.ಕಾಡೆಲ್ಲೋ ಇವರು. 1909 ಫೆಬ್ರವರಿ 22ರವರೆಗೆ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿಯೇ ಪಾಲಿಕೆ ಚಟುವಟಿಕೆಗಳು ನಡೆಯುತ್ತಿದ್ದವು. ಮುಂದೆ ಮುನ್ಸಿಪಾಲಿಟಿಯು ತನ್ನ ಸ್ವಂತ ಕಟ್ಟಡಕ್ಕೆ ಸ್ಥಳಾಂತರಗೊಂಡಿತು. ಈ ಕೌನ್ಸಿಲ್ ಏಳು ಸದಸ್ಯರನ್ನೊಳಗೊಂಡಿದ್ದು, ಪ್ರಾರಂಭದಲ್ಲಿ ಈ ಎಲ್ಲಾ

ಸದಸ್ಯರು ಐರೋಪ್ಯರೇ ಆಗಿದ್ದರು. ಉಪಾಧ್ಯಕ್ಷರು ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದರು. ಆಗ ಮುನ್ಸಿಪಾಲಿಟಿಗೆ ಸುಮಾರು 15,000 ರೂಪಾಯಿಗಳಷ್ಟು ಆದಾಯ ಬರುತ್ತಿತ್ತು. 1866ರಲ್ಲಿ ಈ ನಗರದ ಜನಸಂಖ್ಯೆ 28,000 ಹಾಗೂ ನಗರದ ವ್ಯಾಪ್ತಿಯು ಸುಮಾರು ಒಂದು ಚದರ ಮೈಲು ಇದ್ದಿತು. 1871ರಲ್ಲಿ ಜನಸಂಖ್ಯೆ 29712 ಹಾಗೂ 6619 ಮನೆಗಳು ಇದ್ದು ಅದರಲ್ಲಿ 4341 ಮನೆಗಳು ಶೌಚಾಲಯವನ್ನು ಹೊಂದಿತ್ತು. ನಗರದ ಮೊಟ್ಟಮೊದಲ ಆಸ್ಪತ್ರೆ ಲೇಡಿಗೋಷನ್ 1868ರಲ್ಲಿ ಪ್ರಾರಂಭವಾಯಿತು. ಮುಂದೆ ರಾಜ್ಯಗಳ ಮರುವಿಂಗಡನೆಯಾದಾಗ 1964ರ ಮೈಸೂರು ಮುನ್ಸಿಪಾಲ್ ಕಾಯಿದೆಯು 1 ಏಪ್ರಿಲ್ 1965ರಂದು ಇಡೀ ಕರ್ನಾಟಕ ರಾಜ್ಯದಾದ್ಯಂತ ಜಾರಿಗೆ ಬಂದಿತು ಹಾಗೂ ಈ ಕಾಯಿದೆಯ ಪ್ರಕಾರ ಮಂಗಳೂರು ಮುನ್ಸಿಪಾಲಿಟಿಯು ಮಹಾನಗರ ಪಾಲಿಕೆಯಾಗಿ 1980, ಜುಲೈ 3ರಂದು ಸ್ಥಾಪಿತಗೊಂಡಿದ್ದು, 1996–97ರಲ್ಲಿ ಸುರತ್ಕಲ್ ಮುನ್ಸಿಪಾಲಿಟಿ, ಕಾಟಿಪಳ್ಳ ಅದಿಸೂಚಿತ ಪ್ರದೇಶ, ಪಣಂಬೂರು, ಬೈಕಂಪಾಡಿ, ಕುಳಾಯಿ, ಹೊಸಬೆಟ್ಟು ಹಳ್ಳಿಗಳನ್ನೂ ಪಾಲಿಕೆಗೆ ಸೇರಿಸಲಾಯಿತು. 2002, ಏಪ್ರಿಲ್‌ನಲ್ಲಿ ಬಜಾಲ್, ಕಣ್ಣೂರು, ಕುಡುಪು ಮತ್ತು ತಿರುವೈಲ್ ಪಂಚಾಯತುಗಳು ಮಂಗಳೂರು ನಗರಪಾಲಿಕೆಯೊಂದಿಗೆ ಸೇರಿಕೊಂಡವು.[6]

ಮಂಗಳೂರು ನಗರಪಾಲಿಕೆಯ ಮೇಯರ್‌ರವರು ಪಾಲಿಕೆಯ ಅಧ್ಯಕ್ಷರಾಗಿರುತ್ತಾರೆ. ಪ್ರಸ್ತುತ ಇಲ್ಲಿ 2001ರ ಜನಗಣತಿಯ ಪ್ರಕಾರ 4,19,306 ಜನಸಂಖ್ಯೆ, ಹಾಗೂ 132.5 ಚದರ ಕಿಲೋಮೀಟರ್ ವ್ಯಾಪ್ತಿಯ ಪ್ರದೇಶವಿದೆ. ಇದನ್ನು 60 ವಾರ್ಡುಗಳಾಗಿ ಬೇರ್ಪಡಿಸಿದ್ದು, ಈ ವಾರ್ಡ್‌ಗಳಿಗೊಬ್ಬೊಬ್ಬರಂತೆ ಕಾರ್ಪೋರೇಟರ್‌ಗಳನ್ನು ಚುನಾಯಿಸಲಾಗುತ್ತದೆ. 5 ವರುಷಗಳಿಗೊಮ್ಮೆ ಕಾರ್ಪೋರೇಷನ್ ಚುನಾವಣೆಗಳು ನಡೆಯುತ್ತಿದ್ದು, ಒಂದು ವರುಷದ ಅವಧಿಗೆ ಒಬ್ಬ ಮೇಯರ್ ಹಾಗೂ ಉಪಮೇಯರನ್ನು ಕಾರ್ಪೋರೇಟರ್‌ಗಳು ಪ್ರಸ್ತುತ ಜಾರಿಯಲ್ಲಿರುವ ಮೀಸಲಾತಿ ಆಧಾರದಲ್ಲಿ ಚುನಾಯಿಸುತ್ತಾರೆ. ಪ್ರಸ್ತುತ ಮಂಗಳೂರು ಮಹಾನಗರ ಪಾಲಿಕೆಯ ಕಛೇರಿಯು ಎಂ.ಜಿ.ರೋಡ್‌ನ ಲಾಲ್‌ಭಾಗ್‌ನಲ್ಲಿದೆ.

## ಘನತ್ಯಾಜ್ಯ ನಿರ್ವಹಣೆಯ ಆಡಳಿತ ವ್ಯವಸ್ಥೆ

ಎಂ.ಎಸ್.ಡಬ್ಲ್ಯೂ (ಮುನ್ಸಿಪಾಲ್ ಸೋಲಿಡ್ ವೇಸ್ಟ್) 2000ದ ನಿಯಮಾನುಸಾರ ಮಂಗಳೂರು ನಗರದ ಜನರಿಗೆ ನೈರ್ಮಲ್ಯೀಕರಣ, ಸಾರ್ವಜನಿಕ ಆರೋಗ್ಯ, ತ್ಯಾಜ್ಯ ಸಂಗ್ರಹ ನಿರ್ವಹಣೆ ಮೊದಲಾದ ಸೇವೆಗಳನ್ನು ಒದಗಿಸುವಲ್ಲಿ ಮಂಗಳೂರು ಮಹಾನಗರಪಾಲಿಕೆಯ ಆಡಳಿತದಲ್ಲಿರುವ ಪರಿಸರ ಮತ್ತು ಆರೋಗ್ಯ ವಿಭಾಗ ಮಹತ್ವದ ಪಾತ್ರವನ್ನು ವಹಿಸುತ್ತಿದೆ. ಇವು ನಿರ್ವಹಿಸುವ ಕಾರ್ಯಗಳಲ್ಲಿ ತ್ಯಾಜ್ಯ ನಿರ್ವಹಣಾ ಸಂಬಂಧಿ ಕಾರ್ಯಗಳು ಮಹತ್ವ

ವಾದುದಾಗಿದೆ. ಆದರೆ ಕಳೆದ ಹಲವು ವರ್ಷಗಳಿಂದ ತ್ವರಿತ ನಗರೀಕರಣ, ಜೀವನ ಶೈಲಿಯ ಬದಲಾವಣೆ ಇವು ನಗರ ಪ್ರದೇಶಗಳಲ್ಲಿ ತ್ಯಾಜ್ಯದ ಮಟ್ಟವನ್ನು ಹೆಚ್ಚಿಸಿರುವುದು ಬಹುದೊಡ್ಡ ಸಮಸ್ಯೆಯಾಗಿದೆ. ನಗರಪಾಲಿಕೆಯು ತ್ಯಾಜ್ಯ ನಿರ್ವಹಣೆಯ ಕಾರ್ಯವನ್ನು ಉತ್ತಮತೆಯಿಂದ ನಿರ್ವಹಿಸಿದಲ್ಲಿ ಮುಂಗಡ ಪತ್ರಕ್ಕೆ ಒಂದು ಭಾಗವನ್ನು ಕೊಡುಗೆಯಾಗಿ ನೀಡಬಲ್ಲದು. ಆದರೆ ನಗರಪಾಲಿಕೆಯು ತನ್ನ ಕಾರ್ಯದಲ್ಲಿ ಅಸಫಲತೆಯನ್ನು ಕಂಡುಕೊಳ್ಳುತ್ತಿದೆ. ಪ್ರಾರಂಭದ ವರ್ಷಗಳಲ್ಲಿ ಅವೈಜ್ಞಾನಿಕವಾದ ರೀತಿಯಲ್ಲಿ ತ್ಯಾಜ್ಯವನ್ನು ಬಯಲು ಪ್ರದೇಶದಲ್ಲಿ ಶೇಖರಣೆ ಮಾಡಿ ಪರಿಸರವನ್ನು ಹದಗೆಡಿಸುವ ಹಾಗೆ ಮಾಡುತ್ತಿತ್ತು. ಇದರಿಂದ ಅಂತರ್ಜಲ ಸಂಗ್ರಹಣೆಗೂ ಸಮಸ್ಯೆಯಾಗುತ್ತಿತ್ತು. ಆದರೆ ಇತ್ತೀಚಿನ ವರ್ಷಗಳಲ್ಲಿ ಆಧುನಿಕ ವಿಧಾನಗಳನ್ನು ಅಳವಡಿಸುವುದರೊಂದಿಗೆ ಕೆಲವು ಆಡಳಿತಾತ್ಮಕ ನಿರ್ಧಾರಗಳನ್ನು ಕೈಗೊಳ್ಳುವುದರ ಮೂಲಕ ಹೆಚ್ಚಿನ ಯಶಸ್ಸನ್ನು ಸಾಧಿಸಿದೆ.

ಗೃಹತ್ಯಾಜ್ಯ ನಿರ್ವಹಣೆಯ ಅನುಷ್ಠಾನವು ಮುಖ್ಯವಾಗಿ ಮೂಲದಲ್ಲೇ ತ್ಯಾಜ್ಯ ವಿಭಜನೆ ಗೊಳಿಸುವುದು, ಪ್ರತೀ ಮನೆಬಾಗಿಲಿಗೆ ಹೋಗಿ ಕಸ ಸಂಗ್ರಹಿಸುವುದು, ದ್ವಿತೀಯ ಹಂತದ ಸಂಗ್ರಹಣೆ, ಸಾಗಾಟ ವ್ಯವಸ್ಥೆ, ಶುದ್ಧೀಕರಣ ಮತ್ತು ಸಂಸ್ಕರಣ ವಿಧಾನಗಳು ಮತ್ತು ವಿಲೇವಾರಿ/ನಾಶಗೊಳಿಸುವಿಕೆಯನ್ನು ಒಳಗೊಂಡಿದೆ. ಹೆಚ್ಚಿನ ಗೃಹತ್ಯಾಜ್ಯಗಳನ್ನು ಮನೆ–ಮನೆಗೆ ಹೋಗಿ ಸಂಗ್ರಹಿಸುವ ವ್ಯವಸ್ಥೆಯಿದೆ. ಪಾಲಿಕೆಯ ಲಾರಿಗಳಲ್ಲಿ ತ್ಯಾಜ್ಯಗಳನ್ನು ಪೌರಕಾರ್ಮಿಕರ ಸಹಾಯದಿಂದ ಸಂಗ್ರಹಿಸಿ ವಿಲೇವಾರಿ ಘಟಕಗಳಿಗೆ ಸಾಗಿಸಲಾಗುತ್ತದೆ. ಮಂಗಳೂರಿನ ಮಹಾನಗರದ ವ್ಯಾಪ್ತಿಯಲ್ಲಿ ಬರುವ ಸ್ಥಳಗಳು ಒಂದು ದಿನಕ್ಕೆ ಸರಾಸರಿ 260 ಟನ್ (ಟಿಪಿಡಿ) ತ್ಯಾಜ್ಯವನ್ನು ಹೊರಹಾಕುತ್ತಿದೆ. ಹೀಗೆ ಒಟ್ಟುಗೂಡಲ್ಪಟ್ಟ ತ್ಯಾಜ್ಯದಲ್ಲಿ ಶೇಕಡ 60 ಸಾವಯವ, ಶೇಕಡ 25 ರಾಸಾಯನಿಕ, ಶೇಕಡ 5 ಉರಿಯುವ ಹಾಗೂ ಶೇಕಡ 10 ಪುನರ್ಬಳಕೆಯ ತ್ಯಾಜ್ಯಗಳು.

**ಮಂಗಳೂರು ಮಹಾನಗರಪಾಲಿಕೆಯಲ್ಲಿರುವ ತ್ಯಾಜ್ಯ ವಿಲೇವಾರಿ ಘಟಕ/ರಾಶಿಹಾಕುವ ಜಾಗಗಳು**

**1. ಮೂಡುಶೆಡ್ಡೆ:** ಪಾಲಿಕೆ ಕಛೇರಿಯಿಂದ 10 ಕಿ.ಮೀ. ದೂರದಲ್ಲಿರುವ ಈ ಜಾಗದಲ್ಲಿ ಎಲ್ಲಾ ರೀತಿಯ ಅಂದರೆ ಗೃಹ, ಆಸ್ಪತ್ರೆ, ಕೈಗಾರಿಕೆ ಮುಂತಾದ ತ್ಯಾಜ್ಯಗಳನ್ನು ಹಾಕುತ್ತಾರೆ.

**2. ಪಚ್ಚನಾಡಿ:** ನಗರಪಾಲಿಕೆಯಿಂದ 24 ಕಿ.ಮೀ. ದೂರದಲ್ಲಿರುವ ಈ ಜಾಗದಲ್ಲಿ ತ್ಯಾಜ್ಯವಿಲೇವಾರಿಗೆ ಸಂಬಂಧಿಸಿ ಬೇರೆ ಬೇರೆ ಘಟಕಗಳಿವೆ. ಸಾವಯವ ಗೊಬ್ಬರ ತಯಾರಿಕಾ ಘಟಕ, ಮಣ್ಣಿನಲ್ಲಿ ಹೂಳುವ ಘಟಕ, ಎರೆಹುಳು ಗೊಬ್ಬರ ತಯಾರಿಕಾ ಘಟಕ ಮತ್ತು ಕಸ ರಾಶಿಹಾಕುವ ಜಾಗ ಈ ಪ್ರದೇಶದಲ್ಲಿದೆ.

**3. ಕಾವೂರು:** ನಗರಪಾಲಿಕೆಯಿಂದ 5 ಕಿ.ಮೀ. ದೂರದಲ್ಲಿರುವ ಕಾವೂರು ಸಮೀಪದ ಮುಲ್ಲಕಾಡು ಎಂಬಲ್ಲಿ ಕೊಳಚೆನೀರು ಶುದ್ಧೀಕರಣ ಘಟಕವಿದೆ.

**4. ಜೆಪ್ಪಿನಮೊಗರು:** ನಗರಪಾಲಿಕೆಯಿಂದ 6 ಕಿ.ಮೀ. ದೂರದಲ್ಲಿರುವ ಜೆಪ್ಪಿನಮೊಗರು ಎಂಬಲ್ಲಿ ಹೊಸದಾಗಿ ನಿರ್ಮಿಸಿದ ಕೊಳಚೆನೀರು ಶುದ್ಧೀಕರಣ ಘಟಕವಿದೆ.

**ಚಾಲಿತ ಯೋಜನೆಗಳು**

ಮಂಗಳೂರಿನ ನೈರ್ಮಲ್ಯೀಕರಣವನ್ನು ಉತ್ತರ ಮತ್ತು ದಕ್ಷಿಣ ಎಂಬುದಾಗಿ ಎರಡು ವಿಭಾಗ ಮಾಡಲಾಗಿದೆ. ಮನೆ–ಮನೆಯಿಂದ ತ್ಯಾಜ್ಯ ಸಂಗ್ರಹಣೆ, ಬೀದಿಯನ್ನು ಗುಡಿಸುವುದು, ಒಳಚರಂಡಿ ಸ್ವಚ್ಛತೆ, ಹಸಿರು ಕಳೆ ನಿರ್ಮೂಲನೆ, ಒಳಚರಂಡಿ ಶುಚಿಗೊಳಿಸುವುದು, ಕಸದ ಸಾಗಾಟ ಇವೆಲ್ಲವುಗಳನ್ನು ಗೊಬ್ಬರ ಸ್ಥಾವರ ಮತ್ತು ಸ್ವಾಸ್ಥ್ಯ ಹಿತ ಪ್ರದೇಶಗಳ ಕಾರ್ಯವೈಖರಿ ಹಾಗೂ ವ್ಯವಸ್ಥೆಯ ಜೊತೆ ಜೊತೆಗೆ ನಿರ್ವಹಿಸಲಾಗುವುದು. ಹೊಸ ಆಧುನಿಕ ಕಸಾಯಿಖಾನೆಯ ಸ್ಥಾಪನಾ ಕಾರ್ಯವು ಪ್ರಗತಿಯಲ್ಲಿದೆ. ಹೊಸ ತ್ಯಾಜ್ಯ ಸಂಸ್ಕರಣ ಕಾಂಕ್ರೀಟ್ ಯಾರ್ಡ್‌ನ ಕಾರ್ಯವೂ ಪ್ರಗತಿಯಲ್ಲಿದೆ.

**ಮಾಹಿತಿ, ಶಿಕ್ಷಣ ಮತ್ತು ಸಂಪರ್ಕ**

ಮನೆ–ಮನೆಯಿಂದ ತ್ಯಾಜ್ಯ ಸಂಗ್ರಹ ಹಾಗೂ ಮನೆ–ಮನೆಗಳಿಗೆ ಹೋಗಿ ಜನರಿಗೆ ತ್ಯಾಜ್ಯ ವಿಭಜನೆ, ಸಂಗ್ರಹ, ನಿರ್ವಹಣೆ ಕುರಿತು ತರಬೇತಿ ನೀಡಲಾಗಿದೆ. ಶಾಲಾ–ಕಾಲೇಜು ವಿದ್ಯಾರ್ಥಿಗಳನ್ನು ತ್ಯಾಜ್ಯ ನಿರ್ವಹಣಾ ವಿಷಯದಲ್ಲಿ ಸುಶಿಕ್ಷಿತರನ್ನಾಗಿಸಲು, ಶಾಲಾ–ಕಾಲೇಜು ಮಟ್ಟದಲ್ಲಿ ಸ್ಪರ್ಧೆಗಳನ್ನು ಕೈಗೊಂಡು ನಗದು ಬಹುಮಾನ ನೀಡಲಾಗಿದೆ. ಎಂ.ಎಸ್.ಡಬ್ಲ್ಯೂ ನಿಯಮ 2000ದ ಕುರಿತು ಸಾರ್ವಜನಿಕರಲ್ಲಿ ಜ್ಞಾನ ಮೂಡಿಸಲು ವಾರ್ಡ್ ಮಟ್ಟದ ಸಭೆಗಳನ್ನು ಕೈಗೊಂಡಿದೆ. ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸಲು ಬೀದಿಯಲ್ಲಿ ಜಾಥಾಗಳನ್ನು ನಡೆಸಲಾಗಿದೆ.

40 ಮೈಕ್ರೋನ್‌ಗಿಂತ ಕಡಿಮೆ ಇರುವ ಪ್ಲಾಸ್ಟಿಕ್ ವಸ್ತುಗಳ ಮಾರಾಟವನ್ನು ಕಡಿಮೆಗೊಳಿಸು ವುದಕ್ಕಾಗಿ ಮಾಲಿನ್ಯ ನಿಯಂತ್ರಣ ಮಂಡಳಿಯ ಅಧಿಕಾರಿಗಳಿಂದ ನಗರದಲ್ಲಿ ಹಲವು ಪ್ಲಾಸ್ಟಿಕ್ ನಿಯಂತ್ರಣ ದಾಳಿಗಳನ್ನು ನಡೆಸಲಾಗಿದೆ.

**ಜೈವಿಕ ವೈದ್ಯಕೀಯ ತ್ಯಾಜ್ಯ ನಿರ್ವಹಣೆ**

1986ರ ಪರಿಸರ ಸಂರಕ್ಷಣಾ ಕಾಯಿದೆಯಡಿಯಲ್ಲಿ ಹೊರಡಿಸಿದ 1998ರಲ್ಲಿ ಜಾರಿಗೆ ಬಂದ ಜೈವಿಕ ವೈದ್ಯಕೀಯ ತ್ಯಾಜ್ಯ ನಿರ್ವಹಣಾ ಕಾಯಿದೆಯು ಎಲ್ಲಾ ಆರೋಗ್ಯ ಕೇಂದ್ರಗಳು ಯಾವುದೇ ವ್ಯತ್ಯಾಸವಿಲ್ಲದೆ ಕಾಯಿದೆಯನ್ನು ಪಾಲಿಸಬೇಕು ಎಂಬುವುದಾಗಿ ಸೂಚಿಸಿದೆ. ಈ ಸೂಚನೆಯನ್ನು ಅನ್ವಯಿಸಿಕೊಳ್ಳುವುದಕ್ಕಾಗಿ ಕೆಲವು ಆರೋಗ್ಯ ಕೇಂದ್ರಗಳು ತಮ್ಮದೇ ಆದ

ತ್ಯಾಜ್ಯ ವಿಲೇವಾರಿ ವ್ಯವಸ್ಥೆಯನ್ನು ಕೈಗೊಂಡಿದ್ದರೆ, ಇನ್ನು ಕೆಲವು ಸಾರ್ವಜನಿಕ ಜೈವಿಕ ವೈದ್ಯಕೀಯ ತ್ಯಾಜ್ಯ ವಿಲೇವಾರಿ ವ್ಯವಸ್ಥೆಗಳ ಸೇವೆಯನ್ನು ಪಡೆದುಕೊಂಡಿವೆ.

ಸಾಮಾನ್ಯ ಜೈವಿಕ ವೈದ್ಯಕೀಯ ತ್ಯಾಜ್ಯ ಉಪಚಾರ ವ್ಯವಸ್ಥೆಯನ್ನು ಮೆ.ಮೆಡಿಕೇರ್ ಇನ್‌ಸಿನ್ ಪ್ರೈವೇಟ್ ಲಿ., ನಂ.47–3, ಕಾರ್ನಾಡ್ ಕೈಗಾರಿಕಾ ಕ್ಷೇತ್ರ, ಮುಲ್ಕಿ, ದಕ್ಷಿಣ ಕನ್ನಡವು ಸ್ಥಾಪಿಸಿದೆ. ಮಂಗಳೂರು ಮಹಾನಗರ ಪಾಲಿಕೆಯು ಆಸ್ಪತ್ರೆ, ಕ್ಲಿನಿಕ್, ನರ್ಸಿಂಗ್ ಹೋಂಗಳಿಗೆ 1998ರ ಎಂ.ಎಸ್.ಡಬ್ಲ್ಯೂ ಕಾಯಿದೆ ಪ್ರಕಾರ ಜೈವಿಕ ತ್ಯಾಜ್ಯಗಳನ್ನು ವಿಲೇವಾರಿ ಮಾಡಬೇಕು ಎಂಬುದಾಗಿ ನೋಟಿಸನ್ನು ಕಳುಹಿಸಿದೆ ಮಾತ್ರವಲ್ಲ ಆಸ್ಪತ್ರೆ/ಕ್ಲಿನಿಕ್/ನರ್ಸಿಂಗ್ ಹೋಂಗಳಿಗೆ ಜೈವಿಕ ವೈದ್ಯಕೀಯ ತ್ಯಾಜ್ಯಗಳನ್ನು ನಗರಪಾಲಿಕಾ ತ್ಯಾಜ್ಯಗಳೊಂದಿಗೆ ಸೇರಿಸಬಾರದು ಎಂಬ ನಿರಂತರ ಸೂಚನೆಯನ್ನು ನೀಡಲಾಗುತ್ತಿದೆ. ಮೆ.ಮೆಡಿಕೇರ್ ಇನ್‌ಸಿನ್ ಪ್ರೈವೇಟ್ ಲಿ., 7500 ಕಿ.ಲೋ/ಪ್ರತಿದಿನ ಸಾಮರ್ಥ್ಯದ ದಹನ ಕುಲುಮೆಯನ್ನು ಸ್ಥಾಪಿಸಿದ್ದರೂ ಕೂಡಾ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ಅದಕ್ಕೆ 2500 ಕಿ.ಲೋ (ಪ್ರತಿದಿನ) ಸಾಮರ್ಥ್ಯದ ಅಧಿಕಾರವನ್ನು ಮಾತ್ರ ನೀಡಿದೆ. ಮೆ.ಮೆಡಿಕೇರ್ ಇನ್‌ಸಿನ್ ಪ್ರೈವೇಟ್ ಲಿ., ದಕ್ಷಿಣ ಕನ್ನಡದ ಆಸ್ಪತ್ರೆ, ಕ್ಲಿನಿಕ್, ನರ್ಸಿಂಗ್ ಹೋಂ, ಲ್ಯಾಬೊರೇಟರಿಗಳಿಂದ ಒಟ್ಟು 6200 ಬೆಡ್‌ಗಳ ಜೈವಿಕ ತ್ಯಾಜ್ಯವನ್ನು ಸಂಗ್ರಹಿಸಲು ವಾಹನ ಸೌಕರ್ಯವನ್ನು ಒದಗಿಸಿದೆ. ಫಾ.ಮುಲ್ಲರ್ಸ್ ಆಸ್ಪತ್ರೆ ಮತ್ತು ಯೇನೆಪೋಯ ವೈದ್ಯಕೀಯ ಕಾಲೇಜುಗಳು ತಮ್ಮದೇ ಆದ ತ್ಯಾಜ್ಯ ಸಂಸ್ಕರಣ ವ್ಯವಸ್ಥೆಯನ್ನು ಹೊಂದಿವೆ.

### ಉಳ್ಳಾಲ ನಗರಸಭೆ

ದ.ಕ. ಜಿಲ್ಲೆಯ ಮಂಗಳೂರು ನಗರದಿಂದ 12 ಕಿ.ಮೀ ದೂರದಲ್ಲಿರುವ ಉಳ್ಳಾಲ 1996ರಿಂದ ನಗರ ಪಂಚಾಯತ್ ಆಗಿದ್ದು, 2006 ರಲ್ಲಿ ಪುರಸಭೆಯಾಗಿ ಮೇಲ್ದರ್ಜೆಗೆ ಏರಿಸಲಾಯಿತು. ತದನಂತರ ಕರ್ನಾಟಕ ಸರಕಾರ 2014ರಲ್ಲಿ ಉಳ್ಳಾಲ ಪುರಸಭೆಯನ್ನು ನಗರಸಭೆಯಾಗಿ ಘೋಷಿಸಲಾಯಿತು. ಇದು ಉಳ್ಳಾಲ ಮತ್ತು ಪೆರ್ಮನ್ನೂರು ಎಂಬ 2 ಗ್ರಾಮಗಳನ್ನು ಒಳಗೊಂಡಿದೆ. 2011ರ ಜನಗಣತಿಯಂತೆ ಉಳ್ಳಾಲ ನಗರಸಭೆಯು 53808 ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಇಲ್ಲಿ 27 ವಾರ್ಡ್‌ಗಳಿದ್ದು, 27 ಚುನಾಯಿತ ಸದಸ್ಯರಿದ್ದಾರೆ. ಉಳ್ಳಾಲ ನಗರಸಭೆಯು ಒಟ್ಟು 11.8 ಚ.ಕಿ.ಮೀ ವಿಸ್ತೀರ್ಣ ಹೊಂದಿದ್ದು 2003–04ರ ನಿರ್ಮಲ ನಗರ ಸರ್ವೆಯ ಪ್ರಕಾರ 9332 ವಾಸ್ತವ್ಯದ ಮನೆಗಳು ಮತ್ತು 1691 ಅಂಗಡಿ/ ಹೋಟೇಲು ಮುಂತಾದ ವಾಣಿಜ್ಯ ಚಟುವಟಿಕೆಗಳನ್ನು ಹೊಂದಿದೆ. ನಗರಸಭೆಯಲ್ಲಿ ಇಬ್ಬರು

ಖಾಯಂ ಪೌರಕಾರ್ಮಿಕರಿದ್ದು ತ್ಯಾಜ್ಯ ಸಂಗ್ರಹ ಕಾರ್ಯವನ್ನು ಎಸ್. ಎಸ್. ಎಂಟರ್‌ಪ್ರೈಸಸ್ ಎನ್ನುವ ಸಂಸ್ಥೆಗೆ ಹೊರಗುತ್ತಿಗೆ ನೀಡಲಾಗಿದೆ.

ಪ್ರತಿನಿತ್ಯ ಸರಾಸರಿ 16.5 ಟನ್ ತ್ಯಾಜ್ಯ ಸಂಗ್ರಹವಾಗುತ್ತಿದ್ದು 4 ಟ್ರ್ಯಾಕ್ಟರ್, 2 ಅಟೋ ಟಿಪ್ಪರ್‌ಗಳನ್ನು ಮತ್ತು 1 ಮಿನಿ ಟಿಪ್ಪರನ್ನು ಬಳಸುತ್ತಿದ್ದಾರೆ. ವಾರ್ಷಿಕ 53 ಲಕ್ಷ ರೂಪಾಯಿಗಳನ್ನು ಕಾರ್ಮಿಕರ ವೇತನ ಪಾವತಿಗೆ ನೀಡಲಾಗುತ್ತಿದ್ದು ಶೇಕಡ 80ರಷ್ಟು ಗೃಹತ್ಯಾಜ್ಯವನ್ನು ಮನೆಗಳಿಂದ ನೇರವಾಗಿ ಸಂಗ್ರಹಿಸಲಾಗುತ್ತಿದೆ.

ತ್ಯಾಜ್ಯ ನಿರ್ವಹಣೆಗೆ ನಗರಸಭೆ ಸ್ವಂತ ಜಾಗವನ್ನು ಹೊಂದಿಲ್ಲದ ಕಾರಣ, ಮಂಗಳೂರು ಮಹಾನಗರಪಾಲಿಕೆಯನ್ನು ಅವಲಂಬಿಸಿದೆ. ಪ್ರತಿ ಟನ್ ತ್ಯಾಜ್ಯಕ್ಕೆ ರೂ 300ರಂತೆ ಬಾಡಿಗೆ ನೀಡಲಾಗುತ್ತಿದ್ದು ವಾರ್ಷಿಕ 18 ಲಕ್ಷಕ್ಕಿಂತಲೂ ಹೆಚ್ಚು ಹಣ ಪಚ್ಚನಾಡಿಯಲ್ಲಿರುವ ಭೂಭರ್ತಿ ಪ್ರದೇಶದಲ್ಲಿ ತ್ಯಾಜ್ಯ ರಾಶಿ ಹಾಕಲು ನಗರ ಸಭೆಯು ಮಹಾನಗರಪಾಲಿಕೆಗೆ ಬಾಡಿಗೆ ರೂಪದಲ್ಲಿ ನೀಡುತ್ತಿದೆ. ತ್ಯಾಜ್ಯ ಸಂಗ್ರಹ ಕರವಾಗಿ ಮನೆಗಳಿಂದ ಮತ್ತು ವಾಣಿಜ್ಯ ಚಟುವಟಿಕೆಗಳಿಂದ ಕೇವಲ 11 ಲಕ್ಷ ಆದಾಯ ಬರುತ್ತಿದ್ದು, ಉಳಿದ ವೆಚ್ಚವನ್ನು ಭರಿಸಲು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಹಾಗೂ ನಗರಸಭೆಯ ಇತರ ಮೂಲಗಳಿಂದ ಬರುವ ಆದಾಯವನ್ನು ಅವಲಂಬಿಸಿದೆ.

ಒಟ್ಟು 27 ವಾರ್ಡ್‌ಗಳ ಪೈಕಿ 24 ವಾರ್ಡ್‌ಗಳಿಂದ ಮನೆ ಮನೆ ಕಸ ಸಂಗ್ರಹ ನಡೆಯುತ್ತಿದ್ದು 10 ಸಂಗ್ರಹ ತೊಟ್ಟಿಗಳನ್ನು ಒಳಗೊಂಡಿದೆ. ಇದು ಒಟ್ಟು 16.5 ಟನ್ ತ್ಯಾಜ್ಯದಲ್ಲಿ 13 ಟನ್ ಘನತ್ಯಾಜ್ಯವನ್ನು ಒಳಗೊಂಡಿದೆ. ರಸ್ತೆಗಳನ್ನು 'ಎ', 'ಬಿ, ಮತ್ತು 'ಸಿ' ವಿಭಾಗಗಳಾಗಿ ವಿಂಗಡಿಸಿ ಸ್ವಚ್ಛತಾ ಕಾರ್ಯವನ್ನು ಕೈಗೊಳ್ಳಲಾಗಿದೆ. ಕೆಲವು ಶೈಕ್ಷಣಿಕ ಸಂಸ್ಥೆಗಳಲ್ಲಿ ಕೊಳವೆ ಗೊಬ್ಬರ ಘಟಕಗಳನ್ನು ಸ್ಥಾಪಿಸುವುದರ ಮೂಲಕ ಸ್ವಚ್ಛತಾ ಜಾಗೃತಿಯನ್ನು ಮೂಡಿಸಲಾಗಿದೆ. ತ್ಯಾಜ್ಯ ವಿಭಜನೆಗೆ ಆದ್ಯತೆಯನ್ನು ನೀಡಿದರೂ ಸಮರ್ಪಕವಾಗಿ ನಡೆಯದಿರುವುದು ಕ್ಷೇತ್ರ ಕಾರ್ಯದಲ್ಲಿ ಕಂಡು ಬಂದಿದೆ.

**ಪುತ್ತೂರು ನಗರಸಭೆ**

ಪುತ್ತೂರು ಮುನ್ಸಿಪಾಲ್ ಕೌನ್ಸಿಲ್ 1973ರಲ್ಲಿ ರಚನೆಗೊಂಡು ಜನವರಿ 2015ರಲ್ಲಿ ಪುತ್ತೂರು ನಗರಸಭೆಯಾಗಿ ಉನ್ನತೀಕರಣಗೊಂಡಿತು. ಪ್ರಸ್ತುತ ಪುತ್ತೂರು ನಗರಸಭೆಯು 27 ವಾರ್ಡ್‌ಗಳನ್ನು ಹೊಂದಿದ್ದು 32.32 ಚದರ ಕಿಲೋಮೀಟರ್ ವಿಸ್ತೀರ್ಣವನ್ನು ಹೊಂದಿದೆ. ನಗರ ಸಭೆಯ ಒಟ್ಟು ಜನಸಂಖ್ಯೆಯು 2011ರ ಜನಗಣತಿ ಪ್ರಕಾರ 53,061 ಆಗಿದ್ದು 11,378 ಕುಟುಂಬಗಳನ್ನು ಹೊಂದಿದೆ. ನಗರ ಸಭಾ ವ್ಯಾಪ್ತಿಯಲ್ಲಿ 25 ಮದುವೆ ಸಭಾಂಗಣಗಳಿದ್ದು

ಸರಾಸರಿ 0.3 ಟನ್ ತ್ಯಾಜ್ಯ ಉತ್ಪಾದನೆಯಾಗುತ್ತಿದೆ. ಇದರ ವ್ಯಾಪ್ತಿಯಲ್ಲಿ ಸುಮಾರು 14ಕ್ಕೂ ಅಧಿಕ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳು, 4 ಕಾಲೇಜುಗಳು, 11 ಆಸ್ಪತ್ರೆಗಳು, 102 ಹೊಟೇಲುಗಳು, 30 ಮೀನು/ಕೋಳಿ/ಕುರಿ ಮಾಂಸದ ಅಂಗಡಿಗಳು, ಮತ್ತು 17 ತರಕಾರಿ/ ಹಣ್ಣು ಅಂಗಡಿಗಳು ಒಳಗೊಂಡಿವೆ. ಮಂಗಳೂರು–ಮಡಿಕೇರಿ ರಾಜ್ಯ ಹೆದ್ದಾರಿಯು ಪುತ್ತೂರು ನಗರದ ಮೂಲಕವೇ ಹಾದು ಹೋಗುತ್ತಿದ್ದು, ಸುಳ್ಯ, ಸುಬ್ರಹ್ಮಣ್ಯ, ಕಡಬ, ಉಪ್ಪಿನಂಗಡಿ, ಪಂಜ ಪ್ರದೇಶಗಳ ಜನರಿಗೆ ಪುತ್ತೂರು ಪ್ರಧಾನ ವಾಣಿಜ್ಯ ಕೇಂದ್ರವಾಗಿದೆ.

**ತ್ಯಾಜ್ಯ ನಿರ್ವಹಣೆ**

ನಗರ ವ್ಯಾಪ್ತಿಯಲ್ಲಿ ಸರಾಸರಿ ಪ್ರತಿನಿತ್ಯ 14 ಟನ್ ತ್ಯಾಜ್ಯ ಉತ್ಪಾದನೆಯಾಗುತ್ತಿದೆ. ತ್ಯಾಜ್ಯ ಸಂಗ್ರಹ ಕಾರ್ಯವನ್ನು ರಾಮ್ಕಿ ಎನರ್ಜಿ ಎಂಡ್ ಎನ್‌ವಿರಾನ್‌ಮೆಂಟ್ ಲಿಮಿಟೆಡ್ ಸಂಸ್ಥೆಗೆ ಹೊರಗುತ್ತಿಗೆ ನೀಡಲಾಗಿದೆ. ತ್ಯಾಜ್ಯ ಸಂಗ್ರಹವಾಗುವ ಪ್ರಮಾಣಕ್ಕೆ ಅನುಗುಣವಾಗಿ ಮನೆ–ಮನೆ ಕಸ ಸಂಗ್ರಹ ಮತ್ತು ತೊಟ್ಟಿಯ ಕಸ ಸಂಗ್ರಹದ ಅವಧಿಯು ಬೇರೆ ಬೇರೆಯಾಗಿರುತ್ತದೆ. ಕೆಲವು ಪ್ರದೇಶಗಳಲ್ಲಿ/ವಾರ್ಡ್‌ಗಳಲ್ಲಿ ಪ್ರತಿನಿತ್ಯ ತ್ಯಾಜ್ಯ ಸಂಗ್ರಹಿಸಲಾಗುತ್ತಿದೆ. ಒಟ್ಟು ಶೇಕಡ 85ರಷ್ಟು ತ್ಯಾಜ್ಯವನ್ನು ಪ್ರತಿನಿತ್ಯ ಸಂಗ್ರಹಿಸಲಾಗುವುದು. ಒಟ್ಟು 24 ವಾರ್ಡ್‌ಗಳಿಂದ ಆಂಶಿಕವಾಗಿ ಮನೆ–ಮನೆ ಕಸಸಂಗ್ರಹ ನಡೆಯುತ್ತಿದೆ. ಇವುಗಳಲ್ಲಿ ಆಂಶಿಕವಾಗಿ 14 ವಾರ್ಡ್‌ಗಳಲ್ಲಿ ಮೂಲದಲ್ಲಿಯೇ ತ್ಯಾಜ್ಯ ವಿಭಜನೆ ಮಾಡುತ್ತಿದ್ದಾರೆ. ತ್ಯಾಜ್ಯ ಸಂಗ್ರಹಕ್ಕೆ 3 ಟಾಟ ಏಸ್ ಅಟೋ ಟಿಪ್ಪರ್, 1 ಲಾರಿ, 1 ಟ್ರಾಕ್ಟರ್, 2 ಟಿಪ್ಪರ್ ಲಾರಿಗಳನ್ನು ಬಳಸಿಕೊಂಡಿದ್ದಾರೆ. ಈ ವ್ಯಾಪ್ತಿಯಲ್ಲಿ ಒಟ್ಟು 18 ಫೈಬರ್ ಹಾಗೂ 22 ಕಾಂಕ್ರೀಟ್ ತೊಟ್ಟಿಗಳ ವ್ಯವಸ್ಥೆಯನ್ನು ಮಾಡಲಾಗಿದೆ. ತ್ಯಾಜ್ಯ ಸಂಗ್ರಹಣಾ ಕಾರ್ಯಕ್ಕೆ ಕಸ ತುಂಬಿಸಲು 4 ಜನ ಮತ್ತು ಸಹಾಯಕರಾಗಿ 4 ಜನರನ್ನು ನೇಮಿಸಿಕೊಳ್ಳಲಾಗಿದೆ. 25 ಜನರನ್ನು ರಸ್ತೆಗುಡಿಸಲು ಬಳಸಿಕೊಳ್ಳಲಾಗುತ್ತಿದೆ.ಒಳಚರಂಡಿ ಕೆಲಸಕ್ಕೆ ಸಂಬಂಧಿಸಿ 6 ಜನರನ್ನು ಮತ್ತು ಮೇಲ್ವಿಚಾರಕರಾಗಿ 2 ಜನರನ್ನು ನೇಮಿಸಿಕೊಳ್ಳಲಾಗಿದೆ. ನಗರಸಭೆಯಲ್ಲಿ ಇಬ್ಬರು ಆರೋಗ್ಯ ಅಧಿಕಾರಿಗಳನ್ನು ನೇಮಕ ಮಾಡಲಾಗಿದೆ.

ನಗರ ಸಭೆಯು ನೀಡಿದ ಮಾಹಿತಿ ಪ್ರಕಾರ ವಾಹನಗಳ ನಿರ್ವಹಣೆ, ಇಂಧನ ವೆಚ್ಚ, ಚಾಲಕರು ಮತ್ತು ಕಾರ್ಮಿಕರ ಸಂಬಳ ಹಾಗೂ ಇತರ ಖರ್ಚು ವೆಚ್ಚಗಳು ಸೇರಿ ವಾರ್ಷಿಕ ರೂ 1.5 ಕೋಟಿ ಹಣವನ್ನು ತ್ಯಾಜ್ಯ ಸಂಗ್ರಹ ಹಾಗೂ ನಿರ್ವಹಣೆಗಾಗಿ ಖರ್ಚು ಮಾಡಲಾಗುತ್ತಿದೆ. ಒಟ್ಟು ತ್ಯಾಜ್ಯ ನಿರ್ವಹಣೆಗಾಗಿ ನಗರದಿಂದ 7 ಕಿ.ಮೀ ದೂರದಲ್ಲಿರುವ ಬನ್ನೂರು ಎಂಬಲ್ಲಿ 7.15 ಎಕ್ರೆ ಜಾಗ ಮೀಸಲಾಗಿಟ್ಟರೂ ಈಗಾಗಲೇ 65 ಶೇಕಡ ಭೂಭರ್ತಿಗೆ ಉಪಯೋಗಿಸಲಾಗಿದೆ.

ತ್ಯಾಜ್ಯದ ಲೀಚೆಟ್ ನಿರ್ವಹಣೆಗೆ ವೈಜ್ಞಾನಿಕ ವಿಧಾನವನ್ನು ಅನುಸರಿಸುವ ಬಗ್ಗೆ ವಿಸ್ತೃತ ಯೋಜನಾ ವರದಿಯನ್ನು ನಗರಪಾಲಿಕೆ ತಯಾರಿಸಿದೆ. ಹೆಚ್ಚಿನ ಪ್ರಮಾಣದ ತ್ಯಾಜ್ಯವನ್ನು ಘಟಕದ ಒಳಗೆ ವಿಭಜನೆ ಮಾಡಲಾಗುತ್ತಿದ್ದು, ಮೂಲದಲ್ಲಿ ವಿಭಜನೆ ಸರಿಯಾದ ರೀತಿಯಲ್ಲಿ ನಡೆಯುತ್ತಿಲ್ಲ ಎಂಬುದು ಕಾರ್ಮಿಕರ ಅಭಿಪ್ರಾಯ. ಪುತ್ತೂರು ನಗರಕ್ಕೆ ಒಂದೇ ವಿಲೇವಾರಿ ಘಟಕ ಇರುವುದರಿಂದ ನಿರ್ವಹಣೆಯಲ್ಲಿ ಸಮಸ್ಯೆಯಿದೆ ಎಂಬುದು ಅಧಿಕಾರಿಗಳ ಗಮನಕ್ಕೆ ಬಂದಿದೆ ಹಾಗೂ ಸ್ಥಳೀಯರು ನಿರ್ವಹಣ ಘಟಕವನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಒತ್ತಾಯಿಸುತ್ತಿದ್ದಾರೆ. ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ದಾಖಲೆಗಳು, ವರದಿಗಳು ಮತ್ತು ಮಾಹಿತಿಗಳು ನಗರಸಭೆಯಲ್ಲಿ ಲಭ್ಯ. ಕಾರ್ಮಿಕರ ಮತ್ತು ಜನಸಂಖ್ಯೆಯ ಪ್ರಮಾಣ 1:1400 ಇದ್ದು, ಪ್ರತಿನಿತ್ಯ ತ್ಯಾಜ್ಯ ಸಂಗ್ರಹ/ವಿಲೇವಾರಿ ದೃಷ್ಟಿಯಿಂದ ಅಧಿಕಾರಿಗಳ ಪ್ರಕಾರ ಕೆಲಸದ ಹೊರೆ ಹೆಚ್ಚಾಗುತ್ತದೆ.

**ಬಂಟ್ವಾಳ ಪುರಸಭೆ**

ದ.ಕ. ಜಿಲ್ಲೆಯ ಬಂಟ್ವಾಳ ಪುರಸಭೆಯು 23 ವಾರ್ಡ್‌ಗಳನ್ನು ಹೊಂದಿದ್ದು 27.05 ಚ.ಕಿ.ಮೀ ವ್ಯಾಪ್ತಿಯನ್ನು ಹೊಂದಿದೆ. ಪಾಣೆ ಮಂಗಳೂರು, ಬಿ.ಸಿ ರೋಡ್ ಮತ್ತು ಬಂಟ್ವಾಳ ಇದರ ವ್ಯಾಪ್ತಿಯ ಪ್ರಮುಖ ವಾಣಿಜ್ಯ ಕೇಂದ್ರಗಳು. 2011ರ ಜನಗಣತಿ ಪ್ರಕಾರ 40155 ಜನಸಂಖ್ಯೆಯನ್ನು ಹೊಂದಿದ್ದು, 6378 ಕುಟುಂಬಗಳನ್ನು ಒಳಗೊಂಡಿದೆ. ತ್ಯಾಜ್ಯ ಸಂಗ್ರಹ ಹಾಗೂ ಸಾಗಾಟಕ್ಕೆ ಕೇವಲ 3 ಖಾಯಂ ನೌಕರರು ಮಾತ್ರ ಲಭ್ಯವಾಗಿದ್ದು ಅವರನ್ನು ಸಾರ್ವಜನಿಕ ಸ್ಥಳಗಳ ಸ್ವಚ್ಛತಾ ಕಾರ್ಯಕ್ಕೆ ಬಳಸಿಕೊಳ್ಳಲಾಗಿದೆ. ಸ್ಥಳೀಯ ಖಾಸಗಿ ಸಂಸ್ಥೆಯು ತ್ಯಾಜ್ಯ ಸಂಗ್ರಹ ಹಾಗೂ ಸಾಗಾಟ ಕಾರ್ಯವನ್ನು 35 ಕಾರ್ಮಿಕರನ್ನು ಬಳಸಿಕೊಂಡು ನಿರ್ವಹಿಸುತ್ತಿದೆ. ಒಟ್ಟು ಜನಸಂಖ್ಯೆಯಲ್ಲಿ ಶೇಕಡ 77ರಷ್ಟು ಮಹಿಳೆಯರು ಹಾಗೂ ಶೇಕಡ 84 ರಷ್ಟು ಪುರುಷರ ಸಹಿತ ಸರಾಸರಿ ಶೇಕಡ 80ರಷ್ಟು ಸಾಕ್ಷರತೆಯನ್ನು ಹೊಂದಿದೆ. ಇದರ ವ್ಯಾಪ್ತಿಯಲ್ಲಿ 3 ಪದವಿ ಕಾಲೇಜುಗಳು, 3 ಪದವಿಪೂರ್ವ ಕಾಲೇಜುಗಳು, 10 ಪ್ರೌಢ ಶಾಲೆಗಳು ಮತ್ತು 15 ಪ್ರಾಥಮಿಕ ಶಾಲೆಗಳಿವೆ. ಇದಲ್ಲದೆ 8 ಹಿಂದೂ ದೇವಾಲಯಗಳು, 9 ಮಸೀದಿಗಳು, 2 ಚರ್ಚ್ ಮತ್ತು 1 ಜೈನ ದೇವಾಲಯವನ್ನು ಹೊಂದಿದ್ದು 2 ಪ್ರಮುಖ ಬಸ್ ನಿಲ್ದಾಣಗಳ ಸಹಿತ ಹಾದು ಹೋಗುವ ಪ್ರವಾಸಿಗಳ ಸಂಖ್ಯೆಯೂ ಅಧಿಕವಾಗಿದೆ.

ಪ್ರತಿನಿತ್ಯ 10ರಿಂದ 12 ಟನ್ ತ್ಯಾಜ್ಯ ಸಂಗ್ರಹವಾಗುತ್ತಿದ್ದು ಹೆಚ್ಚಿನ ಜನಸಾಂದ್ರತೆ ಇರುವ ಜಾಗಗಳಲ್ಲಿ ಪ್ರತಿನಿತ್ಯ ತ್ಯಾಜ್ಯವನ್ನು ತೆಗೆಯಲಾಗುತ್ತಿದೆ. ಇದಕ್ಕಾಗಿ 3 ಅಟೋ ಟಿಪ್ಪರ್ ಮತ್ತು

ಒಂದು ಟ್ರಾಕ್ಟರ್ ಬಳಸುತ್ತಿದ್ದಾರೆ. ಪ್ರತಿವಾರಕ್ಕೊಮ್ಮೆ ಸಾರ್ವಜನಿಕರಿಗೆ ತ್ಯಾಜ್ಯ ನಿರ್ವಹಣೆ ಬಗ್ಗೆ ಜಾಗೃತಿ ಮೂಡಿಸುವ ಕಾರ್ಯಕ್ರಮವನ್ನು ನಡೆಸುತ್ತಿದ್ದು, ಸಾರ್ವಜನಿಕರು ಅದರ ಸದುಪಯೋಗವನ್ನು ಪಡೆದುಕೊಂಡಿರುತ್ತಾರೆ. ಮನೆ ಮನೆ ತ್ಯಾಜ್ಯ ಸಂಗ್ರಹಕ್ಕೆ ಹಸಿರು ಮತ್ತು ಕೆಂಪು ಬಣ್ಣದ ಬಕೆಟ್‌ಗಳನ್ನು ನೀಡಿದ್ದು ಹಸಿಕಸ ಮತ್ತು ಒಣಕಸವನ್ನು ಬೇರ್ಪಡಿಸಿ ನೀಡುವಂತೆ ನಗರಸಭೆ ತಿಳಿಸಿದೆ. ಸಾರ್ವಜನಿಕರು ಇದನ್ನು ಅನುಸರಿಸುತ್ತಿರುವುದು ಕ್ಷೇತ್ರಕಾರ್ಯದಲ್ಲಿ ತಿಳಿದು ಬಂದಿದೆ. ತ್ಯಾಜ್ಯ ಸಂಗ್ರಹ ಮತ್ತು ವಿಲೇವಾರಿಗಾಗಿ ನಗರಸಭೆಯು ಬಂಟ್ವಾಳ ನಗರದಿಂದ 16 ಕಿ.ಮೀ ದೂರದಲ್ಲಿರುವ ಸಜಿಪನಡು ಎಂಬಲ್ಲಿ 8.55 ಎಕ್ರೆ ಜಾಗದಲ್ಲಿ ಕಾಮಗಾರಿ ಪ್ರಾರಂಭವಾಗಿದೆ. ಪ್ರಸ್ತುತ ನಗರಸಭೆಯು ತ್ಯಾಜ್ಯ ವಿಲೇವಾರಿಗಾಗಿ ಮಂಗಳೂರು ಮಹಾನಗರ ಪಾಲಿಕೆಯನ್ನು ಅವಲಂಬಿಸಿದ್ದು ಪ್ರತಿನಿತ್ಯ ಸರಾಸರಿ 12 ಟನ್‌ನಷ್ಟು ತ್ಯಾಜ್ಯವನ್ನು ಮಂಗಳೂರಿನ ಪಚ್ಚನಾಡಿಗೆ ಸಾಗಿಸಲಾಗುತ್ತಿದೆ. ಮಹಾನಗರ ಪಾಲಿಕೆಯು ಪ್ರತಿ ಟನ್‌ಗೆ ರೂ.300/-ರಷ್ಟು ಶುಲ್ಕವನ್ನು ವಿಧಿಸುತ್ತಿದೆ. ಜನದಟ್ಟಣೆ ಕಡಿಮೆ ಇರುವ ಪ್ರದೇಶಗಳಲ್ಲಿ ಪ್ರತಿನಿತ್ಯ ತ್ಯಾಜ್ಯ ಸಂಗ್ರಹವಾಗುತ್ತಿಲ್ಲ. ನಗರದ ಹೆಚ್ಚಿನ ಭಾಗದಲ್ಲಿ ತ್ಯಾಜ್ಯ ಸಂಗ್ರಹ ತೊಟ್ಟಿಯನ್ನು ಕೋರ್ಟ್ ಆದೇಶದಂತೆ ತೆಗೆಯಲಾಗಿದೆ. ಹಿಂದೆ ತೊಟ್ಟಿಯಿದ್ದ ಜಾಗಗಳಲ್ಲಿ ತ್ಯಾಜ್ಯ ಎಸೆಯುವುದನ್ನು ನಿಷೇಧಿಸಿದ್ದರೂ ಜನರು ಅದೇ ಜಾಗದಲ್ಲಿ ತ್ಯಾಜ್ಯ ತಂದು ಹಾಕುತ್ತಿದ್ದು ಅಂತಹ ಜಾಗಗಳನ್ನು 'ಬ್ಲಾಕ್ ಸ್ಪಾಟ್' (ಕಪ್ಪು ಪ್ರದೇಶ) ಎಂದು ಗುರುತಿಸಲಾಗಿದೆ ಹಾಗೂ ಅಂತಹ ಜಾಗಗಳಲ್ಲಿ ಎಚ್ಚರಿಕೆ ಫಲಕಗಳನ್ನು ಅಳವಡಿಸಲಾಗಿದೆ.

ಬಂಟ್ವಾಳ ಪುರಸಭೆಯು ಪ್ರತಿ ಮನೆಗೆ ರೂ. 50ರಂತೆ ತ್ಯಾಜ್ಯ ಸಂಗ್ರಹ ತೆರಿಗೆ ವಿಧಿಸುತ್ತಿದ್ದು, ವಾಣಿಜ್ಯ ಚಟುವಟಿಕೆಗಳಿಗೆ ರೂ.50ಕ್ಕಿಂತ ಮೇಲ್ಪಟ್ಟು ವಿವಿಧ ರೀತಿಯ ದರಗಳನ್ನು ವಿಧಿಸಿದೆ. ತ್ಯಾಜ್ಯ ಸಂಗ್ರಹ ಶುಲ್ಕ ಮನೆಗಳಿಗೆ ಕಡ್ಡಾಯವಲ್ಲದ ಕಾರಣ ಅದನ್ನು ತಪ್ಪಿಸಲು ಅನೇಕರು ತ್ಯಾಜ್ಯವನ್ನು ಸಂಗ್ರಹಕಾರರಿಗೆ ನೀಡದೆ, ಸಾರ್ವಜನಿಕ ಸ್ಥಳಗಳಲ್ಲಿ, ರಸ್ತೆ ಬದಿಗಳಲ್ಲಿ, ಹೊಳೆ ಬದಿ, ಸೇತುವೆಯ ಕೆಳಗೆ ಮುಂತಾದ ಜಾಗದಲ್ಲಿ ಎಸೆಯುತ್ತಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಸಾರ್ವಜನಿಕರಿಗೆ ದೂರು ದಾಖಲಿಸಲು ವಾಟ್ಸಪ್ ಸಂಖ್ಯೆ ಹಾಗೂ ಕಛೇರಿ ದೂರವಾಣಿ ಸಂಖ್ಯೆಗಳಿಗೆ ತಿಳಿಸುವ ವ್ಯವಸ್ಥೆ ಮಾಡಲಾಗಿದೆ. ಈ ಬಗ್ಗೆ ಕಛೇರಿಯಲ್ಲಿ ದಾಖಲೆ ಪುಸ್ತಕವನ್ನು ಇಟ್ಟು ಕೊಂಡಿದ್ದಾರೆ. ಮಾಹಿತಿ, ಶಿಕ್ಷಣ ಮತ್ತು ಜನ ಸಂಪರ್ಕ ವ್ಯವಸ್ಥೆಗೆ ನಗರಸಭೆ ಕ್ರಮ ಕೈಗೊಂಡಿದೆ. ಎಲ್ಲಾ ನಾಗರಿಕರಿಗೆ ತ್ಯಾಜ್ಯ ಸಂಗ್ರಹ ಶುಲ್ಕ ವಿಧಿಸದ ಕಾರಣ ಆದಾಯದ ಕೊರತೆಯ ಜೊತೆಗೆ ಸಾರ್ವಜನಿಕರು ಅವೈಜ್ಞಾನಿಕ ರೀತಿಯಲ್ಲಿ ವಿಲೇವಾರಿ ಮಾಡಲೂ ಕಾರಣವಾಗಿದೆ.

## ಮೂಡಬಿದ್ರೆ ಪುರಸಭೆ

ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕಿನ ಮೂಡಬಿದ್ರೆ ಪುರಸಭೆ ಜಿಲ್ಲೆಯ ಪ್ರಮುಖ ಶೈಕ್ಷಣಿಕ ಹಾಗೂ ಪ್ರವಾಸಿ ತಾಣ. ಪುರಸಭೆಯ ವ್ಯಾಪ್ತಿಯು 39.62 ಚ.ಕಿ.ಮೀ. ಇದ್ದು 6517 ಮನೆಗಳನ್ನು ಹೊಂದಿದೆ. ಒಟ್ಟು 23 ವಾರ್ಡ್‌ಗಳನ್ನು ಹೊಂದಿರುವ ಪುರಸಭೆಯ ಜನಸಂಖ್ಯೆ, 2011ರ ಜನಗಣತಿ ಪ್ರಕಾರ 40,155. ಪ್ರತೀ ಶುಕ್ರವಾರ ಇಲ್ಲಿ ವಾರದ ಸಂತೆಯು ನಡೆಯುತ್ತಿದ್ದು ಅದರ ತ್ಯಾಜ್ಯ ನಿರ್ವಹಣೆಗೆ ಸೂಕ್ತ ಕ್ರಮಗಳನ್ನು ಕೈಗೊಂಡಿದೆ. ನಗರ ವ್ಯಾಪ್ತಿಯಲ್ಲಿ 'ಇ-ವೇಸ್ಟ್' ತೊಟ್ಟಿಯನ್ನು ಇರಿಸಲಾಗಿದೆ. ಕೇವಲ ಒಬ್ಬರು ಖಾಯಂ ನೌಕರ ಮಾತ್ರ ತ್ಯಾಜ್ಯ ನಿರ್ವಹಣಾ ವಿಭಾಗದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು 35 ಜನ ಕಾರ್ಮಿಕರನ್ನು ಬಳಸಿಕೊಂಡು ಹೊರಗುತ್ತಿಗೆ ಪಡೆದುಕೊಂಡ ಸ್ಥಳೀಯ ಸಂಸ್ಥೆ ತ್ಯಾಜ್ಯ ನಿರ್ವಹಣೆ ಮಾಡುತ್ತಿದೆ. ಟ್ರಕ್, ಪಿಕ್‌ಅಪ್ ಮತ್ತು ರಿಕ್ಷಾ ಬಳಸಿಕೊಂಡು ಪೇಟೆ ವ್ಯಾಪ್ತಿಯ ಮನೆ ಹಾಗೂ ಅಂಗಡಿಗಳಿಂದ ತ್ಯಾಜ್ಯ ಸಂಗ್ರಹಿಸಿ ಸಾಗಾಟ ಮಾಡಲಾಗುತ್ತಿದೆ. ಪೌರ ಕಾರ್ಮಿಕರಿಗೆ ತರಬೇತಿ ವ್ಯವಸ್ಥೆಯನ್ನು ಕಲ್ಪಿಸಿರುವ ಪುರಸಭೆ ಅವರಿಗೆ ಕಾಲಕಾಲಕ್ಕೆ ವೈದ್ಯಕೀಯ ಸೌಲಭ್ಯವನ್ನು ನೀಡುತ್ತಿದೆ. ತ್ಯಾಜ್ಯ ನಿರ್ವಹಣೆಗಾಗಿ ನಗರದಿಂದ 10 ಕಿ.ಮೀ ದೂರದಲ್ಲಿರುವ ಮೂಡಬಿದ್ರೆ-ಬಂಟ್ವಾಳ ರಸ್ತೆಯ ಕರಿಂಜೆ ಮಾರಿಂಜ ಗುಡ್ಡ ಎಂಬಲ್ಲಿ 4.25 ಎಕ್ರೆ ಜಾಗವನ್ನು ಹೊಂದಿದ್ದು ವ್ಯವಸ್ಥಿತ ರೀತಿಯಲ್ಲಿ ತ್ಯಾಜ್ಯ ನಿರ್ವಹಣೆ ಮಾಡಲಾಗುತ್ತಿದೆ. ಇಲ್ಲಿ ತ್ಯಾಜ್ಯದಿಂದ ಗೊಬ್ಬರ ತಯಾರಿಸುವ ಘಟಕವು ಕಾರ್ಯನಿರ್ವಹಿಸುತ್ತಿದ್ದು, ಎರೆಹುಳು ಗೊಬ್ಬರ ತಯಾರಿಕೆ ಮಾಡಲಾಗುತ್ತಿದೆ. ಬಯೋಗ್ಯಾಸ್ ತಯಾರಿಕಾ ಘಟಕವನ್ನು ಸ್ಥಾಪಿಸಲಾಗಿದೆ. ಗ್ರಾಮೀಣ ಪ್ರದೇಶದಿಂದ ನಗರಕ್ಕೆ ಬರುವವರು ಕಸವನ್ನು ನಗರದಲ್ಲಿ ಎಸೆಯುವುದರಿಂದ ತ್ಯಾಜ್ಯ ಪ್ರಮಾಣ ಅಧಿಕವಾಗಿದೆ ಎನ್ನುವುದು ಪಾಲಿಕೆ ಅಧಿಕಾರಿಗಳ ಅಭಿಪ್ರಾಯ. ಸ್ಥಳೀಯ ರೋಟರಿ, ಲಯನ್ಸ್‌ನಂತಹ ಸಂಸ್ಥೆಗಳು, ಶೈಕ್ಷಣಿಕ ಸಂಸ್ಥೆಗಳು, ಮಾಧ್ಯಮ ಹಾಗೂ ಇತರ ಸ್ಥಳೀಯ ಸಂಘ ಸಂಸ್ಥೆಗಳು ತ್ಯಾಜ್ಯ ನಿರ್ವಹಣೆಯಲ್ಲಿ ಉತ್ತಮ ಸಹಕಾರ ನೀಡುತ್ತಿರುವುದಾಗಿ ಪಾಲಿಕೆ ತಿಳಿಸಿದೆ. ನಗರದ ಹೆಚ್ಚಿನ ಪ್ರದೇಶದಲ್ಲಿ ಪ್ರತಿನಿತ್ಯ ತ್ಯಾಜ್ಯ ಸಂಗ್ರಹ ಮಾಡುತ್ತಿದ್ದು, ಸಾರ್ವಜನಿಕರಲ್ಲಿ ಜಾಗೃತಿಯನ್ನು ಮೂಡಿಸಲು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

## ಮುಲ್ಕಿ ಪುರಸಭೆ

ಮಂಗಳೂರು ತಾಲೂಕಿನ ಮುಲ್ಕಿ ನಗರ ಪಂಚಾಯತ್ 1973ರಲ್ಲಿ ಮುಲ್ಕಿ ಪಟ್ಟಣ ಪಂಚಾಯತ್ ಆಗಿ ರಚನೆಯಾಯಿತು. 2015ರಲ್ಲಿ 11 ಚ.ಕಿ.ಮೀ. ವ್ಯಾಪ್ತಿ ಹೊಂದಿರುವ ಮುಲ್ಕಿ ಪಟ್ಟಣ ಪಂಚಾಯತನ್ನು ಕರ್ನಾಟಕ ಸರಕಾರ, ನಗರ ಪಂಚಾಯತ್ ಆಗಿ ಉನ್ನತೀಕರಿಸಿತು.

ಪಂಚಾಯತ್‌ನ ಒಟ್ಟು ಜನಸಂಖ್ಯೆ 2011ರ ಜನಗಣತಿ ಪ್ರಕಾರ 17,288.ಇದರ ವ್ಯಾಪ್ತಿಯಲ್ಲಿ 17 ವಾರ್ಡ್‌ಗಳಿದ್ದು 3500 ಕುಟುಂಬಗಳನ್ನು ಒಳಗೊಂಡಿದೆ. ಹೊಟೇಲ್, ಅಂಗಡಿ, ಬಾರ್ ಸಹಿತ ಸುಮಾರು 600 ವಾಣಿಜ್ಯ ಕಟ್ಟಡ/ಕೋಣೆಗಳಿವೆ. ಆರೋಗ್ಯ ಪರಿವೀಕ್ಷಕರು ತ್ಯಾಜ್ಯ ನಿರ್ವಹಣೆಯ ಮೇಲುಸ್ತುವಾರಿಯನ್ನು ನೋಡುತ್ತಿದ್ದು, ತ್ಯಾಜ್ಯ ಸಂಗ್ರಹಣೆಯನ್ನು 'ವಿನಾಯಕ ಎಂಟರ್‌ಪ್ರೈಸಸ್' ಎಂಬ ಸ್ಥಳೀಯ ಸಂಸ್ಥೆಗೆ ಹೊರ ಗುತ್ತಿಗೆ ನೀಡಲಾಗಿದೆ. ಮನೆ–ಮನೆ ಕಸ ಸಂಗ್ರಹ ಕಾರ್ಯವನ್ನು ಈ ಸಂಸ್ಥೆ ನಿರ್ವಹಿಸುತ್ತಿದೆ. ಸಾರ್ವಜನಿಕ ಸ್ಥಳಗಳಲ್ಲಿ ತ್ಯಾಜ್ಯ ನಿರ್ವಹಣೆ ಮಾಡಲು 'ಇಬ್ಬರು ಕಾರ್ಮಿಕರನ್ನು ನೇಮಿಸಲಾಗಿದೆ. 'ಪ್ರತಿನಿತ್ಯ 7.5 ಟನ್ ತ್ಯಾಜ್ಯವನ್ನು ಸಂಗ್ರಹಿಸಲಾಗುತ್ತಿದೆ.ತ್ಯಾಜ್ಯ ಸಂಗ್ರಹಕ್ಕಾಗಿ ಒಂದು ಟಾಟಾ 407, 3 ಅಟೋರಿಕ್ಷಾ, ಮತ್ತು ಒಂದು ಟ್ರ್ಯಾಕ್ಟರನ್ನು ಬಳಸಲಾಗುತ್ತಿದೆ.

ತ್ಯಾಜ್ಯ ನಿರ್ವಹಣೆಗಾಗಿ ಬಪ್ಪನಾಡು ಗ್ರಾಮದ ಮೆಡಲಿನ್ ಶಿಕ್ಷಣ ಸಂಸ್ಥೆಯ ಸಮೀಪ 2.38 ಎಕ್ರೆ ಜಾಗವನ್ನು ಕಾಯ್ದಿರಿಸಿದ್ದು, ಇಲ್ಲಿ ಲೀಚೆಟ್‌ನ್ನು ವೈಜ್ಞಾನಿಕ ಕ್ರಮದಲ್ಲಿ ನಿರ್ವಹಿಸಲಾಗುತ್ತಿದೆ. ಇಲ್ಲಿ ಗೊಬ್ಬರ ತಯಾರಿಕಾ ಘಟಕವನ್ನು ಪ್ರಾರಂಭಿಸಲಾಗಿದೆ ಹಾಗೂ ಎರೆಹುಳು ಗೊಬ್ಬರ ತಯಾರಿಸುವ ಯೋಜನೆಯನ್ನು ಹಾಕಿಕೊಂಡಿದೆ. ಗೊಬ್ಬರದಿಂದ ಪ್ರತೀ ವರ್ಷ 6 ಲಕ್ಷದಷ್ಟು ಆದಾಯ ಸಂಗ್ರಹಿಸಲಾಗುತ್ತಿದೆ. ನಗರ ಪಂಚಾಯತ್ ಕಾರ್ಮಿಕರ ಯೋಗ ಕ್ಷೇಮದ ಬಗ್ಗೆಯೂ ಕಾಳಜಿಯನ್ನು ಹೊಂದಿದೆ. ಮುಕ್ಕಾದಲ್ಲಿರುವ ಶ್ರೀನಿವಾಸ ಆಸ್ಪತ್ರೆಯೊಂದಿಗೆ ಕಾರ್ಮಿಕರಿಗೆ ವೈದ್ಯಕೀಯ ಸೌಲಭ್ಯವನ್ನು ಒದಗಿಸುವ ಒಪ್ಪಂದ ಮಾಡಿಕೊಂಡಿದೆ. ಪ್ರತೀ ಮನೆಯಿಂದ ತಿಂಗಳಿಗೆ 30 ರೂಪಾಯಿ ಹಾಗೂ ಅಂಗಡಿ, ಹೋಟೇಲ್‌ಗಳಿಂದ ಅವರ ವ್ಯವಹಾರಕ್ಕೆ ಅನುಗುಣವಾಗಿ ತಿಂಗಳಿಗೆ ಗರಿಷ್ಠ 600 ರೂಪಾಯಿಗಳ ತನಕ ಶುಲ್ಕ ವಿಧಿಸಲಾಗುತ್ತಿದೆ. ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಹೆಚ್ಚು ಆದ್ಯತೆಯನ್ನು ನೀಡಲಾಗುತ್ತಿದೆ, ನಿರ್ವಹಣಾ ಘಟಕದಲ್ಲಿಯೂ ಕಾರ್ಮಿಕರು ವಿಭಜಿಸುವ ಕೆಲಸವನ್ನು ಮಾಡುತ್ತಾರೆ.

**ಬೆಳ್ತಂಗಡಿ ಪಟ್ಟಣ ಪಂಚಾಯತ್**

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ಪಟ್ಟಣ ಪಂಚಾಯತ್ 1996ರಲ್ಲಿ ರಚನೆಯಾಯಿತು. ಬೆಳ್ತಂಗಡಿ ಪೇಟೆ, ಉಜಿರೆ, ಗುರುವಾಯನಕೆರೆ ಸೇರಿದಂತೆ ಸುತ್ತಲಿನ ಪ್ರದೇಶಗಳ ಪ್ರಮುಖ ವ್ಯಾಪಾರ ಕೇಂದ್ರ. ನಗರ ಸಂಸ್ಥೆಯ ಒಟ್ಟು ವ್ಯಾಪ್ತಿಯು 8.84 ಚದರ ಕಿ.ಮಿ ಆಗಿದ್ದು 2011ರ ಜನಗಣತಿ ಪ್ರಕಾರ 3825 ಗಂಡಸರು ಮತ್ತು 3921 ಸ್ತ್ರೀಯರ ಸಹಿತ ಒಟ್ಟು 7746 ಜನಸಂಖ್ಯೆಯನ್ನು ಹೊಂದಿದೆ. ಇಲ್ಲಿ ಸಾಕ್ಷರತಾ ಪ್ರಮಾಣವು ಶೇಕಡ 76ರಷ್ಟಿದ್ದು ಉಳಿದ ನಗರ ಸ್ಥಳೀಯ ಸಂಸ್ಥೆಗಳಿಗೆ ಹೋಲಿಸಿದರೆ ಕಡಿಮೆ ಇದೆ. ಒಟ್ಟು 1821 ಕುಟುಂಬಗಳು ಹಾಗೂ

800ಕ್ಕೂ ಹೆಚ್ಚು ವಾಣಿಜ್ಯ ಕಟ್ಟಡಗಳಿವೆ. ಧರ್ಮಸ್ಥಳ–ಮಂಗಳೂರು ರಸ್ತೆಯು ನಗರದ ಮೂಲಕ ಹಾದು ಹೋಗುವುದರಿಂದ ಪ್ರವಾಸಿಗಳ ಸಂಖ್ಯೆಯು ಅಧಿಕವಾಗಿದೆ.

ಒಟ್ಟು 11 ವಾರ್ಡ್‌ಗಳಿರುವ ಪಟ್ಟಣ ಪಂಚಾಯತ್‌ನಲ್ಲಿ ತ್ಯಾಜ್ಯ ಸಂಗ್ರಹ ಹಾಗೂ ವಿಲೇವಾರಿ ಕಾರ್ಯವನ್ನು ಹೊರಗುತ್ತಿಗೆ ನೀಡಲಾಗಿದೆ. ಕೇವಲ 3 ಮಂದಿ ಖಾಯಂ ಪೌರ ಕಾರ್ಮಿಕರನ್ನು ಹೊಂದಿದ್ದು 13 ಹುದ್ದೆ ಖಾಲಿ ಇದೆ.ಮನೆ–ಮನೆ ಕಸ ಸಂಗ್ರಹಕ್ಕೆ ಆದ್ಯತೆ ನೀಡಿರುವುದರಿಂದ ಪ್ರತೀ ಮನೆಯಿಂದ ತಿಂಗಳಿಗೆ 15 ರೂಪಾಯಿ, ಅಂಗಡಿಗಳಿಗೆ 50 ರೂಪಾಯಿ ಮತ್ತು ಹೋಟೆಲುಗಳಿಗೆ 100 ರೂಪಾಯಿ ತ್ಯಾಜ್ಯ ನಿರ್ವಹಣಾ ತೆರಿಗೆ ವಿಧಿಸಲಾಗುತ್ತಿದೆ. ತೆರಿಗೆ ಸಂಗ್ರಹವನ್ನು 2–3 ತಿಂಗಳಿಗೊಮ್ಮೆ ಅಥವಾ ವಾರ್ಷಿಕ ತೆರಿಗೆ ಕಟ್ಟುವ ಸಂದರ್ಭಗಳಲ್ಲಿ ವಸೂಲಿ ಮಾಡಲಾಗುತ್ತಿದೆ.

ತ್ಯಾಜ್ಯ ಸಂಗ್ರಹ ಹಾಗೂ ಸಾಗಾಟಕ್ಕೆ 8 ಪೌರ ಕಾರ್ಮಿಕರನ್ನು ನೇಮಿಸಿಕೊಳ್ಳಲಾಗಿದೆ. ತ್ಯಾಜ್ಯ ಸಾಗಾಟಕ್ಕೆ 1 ಅಟೋ ಟಿಪ್ಪರ್, 1 ಟ್ರ್ಯಾಕ್ಟರ್ ಮತ್ತು 1 ಹೈಡ್ರಾಲಿಕ್ ಸ್ವಯಂಚಾಲಿತ ಟಿಪ್ಪರ್‌ನ್ನು ಬಳಸಲಾಗುತ್ತಿದೆ. ತ್ಯಾಜ್ಯ ವಿಲೇವಾರಿಗೆ ನಗರ ಸಂಸ್ಥೆಗೆ ಸ್ವಂತ ಜಾಗವಿರದ ಕಾರಣದಿಂದ ಸರಕಾರವು 6 ಕಿ. ಮಿ ದೂರದಲ್ಲಿರುವ ಕೊಯ್ಯೂರು ಎಂಬಲ್ಲಿ 3 ಎಕ್ರೆ ಜಾಗವನ್ನು ನೀಡಿದೆ. ಅಲ್ಲಿ ತ್ಯಾಜ್ಯ ವಿಭಜನೆ ನಡೆಯುತ್ತಿದ್ದು, ಗೊಬ್ಬರ ತಯಾರಿಕಾ ಘಟಕವು ಕಾರ್ಯ ನಿರ್ವಹಿಸುತ್ತಿದೆ. ನಿರುಪಯುಕ್ತ ತ್ಯಾಜ್ಯವನ್ನು ಅಲ್ಲಿಯೇ ಭೂಭರ್ತಿ ಮಾಡಲಾಗುತ್ತಿದ್ದು ಲೀಚೆಟ್ ವ್ಯವಸ್ಥೆ ಹಾಗೂ ಮಣ್ಣಿನ ಹೊದಿಕೆ ಕ್ರಮವನ್ನು ವೈಜ್ಞಾನಿಕವಾಗಿ ಅನುಸರಿಸುತ್ತಿರುವುದು ಕಂಡು ಬರುವುದಿಲ್ಲ.

ಹೆಚ್ಚಿನ ಜಾಗಗಳಲ್ಲಿ ಪ್ರತಿನಿತ್ಯ ತ್ಯಾಜ್ಯ ಸಂಗ್ರಹಿಸುತ್ತಿದ್ದು, ದಟ್ಟಣೆ ಇರದ ಪ್ರದೇಶಗಳಲ್ಲಿ 2–3 ದಿನಗಳಿಗೊಮ್ಮೆ ಸಂಗ್ರಹಿಸುತ್ತಿದ್ದಾರೆ. ತ್ಯಾಜ್ಯ ನಿರ್ವಹಣೆಯಲ್ಲಿ ಶಾಲಾ–ಕಾಲೇಜುಗಳು ಹಾಗೂ ಸ್ವಯಂಸೇವಾ ಸಂಸ್ಥೆಗಳು ಉತ್ತಮ ಸಹಕಾರ ನೀಡುತ್ತಿದೆ. ಅಲ್ಲಲ್ಲಿ ಎಚ್ಚರಿಕೆ ಫಲಕಗಳನ್ನು ಹಾಕುವುದರ ಮೂಲಕ ಜನಜಾಗೃತಿ ಕೆಲಸವು ನಡೆಯುತ್ತಿದ್ದು ಜನರ ಹಾಗೂ ಜನಪ್ರತಿನಿಧಿಗಳ ಸಹಕಾರ ಉತ್ತಮವಾಗಿದೆ ಎಂಬ ಅಭಿಪ್ರಾಯವನ್ನು ಅಧಿಕಾರಿಗಳು ನೀಡಿದ್ದಾರೆ. ಪ್ರತಿನಿತ್ಯ ಸರಾಸರಿ 2 ಟನ್‌ಗಳಷ್ಟು ತ್ಯಾಜ್ಯ ಉತ್ಪಾದನೆಯಾಗುತ್ತಿದ್ದು ಜನರಿಗೆ ಮೂಲದಲ್ಲಿಯೇ ತ್ಯಾಜ್ಯ ವಿಭಜನೆ ಮಾಡಲು ಜಾಗೃತಿ ಮೂಡಿಸಲಾಗಿದೆ.

**ಸುಳ್ಯ ಪಟ್ಟಣ ಪಂಚಾಯತ್**

ಸುಳ್ಯ ಪಟ್ಟಣ ಪಂಚಾಯತ್ ಜೂನ್ 1, 1996ರಂದು ರಚನೆಗೊಂಡಿದ್ದು, 18 ವಾರ್ಡ್‌ಗಳನ್ನು ಒಳಗೊಂಡಿದೆ. ಒಟ್ಟು 6.61 ಚದರ ಕಿ.ಮೀ. ವಿಸ್ತೀರ್ಣವನ್ನು ಹೊಂದಿರುವ ಪಂಚಾಯತ್‌ನಲ್ಲಿ

2011ರ ಜನಗಣತಿ ಪ್ರಕಾರ 9698 ಪುರುಷರು ಮತ್ತು 10260 ಮಹಿಳೆಯರ ಸಹಿತ ಒಟ್ಟು 19958 ಜನಸಂಖ್ಯೆಯನ್ನು ಹೊಂದಿರುತ್ತದೆ. ನಗರದ ಜನಸಾಂದ್ರತೆಯು 922 ಇದ್ದು 3625 ಕುಟುಂಬಗಳನ್ನು ಒಳಗೊಂಡಿದೆ.ಇದಲ್ಲದೆ ಒಟ್ಟು 660 ವಾಣಿಜ್ಯ ಕಟ್ಟಡಗಳು ಹಾಗೂ 6 ಸಣ್ಣ ಕೈಗಾರಿಕೆಗಳನ್ನು ಹೊಂದಿದೆ. ಪ್ರತೀ ಆದಿತ್ಯವಾರ ಎ.ಪಿ.ಎಂ.ಸಿ ಆವರಣದಲ್ಲಿ ವಾರದ ಸಂತೆಯಾಗುತ್ತಿದ್ದು ಅಲ್ಲಿನ ತ್ಯಾಜ್ಯವನ್ನು ನಗರಸಭೆಯೇ ಸಂಗ್ರಹಿಸಿ ವಿಲೇವಾರಿ ಮಾಡುತ್ತಿದೆ. ಮಡಿಕೇರಿ–ಮಂಗಳೂರು ರಾಜ್ಯ ಹೆದ್ದಾರಿಯು ಸುಳ್ಯ ನಗರದ ಒಳಗಡೆಯಿಂದಲೇ ಹಾದು ಹೋಗಿದ್ದು ಜನಪ್ರವಾಹ ಸಹಜವಾಗಿಯೇ ದೊಡ್ಡ ಪ್ರಮಾಣದಲ್ಲಿದೆ. ಪಟ್ಟಣ ಪಂಚಾಯತ್ ತ್ಯಾಜ್ಯ ಸಂಗ್ರಹ ಮತ್ತು ವಿಭಜನೆಗೆ ಸಂಬಂಧಿಸಿ ಜಾಗೃತಿ ಮೂಡಿಸಿದರೂ, ಯಾವುದೇ ಕಾನೂನು ಕ್ರಮಗಳನ್ನು ಕೈಗೊಳ್ಳದಿರುವುದರಿಂದ ನಗರದ ಯಾವುದೇ ಭಾಗದಲ್ಲಿ ಸಮರ್ಪಕ ತ್ಯಾಜ್ಯ ವಿಭಜನೆ ಇಲ್ಲದಿರುವುದು ಕಂಡು ಬರುತ್ತದೆ.

ಮೇಲ್ನೋಟಕ್ಕೆ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ಎಲ್ಲಾ ನಿಯಮಾವಳಿಗಳನ್ನು ಅನುಸರಿಸುತ್ತಿರುವುದು ಆಡಳಿತಾತ್ಮಕವಾಗಿ ಕಂಡುಬಂದರೂ, ಸ್ವಚ್ಛತೆಯ ಕೊರತೆ ನಗರದಲ್ಲಿ ಎದ್ದು ಕಾಣುತ್ತಿದೆ. ನಗರದ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣಾ ಘಟಕಕ್ಕೆ ಸರಿಯಾದ ಜಾಗದ ಕೊರತೆ ಇದ್ದು, ನಗರದಲ್ಲಿ ಸುಮಾರು 7 ಕಿ.ಮೀ ದೂರದ ಪೆರಾಜೆ ಗ್ರಾಮ ಪಂಚಾಯತ್‌ಗೆ ಸಂಬಂಧಿಸಿದ ಕಲ್ಚರ್ಪೆಯಲ್ಲಿ 3 ಎಕ್ರೆ ಪ್ರದೇಶದಲ್ಲಿ ತ್ಯಾಜ್ಯ ನಿರ್ವಹಣೆ ಮತ್ತು ಭೂಭರ್ತಿಗೆ ವ್ಯವಸ್ಥೆ ಮಾಡಲಾಗಿದೆ. ಇಲ್ಲಿ ತ್ಯಾಜ್ಯ ನೀರು(ಲೀಜೆಟ್) ಹರಿದು ಹೋಗಲು ಯಾವುದೇ ವೈಜ್ಞಾನಿಕ ಕ್ರಮ ಕೈಗೊಂಡಿಲ್ಲ. ಗೊಬ್ಬರ ತಯಾರಿಕೆಗಾಗಿ ಕಟ್ಟಡ ನಿರ್ಮಾಣವಾದರೂ, ಯಾವುದೇ ರೀತಿಯಲ್ಲಿ ತ್ಯಾಜ್ಯ ಬಳಕೆ ಮಾಡದಿರುವುದು ಕಂಡುಬಂದಿದೆ. ಈ ಸಂಸ್ಥೆ ತ್ಯಾಜ್ಯ ನಿರ್ವಹಣಾ ವೆಚ್ಚ ಭರಿಸಲು ಸಾರ್ವಜನಿಕರಿಗೆ ಯಾವುದೇ ವಿಶೇಷ ತೆರಿಗೆ ವಿಧಿಸುತ್ತಿಲ್ಲ. ಜನಪ್ರತಿನಿಧಿ (ಕೌನ್ಸೆಲರ್)ಗಳು ಅಧಿಕಾರಿಗಳಿಗೆ ಸೂಕ್ತ ರೀತಿಯಲ್ಲಿ ಸ್ಪಂದಿಸದಿರುವುದು ಕಂಡುಬರುತ್ತದೆ. ಪಟ್ಟಣ ಪಂಚಾಯತ್ ಕಛೇರಿಯ ಪಕ್ಕದಲ್ಲೆ ಒಂದು ತ್ಯಾಜ್ಯ ವಿಭಜನೆ ಮಾಡುವ ಕಟ್ಟಡವನ್ನು ನಿರ್ಮಾಣ ಮಾಡಿದರೂ, ಬಹುಭಾಗ ವಾಹನ ನಿಲುಗಡೆಗೆ ಬಳಕೆಯಾಗುತ್ತಿದ್ದು, ಅಲ್ಪ ಸ್ವಲ್ಪ ತ್ಯಾಜ್ಯವನ್ನು ಮಾತ್ರ ವಿಭಜಿಸಲಾಗುತ್ತಿದೆ.[15] ಕಾರ್ಮಿಕರು ನಗರದ ತ್ಯಾಜ್ಯ ಸಂಗ್ರಹ ಕಾರ್ಯದಲ್ಲಿ ನಿರತರಾಗಿದ್ದರೂ, ಪ್ರತಿನಿತ್ಯ ತ್ಯಾಜ್ಯ ಸಂಗ್ರಹ ಸಮರ್ಪಕವಾಗಿಲ್ಲ ಎನ್ನುವುದು ಸ್ಥಳೀಯರ ದೂರು. ಈ ತನಕ ಪಟ್ಟಣ ಪಂಚಾಯತ್ ಯಾವುದೇ ದಂಡವನ್ನು ವಿಧಿಸಿರುವುದಿಲ್ಲ. ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ಸಂಪೂರ್ಣ ಮಾಹಿತಿಯ ಕೊರತೆಯು ನಿರ್ವಹಣೆಯ ಗುಣಮಟ್ಟವನ್ನು ತೋರಿಸುತ್ತದೆ. ಸುಳ್ಯ ನಗರದಲ್ಲಿ ಆಗಾಗ ಮಲೇರಿಯ, ಡೆಂಗ್ಯೂ ನಂತಹ ಸಾಂಕ್ರಾಮಿಕ ರೋಗಗಳು ಉಲ್ಬಣಿಸಿರುವ ಸಂದರ್ಭಗಳು ಹೆಚ್ಚಾಗಿವೆ. ಮುಂದಿನ ದಿನಗಳಲ್ಲಿ ತ್ಯಾಜ್ಯವನ್ನು

ನಿರ್ವಹಣೆ ಮಾಡಲು ಸ್ಥಳಾವಕಾಶವೇ ಇಲ್ಲದಂತಾಗಿದೆ. ಪ್ರಸ್ತುತ ಇರುವ ಭೂಭರ್ತಿ ಪ್ರದೇಶವು ಅರಣ್ಯದ ನಡುವೆಯೇ ಇದ್ದು 25ಕ್ಕೂ ಹೆಚ್ಚು ಮುಗಿಲೆತ್ತರದ ಮರಗಳು ಸತ್ತುಹೋಗಿ ಸ್ಮಶಾನ ಸದೃಶವಾಗಿ ಈ ಪ್ರದೇಶ ಗೋಚರಿಸುತ್ತಿದೆ.

## 4.2. ಗ್ರಾಮೀಣ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಸ್ತುತ (2017–18) ಒಟ್ಟು 5 ತಾಲೂಕುಗಳಿದ್ದು (2017–18ರಲ್ಲಿ ಹೊಸದಾಗಿ ಅಸ್ತಿತ್ವಕ್ಕೆ ಬಂದ ಕಡಬ ಮತ್ತು ಮೂಡಬಿದ್ರಿ ತಾಲೂಕು ಹೊರತುಪಡಿಸಿ) 232 ಗ್ರಾಮೀಣ ಸ್ಥಳೀಯ ಸಂಸ್ಥೆಗಳಿದ್ದು, ಅವುಗಳಲ್ಲಿ 29 ಗ್ರಾಮ ಪಂಚಾಯತ್‌ಗಳು 2014–15ರಲ್ಲಿ ಹೊಸದಾಗಿ ರಚನೆಗೊಂಡವುಗಳಾಗಿವೆ. ಕೋಷ್ಟಕ 4.2ರಲ್ಲಿ ಇವುಗಳ ಅಂಕಿ-ಅಂಶ ನೀಡಲಾಗಿದೆ.

**ಕೋಷ್ಟಕ: 4.2**

**ದಕ್ಷಿಣ ಕನ್ನಡ ಜಿಲ್ಲೆಯ ತಾಲೂಕುಗಳ ಹಾಗೂ ಗ್ರಾಮ ಪಂಚಾಯತ್‌ಗಳ ಅಂಕಿ-ಅಂಶ ಮತ್ತು ಭೌಗೋಳಿಕ ವಿಸ್ತೀರ್ಣ**

| ಕ್ರ ಸಂ. | ತಾಲೂಕು | ಹಿಂದೆ ಇದ್ದ ಗ್ರಾಪಂ. | ಹೊಸ ಗ್ರಾಪಂ. | ಒಟ್ಟು ಗ್ರಾಮಗಳು | ಭೌಗೋಳಿಕ ವಿಸ್ತೀರ್ಣ (ಚ.ಕಿಮೀ) | ಶೇಕಡ ಭಾಗ (%) | ಅಧ್ಯಯನಕ್ಕೆ ಒಳಪಡಿಸಿದ ಪಂ.ಗಳ ಸಂಖ್ಯೆ |
|---|---|---|---|---|---|---|---|
| 1 | ಬೆಳ್ತಂಗಡಿ | 43 | 5 | 80 | 1375 | 28.30 | 4 |
| 2 | ಬಂಟ್ವಾಳ | 47 | 12 | 81 | 735 | 18.13 | 5 |
| 3 | ಮಂಗಳೂರು | 49 | 7 | 100 | 923 | 18.99 | 5 |
| 4 | ಪುತ್ತೂರು | 37 | 4 | 67 | 1000 | 20.58 | 4 |
| 5 | ಸುಳ್ಯ | 27 | 1 | 40 | 826 | 17.00 | 3 |
| ಒಟ್ಟು | 5 | 203 | 29 | 368 | 4859 | 100 % | 21 |

ಒಟ್ಟು ಗ್ರಾಂ.ಪಂ.ಗಳು 232

**ಆಧಾರ:** 2011ರ ಜನಗಣತಿ (ದಕ್ಷಿಣ ಕನ್ನಡ ಜಿಲ್ಲಾ ಮಾನವ ಅಭಿವೃದ್ಧಿ ವರದಿ–2014, ಪು.41)

ತಾಲೂಕುಗಳ ಜನಸಂಖ್ಯೆ, ಭೌಗೋಳಿಕ ವಿಸ್ತೀರ್ಣ, ಒಟ್ಟು ಗ್ರಾಮಗಳು ಹಾಗೂ ಗ್ರಾಮಪಂಚಾಯತ್‌ಗಳು, ತಾಲೂಕು ವ್ಯಾಪ್ತಿಯ ನಗರಗಳ ಸಂಖ್ಯೆ ಮುಂತಾದ ಅಂಶಗಳಲ್ಲಿ ಭಿನ್ನತೆಗಳಿರುವುದರಿಂದ ಅನುಕೂಲಕರ ಯಾಧೃಚ್ಛಿಕ ಮಾದರಿಯನ್ನು ಬಳಸಿಕೊಂಡು ಬೆಳ್ತಂಗಡಿ ತಾಲೂಕಿನಿಂದ 4, ಬಂಟ್ವಾಳ ತಾಲೂಕಿನಿಂದ 5, ಮಂಗಳೂರು ತಾಲೂಕಿನಿಂದ 5, ಪುತ್ತೂರು

ತಾಲೂಕಿನಿಂದ 4 ಹಾಗೂ ಸುಳ್ಯ ತಾಲೂಕಿನಿಂದ 3 ಗ್ರಾಮ ಪಂಚಾಯತ್‌ಗಳನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ನಡೆಸಲಾಗಿದೆ. ಪಂಚಾಯತ್ ಕಾರ್ಯದರ್ಶಿ/ಅಭಿವೃದ್ಧಿ ಅಧಿಕಾರಿಗಳನ್ನು ಹಾಗೂ ಸ್ಥಳೀಯ ಜನಪ್ರತಿನಿಧಿಗಳನ್ನು ಸಂದರ್ಶಿಸಿ ಪ್ರಶ್ನಾವಳಿ ಮೂಲಕ ಮಾಹಿತಿ ಪಡೆಯಲಾಗಿದೆ ಹಾಗೂ ತ್ಯಾಜ್ಯ ಸಂಗ್ರಹಣಾ/ವಿಲೇವಾರಿ ಘಟಕಗಳಿಗೆ ಭೇಟಿ ನೀಡಿ ಪ್ರಾಥಮಿಕ ಮಾಹಿತಿಗಳನ್ನು ದಾಖಲಿಸಲಾಗಿದೆ. ಕೋಷ್ಟಕ 4.3 ರಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಪಂಚಾಯತ್‌ಗಳ ವಿವರಗಳನ್ನು ನೀಡಲಾಗಿದೆ.

**ಕೋಷ್ಟಕ: 4.3**

**ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಪಂಚಾಯತ್‌ಗಳ ವಿವರ**

| ಕ್ರಸಂ. | ಬೆಳ್ತಂಗಡಿ 43 | ಬಂಟ್ವಾಳ 47 | ಮಂಗಳೂರು 49 | ಪುತ್ತೂರು 37 | ಸುಳ್ಯ 27 |
|---|---|---|---|---|---|
| 1 | ಉಜಿರೆ | ಮಾಣಿ | ಮೆನ್ನಬೆಟ್ಟು | ಕಬಕ | ಸುಬ್ರಹ್ಮಣ್ಯ |
| 2 | ಹೊಸಂಗಡಿ | ತುಂಬೆ | ಕೆಮ್ರಾಲ್ | ಕಡಬ | ಬೆಳ್ಳಾರೆ |
| 3 | ಲಾಯಿಲ | ವಿಟ್ಲ | ಬಜ್ಪೆ | ಉಪ್ಪಿನಂಗಡಿ | ಪಂಜ |
| 4 | ಮಡಂತ್ಯಾರು | ಸಂಗಬೆಟ್ಟು | ಹಳೆಯಂಗಡಿ | ಕಾಣಿಯೂರು | – |
| 5 | – | ಮಂಚಿ | ಗುರುಪುರ | – | – |
| ಒಟ್ಟು | 4 | 5 | 5 | 4 | 3 |

**ಬೆಳ್ತಂಗಡಿ ತಾಲೂಕು**

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕು ಒಟ್ಟು 81 ಗ್ರಾಮಗಳನ್ನು ಒಳಗೊಂಡಿದ್ದು 1375 ಚ.ಕಿ.ಮೀ ವಿಸ್ತೀರ್ಣವನ್ನು ಹೊಂದಿದೆ. ಜಿಲ್ಲೆಯ ಒಟ್ಟು ಶೇಕಡದ 15.13ರಷ್ಟು ಭಾಗ ಬೆಳ್ತಂಗಡಿ ತಾಲೂಕಿನಲ್ಲಿದೆ. ತಾಲೂಕಿನ ಜನಸಂಖ್ಯೆ 2011ರ ಗಣತಿ ಪ್ರಕಾರ 2,66,589 ಇದ್ದು ದಶವಾರ್ಷಿಕ ಬೆಳವಣಿಗೆಯು 8.15 ಆಗಿದೆ. ಗ್ರಾಮೀಣ ಜನಸಂಖ್ಯೆಯು 94.45 ಮತ್ತು ನಗರ ಜನಸಂಖ್ಯೆಯು 5.55 ಆಗಿದ್ದು ಜಿಲ್ಲೆಯಲ್ಲಿ ಅತೀ ಕಡಿಮೆ ಪ್ರಮಾಣದ ನಗರವಾಸಿಗಳನ್ನು ಹೊಂದಿರುವ ತಾಲೂಕು, ಹಾಗೆಯೇ ಸಾಕ್ಷರತಾ ಪ್ರಮಾಣವು 84.06 ಶೇಕಡ ಆಗಿದ್ದು, ಅತೀ ಕಡಿಮೆ ಸಾಕ್ಷರತೆಯನ್ನು ಹೊಂದಿರುವ ತಾಲೂಕಾಗಿದೆ(ದ.ಕ ಜಿಲ್ಲಾ ಮಾನವ ಅಭಿವೃದ್ಧಿ ವರದಿ, 2014).

ಬೆಳ್ತಂಗಡಿ ತಾಲೂಕು ವ್ಯಾಪ್ತಿಯಲ್ಲಿ 48 ಗ್ರಾಮ ಪಂಚಾಯತ್‌ಗಳಿದ್ದು ಧರ್ಮಸ್ಥಳ, ಲಾಯಿಲ, ಅಳದಂಗಡಿ, ಮಡಂತ್ಯಾರು, ಉಜಿರೆ ಮತ್ತು ವೇಣೂರು ಪಂಚಾಯತ್‌ಗಳ ವ್ಯಾಪ್ತಿಯಲ್ಲಿ ವಾಣಿಜ್ಯ ಚಟುವಟಿಕೆಗಳು ಉಳಿದ ಪಂಚಾಯತ್‌ಗಳಿಗಿಂತ ಹೆಚ್ಚಾಗಿ ಕಂಡುಬರುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಉಜಿರೆ, ಹೊಸಂಗಡಿ, ಲಾಯಿಲ ಮತ್ತು ಮಡಂತ್ಯಾರು ಪಂಚಾಯತ್‌ಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಉಜಿರೆ ಗ್ರಾಮ ಪಂಚಾಯತ್**

ದ.ಕ.ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಯಲ್ಲಿ ಬರುವ, ಉಜಿರೆ ಗ್ರಾಮ ಪಂಚಾಯತ್ ಬೆಳ್ತಂಗಡಿಯಿಂದ ಧರ್ಮಸ್ಥಳ ಮಾರ್ಗದಲ್ಲಿ 6 ಕಿ.ಮೀ ದೂರವಿದ್ದು, ತ್ಯಾಜ್ಯ ವಿಲೇವಾರಿಗಾಗಿ ಅತೀ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದೆ. ಒಟ್ಟು 6567.94 ಎಕ್ರೆ ವಿಸ್ತೀರ್ಣವನ್ನು ಹೊಂದಿರುವ ಪಂಚಾಯತ್ 2011ರ ಜನಗಣತಿ ಪ್ರಕಾರ 14,329 ಜನಸಂಖ್ಯೆಯನ್ನು ಹೊಂದಿದೆ. ಇದರ ವ್ಯಾಪ್ತಿಯಲ್ಲಿ 11 ವಾರ್ಡ್‌ಗಳಿದ್ದು 3000 ಮನೆಗಳು ಮತ್ತು ಅಂಗಡಿ, ಹೊಟೇಲುಗಳ ಸಹಿತ 1150 ವಾಣಿಜ್ಯ ಚಟುವಟಿಕೆಗಳಿವೆ. ಶೇಕಡ 99ರಷ್ಟು ಸಾಕ್ಷರತಾ ಪ್ರಮಾಣವನ್ನು ಹೊಂದಿರುವ ಪಂಚಾಯತ್, ತ್ಯಾಜ್ಯ ನಿರ್ವಹಣೆಗಾಗಿ ಅನೇಕ ಕ್ರಮಗಳನ್ನು ಅನುಸರಿಸುತ್ತದೆ. ದಿನನಿತ್ಯ ತ್ಯಾಜ್ಯ ಸಾಗಾಟಕ್ಕೆ 2 ಸಣ್ಣ ಟಿಪ್ಪರ್‌ಗಳನ್ನು ಬಳಸಲಾಗುತ್ತಿದ್ದು ಪ್ರತೀದಿನ ಸರಾಸರಿ ಮೂರು ಲೋಡ್ ತ್ಯಾಜ್ಯ ಸಾಗಾಟ ಮಾಡುತ್ತಿದೆ. ಒಟ್ಟು 6 ಜನ ಪೌರಕಾರ್ಮಿಕರು ಮನೆ–ಮನೆ ಕಸ ಸಂಗ್ರಹ ಕಾರ್ಯವನ್ನು ನಡೆಸುತ್ತಿದ್ದಾರೆ. ಸಮರ್ಪಕ ನಿರ್ವಹಣೆಯ ದೃಷ್ಟಿಯಿಂದ ಗ್ರಾಮಸ್ಥರು ತಮ್ಮ ಮನೆ/ಅಂಗಡಿ/ಉದ್ಯಮ/ಕಛೇರಿಗಳಲ್ಲಿ ತ್ಯಾಜ್ಯಗಳನ್ನು ಕಡ್ಡಾಯವಾಗಿ 3 ವಿಭಾಗಗಳಾಗಿ ವಿಂಗಡಿಸಿ, ಪ್ರತ್ಯೇಕವಾಗಿ ಸಂಗ್ರಹಿಸಿ ಮನೆಯ ಸಮೀಪದ ರಸ್ತೆಯಲ್ಲಿ ಸಂಚರಿಸುವ ತ್ಯಾಜ್ಯ ಸಂಗ್ರಹಣಾ ವಾಹನಕ್ಕೆ ನೀಡುವಂತೆ ತಿಳಿಸಲಾಗಿದೆ. ಆ ಮೂರು ವಿಭಾಗಗಳೆಂದರೆ: 1. ಕೊಳೆಯುವ ತ್ಯಾಜ್ಯ (ಹಸಿಕಸ) 2. ಪ್ಲಾಸ್ಟಿಕ್ ಬಾಟಲಿ, ಪ್ಲಾಸ್ಟಿಕ್ ಚೀಲ ಇತ್ಯಾದಿ. 3. ಪೇಪರ್, ಮಣ್ಣಿನಲ್ಲಿ ಕರಗದ ವಸ್ತುಗಳು, ರಬ್ಬರ್, ಕಬ್ಬಿಣ, ಲೋಹಗಳು ಇತ್ಯಾದಿ.

ತ್ಯಾಜ್ಯ ನಿರ್ವಹಣಾ ಸೇವೆಗಾಗಿ ಗ್ರಾಮ ಪಂಚಾಯತ್ ಪ್ರತೀ ತಿಂಗಳು, ಪ್ರತೀ ಮನೆಗೆ ರೂ.50, ಹೊಟೇಲುಗಳಿಗೆ ರೂ 600, ಮಿನಿ ಕ್ಯಾಂಟೀನ್, ಜ್ಯೂಸ್ ಸೆಂಟರ್, ಐಸ್‌ಕ್ರೀಂ ಪಾರ್ಲರ್, ತರಕಾರಿ ಅಂಗಡಿಗಳಿಗೆ ರೂ 500, ಫ್ಯಾನ್ಸಿ, ಜೆರಾಕ್ಸ್, ಫೈನಾನ್ಸ್, ಪಾದರಕ್ಷೆ, ಟೈಲರ್, ಬೇಕರಿಗಳಿಗೆ ರೂ 100ರಂತೆ ಸೇವಾ ಶುಲ್ಕ ನಿಗದಿಪಡಿಸಿದೆ. ಸೇವಾ ಶುಲ್ಕವನ್ನು ಕ್ಲಪ್ತ ಸಮಯಕ್ಕೆ ಪಾವತಿಸುವಂತೆ ಮತ್ತು ಬೇರ್ಪಡಿಸದೇ ಇರುವ ಕಸವನ್ನು ಸಂಗ್ರಹಿಸುವುದಿಲ್ಲವೆಂಬ ವಿಶೇಷ ಸೂಚನೆಯನ್ನು ನೀಡಿದೆ. ತ್ಯಾಜ್ಯ ವಿಲೇವಾರಿಗಾಗಿ ನಗರದಿಂದ 4 ಕಿ.ಮೀ ದೂರದಲ್ಲಿರುವ

ಇಜ್ಜಾಲ (ಫಲಸದ ಗುರಿ) ಎಂಬಲ್ಲಿ 85 ಸೆಂಟ್ಸ್ ಜಾಗವನ್ನು ಹೊಂದಿದೆ. ಸಾಂಪ್ರಾದಾಯಿಕ ವಿಧಾನಗಳಾದ ಕೊಳವೆ ಗೊಬ್ಬರ (ಪೈಪ್ ಕಂಪೋಸ್ಟ್) ಹಾಗೂ ಪ್ಲಾಸ್ಟಿಕ್ ಸೌಧಗಳನ್ನು ಶೈಕ್ಷಣಿಕ ಸಂಸ್ಥೆ ಮತ್ತು ಇತರ ಸಾರ್ವಜನಿಕ ಜಾಗಗಳಲ್ಲಿ ಸ್ಥಾಪಿಸಿದೆ. ಸ್ಥಳೀಯ ಶಾಲಾ ಕಾಲೇಜುಗಳು ಹಾಗೂ ಸ್ವಯಂಸೇವಾ ಸಂಸ್ಥೆಗಳನ್ನು ಬಳಸಿಕೊಂಡು ಅನೇಕ ಜಾಗೃತಿ ಕಾರ್ಯ ಕ್ರಮಗಳನ್ನು ನಡೆಸಿರುತ್ತದೆ. ಮನೆ-ಮನೆ ಕಸ ಸಂಗ್ರಹಿಸುವ ವಿಧಾನ ಅನುಸರಿಸುತ್ತಿರುವ ಕಾರಣದಿಂದ ಸಾರ್ವಜನಿಕ ತೊಟ್ಟಿಗಳನ್ನು ತೆಗೆಯಲಾಗಿದೆ. ಪೌರಕಾರ್ಮಿಕರಿಗೆ ವಾರ್ಷಿಕ 15ಲಕ್ಷದಷ್ಟು ಸಂಬಳ ಪಾವತಿಯಾಗುತ್ತಿದೆ. ತ್ಯಾಜ್ಯ ವಿಲೇವಾರಿ ಘಟಕದಲ್ಲಿ ಸಾವಯವ ಗೊಬ್ಬರವನ್ನು ತಯಾರಿಸಲಾಗುತ್ತಿದೆ. ಪಂಚಾಯತ್ ನೀಡಿರುವ ಮಾಹಿತಿಯಂತೆ ಶೇಕಡ 70ರಷ್ಟು ತ್ಯಾಜ್ಯವನ್ನು ಸರಿಯಾಗಿ ಬಳಕೆ ಮಾಡಲಾಗುತ್ತಿದೆ. ಉಳಿದಂತೆ ಪ್ಲಾಸ್ಟಿಕ್, ಲೋಹ ಮುಂತಾದ ತ್ಯಾಜ್ಯಗಳನ್ನು ತ್ಯಾಜ್ಯ ಮರು ಉತ್ಪಾದನಾ ಘಟಕಗಳಿಗೆ ಪಂಚಾಯತ್ ನೀಡುತ್ತಿದೆ. ತ್ಯಾಜ್ಯವಿಭಜನೆಗೆ ಯಾವುದೇ ಯಂತ್ರವನ್ನು ಬಳಕೆ ಮಾಡುತ್ತಿಲ್ಲ, ಬದಲಾಗಿ ಮೂಲದಲ್ಲಿಯೇ ವಿಭಜನೆಗೆ ಹೆಚ್ಚು ಆದ್ಯತೆಯನ್ನು ನೀಡಿದೆ. ಉಳಿದ ತ್ಯಾಜ್ಯವನ್ನು ಸಂಗ್ರಹಣಾ ಘಟಕದಲ್ಲಿ ಕಾರ್ಮಿಕರೇ ಬೇರ್ಪಡಿಸುತ್ತಾರೆ.

**ಹೊಸಂಗಡಿ ಗ್ರಾಮ ಪಂಚಾಯತ್**

ಬೆಳ್ತಂಗಡಿ ತಾಲೂಕಿನ ಹೊಸಂಗಡಿ ಗ್ರಾಮ ಪಂಚಾಯತ್ ತಾಲೂಕಿನ ಅತ್ಯಂತ ಸಣ್ಣ ಗ್ರಾಮ ಪಂಚಾಯತ್ ಆಗಿದ್ದು, ತಾಲೂಕು ಕೇಂದ್ರದಿಂದ 26 ಕಿ.ಮೀ ದೂರದಲ್ಲಿರುವ ಮೂಡಬಿದ್ರೆ-ಬೆಳ್ತಂಗಡಿ ರಾಜ್ಯ ಹೆದ್ದಾರಿಯ ನಡುವೆ 'ಪೆರಿಂಜೆ' ಎಂಬಲ್ಲಿ ಇದರ ಪಂಚಾಯತ್ ಕಛೇರಿ ಕಾರ್ಯ ನಿರ್ವಹಿಸುತ್ತಿದೆ. ಪಂಚಾಯತ್‌ನ ಒಟ್ಟು ವಿಸ್ತೀರ್ಣ 2616.17 ಹೆಕ್ಟೇರ್. ಹೊಸಂಗಡಿ ಮತ್ತು ಬಡಕೋಡಿ ಗ್ರಾಮಗಳನ್ನು ಒಳಗೊಂಡಿರುವ ಈ ಪಂಚಾಯತ್‌ನ ಒಟ್ಟು ಜನಸಂಖ್ಯೆ 2011ರ ಜನಗಣತಿ ಪ್ರಕಾರ 4703. ಈ ಪಂಚಾಯತ್ ವ್ಯಾಪ್ತಿಯಲ್ಲಿ 959 ಮನೆಗಳಿದ್ದು, ಇಲ್ಲಿರುವ ಸುಮಾರು 22 ವಿವಿಧ ಸಂಘ ಸಂಸ್ಥೆಗಳು ಗ್ರಾಮದ ಅಭಿವೃದ್ಧಿಗೆ ಸಂಪೂರ್ಣವಾಗಿ ಸಹಕಾರ ನೀಡುತ್ತಿದೆ. ಕುಡಿಯುವ ನೀರು, ಆರೋಗ್ಯ ಹಾಗೂ ನೈರ್ಮಲ್ಯಕ್ಕೆ ಈ ಗ್ರಾಮ ಪ್ರಥಮ ಆದ್ಯತೆ ನೀಡಿದೆ. ಪಂಚಾಯತ್ ವ್ಯಾಪ್ತಿಯಲ್ಲಿ 2 ಸಾರ್ವಜನಿಕ ಶೌಚಾಲಯಗಳು, 5 ನೀರಿನ ಟ್ಯಾಂಕ್ ಮತ್ತು 18 ಪ್ಲಾಸ್ಟಿಕ್ ಸಂಗ್ರಹಣಾ ಸೌಧಗಳನ್ನು ನಿರ್ಮಿಸಲಾಗಿದೆ. ಎರಡು ಕಡೆಗಳಲ್ಲಿ ಪ್ಲಾಸ್ಟಿಕ್ ತ್ಯಾಜ್ಯಗಳ ರಾಶಿ ಹಾಕುವ ಜಾಗಗಳನ್ನು ರಚಿಸಲಾಗಿದೆ.

ಗ್ರಾಮದ ಪ್ರತಿಯೊಬ್ಬ ನಾಗರಿಕನೂ ಸ್ವಚ್ಛತೆ, ನೈರ್ಮಲ್ಯಕ್ಕೆ ಆದ್ಯತೆ ನೀಡಬೇಕೆಂಬ ಉದ್ದೇಶದಿಂದ ಮನೆ-ಮನೆಗಳಲ್ಲೂ ಶೌಚಾಲಯ ನಿರ್ಮಿಸಲಾಗಿದೆ. ಬಯಲು ಮಲ ವಿಸರ್ಜನೆಗೆ ಈ ಗ್ರಾಮ ಪಂಚಾಯತ್‌ನಲ್ಲಿ ಎಲ್ಲೂ ಅವಕಾಶವಿಲ್ಲ. ಸ್ವಚ್ಛ ಪರಿಸರ, ನಿರ್ಮಲ ಗ್ರಾಮ,

ಆರೋಗ್ಯ ಭಾಗ್ಯ, ಪ್ಲಾಸ್ಟಿಕ್ ಮುಕ್ತ ಪ್ರದೇಶ ಹೀಗೆ ಹಲವು ಮಂತ್ರಗಳನ್ನು ಈ ಗ್ರಾಮ ಪಂಚಾಯತ್‌ನಲ್ಲಿ ಅಳವಡಿಸಲಾಗಿದೆ. ಪಂಚಾಯತ್ ಸ್ವಚ್ಛತಾ ನೀತಿಯನ್ನು ಅಳವಡಿಸಿದ್ದು, ಅವುಗಳಲ್ಲಿ ಪ್ರಮುಖವಾಗಿ ಹೊಟೇಲುಗಳಲ್ಲಿ, ಅಂಗಡಿಗಳಲ್ಲಿ, ಕೋಳಿ ಸಾಕಾಣೆ ಮತ್ತು ಮಾರಾಟ ಕೇಂದ್ರಗಳಲ್ಲಿ ತ್ಯಾಜ್ಯ ನೀರು ಇಂಗಲು ಇಂಗು ಗುಂಡಿಗಳನ್ನು ನಿರ್ಮಿಸತಕ್ಕದ್ದು. ಇಲ್ಲಿ ತ್ಯಾಜ್ಯ ವಸ್ತುಗಳನ್ನು ಕಾಂಪೋಸ್ಟ್ ಗುಂಡಿಗಳಲ್ಲಿ ತುಂಬಿ ಗೊಬ್ಬರವಾಗಿ ಉಪಯೋಗಿಸಬೇಕು. ಮನೆ, ಅಂಗಡಿ, ಹೊಟೇಲುಗಳಲ್ಲಿ ಬಳಸಿದ ಪ್ಲಾಸ್ಟಿಕ್‌ಗಳನ್ನು ಹಾಕಿಡಲು ಪ್ರತ್ಯೇಕ ವ್ಯವಸ್ಥೆ ಮಾಡುವುದು ಮತ್ತು ಹಂತ ಹಂತವಾಗಿ ಪ್ಲಾಸ್ಟಿಕ್ ಮುಕ್ತ ಗ್ರಾಮವನ್ನಾಗಿಸುವುದು ಹಾಗೂ ಅಂಗಡಿಗಳಲ್ಲಿ ಹಸಿಮೀನು ಮಾರಾಟ ಜಾಗಗಳಲ್ಲಿ ಸಾಧ್ಯವಾದಷ್ಟು ಪೇಪರ್ ಬಳಕೆ ಮಾಡುವುದು.

ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಬಯಲು ಶೌಚಾಲಯ ಮುಕ್ತಗೊಳಿಸುವ ಮತ್ತು ಪ್ಲಾಸ್ಟಿಕ್ ನಿಯಂತ್ರಣಗೊಳಿಸುವ ಕುರಿತಾದ ವಿಶೇಷ ಚಿಂತನೆ, ಜಾಗೃತಿ, ಕಾರ್ಯಾನುಷ್ಠಾನಕ್ಕಾಗಿ 2007ರಲ್ಲಿ ನಿರ್ಮಲ ಗ್ರಾಮ ಪುರಸ್ಕಾರ ಪ್ರಶಸ್ತಿ ಲಭಿಸಿದೆ. ಎಲ್ಲಾ ಕುಟುಂಬಗಳಿಗೂ ಶೌಚಾಲಯ, ಪ್ಲಾಸ್ಟಿಕ್ ವಿಲೇವಾರಿಗಾಗಿ ಪ್ಲಾಸ್ಟಿಕ್ ಸಂಗ್ರಹಣಾ ಸೌಧ, ಜನಜಾಗೃತಿ ಕಾರ್ಯಕ್ರಮಗಳು, ಜಾಥಾಗಳು, ವಿವಿಧ ಸ್ಪರ್ಧೆಗಳನ್ನು ನಡೆಸಿ ಪ್ಲಾಸ್ಟಿಕ್ ಹಾಗೂ ಇತರ ತ್ಯಾಜ್ಯಗಳ ನಿಯಂತ್ರಣ ಮಾಡಲಾಗಿದೆ. 2010–11ರಲ್ಲಿ ರಾಜ್ಯ ನೈರ್ಮಲ್ಯ ರತ್ನ ಪ್ರಶಸ್ತಿ, ವಲಯ ಮಟ್ಟದ ಸ್ವರ್ಣ ನೈರ್ಮಲ್ಯ ಪ್ರಶಸ್ತಿ 2010–11, ತಾಲೂಕು ಮಟ್ಟದ ನೈರ್ಮಲ್ಯ ಪುರಸ್ಕಾರ 2010–11 ಮತ್ತು ಜಿಲ್ಲಾ ಮಟ್ಟದ ರಜತ ನೈರ್ಮಲ್ಯ ಪ್ರಶಸ್ತಿ 2010–11ನ್ನು ಈ ಪಂಚಾಯತ್ ಪಡೆದುಕೊಂಡಿದೆ.

ಈ ಪಂಚಾಯತ್ ತ್ಯಾಜ್ಯ ನಿರ್ವಹಣೆಗಾಗಿ ಯಾವುದೇ ತೆರಿಗೆಯನ್ನು ಸಾರ್ವಜನಿಕರಿಂದ ಸಂಗ್ರಹಿಸುವುದಿಲ್ಲ. ಸಾರ್ವಜನಿಕರು ತಮ್ಮ ತ್ಯಾಜ್ಯಗಳನ್ನು ತಾವೇ ವಿಲೇವಾರಿ ಮಾಡಿಕೊಳ್ಳುವಂತೆ ಉತ್ತೇಜಿಸಲಾಗಿದೆ. ಸ್ವಚ್ಛತಾ ನೀತಿ ಪಾಲಿಸದ ಅಂಗಡಿ, ಹೊಟೇಲು, ಉದ್ದಿಮೆ ಇತ್ಯಾದಿಗಳಿಗೆ ದಂಡ ವಿಧಿಸಲಾಗುತ್ತಿದೆ. ಉಳಿದ ಪಂಚಾಯತ್‌ಗಳಿಗೆ ಹೋಲಿಸಿದರೆ ಹೊಸಂಗಡಿ ಪಂಚಾಯತ್ 2 ತ್ಯಾಜ್ಯ ರಾಶಿ ಹಾಕುವ ಪ್ರದೇಶಗಳನ್ನು ಹೊಂದಿದೆ. ಇದರಿಂದ ತ್ಯಾಜ್ಯ ವಿಕೇಂದ್ರೀಕರಣ ಮಾಡಿದಂತಾಗುತ್ತದೆ. ಮತ್ತು ಸಾಗಾಟ ವೆಚ್ಚವೂ ಕಡಿಮೆಯಾಗುತ್ತದೆ. ಹೆಚ್ಚಾಗಿ ಜನರು ತ್ಯಾಜ್ಯವನ್ನು ತಾವೇ ವಿಲೇವಾರಿ ಮಾಡುವುದರಿಂದ ಯಾವುದೇ ಸಾವಯವ ಗೊಬ್ಬರ ತಯಾರಿಕಾ ಘಟಕಗಳು ಇದರ ವ್ಯಾಪ್ತಿಯಲ್ಲಿಲ್ಲ.

ಪ್ಲಾಸ್ಟಿಕ್ ತ್ಯಾಜ್ಯ, ಕಬ್ಬಿಣ, ಗಾಜು ಮತ್ತು ರಾಸಾಯನಿಕ ವಸ್ತುಗಳನ್ನು ಕಡ್ಡಾಯವಾಗಿ ತ್ಯಾಜ್ಯ ವಿಂಗಡಣಾ ಸೌಧಗಳಲ್ಲಿ ಹಾಕುವಂತೆ ಸೂಚಿಸಲಾಗಿದೆ. ಇದಕ್ಕಾಗಿ 17 ತ್ಯಾಜ್ಯ ವಿಂಗಡಣಾ ಸೌಧಗಳನ್ನು ಪಂಚಾಯತ್‌ನ ವಿವಿಧ ಭಾಗಗಳಲ್ಲಿ ನಿರ್ಮಿಸಲಾಗಿದೆ.

## ಲಾಯಿಲ ಗ್ರಾಮ ಪಂಚಾಯತ್

ದಕ್ಷಿಣ ಕನ್ನಡ ಜಿಲ್ಲೆಯ, ಬೆಳ್ತಂಗಡಿ ತಾಲೂಕಿನಲ್ಲಿರುವ ಲಾಯಿಲ ಗ್ರಾಮ ಪಂಚಾಯತ್, ಬೆಳ್ತಂಗಡಿ ನಗರಕ್ಕೆ ಹತ್ತಿರವಾಗಿದ್ದು 2011ರ ಜನಗಣತಿ ಪ್ರಕಾರ 7804 ಜನಸಂಖ್ಯೆಯನ್ನು ಹೊಂದಿದ್ದು 1950 ಕುಟುಂಬಗಳನ್ನು ಒಳಗೊಂಡಿದೆ. ಪಂಚಾಯತ್ ವ್ಯಾಪ್ತಿಯ ಪ್ರತಿ ಮನೆಯು ವೈಯಕ್ತಿಕ ಶೌಚಾಲಯ ಹೊಂದುವ ಮೂಲಕ ಬಯಲು ಮುಕ್ತ ಶೌಚಾಲಯ ಪಂಚಾಯತ್ ಆಗಿ ಘೋಷಿಸಲ್ಪಟ್ಟಿದೆ. 2006–07ನೇ ಸಾಲಿನಲ್ಲಿ ನಿರ್ಮಲ ಗ್ರಾಮ ಪುರಸ್ಕಾರ ಪಡೆದ 49 ಗ್ರಾಮ ಪಂಚಾಯತ್‌ಗಳಲ್ಲಿ ಲಾಯಿಲ ಸೇರಿರುತ್ತದೆ. ಮದುವೆ ಮತ್ತು ಸಮುದಾಯ ಭವನಗಳು, ಧಾರ್ಮಿಕ ಕೇಂದ್ರಗಳು, ಹಾಸ್ಟೆಲ್, ಶಾಲಾ–ಕಾಲೇಜುಗಳು ಹಾಗೂ ಅಂಗಡಿ ಮತ್ತಿತರ ವಾಣಿಜ್ಯ ಚಟುವಟಿಕೆಗಳನ್ನು ಸೇರಿಸಿ 110ರಷ್ಟು ಸಂಸ್ಥೆಗಳಿವೆ. ಲಾಯಿಲ ಗ್ರಾಮ ಪಂಚಾಯತ್‌ನ ಒಟ್ಟು ವಿಸ್ತೀರ್ಣ 1859 ಹೆಕ್ಟೇರ್ (4592.46 ಎಕ್ರೆ). ನಿರ್ಮಲ ಗ್ರಾಮ ಪುರಸ್ಕಾರ ಪಡೆದ ಲಾಯಿಲ ಗ್ರಾಮ ಪಂಚಾಯತ್ ಮೈಸೂರಿನ ಭಗೀರಥ ಸಂಸ್ಥೆಯ ಸಹಯೋಗದಲ್ಲಿ ಸಾವಯವ ಗೊಬ್ಬರ ಘಟಕವನ್ನು ಸ್ಥಾಪಿಸಿದೆ. ಮನೆ–ಮನೆಗಳಿಂದ ಮತ್ತು ಅಂಗಡಿ ಮತ್ತಿತರ ವಾಣಿಜ್ಯ ಸಂಕೀರ್ಣಗಳಿಂದ ಕಸ ಸಂಗ್ರಹಿಸಲು ಕೆಂಪು ಮತ್ತು ಹಸಿರು ಬಣ್ಣದ ಬಕೆಟ್‌ಗಳನ್ನು ಪಂಚಾಯತ್ ನೀಡಿದೆ. ಪ್ಲಾಸ್ಟಿಕ್ ಮತ್ತು ಕರಗುವ ಕಸವನ್ನು ಪ್ರತ್ಯೇಕವಾಗಿ ಸಂಗ್ರಹಿಸಿಟ್ಟು, ತ್ಯಾಜ್ಯ ಸಾಗಾಟ ವಾಹನದ ಮೂಲಕ ನಿರ್ವಹಣಾ ಘಟಕಕ್ಕೆ ಸಾಗಿಸಿ ಅಲ್ಲಿ ಕಾರ್ಮಿಕರ ಸಹಾಯದಿಂದ ಕಸ ವಿಭಜಿಸಿ, ಕರಗುವ ಕಸಕ್ಕೆ ಓ ಎಸ್–1 ಜೈವಿಕ ದ್ರಾವಣವನ್ನು ಸಿಂಪಡಿಸಿ ಒಂದು ವಾರದ ನಂತರ ಕಸವನ್ನು ಇನ್ನೊಂದು ತೊಟ್ಟಿಯಲ್ಲಿ ಹಾಕಿ 7 ವಾರಗಳ ನಂತರ ಅದು ಕರಗಿ ಗೊಬ್ಬರವಾಗುತ್ತದೆ. ಕರಗದ ತ್ಯಾಜ್ಯಗಳನ್ನು ಸೋಸಿ ತೆಗೆಯಲಾಗುತ್ತದೆ. ಪಂಚಾಯತ್ 'ಲಾಯಿಲ ಗೋಲ್ಡ್' ಎನ್ನುವ ಹೆಸರಿನಲ್ಲಿ ಈ ಗೊಬ್ಬರವನ್ನು ಮಾರುಕಟ್ಟೆಗೆ ಬಿಡುಗಡೆ ಮಾಡಿದೆ.

ಜನರಲ್ಲಿ ಜಾಗೃತಿಯನ್ನು ಮೂಡಿಸಲು ಸ್ವಚ್ಛತಾ ಉತ್ಸವ, ಸ್ವಚ್ಛತಾ ಜಾಥಾ, ಬೀದಿ ನಾಟಕ, ವಿಶ್ವ ಕೈ ತೊಳೆಯುವ ದಿನಾಚರಣೆ ಮತ್ತು ಮನೆ–ಮನೆಗೆ ತೆರಳಿ ಸ್ವಚ್ಛತೆಯ ಅರಿವು ಮೂಡಿಸಲಾಗಿದೆ. ಪ್ಲಾಸ್ಟಿಕ್ ಬಳಕೆಯನ್ನು ಗ್ರಾಮದಲ್ಲಿ ಸಂಪೂರ್ಣ ನಿಷೇಧಿಸಿ, ಬಟ್ಟೆ ಕೈ ಚೀಲವನ್ನು ಉಪಯೋಗಿಸುವಂತೆ ಪ್ರೋತ್ಸಾಹಿಸಲಾಗಿದೆ. ಈ ಮೂಲಕ ಪ್ಲಾಸ್ಟಿಕ್ ದುಷ್ಪರಿಣಾಮದ ಬಗ್ಗೆ ಅರಿವು/ಜಾಗೃತಿ ಮೂಡಿಸಲಾಗಿದೆ.

ಹೋಟೇಲುಗಳಲ್ಲಿ, ಅಂಗಡಿಗಳಲ್ಲಿ, ಕೋಳಿ ಸಾಕಾಣೆ ಹಾಗೂ ಮಾರಾಟ ಕೇಂದ್ರಗಳಲ್ಲಿ ತ್ಯಾಜ್ಯ ನೀರು ಇಂಗಲು ಇಂಗು ಗುಂಡಿಗಳನ್ನು ನಿರ್ಮಿಸಲು ಸೂಚನೆ ನೀಡಲಾಗಿದೆ. ತ್ಯಾಜ್ಯ ವಸ್ತುಗಳನ್ನು ಕಡ್ಡಾಯವಾಗಿ ಕಂಪೋಸ್ಟ್ ಗುಂಡಿಗಳಲ್ಲಿ ತುಂಬಿ ಗೊಬ್ಬರವಾಗಿ ಉಪಯೋಗಿಸುವಂತೆ

ಪಂಚಾಯತ್ ಆದೇಶಿಸಿದೆ. ಸ್ವಚ್ಛತಾ ನೀತಿಯನ್ನು ಕಡ್ಡಾಯವಾಗಿ ಪಾಲಿಸುವಂತೆ ನಾಗರಿಕರಿಗೆ ತಿಳಿಸಲಾಗಿದೆ. ಅಂಗಡಿಗಳಲ್ಲಿ ಸಾಮಾನುಗಳನ್ನು ಸಾಧ್ಯವಾದಷ್ಟು ಕಾಗದದಲ್ಲಿ ಸುತ್ತಿ ಅಥವಾ ಕಾಗದದ ಲಕೋಟೆಗಳ ಮೂಲಕ ಕಟ್ಟಿ ಕೊಡುವಂತೆ ಸೂಚಿಸಲಾಗಿದೆ. ಸ್ವಚ್ಛತಾ ನೀತಿ ಅನುಸರಿಸದ ಅಂಗಡಿಗಳಿಗೆ, ಹೊಟೇಲು, ಉದ್ದಿಮೆ ಇತ್ಯಾದಿಗಳಿಗೆ ದಂಡ ವಿಧಿಸುವುದು ಹಾಗೂ ಪರವಾನಿಗೆ ರದ್ಧತಿ ಕ್ರಮ ಕೈಗೊಳ್ಳುವುದನ್ನು ಪಂಚಾಯತ್ ಅನುಸರಿಸಿದೆ. ಪ್ರತೀ ವಾರ್ಡ್‌ನಲ್ಲಿ ಸ್ವಚ್ಛತಾ ಸಮಿತಿಯನ್ನು ರಚನೆ ಮಾಡಿದೆ. ಇದರಲ್ಲಿ ಗ್ರಾಮ ಪಂಚಾಯತ್ ಸದಸ್ಯರು, ಅಧ್ಯಕ್ಷರು, ಶಾಲಾ ಉಸ್ತುವಾರಿ ಸಮಿತಿ, ಮುಖ್ಯೋಪಧ್ಯಾಯರು ಹಾಗೂ ಅಂಗನವಾಡಿ ಕಾರ್ಯಕರ್ತೆಯರಿರುತ್ತಾರೆ. ತ್ಯಾಜ್ಯ ಸಂಗ್ರಹ ಕರವನ್ನು ಜನರಿಂದ ವಸೂಲಿ ಮಾಡುತ್ತಿದ್ದು ಪ್ರತೀ ಮನೆಯಿಂದ ತಿಂಗಳಿಗೆ ರೂಪಾಯಿ 30 ಮತ್ತು ಅಂಗಡಿ, ಹೋಟೇಲು, ಉದ್ದಿಮೆಗಳಿಂದ ತಿಂಗಳಿಗೆ 50 ರೂಪಾಯಿ ಯಂತೆ ಸಂಗ್ರಹಿಸಲಾಗುತ್ತಿದೆ. ಲಾಯಿಲ ಪಂಚಾಯತ್‌ನ ತ್ಯಾಜ್ಯ ನಿರ್ವಹಣಾ ಘಟಕವು ಪಂಚಾಯತ್‌ನಿಂದ ಸುಮಾರು 3 ಕಿ.ಮೀ ದೂರದ 'ಎರುಕಡಪ' ಎಂಬ ಸ್ಥಳದಲ್ಲಿ ಸುಮರು 50 ಸೆಂಟ್ಸ್ ಸರಕಾರಿ ಜಾಗದಲ್ಲಿದೆ. ಗ್ರಾಮೀಣ ಸ್ವಚ್ಛತಾ ಅನುಷ್ಠಾನದಲ್ಲಿ ಅತ್ಯುತ್ತಮ ಸಾಧನೆ ಮಾಡಿದ ದ.ಕ. ಜಿಲ್ಲೆಯ ಲಾಯಿಲ ಪಂಚಾಯತ್ 2011–12ನೇ ಸಾಲಿನಲ್ಲಿ ರಾಜ್ಯ ಮಟ್ಟದ ನೈರ್ಮಲ್ಯ ರತ್ನ ದ್ವಿತೀಯ ಸ್ಥಾನ ಮತ್ತು ಸ್ವರ್ಣ ನೈರ್ಮಲ್ಯ–ಪ್ರಥಮ ಸ್ಥಾನವನ್ನು ಪಡೆದುಕೊಂಡಿದೆ.

**ಮಡಂತ್ಯಾರು ಗ್ರಾಮ ಪಂಚಾಯತ್**

ಬೆಳ್ತಂಗಡಿ ತಾಲೂಕಿನ ಮಡಂತ್ಯಾರು ಗ್ರಾಮ ಪಂಚಾಯತ್ 3611.52 ಎಕ್ರೆ ವಿಸ್ತೀರ್ಣವನ್ನು ಹೊಂದಿದ್ದು 2011ರ ಜನಗಣತಿ ಪ್ರಕಾರ 6273 ಜನಸಂಖ್ಯೆ ಇದೆ. ಒಟ್ಟು 1485 ಮನೆಗಳು ಇದರ ವ್ಯಾಪ್ತಿಯಲ್ಲಿ ಬರುತ್ತವೆ. ಈ ಗ್ರಾಮ ಪಂಚಾಯತ್ ಪಾರೆಂಕಿ ಮತ್ತು ಕುಕ್ಕಳ ಗ್ರಾಮಗಳನ್ನು ಒಳಗೊಂಡಿದ್ದು 5 ವಾರ್ಡ್‌ಗಳಿವೆ. ಶೇಕಡ 100 ರಷ್ಟು ಸಾಕ್ಷರತೆಯನ್ನು ಹೊಂದಿರುವುದಾಗಿ ಗ್ರಾಮ ಪಂಚಾಯತ್ ಘೋಷಿಸಿಕೊಂಡಿದೆ. ಮಡಂತ್ಯಾರು ಮತ್ತು ಪುಂಜಾಲಕಟ್ಟೆ ಪೇಟೆಗಳನ್ನು ಹೊಂದಿರುವ ಮಡಂತ್ಯಾರು ಗ್ರಾಮ ಪಂಚಾಯತ್‌ಗೆ ಈ ಎರಡು ಪೇಟೆಗಳ ತ್ಯಾಜ್ಯ ನಿರ್ವಹಣೆಯೇ ದೊಡ್ಡ ಸವಾಲು. ಇವುಗಳ ವ್ಯಾಪ್ತಿಯಲ್ಲಿ 20ಕ್ಕೂ ಅಧಿಕ ತೊಟ್ಟಿಗಳನ್ನು ಇಡಲಾಗಿತ್ತು. ಈ ತೊಟ್ಟಿಗಳ ತ್ಯಾಜ್ಯ ವಿಲೇವಾರಿಗಾಗಿ ಪ್ರತೀ ವಾರ ಕನಿಷ್ಠ ರೂ 5000/–ದಂತೆ ವರ್ಷಕ್ಕೆ 2,50,000/– ರೂಪಾಯಿಗಳನ್ನು ಖರ್ಚು ಮಾಡಲಾಗುತ್ತಿತ್ತು. ಈ ಸಮಸ್ಯೆಗೆ ಪರಿಹಾರವಾಗಿ ಮಡಂತ್ಯಾರು ಗ್ರಾಮ ಪಂಚಾಯತ್ ವ್ಯಾಪ್ತಿಗೆ ಒಳಪಟ್ಟ ಪಾರೆಂಕಿ ಮತ್ತು ಕುಕ್ಕಳ ಗ್ರಾಮಗಳಲ್ಲಿರುವ ಎಲ್ಲಾ ಕಸದ ತೊಟ್ಟಿಗಳನ್ನು ತೆರವುಗೊಳಿಸಲಾಗಿದೆ.

ತ್ಯಾಜ್ಯ ನಿರ್ವಹಣೆಗಾಗಿ ಪಂಚಾಯತ್ ತನ್ನದೇ ಆದ ನಿಯಮಾವಳಿಗಳನ್ನು ರೂಪಿಸಿದೆ. ಬೀದಿ ಸ್ವಚ್ಛಗೊಳಿಸಲು ಒಬ್ಬ ಕಾರ್ಮಿಕನನ್ನು ಮಾತ್ರ ಹೊಂದಿದ್ದು, ತ್ಯಾಜ್ಯ ಸಾಗಾಟಕ್ಕೆ ಒಂದು ವಾಹನವನ್ನು ಬಳಸಲಾಗುತ್ತಿದೆ. ಇದರ ವ್ಯಾಪ್ತಿಯಲ್ಲಿ ಮನೆ-ಮನೆ ಕಸ ಸಂಗ್ರಹವಿಲ್ಲ. ಅಂಗಡಿ ಮಾಲಿಕರು ಹಾಗೂ ಪೇಟೆ ಬದಿಯಲ್ಲಿ ವಾಸಿಸುವ ಕುಟುಂಬಗಳು ಪ್ರತೀ ವಾರ ಕಸ ಸಂಗ್ರಹದ ವಾಹನಕ್ಕೆ ಜೈವಿಕವಲ್ಲದ ಕಸವನ್ನು ನೀಡುತ್ತಾರೆ ಹಾಗೂ ಇದಕ್ಕಾಗಿ ಪಂಚಾಯತ್‌ಗೆ ಕನಿಷ್ಠ ಶುಲ್ಕವನ್ನು ಆಸ್ತಿತೆರಿಗೆ ಸಮಯದಲ್ಲಿ ಪಾವತಿಸುತ್ತಾರೆ. ಸಾವಯವ (ಜೈವಿಕ) ತ್ಯಾಜ್ಯಗಳನ್ನು ಅಂಗಡಿ ಮಾಲಿಕರು ಮತ್ತು ಕುಟುಂಬಗಳು ಕಡ್ಡಾಯವಾಗಿ ಪೈಪ್ ಕಂಪೋಸ್ಟ್ ಅಳವಡಿಸಿಕೊಂಡು, ಗೊಬ್ಬರ ತಯಾರಿಕೆಗೆ ಬಳಸಿಕೊಳ್ಳುವಂತೆ ಪಂಚಾಯತ್ ಸೂಚಿಸಿದೆ. ಕೋಳಿ ಮಾಂಸದ ಅಂಗಡಿಗಳು, ಹೊಟೇಲುಗಳು, ಕೋಲ್ಡ್ ಹೌಸುಗಳು, ಸೆಲೂನು, ಬ್ಯೂಟಿಪಾರ್ಲರ್‌ಗಳು ಮತ್ತು ತರಕಾರಿ ಅಂಗಡಿಗಳಲ್ಲಿ ಸಂಗ್ರಹವಾಗುವ ದೊಡ್ಡ ಪ್ರಮಾಣದ ತ್ಯಾಜ್ಯಗಳನ್ನು ಸ್ವತಃ ಅಂಗಡಿ ಮಾಲಕರೇ ಹೆಚ್ಚಾಗಿ ವಿಲೇವಾರಿ ಮಾಡಿಕೊಳ್ಳುತ್ತಾರೆ. ಕೆಲವರು ಗ್ರಾಮ ಪಂಚಾಯತ್ ಸೂಚಿಸಿದ ಪಾರೆಂಕಿ ಎನ್ನುವ ಸ್ಥಳದಲ್ಲಿ ವಿಲೇವಾರಿ ಮಾಡುತ್ತಾರೆ. ಮಡಂತ್ಯಾರು ಪೇಟೆಯಿಂದ 2 ಕಿ.ಮೀ ದೂರದಲ್ಲಿರುವ ಒಂದು ಎಕ್ರೆ ಪ್ರದೇಶದಲ್ಲಿ ಭೂಭರ್ತಿ ಮತ್ತು ಕಸ ವಿಭಜನೆ ಕಾರ್ಯವು ನಡೆಯುತ್ತದೆ.

ಪ್ಲಾಸ್ಟಿಕ್ ತ್ಯಾಜ್ಯ ಪ್ರಮಾಣವನ್ನು ಕಡಿಮೆಗೊಳಿಸುವ ಉದ್ದೇಶದಿಂದ ಪ್ಲಾಸ್ಟಿಕ್ ಕೈಚೀಲ ಬಳಸಿಕೊಳ್ಳುವಂತೆ ಪ್ರೋತ್ಸಾಹ ಮತ್ತು ಜಾಗೃತಿ ಮೂಡಿಸಲಾಗಿದೆ. ಬಟ್ಟೆ ಚೀಲ ಬಳಸುವ ಗ್ರಾಹಕರಿಗಾಗಿ ಮಡಂತ್ಯಾರು-ಪುಂಜಾಲಕಟ್ಟೆ ಪೇಟೆಗಳ ಎಲ್ಲಾ ಅಂಗಡಿಗಳಲ್ಲಿ ಅದೃಷ್ಟ ಚೀಟಿಯನ್ನು ನೀಡುವ ವ್ಯವಸ್ಥೆ ಮಾಡಲಾಗಿದೆ. ಪ್ರತೀ ತಿಂಗಳ ಒಂದನೇ ತಾರೀಖಿನಂದು ಲಕ್ಕಿ ಡ್ರಾ ನಡೆಯುತ್ತದೆ ಮತ್ತು ಗ್ರಾಹಕರಿಗೆ ಚಿನ್ನದ ನಾಣ್ಯ ಅಥವಾ 10 ಆಕರ್ಷಕ ಬಹುಮಾನಗಳನ್ನು ಗೆಲ್ಲುವ ಅವಕಾಶವಿದೆ ಹಾಗೂ 10 ಅದೃಷ್ಟ ಚೀಟಿಯನ್ನು ಹೊಂದಿರುವ ಗ್ರಾಹಕರಿಗೆ ಗ್ರಾಮ ಪಂಚಾಯತ್ ವತಿಯಿಂದ ಬಟ್ಟೆ ಚೀಲಗಳನ್ನು ಉಡುಗೊರೆಯಾಗಿ ನೀಡಲಾಗುತ್ತಿದೆ. ಸಾರ್ವಜನಿಕ ಸ್ಥಳಗಳಲ್ಲಿ ಅನಧಿಕೃತ ಕಸ ಎಸೆಯುವವರಿಗೆ ಪಂಚಾಯತ್ ದಂಡ ವಿಧಿಸುತ್ತಿದೆ. ಆದರೆ ಪಂಚಾಯತ್ ಯಾವುದೇ ಸಾವಯವ ಗೊಬ್ಬರ ಅಥವಾ ಎರೆಹುಳು ಗೊಬ್ಬರ ಘಟಕವನ್ನು ಹೊಂದಿರುವುದಿಲ್ಲ. ತ್ಯಾಜ್ಯ ನಿರ್ವಹಣೆಗೆ ಸಾಕಷ್ಟು ಮುತುವರ್ಜಿ ವಹಿಸಿದರೂ, ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಆದ್ಯತೆ ನೀಡದಿರುವುದು ಕಂಡು ಬಂದಿದೆ. ಪಂಚಾಯತ್ ವ್ಯಾಪ್ತಿಯಲ್ಲಿ ಪ್ಲಾಸ್ಟಿಕ್, ಲೋಹ ಮುಂತಾದ ತ್ಯಾಜ್ಯಗಳು ಗರಿಷ್ಠ ಪ್ರಮಾಣದಲ್ಲಿ ಕಂಡು ಬಂದರೂ, ಅವುಗಳನ್ನು ವಿಭಜಿಸಿ ಮರುತ್ಪಾದನಾ ಘಟಕಗಳಿಗೆ ನೀಡದಿರುವುದು ತ್ಯಾಜ್ಯ ನಿರ್ವಹಣೆಯಲ್ಲಿನ ವೈಫಲ್ಯತೆಯಾಗಿದೆ.

ಪೌರ ಕಾರ್ಮಿಕರ ಸಂಖ್ಯೆ ಕಡಿಮೆ ಇರುವುದರಿಂದ ಖಾಸಗಿ ಸಂಸ್ಥೆಗೆ ತ್ಯಾಜ್ಯ ಸಂಗ್ರಹ ಕೆಲಸವನ್ನು ವಹಿಸಲಾಗಿದೆ.

**ಬಂಟ್ವಾಳ ತಾಲೂಕು**

ದ.ಕ.ಜಿಲ್ಲೆಯ ಬಂಟ್ವಾಳ ತಾಲೂಕು ತೆಂಗು ಅಡಿಕೆ ಕೃಷಿಗಳಿಂದ ಕೂಡಿದ್ದು ನಿತ್ಯ ಹರಿದ್ವರ್ಣದ ಅರಣ್ಯ ಪ್ರದೇಶವನ್ನು ಹೊಂದಿದೆ. ತಾಲೂಕಿನ ಒಟ್ಟು ಭೌಗೋಳಿಕ ವಿಸ್ತೀರ್ಣ 735 ಚ.ಕಿ.ಮೀ ಆಗಿದ್ದು, ಜಿಲ್ಲೆಯ ಶೇಕಡ 15.13 ಭಾಗವನ್ನು ಹೊಂದಿದೆ (ದ.ಕ. ಜಿಲ್ಲಾ ಅಂಕಿ ಅಂಶಗಳ ನೋಟ 2012–13, ದ.ಕ.ಜಿಲ್ಲಾ ಮಾನವ ಅಭಿವೃದ್ಧಿ ವರದಿ–2014). ಬಂಟ್ವಾಳ ತಾಲೂಕು ವಿಸ್ತೀರ್ಣದಲ್ಲಿ ಜಿಲ್ಲೆಯ ಅತೀ ಸಣ್ಣ ತಾಲೂಕಾಗಿದ್ದು ಒಟ್ಟು ಜನಸಂಖ್ಯೆಯು 2011ರ ಜನಗಣತಿ ಪ್ರಕಾರ 3,95,380. ಜನಸಂಖ್ಯೆಯು ಶೇಕಡ 9.36 ದಶವಾರ್ಷಿಕ ಬೆಳವಣಿಗೆ ದರವನ್ನು ಹೊಂದಿದೆ. ತಾಲೂಕಿನ ಲಿಂಗಾನುಪಾತ ಪ್ರಮಾಣವು 1010 ಆಗಿದ್ದು ಗ್ರಾಮೀಣ ಪ್ರದೇಶದಲ್ಲಿ ಶೇಕಡ 70.69 ಮತ್ತು ನಗರದಲ್ಲಿ ಶೇಕಡ 29.31 ರಷ್ಟು ಜನ ವಾಸಿಸುತ್ತಿದ್ದಾರೆ. ತಾಲೂಕಿನ ಸಾಕ್ಷರತಾ ಪ್ರಮಾಣವು ಶೇಕಡ 86.71 ಆಗಿದ್ದು, ಶಿಕ್ಷಣ ಸೂಚಿಯಲ್ಲಿ ಜಿಲ್ಲೆ 3ನೇ ಸ್ಥಾನವನ್ನು ಹೊಂದಿದೆ.

ಬಂಟ್ವಾಳ ತಾಲೂಕು ವ್ಯಾಪ್ತಿಯಲ್ಲಿ ಬಂಟ್ವಾಳ ಪುರಸಭೆ ಮತ್ತು 47 ಗ್ರಾಮ ಪಂಚಾಯತ್‌ಗಳು ಬರುತ್ತವೆ. ಬಹುಪಾಲು ಗ್ರಾಮೀಣ ಪ್ರದೇಶಗಳನ್ನು ಹೊಂದಿರುವ ತಾಲೂಕಿನಲ್ಲಿ ಹೆಚ್ಚಿನ ಗ್ರಾಮ ಪಂಚಾಯತ್‌ಗಳಲ್ಲಿ ತ್ಯಾಜ್ಯ ನಿರ್ವಹಣೆಯು ಪ್ರಾಮುಖ್ಯತೆಯನ್ನು ಪಡೆದುಕೊಂಡಿಲ್ಲ. ಜನಸಂಚಾರ ಹಾಗೂ ವಾಣಿಜ್ಯ ಚಟುವಟಿಕೆಗಳು ಹೆಚ್ಚಾಗಿರುವ ಮಾಣಿ, ತುಂಬೆ, ವಿಟ್ಲ, ಸಂಗಬೆಟ್ಟು ಮತ್ತು ಮಂಚಿ ಗ್ರಾಮಪಂಚಾಯತ್‌ಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಮಾಣಿ ಗ್ರಾಮಪಂಚಾಯತ್**

ಬಂಟ್ವಾಳ ತಾಲೂಕಿನ ಮಾಣಿ ಗ್ರಾಮ ಪಂಚಾಯತ್ ಪುತ್ತೂರು ಮತ್ತು ಉಪ್ಪಿನಂಗಡಿಗೆ ಸಮಾನ ದೂರದಲ್ಲಿದ್ದು, ಬೆಂಗಳೂರು–ಮಂಗಳೂರು ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 75 ಈ ಪಂಚಾಯತ್ ಮೂಲಕ ಹಾದುಹೋಗುತ್ತಿದೆ. ಒಟ್ಟು 1295.44 ಎಕರೆ ವಿಸ್ತೀರ್ಣವನ್ನು ಹೊಂದಿರುವ ಪಂಚಾಯತ್‌ನಲ್ಲಿ 2011ರ ಜನಗಣತಿ ಪ್ರಕಾರ 4666 ಜನಸಂಖ್ಯೆ ಇದ್ದು 950 ಕುಟುಂಬಗಳಿವೆ. ಇದರ ವ್ಯಾಪ್ತಿಯಲ್ಲಿ 185 ಅಂಗಡಿಗಳು ಮತ್ತು ಒಂದು ವಾರದ ಸಂತೆ ಮಾರುಕಟ್ಟೆ ಕಾರ್ಯ ನಿರ್ವಹಿಸುತ್ತಿದ್ದು, ಪಂಚಾಯತ್ ಘನತ್ಯಾಜ್ಯ ನಿರ್ವಹಣೆಗೆ ಹೆಚ್ಚಿನ ಆದ್ಯತೆಯನ್ನು ನೀಡಿದೆ. ಅಂಗಡಿ ಹಾಗೂ ಮನೆಗಳಿಂದ ಕಸ ಸಂಗ್ರಹ ವ್ಯವಸ್ಥೆಯನ್ನು ಒಬ್ಬರು ಖಾಯಂ ಕಾರ್ಮಿಕ

ಹಾಗೂ 2 ದಿನಗೂಲಿ ನೌಕರರ ಸಹಾಯದಿಂದ ಮಾಡುತ್ತಿದ್ದು, ಪ್ರತಿದಿನ 2 ಲೋಡ್‌ಗಳಷ್ಟು ತ್ಯಾಜ್ಯವನ್ನು ಪಂಚಾಯತ್ ತನ್ನ ಸ್ವಂತ ವಾಹನದಲ್ಲಿ (ಅಪೆ-ರಿಕ್ಷಾ) ನಿರ್ವಹಣಾ ಘಟಕಕ್ಕೆ ಸಾಗಿಸುತ್ತಿದೆ. ಪಂಚಾಯತ್ ಕಛೇರಿಯಿಂದ 5.5 ಕಿ.ಮೀ ದೂರದಲ್ಲಿರುವ ರಾಷ್ಟ್ರೀಯ ಹೆದ್ದಾರಿ ಸಮೀಪದ ಗಡಿಯಾರ ಎನ್ನುವ ಸ್ಥಳದಲ್ಲಿ 50 ಸೆಂಟ್ಸ್ ಜಾಗವನ್ನು ತ್ಯಾಜ್ಯ ರಾಶಿ ಹಾಕಲು ಹಾಗೂ ವಿಭಜಿಸಲು ಬಳಸಲಾಗುತ್ತಿದೆ. ಪ್ಲಾಸ್ಟಿಕ್ ಮುಂತಾದ ಕರಗದ ಕಸವನ್ನು ಸಂಗ್ರಹಿಸಿ ಮರು ಉತ್ಪಾದನಾ ಘಟಕಗಳಿಗೆ ನೀಡುತ್ತಾರೆ. ತ್ಯಾಜ್ಯ ನಿರ್ವಹಣೆಗಾಗಿ ಪಂಚಾಯತ್ ಜನರಿಂದ ತ್ಯಾಜ್ಯ ವಿಲೇವಾರಿ ತೆರಿಗೆಯನ್ನು ಸಂಗ್ರಹಿಸುವುದಲ್ಲದೆ ನದಿ/ಚರಂಡಿ/ರಸ್ತೆ ಬದಿ ತ್ಯಾಜ್ಯ ಎಸೆಯುವವರಿಗೆ ದಂಡ ವಿಧಿಸುತ್ತದೆ. ಇದರ ವ್ಯಾಪ್ತಿಯಲ್ಲಿ 5 ಸಾರ್ವಜನಿಕ ಕಸದ ತೊಟ್ಟಿಗಳನ್ನು ಅಳವಡಿಸಲಾಗಿದೆ. ಪಂಚಾಯತ್‌ನ ಅಭಿಪ್ರಾಯದ ಪ್ರಕಾರ ಪ್ರಸ್ತುತ ಲಭ್ಯವಿರುವ ಸ್ಥಳ ಸಾಕಷ್ಟು ವಿಸ್ತಾರವನ್ನು ಹೊಂದಿರುವುದಿಲ್ಲ. ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಆದ್ಯತೆ ನೀಡದೇ ಇರುವುದರಿಂದ ಕಾರ್ಮಿಕರು ಸಂಗ್ರಹ ರಾಶಿಯಿಂದ ವಿಭಜನೆಯನ್ನು ಮಾಡುತ್ತಾರೆ.

ಪಂಚಾಯತ್ ವ್ಯಾಪ್ತಿಯ ಮನೆ-ಮನೆ ಕಸ ಸಂಗ್ರಹವು ವಾರಕ್ಕೊಮ್ಮೆ ನಡೆಯುವ ಕಾರಣ ಹಸಿಕಸ (ಸಾವಯವ ಕಸ) ನಿರ್ವಹಣೆ ಸರಿಯಾಗಿ ಆಗದೇ ಇರುವುದರಿಂದ ಪರಿಸರ ಮಾಲಿನ್ಯ ಅಧಿಕವಾಗಿರುವುದು ಕಂಡುಬಂದಿದೆ. ಜನರಿಗೆ ಜಾಗೃತಿ ಮೂಡಿಸಲು ಕೊಳವೆ ಗೊಬ್ಬರ ಘಟಕಗಳನ್ನು ನಿರ್ಮಿಸಲಾಗಿದೆ ಹಾಗೂ ಅಲ್ಲಲ್ಲಿ ಎಚ್ಚರಿಕೆ ಫಲಕಗಳನ್ನು ಹಾಕಲಾಗಿದೆ. ಪಂಚಾಯತ್ ತನ್ನ ನಿರ್ವಹಣಾ ಘಟಕದಲ್ಲಿ ಸಾವಯವ ಗೊಬ್ಬರವನ್ನು ತಯಾರಿಸುತ್ತಿದ್ದು ಸ್ಥಳೀಯ ರೈತರೇ ಅದನ್ನು ನೇರವಾಗಿ ಖರೀದಿಸುತ್ತಾರೆ. ನಿರ್ವಹಣೆಗೆ ಸ್ಥಳೀಯ ಸಂಘಸಂಸ್ಥೆಗಳು, ಉದ್ಯಮಿಗಳು, ಸಾರ್ವಜನಿಕರು, ಸಿಬ್ಬಂದಿ ವರ್ಗ ಹಾಗೂ ಜನಪ್ರತಿನಿಧಿಗಳು ಉತ್ತಮ ಸಹಕಾರ ನೀಡುತ್ತಿದ್ದಾರೆ ಎಂದು ಪಂಚಾಯತ್ ತಿಳಿಸಿದೆ.

**ತುಂಬೆ ಗ್ರಾಮ ಪಂಚಾಯತ್**

ಬಂಟ್ವಾಳ ತಾಲೂಕಿನ ತುಂಬೆ ಗ್ರಾಮ ಪಂಚಾಯತ್ ಮಂಗಳೂರಿನಿಂದ ಸುಮಾರು 15 ಕಿ.ಮೀ ದೂರವಿದ್ದು ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 75 ಈ ಪಂಚಾಯತ್ ಮೂಲಕ ಹಾದುಹೋಗುತ್ತದೆ. ಮಂಗಳೂರು ಮತ್ತು ಬಿ.ಸಿ.ರೋಡ್ ನಡುವೆ ಇರುವ 5 ವಾರ್ಡ್‌ಗಳನ್ನು ಈ ಪಂಚಾಯತ್‌ನಲ್ಲಿ 2011ರ ಜನಗಣತಿ ಪ್ರಕಾರ 6230 ಜನಸಂಖ್ಯೆ ಇದ್ದು 4122 ಎಕ್ರೆ ವಿಸ್ತೀರ್ಣವನ್ನು ಹೊಂದಿದೆ. ಪೇಟೆ ಭಾಗವನ್ನು ಬಿಟ್ಟು ಉಳಿದೆಡೆ ಹೆಚ್ಚಿನ ನಾಗರಿಕರು ಕೃಷಿಕರಾಗಿರುವುದರಿಂದ ತಮ್ಮಲ್ಲಿ ಉತ್ಪಾದನೆಯಾಗುವ ಎಲ್ಲಾ ರೀತಿಯ ಕಸಗಳನ್ನು ತಾವೇ

ವಿಲೇವಾರಿ ಮಾಡುತ್ತಾರೆ. ಪೇಟೆಯ ಸ್ವಚ್ಛತೆಗೆ ಆದ್ಯತೆ ನೀಡಿದ್ದು ಕಸ ಸಾಗಾಟಕ್ಕೆ 1 ಅಟೋ (ಆಪೆ) ಮತ್ತು 4 ಜನ ಕಾರ್ಮಿಕರನ್ನು ಕಸಸಂಗ್ರಹಕ್ಕೆ ನಿಯೋಜಿಸಲಾಗಿದೆ. ಸಾರ್ವಜನಿಕರಲ್ಲಿ ಅರಿವು ಮೂಡಿಸುವ ಕಾರ್ಯವನ್ನು ಪಂಚಾಯತ್ ಕೈಗೊಂಡಿದ್ದು ಶೈಕ್ಷಣಿಕ ಸಂಸ್ಥೆಗಳಲ್ಲಿ ಪೈಪ್ ಕಂಪೋಸ್ಟ್ ಅಳವಡಿಸಿರುತ್ತಾರೆ.

ಪ್ರತೀ ದಿನ ತ್ಯಾಜ್ಯ ಸಂಗ್ರಹ ಕಾರ್ಯವು ಕೇವಲ ಅಂಗಡಿ/ಹೊಟೇಲ್ ಮುಂತಾದ ವಾಣಿಜ್ಯ ಚಟುವಟಿಕೆಗಳ ಸ್ಥಳಗಳಿಂದ ಮಾತ್ರ ನಡೆಯುತ್ತಿದ್ದು, ಮನೆ–ಮನೆ ಕಸ ಸಂಗ್ರಹಕ್ಕೆ ಆದ್ಯತೆ ನೀಡಿರುವುದಿಲ್ಲ. ಸಂಗ್ರಹಿಸಿದ ಕಸವನ್ನು ವಿಲೇವಾರಿಗೊಳಿಸಲು ಸ್ಥಳೀಯ ಕಂಪೆನಿಗೆ ಗುತ್ತಿಗೆ ನೀಡಲಾಗಿದೆ. ಪಂಚಾಯತ್‌ಗೆ ತಮ್ಮ ವ್ಯಾಪ್ತಿಯ ಕಸ ಎಲ್ಲಿ ವಿಲೇವಾರಿ ಆಗುತ್ತಿದೆ ಎನ್ನುವುದರ ಬಗ್ಗೆ ಮಾಹಿತಿಯಿಲ್ಲ. ರಾಷ್ಟ್ರೀಯ ಹೆದ್ದಾರಿಯಲ್ಲಿ ಸಂಚರಿಸುವ ಜನರು ರಸ್ತೆಬದಿ, ಸಣ್ಣ ಕಾಲು ಸಂಕಗಳ ಕೆಳಗೆ ಕಸ ಬಿಸಾಡಿರುವ ದೃಶ್ಯ ಸಾಮಾನ್ಯವಾಗಿ ಕಂಡುಬರುತ್ತಿದೆ. ಪಂಚಾಯತ್‌ನಲ್ಲಿ ಅಲ್ಲಲ್ಲಿ ಎಚ್ಚರಿಕೆ ಫಲಕಗಳನ್ನು ಹಾಕಿದ್ದು ಅನುಷ್ಠಾನ ಕೊರತೆ ಎದ್ದು ಕಾಣುತ್ತಿದೆ. ಸ್ವಂತ ನಿರ್ವಹಣಾ ಘಟಕ, ಭೂಭರ್ತಿ ಪ್ರದೇಶಗಳನ್ನು ಈ ಪಂಚಾಯತ್ ಹೊಂದಿಲ್ಲದ ಕಾರಣ ಘನತ್ಯಾಜ್ಯ ನಿರ್ವಹಣೆ ಮುಂದಿನ ದಿನಗಳಲ್ಲಿ ಪ್ರಮುಖ ಸಮಸ್ಯೆಯಾಗಿ ಕಾಡುವ ಅಪಾಯವಿದೆ.

ಜನಪ್ರತಿನಿಧಿಗಳು ಹಾಗೂ ಸಿಬ್ಬಂದಿ ಉತ್ತಮ ಸಹಕಾರ ನೀಡುತ್ತಿರುವ ಬಗ್ಗೆ ಮಾಹಿತಿ ಇದ್ದರೂ ತ್ಯಾಜ್ಯ ನಿರ್ವಹಣೆಯಲ್ಲಿ ಈ ಪಂಚಾಯತ್ ಉತ್ತಮ ಪ್ರಗತಿಯನ್ನು ಸಾಧಿಸಿಲ್ಲ. ಇದರ ವ್ಯಾಪ್ತಿಯಲ್ಲಿ ಯಾವುದೇ ಸಾರ್ವಜನಿಕ ತೊಟ್ಟಿಯನ್ನು ಇರಿಸಿಲ್ಲ. ಆದರೆ ಜನ ಹಿಂದೆ ತೊಟ್ಟಿ ಇದ್ದ ಜಾಗಗಳಲ್ಲಿ ಈಗಲೂ ಘನತ್ಯಾಜ್ಯ ಎಸೆಯುವುದು ಸಾಮಾನ್ಯವಾಗಿ ಕಂಡುಬರುತ್ತಿದೆ.

ಯಾವುದೇ ವೈಜ್ಞಾನಿಕ ವಿಲೇವಾರಿ ವಿಧಾನಗಳ ಬಗ್ಗೆ ಪಂಚಾಯತ್ ಆಸಕ್ತಿ ಹೊಂದಿರುವುದಿಲ್ಲ. ತ್ಯಾಜ್ಯ ನಿರ್ವಹಣೆಗಾಗಿ ಪಂಚಾಯತ್ ಯಾವುದೇ ತೆರಿಗೆಯನ್ನು ಜನರಿಗೆ ವಿಧಿಸಿರುವುದಿಲ್ಲ. ತ್ಯಾಜ್ಯ ವಿಭಜನೆಗೆ ಪಂಚಾಯತ್ ಯಾವುದೇ ಕ್ರಮ ಕೈಗೊಂಡಿರದ ಕಾರಣ ತ್ಯಾಜ್ಯ ಸರಿಯಾದ ರೀತಿಯಲ್ಲಿ ಬಳಕೆಯಾಗದೆ, ಬಹುಪಾಲು ಭೂಭರ್ತಿಗೆ ಹೋಗುತ್ತಿದೆ. ಈ ಪಂಚಾಯತ್ ಯಾವುದೇ ರೀತಿಯ ಒಣಕಸವನ್ನು ಮರುತ್ಪಾದನಾ ಘಟಕಕ್ಕಾಗಲಿ ಅಥವಾ ಹಸಿಕಸವನ್ನು ಗೊಬ್ಬರ ತಯಾರಿಕೆಗಾಗಲಿ ಬಳಸಿಕೊಳ್ಳದ ಕಾರಣ ತ್ಯಾಜ್ಯದಿಂದ ಯಾವುದೇ ಆದಾಯವನ್ನು ಗಳಿಸುವುದಿಲ್ಲ. ಸ್ವಂತ ಭೂಭರ್ತಿ ಜಾಗವನ್ನು ಪಡೆಯುವುದು ಈ ಪಂಚಾಯತ್‌ಗೆ ಅತ್ಯಗತ್ಯವಾಗಿದೆ.

## ವಿಟ್ಲ ಪಂಚಾಯತ್ (ಪಟ್ಟಣ ಪಂಚಾಯತ್)

ಬಂಟ್ವಾಳ ತಾಲೂಕಿನ ವಿಟ್ಲ ಪಂಚಾಯತ್ 2015ರಲ್ಲಿ ಪಟ್ಟಣ ಪಂಚಾಯತ್ ಆಗಿ ಉನ್ನತೀಕರಣಗೊಂಡಿದೆ. ಪಂಚಾಯತ್‌ನ ಬಹುಭಾಗ ಗ್ರಾಮೀಣ ಪ್ರದೇಶವಾಗಿದ್ದು, ಕೃಷಿಯೇ ಪ್ರಮುಖ ಉದ್ಯೋಗ. ಒಟ್ಟು 20.37 ಚದರ ಕಿ.ಮೀ ಹೊಂದಿರುವ ಈ ಪಂಚಾಯತ್ 2011 ರ ಜನಗಣತಿ ಪ್ರಕಾರ 17,618 ಜನಸಂಖ್ಯೆಯನ್ನು ಹೊಂದಿದ್ದು 4097 ಮನೆಗಳಿವೆ. ಇದರ ವ್ಯಾಪ್ತಿಯಲ್ಲಿ ಒಟ್ಟು 2416 ಅಂಗಡಿ/ಹೊಟೇಲು ಮುಂತಾದ ವಾಣಿಜ್ಯ ಚಟುವಟಿಕೆಗಳಿವೆ. ಪಂಚಾಯತ್ ವ್ಯಾಪ್ತಿಯಲ್ಲಿ 18 ವಾರ್ಡ್‌ಗಳಿದ್ದು ಸ್ವಚ್ಛತೆಗೆ ಪ್ರತೀ ವಾರ್ಡ್‌ಮಟ್ಟದಲ್ಲಿ ಆದ್ಯತೆಯನ್ನು ನೀಡಲಾಗಿದೆ. ತ್ಯಾಜ್ಯ ಸಂಗ್ರಹ, ಸಾಗಾಟ ಹಾಗೂ ನಿರ್ವಹಣೆಗಾಗಿ 86 ಜನ ಕಾರ್ಮಿಕರು ಮತ್ತು 2 ಮಂದಿ ವಾಹನ ಚಾಲಕರಿದ್ದು, ತ್ಯಾಜ್ಯ ಸಾಗಾಟಕ್ಕೆ ಟ್ರ್ಯಾಕ್ಟರ್ ಹಾಗೂ ಆಪೆ ರಿಕ್ಷಾವನ್ನು ಬಳಸಲಾಗುತ್ತಿದೆ.

ತ್ಯಾಜ್ಯ ರಾಶಿ ಹಾಕಲು ಹಾಗೂ ವಿಭಜನೆ ಮಾಡಲು ಪಂಚಾಯತ್ ಕಛೇರಿಯಿಂದ 1 ಕಿ.ಮೀ ದೂರದಲ್ಲಿರುವ 'ಪಳಿಕೆ' ಎಂಬ ಸ್ಥಳದಲ್ಲಿ 1 ಎಕ್ರೆ ಜಾಗವನ್ನು ಬಳಸಿಕೊಳ್ಳಲಾಗುತ್ತಿದೆ. ಇಲ್ಲಿ ಸಾವಯವ ಗೊಬ್ಬರ ತಯಾರಿಕೆ ಘಟಕವಿದ್ದು, ಸಾವಯವವಲ್ಲದ ತ್ಯಾಜ್ಯವನ್ನು ಭೂಭರ್ತಿ ಮಾಡಲಾಗುತ್ತಿದೆ. ಭೂಭರ್ತಿ ಕ್ರಮವು ಹೆಚ್ಚು ವೈಜ್ಞಾನಿಕವಾಗಿಲ್ಲದ ಕಾರಣ ಲೀಚೆಟ್ ಸಾಕಷ್ಟು ಸಮಸ್ಯೆಗಳನ್ನು ಉಂಟುಮಾಡಿದೆ. ಇದರಿಂದ ಅಂತರ್ಜಲ ಕಲುಷಿತಗೊಂಡಿದ್ದು ಪರಿಸರದಲ್ಲಿ ದುರ್ವಾಸನೆಯನ್ನು ಹೆಚ್ಚಿಸಿದೆ. ವಿಟ್ಲ ಪೇಟೆಯಲ್ಲಿ 5 ಸಂಗ್ರಹ ತೊಟ್ಟಿಗಳನ್ನು ಇರಿಸಲಾಗಿದ್ದು, ಇವುಗಳಿಂದ ವಾರಕ್ಕೆ 2 ದಿನಗಳಿಗೊಮ್ಮೆ ತ್ಯಾಜ್ಯವನ್ನು ತೆಗೆಯಲಾಗುತ್ತಿದೆ. ಪಂಚಾಯತ್ ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಹೆಚ್ಚಿನ ಆದ್ಯತೆಯನ್ನು ನೀಡಿಲ್ಲ. ತ್ಯಾಜ್ಯ ಸಂಗ್ರಹ ಘಟಕದಲ್ಲಿ ಕಾರ್ಮಿಕರು ತ್ಯಾಜ್ಯ ವಿಭಜನೆ ಕಾರ್ಯವನ್ನು ಮಾಡುತ್ತಿದ್ದು, ಪ್ಲಾಸ್ಟಿಕ್, ಪೇಪರ್, ರಟ್ಟು ಮುಂತಾದ ತ್ಯಾಜ್ಯಗಳನ್ನು ಪ್ರತ್ಯೇಕವಾಗಿ ಸಂಗ್ರಹಿಸಿ ತ್ಯಾಜ್ಯ ಮರು ಉತ್ಪಾದನಾ ಘಟಕಗಳಿಗೆ ನೀಡುತ್ತಾರೆ. ಆದರೆ ಹೆಚ್ಚಿನ ತ್ಯಾಜ್ಯವು ಮಿಶ್ರ ತ್ಯಾಜ್ಯವಾಗಿರುವ ಕಾರಣದಿಂದ ಶೇಕಡ 75ಕ್ಕಿಂತಲೂ ಹೆಚ್ಚು ತ್ಯಾಜ್ಯವನ್ನು ಭೂಭರ್ತಿ ಮಾಡಲಾಗುತ್ತಿದ್ದು ಪಂಚಾಯತ್‌ಗೆ ಸ್ಥಳಾವಕಾಶದ ಕೊರತೆ ಇದೆ, ಜೊತೆಗೆ ವೈಜ್ಞಾನಿಕ ರೀತಿಯಲ್ಲಿ ಭೂಭರ್ತಿ ಮಾಡದ ಕಾರಣ ಲೀಚೆಟ್ ಸಮಸ್ಯೆ ಅಧಿಕಗೊಂಡಿದೆ. ಸಾಂಪ್ರದಾಯಿಕ ವಿಧಾನಗಳಾದ ಪೈಪ್ ಕಂಪೋಸ್ಟ್ ಹಾಗೂ ದಹನ ಕುಲುಮೆಗಳನ್ನು ಸ್ಥಳೀಯ ವಿದ್ಯಾಸಂಸ್ಥೆಗಳು ಹಾಗೂ ಕೆಲವು ಅಂಗಡಿ/ಹೊಟೇಲುಗಳು ಅನುಸರಿಸುತ್ತಿವೆ. ಎರೆಹುಳು ಹಾಗೂ ಸಾವಯವ ಗೊಬ್ಬರ ಘಟಕಗಳನ್ನು ಸ್ಥಾಪಿಸುವ ಯೋಜನೆಯನ್ನು ತಯಾರಿಸಲಾಗಿದೆ. ತ್ಯಾಜ್ಯ ಸಂಗ್ರಹ ವೆಚ್ಚವನ್ನು ಭರಿಸಲು ಪಂಚಾಯತ್ ಮನೆ ಮತ್ತು ವಾಣಿಜ್ಯ ಚಟುವಟಿಕೆಗಳಿಗೆ ಪ್ರತ್ಯೇಕ ಮಾಸಿಕ ತೆರಿಗೆಯನ್ನು ಸಂಗ್ರಹಿಸುತ್ತಿದೆ.

## ಸಂಗಬೆಟ್ಟು ಗ್ರಾಮ ಪಂಚಾಯತ್

ಬಂಟ್ವಾಳ ತಾಲೂಕಿನ ಸಂಗಬೆಟ್ಟು ಗ್ರಾಮ ಪಂಚಾಯತ್ ಮಂಗಳೂರು ನಗರದಿಂದ ಸುಮಾರು 45 ಕಿ.ಮೀ ದೂರದಲ್ಲಿದ್ದು, ಬಂಟ್ವಾಳ ತಾಲೂಕು ಕೇಂದ್ರದಿಂದ 15 ಕಿ.ಮೀ. ದೂರದಲ್ಲಿದೆ. ಮೂಡಬಿದ್ರೆ ಮತ್ತು ಬಿ.ಸಿ ರೋಡ್ ನಡುವೆ ಇರುವ ಸಂಗಬೆಟ್ಟು ಗ್ರಾಮ ಪಂಚಾಯತ್ 2617.14 ಎಕ್ರೆ ವಿಸ್ತೀರ್ಣವನ್ನು ಹೊಂದಿದೆ. ಶೇಕಡ 100 ರಷ್ಟು ಸಾಕ್ಷರತೆಯನ್ನು ಹೊಂದಿರುವ ಈ ಗ್ರಾಮ ಪಂಚಾಯತ್ ಸಂಗಬೆಟ್ಟು ಮತ್ತು ಕರ್ಪೆ ಗ್ರಾಮಗಳನ್ನು ಒಳಗೊಂಡಿದೆ. ಈ ಪಂಚಾಯತ್‌ನ ವ್ಯಾಪ್ತಿಯಲ್ಲಿ 1113 ಮನೆಗಳು ಹಾಗೂ 343 ಅಂಗಡಿ ಮುಂತಾದ ವಾಣಿಜ್ಯ ಚಟುವಟಿಕೆಗಳಿವೆ. ಒಟ್ಟು 4238 ಜನಸಂಖ್ಯೆಯನ್ನು ಹೊಂದಿರುವ ಈ ಪಂಚಾಯತ್‌ನಲ್ಲಿ 6 ವಾರ್ಡ್‌ಗಳಿವೆ. ಪೇಟೆ ಭಾಗವನ್ನು ಬಿಟ್ಟು ಉಳಿದೆಡೆ ನಾಗರಿಕರು ಹೆಚ್ಚಾಗಿ ಕೃಷಿ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ. ಕೃಷಿಕರು ಹೆಚ್ಚಾಗಿ ತಮ್ಮಲ್ಲಿ ಉತ್ಪಾದನೆಯಾಗುವ ಸಾವಯವ ಕಸಗಳನ್ನು ತಮ್ಮ ಸ್ವಂತ ಜಮೀನುಗಳಲ್ಲಿಯೇ ವಿಲೇವಾರಿ ಮಾಡುತ್ತಾರೆ. ಉಳಿದಂತೆ ಪ್ಲಾಸ್ಟಿಕ್, ಪೇಪರ್, ಲೋಹ ಮುಂತಾದ ತ್ಯಾಜ್ಯಗಳನ್ನು ಗುಜರಿಗೆ ಮಾರುತ್ತಾರೆ.

ಪಂಚಾಯತ್ ತ್ಯಾಜ್ಯ ನಿರ್ವಹಣೆಗೆ ಆದ್ಯತೆ ನೀಡಿದ್ದು ಕಸ ಸಾಗಾಟಕ್ಕೆ ಒಂದು ಜೀಪ್ ಮತ್ತು 3 ಜನ ಕಾರ್ಮಿಕರನ್ನು ನಿಯುಕ್ತಿಗೊಳಿಸಿದೆ. ಪ್ರತೀ ವಾರ್ಡ್‌ನಿಂದ ಸರಾಸರಿ 2 ದಿನಗಳಿಗೊಮ್ಮೆ ತ್ಯಾಜ್ಯ ಸಂಗ್ರಹ ಮಾಡುತ್ತಿದ್ದು ದಿನಕ್ಕೆ ಸರಾಸರಿ 2 ಲೋಡ್ (ಜೀಪ್‌ನಲ್ಲಿ) ತ್ಯಾಜ್ಯವನ್ನು ಸಂಗ್ರಹಿಸಿ ಪಂಚಾಯತ್ ಕಛೇರಿಯಿಂದ ಕೇವಲ 500 ಮೀಟರ್ ದೂರದಲ್ಲಿರುವ (ಸಂಗಬೆಟ್ಟು) ನಿರ್ವಹಣಾ ಘಟಕಕ್ಕೆ ಸಾಗಿಸಲಾಗುತ್ತಿದೆ. ಸರಕಾರಿ ಜಾಗದಲ್ಲಿರುವ ಈ ಘಟಕವು 50 ಸೆಂಟ್ಸ್ ಜಾಗವನ್ನು ಹೊಂದಿದೆ. ತ್ಯಾಜ್ಯ ನಿರ್ವಹಣಾ ಕಾರ್ಯವನ್ನು ಪಂಚಾಯತ್ ಕಾರ್ಮಿಕರ ಸಹಾಯದಿಂದ ಸ್ವತಂತ್ರವಾಗಿ ನಿರ್ವಹಿಸುತ್ತಿದ್ದು, ಪ್ಲಾಸ್ಟಿಕ್ ಸೌಧ, ಕೊಳವೆ ಗೊಬ್ಬರ ಮುಂತಾದ ಸಾಂಪ್ರದಾಯಿಕ ವಿಧಾನಗಳನ್ನು ಅನುಸರಿಸುತ್ತಿದೆ. ಇದರೊಂದಿಗೆ ಸಾವಯವ ಗೊಬ್ಬರ ಹಾಗೂ ಎರೆಹುಳ ಗೊಬ್ಬರ ತಯಾರಿಕಾ ಘಟಕಗಳೂ ಕಾರ್ಯನಿರ್ವಹಿಸುತ್ತಿವೆ. ತ್ಯಾಜ್ಯ ನಿರ್ವಹಣಾ ವೆಚ್ಚವನ್ನು ಭರಿಸಲು ಪ್ರತೀ ಮನೆ ಹಾಗೂ ಅಂಗಡಿಗಳಿಂದ ಪ್ರತ್ಯೇಕ ತೆರಿಗೆಯನ್ನು ಸಂಗ್ರಹಿಸಲಾಗುತ್ತಿದೆ. ಪಂಚಾಯತ್ ವ್ಯಾಪ್ತಿಯಲ್ಲಿರುವ ಕಸದ ತೊಟ್ಟಿಗಳನ್ನು ತೆಗೆಯಲಾಗಿದೆಯಾದರೂ, ಜನರು ಹಿಂದೆ ತೊಟ್ಟಿಯಿದ್ದ ಜಾಗಗಳಲ್ಲಿ ತ್ಯಾಜ್ಯವನ್ನು ಎಸೆಯುತ್ತಿರುವುದು ಕಂಡು ಬಂದಿದೆ. ಜನ ಪ್ರತಿನಿಧಿಗಳು ಹಾಗೂ ಸಿಬ್ಬಂದಿಗಳು ಉತ್ತಮ ಸಹಕಾರ ನೀಡುತ್ತಿರುವ ಬಗ್ಗೆ ಮಾಹಿತಿ ಇದ್ದರೂ, ಕೇವಲ ಸಂಗ್ರಹ ಮತ್ತು ಸಾಗಾಟಕ್ಕೆ ಮಾತ್ರ ಆದ್ಯತೆ ನೀಡಿ ನಿರ್ವಹಣೆ ಬಗ್ಗೆ ಆದ್ಯತೆ ನೀಡದಿರುವುದರಿಂದ ತ್ಯಾಜ್ಯ ವಿಭಜನಾ ಕಾರ್ಯವು ಯಾವುದೇ ಹಂತದಲ್ಲಿ ಸಮರ್ಪಕವಾಗಿಲ್ಲ. ಮರು ಉತ್ಪಾದನಾ ಘಟಕಗಳಿಗೆ ಪ್ಲಾಸ್ಟಿಕ್, ಲೋಹ, ಬಾಟಲಿ

ಮುಂತಾದ ತ್ಯಾಜ್ಯಗಳನ್ನು ವಿಭಜಿಸಿ ನೀಡುವ ಕೆಲಸವು ಆದ್ಯತೆಯನ್ನು ಪಡೆದುಕೊಂಡಿದ್ದರೂ, ಮೂಲದಲ್ಲಿ ವಿಭಜನೆ ಸರಿಯಾಗಿ ಆಗದಿರುವುದರಿಂದ ಹೆಚ್ಚಿನ ತ್ಯಾಜ್ಯವು ಭೂಭರ್ತಿಯಾಗುತ್ತಿದೆ. ನಿಯಮಾವಳಿಗಳ ಅನುಷ್ಠಾನಕ್ಕೆ ಪಂಚಾಯತ್ ಅನೇಕ ಕ್ರಮಗಳನ್ನು ಕೈಗೊಂಡಿದೆಯಲ್ಲದೇ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ವಾರ್ಡ್ ಮಟ್ಟದಲ್ಲಿ ನಡೆಸಲಾಗಿದೆ. ಸಾರ್ವಜನಿಕರಿಗೆ ತೊಂದರೆಯಾಗದಂತೆ ಹಾಗು ರಸ್ತೆಯಲ್ಲಿ ತ್ಯಾಜ್ಯ ಸೋರಿ ಹೋಗದಂತೆ ತಡೆಯುವ ಉದ್ದೇಶದಿಂದ ವಾಹನದಲ್ಲಿ ಸಾಗಾಟ ಮಾಡುವಾಗ ಮುಚ್ಚುವುದನ್ನು ಕಡ್ಡಾಯ ಗೊಳಿಸಲಾಗಿದೆ. ಅಧಿಕ ಪ್ರಮಾಣದ ತ್ಯಾಜ್ಯ ಉತ್ಪಾದಿಸುವ ಮದುವೆ ಸಭಾಂಗಣ, ಹೋಟೇಲು ಮುಂತಾದುವುಗಳಿಗೆ ಅಧಿಕ ತೆರಿಗೆಯನ್ನು ವಿಧಿಸಲಾಗುತ್ತಿದೆ. ರಸ್ತೆ ಬದಿ, ಚರಂಡಿ, ತೋಡು ಹಾಗೂ ಇನ್ನಿತರ ಸ್ಥಳಗಳಲ್ಲಿ ತ್ಯಾಜ್ಯ ಎಸೆಯುವವರಿಗೆ ಪಂಚಾಯತ್ ದಂಡ ವಿಧಿಸುತ್ತಿದೆ. ವಾರದ ಸಂತೆಯಾಗುವ ಸ್ಥಳದ ಸ್ವಚ್ಛತೆಗೆ ವಿಶೇಷ ಪ್ರಾಮುಖ್ಯತೆ ನೀಡಿದ್ದು, ವ್ಯಾಪಾರಿಗಳಿಂದ ಕರ ಸಂಗ್ರಹಿಸಲಾಗುತ್ತಿದೆ. ಪ್ಲಾಸ್ಟಿಕ್ ನಿಷೇಧಕ್ಕೆ ಪಂಚಾಯತ್ ಕ್ರಮ ಕೈಗೊಳ್ಳದಿದ್ದರೂ ಬಳಕೆಯನ್ನು ಕಡಿಮೆಗೊಳಿಸಲು ಸಾಕಷ್ಟು ಜನಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

**ಮಂಚಿ ಗ್ರಾಮ ಪಂಚಾಯತ್**

ಬಂಟ್ವಾಳ ತಾಲೂಕಿನ ಮಂಚಿ ಗ್ರಾಮ ಪಂಚಾಯತ್ ಮಂಗಳೂರು ನಗರದಿಂದ ಸುಮಾರು 40 ಕಿ.ಮೀ ದೂರದಲ್ಲಿದೆ. ಒಟ್ಟು 2996.57 ಎಕ್ರೆ ವಿಸ್ತೀರ್ಣವನ್ನು ಹೊಂದಿರುವ ಈ ಪಂಚಾಯತ್‌ನಲ್ಲಿ 8017 ಜನಸಂಖ್ಯೆ ಇದ್ದು 1838 ಕುಟುಂಬಗಳಿವೆ. ಮಂಚಿ ಗ್ರಾಮ ಪಂಚಾಯತ್‌ನ ಬಹುಭಾಗ ಕೃಷಿ ಚಟುವಟಿಕೆ ಹೊಂದಿರುವ ಗ್ರಾಮೀಣ ಭಾಗವಾಗಿದ್ದು ಕೇವಲ 60 ಹೊಟೇಲ್/ಅಂಗಡಿ ಮುಂತಾದ ವಾಣಿಜ್ಯ ಚಟುವಟಿಕೆಗಳಿವೆ. ಶೇಕಡ 100 ಸಾಕ್ಷರತೆಯನ್ನು ದಾಖಲಿಸಿರುವ ಈ ಗ್ರಾಮ ಪಂಚಾಯತ್ ತ್ಯಾಜ್ಯ ನಿರ್ವಹಣೆಗೆ ಹೆಚ್ಚಿನ ಆದ್ಯತೆಯನ್ನು ನೀಡಿದೆ. 'ನಿರ್ಮಲ ಗ್ರಾಮ ಪರಸ್ಕಾರ' ಪ್ರಶಸ್ತಿಯನ್ನು ಪಡೆದುಕೊಂಡಿರುವ ಈ ಪಂಚಾಯತ್ ವ್ಯಾಪ್ತಿಯ ಕುಕ್ಕಜೆ ಕೆಳಗಿನ ಪೇಟೆಯಲ್ಲಿ ವಾರದ ಸಂತೆ ಜರಗುತ್ತಿದ್ದು, ಅಲ್ಲಿನ ಸ್ವಚ್ಛತೆಗೆ ಸಾಕಷ್ಟು ಶ್ರಮವಹಿಸಿದೆ. ಈ ಗ್ರಾಮ ಪಂಚಾಯತ್ ಕಛೇರಿಯಿಂದ 1 ಕಿ.ಮೀ ಒಳಗೆ ಇರುವ 'ಪತ್‌ಮುಡಿ' ಎನ್ನುವ ಜಾಗದಲ್ಲಿ 1 ಎಕರೆ ವಿಸ್ತೀರ್ಣದ ಘನತ್ಯಾಜ್ಯ ವಿಲೇವಾರಿ ಘಟಕ ಸ್ಥಾಪನೆಯಾಗಿದ್ದು, ಕಸ ಸಂಗ್ರಹಿಸಲು 1 ಆಪೆ ರಿಕ್ಷಾವನ್ನು ಖರೀದಿಸಲಾಗಿದೆ. ಪಂಚಾಯತ್ ವ್ಯಾಪ್ತಿಯ ಎಲ್ಲಾ ಮನೆ/ವ್ಯಾಪಾರ/ಉದ್ಯಮ ಕೇಂದ್ರಗಳಿಗೆ ತ್ಯಾಜ್ಯ ವಿಲೇವಾರಿಗಾಗಿ ತಿಂಗಳ ಶುಲ್ಕ ನಿಗದಿಪಡಿಸಲಾಗಿದೆ. ಸಾಮಾನ್ಯವಾಗಿ ವಾಸದ ಮನೆ ಮತ್ತು ಸಣ್ಣ ವ್ಯಾಪಾರಸ್ಥರಿಂದ ತಿಂಗಳಿಗೆ ರೂಪಾಯಿ 40ರಂತೆ ಹಾಗೂ ಬಾರ್/ಹೊಟೇಲುಗಳಿಗೆ ರೂ.200ರವರೆಗೆ ಶುಲ್ಕ

ವಿಧಿಸಲಾಗುತ್ತಿದೆ. ಪ್ರತೀ 2 ದಿನಗಳಿಗೊಮ್ಮೆ ತ್ಯಾಜ್ಯವನ್ನು ಸಂಗ್ರಹಿಸಲಾಗುತ್ತಿದ್ದು, ಹಸಿಕಸ (ಸಾವಯವ) ಮತ್ತು ಒಣಕಸ (ನಿರವಯುವ) ವನ್ನು ಮೂಲದಲ್ಲೇ ಪ್ರತ್ಯೇಕಿಸಿ ಸಂಗ್ರಹಿಸುವಂತೆ ಸೂಚಿಸಲಾಗಿದ್ದರೂ, ಜನರು ನಿರೀಕ್ಷಿತ ಮಟ್ಟದಲ್ಲಿ ಸಹಕಾರ ನೀಡದಿರುವುದು ಕಂಡು ಬಂದಿದೆ. ಕೋಳಿ ಮತ್ತು ಮಾಂಸದ ಅಂಗಡಿಗಳಿಗೆ ತ್ಯಾಜ್ಯವನ್ನು ತಾವೇ ನಿರ್ವಹಿಸಿಕೊಳ್ಳುವಂತೆ ಸೂಚನೆ ನೀಡಲಾಗಿದೆ.

ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು ಪಂಚಾಯತ್ ತನ್ನ ಜನಪ್ರತಿನಿಧಿಗಳು ಹಾಗೂ ಪಂಚಾಯತ್ ಸಿಬ್ಬಂದಿಗಳ ಮೂಲಕ ಮಾಡಿದೆ. ದಿನನಿತ್ಯ ಸಂಗ್ರಹವಾಗುವ 2 ಲೋಡು ತ್ಯಾಜ್ಯವನ್ನು ಸೂಕ್ತ ರೀತಿಯಲ್ಲಿ ವಿಭಜಿಸಿ ವಿಲೇವಾರಿ ಮಾಡಲು ಕ್ರಮ ಕೈಗೊಳ್ಳಲಾಗಿದೆ. ಸಾಂಪ್ರಾದಾಯಿಕ ವಿಲೇವಾರಿ ವಿಧಾನಗಳಾದ ಕೊಳವೆ ಗೊಬ್ಬರ ಮತ್ತು ಸಾವಯವ ಗೊಬ್ಬರ ತಯಾರಿಕಾ ಕಾರ್ಯವು ನಡೆಯುತ್ತಿದೆ. ಪ್ಲಾಸ್ಟಿಕ್ ಹಾವಳಿಯನ್ನು ತಡೆಗಟ್ಟಲು ಅಲ್ಲಲ್ಲಿ ಪ್ಲಾಸ್ಟಿಕ್ ಸೌಧಗಳನ್ನು ನಿರ್ಮಿಸಲಾಗಿದೆ. ಕೃಷಿ ಚಟುವಟಿಕೆಯಲ್ಲಿ ತೊಡಗಿರುವ ಗ್ರಾಮೀಣ ಭಾಗದ ಜನರು ಹೆಚ್ಚಾಗಿ ತಮ್ಮಲ್ಲಿ ಉತ್ಪಾದನೆಯಾಗುವ ತ್ಯಾಜ್ಯಗಳನ್ನು ತಾವೇ ತಮ್ಮ ಸ್ವಂತ ಜಾಗಗಳಲ್ಲಿ ವಿಲೇವಾರಿ ಮಾಡುತ್ತಿದ್ದಾರೆ. ಹಾಗೂ ಪ್ಲಾಸ್ಟಿಕ್, ರಬ್ಬರ್, ಲೋಹ ಮುಂತಾದ ತ್ಯಾಜ್ಯಗಳನ್ನು ಮರು ಉತ್ಪಾದನಾ ಘಟಕಗಳಿಗೆ ಗುಜರಿ ವ್ಯಾಪಾರಿಗಳ ಮೂಲಕ ನೀಡುತ್ತಿದ್ದಾರೆ. ಜನರು ರಸ್ತೆ ಬದಿ, ತೋಡುಗಳಲ್ಲಿ ತ್ಯಾಜ್ಯವನ್ನು ಎಸೆಯುವುದನ್ನು ತಪ್ಪಿಸಲು ಅಗತ್ಯದ ಸ್ಥಳಗಳಲ್ಲಿ ಸಿಮೆಂಟಿನ ಕಸದ ತೊಟ್ಟಿಗಳನ್ನು ಇಡಲಾಗಿದೆ. ಜನರಿಗೆ ತ್ಯಾಜ್ಯ ಶುಲ್ಕ ವಿಧಿಸುವ ಕಾರಣದಿಂದ ತ್ಯಾಜ್ಯ ನಿರ್ವಹಣೆಗೆ ಹಣಕಾಸಿನ ಕೊರತೆಯಿಲ್ಲ. ಪಂಚಾಯತ್ ತಯಾರಿಸಿದ ಸಾವಯವ ಗೊಬ್ಬರವನ್ನು ಸ್ಥಳೀಯ ರೈತರೇ ನೇರವಾಗಿ ಖರೀದಿಸುವುದರಿಂದ ಪಂಚಾಯತ್‌ಗೆ ಹೆಚ್ಚಿನ ಆದಾಯ ಬರುತ್ತಿದೆ. ಮುಖ್ಯ ರಸ್ತೆಯ ಪಕ್ಕದಲ್ಲಿರುವ ಮನೆಗಳಿಂದ ಪ್ರತೀ ಎರಡು ದಿನಗಳಿಗೊಮ್ಮೆ ತ್ಯಾಜ್ಯ ಸಂಗ್ರಹಿಸುತ್ತಿದ್ದು, ವಿಭಜಿಸದಿರುವ ತ್ಯಾಜ್ಯವನ್ನು ಕಾರ್ಮಿಕರು ನಿರ್ವಹಣಾ ಘಟಕದಲ್ಲಿ ಬೇರ್ಪಡಿಸಿ, ಪ್ಲಾಸ್ಟಿಕ್/ಬಾಟಲಿ/ಲೋಹ ಮುಂತಾದ ಒಣ ತ್ಯಾಜ್ಯಗಳನ್ನು ಮರುತ್ಪಾದನಾ ಘಟಕಗಳಿಗೆ ನೀಡಲಾಗುತ್ತಿದೆ. ಆದರೆ ರಸ್ತೆ ಬದಿ, ತೋಡುಗಳಿಗೆ ತ್ಯಾಜ್ಯವನ್ನು ಎಸೆಯುವುದನ್ನು ತಪ್ಪಿಸಲು ಪಂಚಾಯತ್ ದಂಡ ಮುಂತಾದ ಯಾವುದೇ ಕಠಿಣ ಕ್ರಮ ಕೈಗೊಂಡಿರುವುದಿಲ್ಲ. ಒಟ್ಟಿನಲ್ಲಿ ಘನತ್ಯಾಜ್ಯ ನಿರ್ವಹಣೆಗೆ ಪಂಚಾಯತ್ ನಿರಂತರವಾಗಿ ಶ್ರಮಿಸುತ್ತಿದೆ.

**ಮಂಗಳೂರು ತಾಲೂಕು**

ದ.ಕ.ಜಿಲ್ಲೆಯ ಮಂಗಳೂರು ತಾಲೂಕು ಉಳಿದ ತಾಲೂಕುಗಳಿಗಿಂತ ಭಿನ್ನವಾಗಿದ್ದು ಮಂಗಳೂರು ಮಹಾನಗರ ಪಾಲಿಕೆ, ಉಳ್ಳಾಲ ನಗರಸಭೆ, ಮೂಡಬಿದಿರೆ ಮತ್ತು ಮುಲ್ಕಿ ಪುರ

ಸಭೆಗಳ ಸಹಿತ ಒಟ್ಟು 56 ಗ್ರಾಮ ಪಂಚಾಯತ್‌ಗಳನ್ನು ಹೊಂದಿದೆ. ಅವುಗಳಲ್ಲಿ 7 ಗ್ರಾಮ ಪಂಚಾಯತ್‌ಗಳು 2015ರಲ್ಲಿ ಹೊಸತಾಗಿ ರಚನೆಯಾಗಿವೆ. ಮಂಗಳೂರು ತಾಲೂಕಿನಲ್ಲಿ 2011ರ ಜನಗಣತಿ ಪ್ರಕಾರ ಕೇವಲ ಶೇಕಡ 21.12ರಷ್ಟು ಜನ ಗ್ರಾಮೀಣ ವಾಸಿಗಳಾಗಿದ್ದಾರೆ ಮತ್ತು ಶೇಕಡ 78.88ರಷ್ಟು ಜನ ನಗರವಾಸಿಗಳಾಗಿದ್ದಾರೆ. ಮಂಗಳೂರು ತಾಲೂಕಿನ ಒಟ್ಟು ವಿಸ್ತಾರ 923 ಚ.ಕಿ.ಮೀ.ಗಳಾಗಿದ್ದು ಶೇಕಡ 18.99 ಜಿಲ್ಲೆಯಲ್ಲಿನ ಭಾಗವನ್ನು ಹೊಂದಿದೆ. ತಾಲೂಕಿನ ಒಟ್ಟು ಜನಸಂಖ್ಯೆಯ 9,94,602 ಆಗಿದ್ದು ದಶವಾರ್ಷಿಕ ಬೆಳವಣಿಗೆಯ 12.66 ಆಗಿದೆ. ತಾಲೂಕಿನ ಸಾಕ್ಷರತಾ ಪ್ರಮಾಣವು 91.67 ಆಗಿದ್ದು ಪುರುಷರು ಶೇಕಡ 95.31 ಮತ್ತು ಮಹಿಳೆಯರು ಶೇಕಡ 88.15 ಸಾಕ್ಷರತೆಯನ್ನು ಹೊಂದಿದ್ದಾರೆ. ಜಿಲ್ಲೆಯಲ್ಲಿ ಮಂಗಳೂರಿನ ಸಾಕ್ಷರತಾ ಪ್ರಮಾಣವೇ ಉಳಿದ ತಾಲೂಕುಗಳಿಗಿಂತ ಅಧಿಕವಾಗಿದೆ.

ಮಂಗಳೂರು ತಾಲೂಕಿನ ಮಂಗಳೂರು ಮಹಾನಗರ ಪಾಲಿಕೆ, ಮೂಡಬಿದ್ರೆ ಮತ್ತು ಮುಲ್ಕಿ ಪುರಸಭೆ, ಉಳ್ಳಾಲ ನಗರ ಸಭೆ ಮತ್ತು ಗ್ರಾಮ ಪಂಚಾಯತ್‌ಗಳಾದ ಕಿನ್ನಿಗೋಳಿ, ಕೆಮ್ರಾಲ್, ಬಜ್ಪೆ, ಹಳೆಯಂಗಡಿ ಮತ್ತು ಗುರುಪುರ ಪಂಚಾಯತ್‌ಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಮೆನ್ನಬೆಟ್ಟು ಗ್ರಾಮ ಪಂಚಾಯತ್**

ಮಂಗಳೂರು ತಾಲೂಕಿನ ಮೆನ್ನಬೆಟ್ಟು ಗ್ರಾಮ ಪಂಚಾಯತ್ ಇದು 2011ರ ಜನಗಣತಿ ಪ್ರಕಾರ 10,014 ಜನಸಂಖ್ಯೆಯನ್ನು ಹೊಂದಿದ್ದು 2076 ಮನೆಗಳನ್ನು ಒಳಗೊಂಡಿದೆ. ಕೊಂಡೆಮೂಲ ಮತ್ತು ಮೆನ್ನಬೆಟ್ಟು ಗ್ರಾಮ ಇದರ ವ್ಯಾಪ್ತಿಯಲ್ಲಿದ್ದು 22 ಚುನಾಯಿತ ಪ್ರತಿನಿಧಿಗಳನ್ನು ಹೊಂದಿದೆ. ಮೆನ್ನಬೆಟ್ಟು ಮತ್ತು ಕಿನ್ನಿಗೋಳಿ ಗ್ರಾಮಪಂಚಾಯತ್ ಜಂಟಿಯಾಗಿ ತ್ಯಾಜ್ಯ ನಿರ್ವಹಣೆ ಮಾಡುತ್ತಿದ್ದು ತ್ಯಾಜ್ಯ ರಾಶಿಹಾಕುವ ಜಾಗವು ಮೆನ್ನಬೆಟ್ಟು, ಇದರ ಒಟ್ಟು ವಿಸ್ತೀರ್ಣ 50 ಸೆಂಟ್ಸ್ ಮಾತ್ರ. ಪಂಚಾಯತ್‌ನ ಸರ್ಕಾರಿ ಜಾಗದಲ್ಲಿದೆ. ಒಟ್ಟು 7 ಜನ ಪೌರ ಕಾರ್ಮಿಕರಲ್ಲಿ 3 ಜನ ಮೆನ್ನಬೆಟ್ಟು ಮತ್ತು 4 ಜನ ಕಿನ್ನಿಗೋಳಿ ಪಂಚಾಯತ್‌ನ ಕಾರ್ಮಿಕರಾಗಿದ್ದು ತ್ಯಾಜ್ಯ ಸಂಗ್ರಹ ಸಾಗಾಟ ಹಾಗೂ ವಿಲೇವಾರಿ ಮಾಡುವ ಜಾಗದಲ್ಲಿ ವಿಭಜನಾ ಕಾರ್ಯವನ್ನು ಜಂಟಿಯಾಗಿ ಮಾಡುತ್ತಿದ್ದಾರೆ. ಎರಡೂ ಪಂಚಾಯತ್‌ಗಳು ಏಕ ರೀತಿ ನಿರ್ವಹಣಾ ನೀತಿಯನ್ನು ಅನುಸರಿಸುತ್ತಿವೆ. ತ್ಯಾಜ್ಯ ನಿರ್ವಹಣಾ ಸೇವಾ ತೆರಿಗೆಯನ್ನು ಪ್ರತೀ ತಿಂಗಳು ರೂ.250/–ರಂತೆ ಹೋಟೇಲು ಹಾಗೂ ಮದುವೆ ಸಭಾಂಗಣಗಳಿಂದ ಸಂಗ್ರಹಿಸುತ್ತಿವೆ. ಪ್ರತಿನಿತ್ಯ ಸುಮಾರು 4 ರಿಂದ 5 ಟನ್ ತ್ಯಾಜ್ಯ ಉತ್ಪಾದನೆಯಾಗುತ್ತಿದೆ. ಅಗತ್ಯವಿರುವ ಜಾಗಗಳನ್ನು ಗುರುತಿಸಿ ಕೇವಲ 2 ಕಸದ ತೊಟ್ಟಿಗಳು ಮಾತ್ರ ಇದ್ದು, ಉಳಿದಂತೆ ಮನೆ–ಮನೆ ಕಸ ಸಂಗ್ರಹ ಕಾರ್ಯ ನಡೆಯುತ್ತಿದೆ.

ಮೆನ್ನಬೆಟ್ಟು ಪಂಚಾಯತ್ ವ್ಯಾಪ್ತಿಯಲ್ಲಿ ಶೇಕಡ 25ರಷ್ಟು ತ್ಯಾಜ್ಯ ಉತ್ಪಾದನೆಯಾಗುತ್ತಿದ್ದು, ಶೇಕಡ 75ರಷ್ಟು ತ್ಯಾಜ್ಯ ಕಿನ್ನಿಗೋಳಿ ಪಂಚಾಯತ್ ವ್ಯಾಪ್ತಿಯಿಂದ ಸಂಗ್ರಹವಾಗುತ್ತಿದೆ. ಇಲ್ಲಿ ಭೂಭರ್ತಿಗೆ ಬೇಕಾಗುವಷ್ಟು ಜಾಗದ ಕೊರತೆ ಇದೆ. ಗೊಬ್ಬರ ತಯಾರಿಸುವ ಘಟಕವನ್ನು ಪ್ರಾರಂಭಿಸಲಾಗಿದೆ. ಪ್ಲಾಸ್ಟಿಕ್, ಬಾಟಲಿ, ಮುಂತಾದ ತ್ಯಾಜ್ಯಗಳನ್ನು ಸಂಗ್ರಹಿಸಿಡಲು ಸ್ಥಳದ ಕೊರತೆ ಇದೆ. ಮೂಲದಲ್ಲಿ ತ್ಯಾಜ್ಯ ವಿಭಜನಾ ಕಾರ್ಯವು ಯಶಸ್ವಿಯಾಗಿ ನಡೆಯುತ್ತಿಲ್ಲ. ತ್ಯಾಜ್ಯ ನಿರ್ವಹಣೆಗೆ ಕರದ ರೂಪದಲ್ಲಿ ಪಂಚಾಯತ್‌ಗೆ ವಾರ್ಷಿಕ 1,16,221 (2014–15) ರೂಪಾಯಿ ಆದಾಯ ಬಂದಿರುತ್ತದೆ (ಪಂಚಾಯತ್ ಅಭಿವೃದ್ಧಿ ಅಧಿಕಾರಿ ನೀಡಿದ ಮಾಹಿತಿ). ಸುಮಾರು ಶೇಕಡ 20ರಷ್ಟು ತ್ಯಾಜ್ಯವನ್ನು ಗೊಬ್ಬರಕ್ಕಾಗಿ ಉಪಯೋಗಿಸುತ್ತಾರೆ. ಸಾರ್ವಜನಿಕರಿಗೆ ಯಾವುದೇ ರೀತಿಯ ದಂಡವನ್ನು ಪಂಚಾಯತ್ ವಿಧಿಸುವುದಿಲ್ಲ. ಜನಜಾಗೃತಿ ಮೂಡಿಸಿ 7 ಸಾರ್ವಜನಿಕ ಎಚ್ಚರಿಕೆ ಫಲಕಗಳನ್ನು ಅಳವಡಿಸಲಾಗಿದೆ. ಪ್ಲಾಸ್ಟಿಕ್ ಬಾಟಲಿ, ತೊಟ್ಟೆ ಇತ್ಯಾದಿಗಳನ್ನು ಪ್ರತ್ಯೇಕವಾಗಿ ರಾಶಿ ಹಾಕಲಾಗಿದೆ. ಇವುಗಳನ್ನು ಮರು ಉತ್ಪಾದನಾ ಘಟಕಗಳಿಗೆ (ರಿಸೈಕ್ಲಿಂಗ್) ಕೊಂಡುಕೊಳ್ಳಲು ಯಾವುದೇ ಸ್ಥಳೀಯ ಘಟಕಗಳು ಮುಂದೆ ಬರದ ಕಾರಣ ಹಾಗೆಯೇ ಉಳಿದಿವೆ. ಲೀಚೆಟ್ ಸಮಸ್ಯೆಯನ್ನು ವೈಜ್ಞಾನಿಕವಾಗಿ ನಿರ್ವಹಣೆ ಮಾಡಿರುವುದಿಲ್ಲ. ಪ್ಲಾಸ್ಟಿಕ್ ಮತ್ತಿತರ ಆವರ್ತನೀಯ ತ್ಯಾಜ್ಯಗಳನ್ನು ಕೊಂಡುಕೊಳ್ಳುವವರ ಕೊರತೆ, ಕಾರ್ಮಿಕರ ಕೊರತೆ, ಭೂಭರ್ತಿಗೆ ಸಾಕಷ್ಟು ಜಾಗವಿಲ್ಲದಿರುವುದು, ಬಹುತೇಕ ಕಾರ್ಮಿಕರು ಪರಿಶಿಷ್ಟ ಜಾತಿಗೆ ಸೇರಿದವರು ಮತ್ತು ಇತರ ಜಾತಿಯವರು ಇಂತಹ ಕೆಲಸಕ್ಕೆ ಬಾರದಿರುವುದು, ಕಾರ್ಮಿಕರಿಗೆ ಆರೋಗ್ಯದ ದೃಷ್ಟಿಯಿಂದ ಶೂ ಮತ್ತು ಕೈಕವಚಗಳನ್ನು ಕೊಟ್ಟರೂ ಧರಿಸದಿರುವುದು, ಅಂಗಡಿಯವರು ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡದಿರುವುದು, ಕೋಳಿ ಮತ್ತು ಮಾಂಸದ ಅಂಗಡಿಯವರು ನಿಯಮಾವಳಿ ಪ್ರಕಾರ ತ್ಯಾಜ್ಯ ವಿಲೇವಾರಿಗೆ ವಿರೋಧ ವ್ಯಕ್ತಪಡಿಸುತ್ತಿರುವುದು ಈ ಪಂಚಾಯತ್ ವ್ಯಾಪ್ತಿಯ ಪ್ರಮುಖ ಸಮಸ್ಯೆಗಳಾಗಿವೆ ಎನ್ನುವುದು ಅಧಿಕಾರಿಗಳ ಅಭಿಪ್ರಾಯ.

ಯಾವುದೇ ವೈಜ್ಞಾನಿಕ ತ್ಯಾಜ್ಯ ನಿರ್ವಹಣಾ ವಿಧಾನಗಳನ್ನು ಅನುಸರಿಸದಿದ್ದರೂ, ಜಾಗೃತಿ ಮೂಡಿಸಲು ಶಾಲಾ ಕಾಲೇಜುಗಳಲ್ಲಿ ಪೈಪ್ ಕಂಪೋಸ್ಟ್, ಪ್ಲಾಸ್ಟಿಕ್ ಸೌಧ, ದಹನ ಕುಲುಮೆ ಇತ್ಯಾದಿ ಸಾಂಪ್ರದಾಯಿಕ ವಿಧಾನಗಳನ್ನು ಅಳವಡಿಸಲಾಗಿದೆ. ಸ್ಥಳೀಯ ಸಂಘ–ಸಂಸ್ಥೆಗಳ ಸಹಕಾರದಿಂದ ಆಗಾಗ ಸ್ವಚ್ಛತಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

**ಕೆಮ್ರಾಲ್ ಗ್ರಾಮ ಪಂಚಾಯತ್**

ಮಂಗಳೂರು ತಾಲೂಕಿನ ಕೆಮ್ರಾಲ್ ಗ್ರಾಮ ಪಂಚಾಯತ್ 5 ವಾರ್ಡ್‌ಗಳನ್ನು ಹೊಂದಿದ್ದು 2011 ರ ಜನಗಣತಿ ಪ್ರಕಾರ 6,738 ಜನಸಂಖ್ಯೆಯನ್ನು ಹೊಂದಿದೆ. ಈ ಗ್ರಾಮ ಪಂಚಾಯತ್

ಮೂಲಕ ಮಂಗಳೂರು-ಕಿನ್ನಿಗೋಳಿ ಮುಖ್ಯ ರಸ್ತೆಯಿದ್ದು ಇಲ್ಲಿಂದ ಕಿನ್ನಿಗೋಳಿಗೆ 4 ಕಿ.ಮೀ ಮತ್ತು ಮಂಗಳೂರಿಗೆ 28 ಕಿ.ಮೀ ಇದೆ. ಒಟ್ಟು 1,487 ಮನೆಗಳು, ಸುಮಾರು ಸಣ್ಣ-ಪುಟ್ಟ ಅಂಗಡಿಗಳು ಹಾಗೂ ಹೋಟೇಲುಗಳು ಕೆಮ್ರಾಲ್-ಪಕ್ಷಿಕೆರೆ ವ್ಯಾಪ್ತಿಯಲ್ಲಿ ಬರುತ್ತವೆ. ಘನ ತ್ಯಾಜ್ಯ ನಿರ್ವಹಣೆಗಾಗಿ ಇಬ್ಬರು ಹಂಗಾಮಿ ಪೌರ ಕಾರ್ಮಿಕರನ್ನು ನೇಮಿಸಲಾಗಿದೆ. ತ್ಯಾಜ್ಯ ಸಂಗ್ರಹ ಮತ್ತು ಸಾಗಾಟಕ್ಕಾಗಿ ಒಂದು ತಳ್ಳುಗಾಡಿಯನ್ನು ಉಪಯೋಗಿಸಲಾಗುತ್ತಿದೆ. ಕೆಮ್ರಾಲ್ ಬಸ್‌ನಿಲ್ದಾಣದ ಪಕ್ಕ ಹಾಗೂ ಪಕ್ಷಿಕೆರೆ ಬಸ್ ನಿಲ್ದಾಣದ ಸಮೀಪ ತ್ಯಾಜ್ಯದ ಪ್ರಮಾಣ ಅಧಿಕವಾಗಿರುವುದರಿಂದ ಪ್ರತಿನಿತ್ಯ ತ್ಯಾಜ್ಯ ಸಂಗ್ರಹಿಸಲಾಗುತ್ತಿದೆ.

ಪ್ರತೀ ದಿನ ಸಂಗ್ರಹವಾಗುವ ತ್ಯಾಜ್ಯವು ಅಂದಾಜು 5 ಕ್ವಿಂಟಾಲ್ ಇದ್ದು, ಪಂಚಾಯತ್ ಸಮೀಪ 20 ಸೆಂಟ್ಸ್ ಜಾಗದಲ್ಲಿ ವಿಲೇವಾರಿಗಾಗಿ ಕಟ್ಟಡವನ್ನು ನಿರ್ಮಿಸಲಾಗಿದೆ. ಇಲ್ಲಿ ಎರೆಹುಳು, ಗೊಬ್ಬರ ಘಟಕ ಹಾಗೂ ಜೈವಿಕ ತ್ಯಾಜ್ಯದಿಂದ ಸಾವಯವ ಬೆಳೆಗೊಬ್ಬರವನ್ನು ತಯಾರಿಸುತ್ತಿದ್ದಾರೆ. ಸಾರ್ವಜನಿಕ ಸ್ಥಳಗಳಲ್ಲಿ ತ್ಯಾಜ್ಯ ಎಸೆಯದಂತೆ ಎಚ್ಚರಿಕೆ ಫಲಕಗಳನ್ನು ಹಾಕಲಾಗಿದೆ. ಆದರೆ ತಪ್ಪತಸ್ಥರಿಗೆ ಯಾವುದೇ ದಂಡ ವಿಧಿಸಿರುವುದಿಲ್ಲ. ಇದರ ವ್ಯಾಪ್ತಿಯಲ್ಲಿ ಬರುವ ಶಾಲೆಗಳಲ್ಲಿ ಕೊಳವೆ ಗೊಬ್ಬರ ಮತ್ತು ಪ್ಲಾಸ್ಟಿಕ್ ಸೌಧ ಅಳವಡಿಸಿ, ಸ್ವಚ್ಛತಾ ಜಾಗೃತಿ ಮೂಡಿಸಲಾಗಿದೆ. ತ್ಯಾಜ್ಯ ನಿರ್ವಹಣೆಗಾಗಿ ಪಂಚಾಯತ್ ಒಟ್ಟು ಮುಂಗಡ ಪತ್ರದ ಶೇಕಡ 25ರಷ್ಟು ಭಾಗವನ್ನು ಖರ್ಚುಮಾಡುತ್ತಿದೆ. ಪಂಚಾಯತ್ ನೀರು ಮತು ನೈರ್ಮಲ್ಯ ಸಮಿತಿಯನ್ನು ರಚನೆ ಮಾಡಿರುತ್ತದೆ. ಸ್ಥಳೀಯ ಸಂಘ-ಸಂಸ್ಥೆಗಳು, ರೋಟರಿ, ಲಯನ್ಸ್ ಸಂಸ್ಥೆಗಳು ಹಾಗೂ ಸಾರ್ವಜನಿಕರ ಸಹಕಾರದಿಂದ ಘನತ್ಯಾಜ್ಯ ನಿರ್ವಹಣೆಯು ಉತ್ತಮ ರೀತಿಯಲ್ಲಿದೆ ಎಂದು ಪಂಚಾಯತ್ ಅಭಿವೃದ್ಧಿ ಅಧಿಕಾರಿ ತಿಳಿಸಿದ್ದಾರೆ. ಸಾರ್ವಜನಿಕರಿಗೆ ಯಾವುದೇ ತ್ಯಾಜ್ಯ ವಿಲೇವಾರಿ ಶುಲ್ಕವನ್ನು ಪಂಚಾಯತ್ ವಿಧಿಸಿರುವುದಿಲ್ಲ.

**ಬಜ್ಪೆ ಗ್ರಾಮ ಪಂಚಾಯತ್**

ದಕ್ಷಿಣ ಕನ್ನಡ ಜಿಲ್ಲೆಯ ಬಜ್ಪೆ ಗ್ರಾಮ ಪಂಚಾಯತ್ ಮಂಗಳೂರು ನಗರದಿಂದ 18 ಕಿ.ಮೀ ದೂರದಲ್ಲಿದ್ದು ಇದರ ಒಟ್ಟುವಿಸ್ತೀರ್ಣ 1785.76 ಎಕ್ರೆ. 2011ರ ಜನಗಣತಿ ಪ್ರಕಾರ 9705 ಜನಸಂಖ್ಯೆಯನ್ನು ಹೊಂದಿದ್ದು 3674 ಮನೆಗಳಿವೆ. ಬಜ್ಪೆ ಪಂಚಾಯತ್ ವ್ಯಾಪ್ತಿಯಲ್ಲಿ ಅಂತಾರ್‍ರಾಷ್ಟ್ರೀಯ ವಿಮಾನ ನಿಲ್ದಾಣವಿದೆ. ಒಟ್ಟು ಇಬ್ಬರು ಖಾಯಂ ಪೌರಕಾರ್ಮಿಕರಿದ್ದು ಮನೆ-ಮನೆ ಕಸ ಸಂಗ್ರಹ ಕೆಲಸವನ್ನು ಸ್ಥಳೀಯ ಖಾಸಗಿ ಕಂಪೆನಿಗೆ ತಿಂಗಳಿಗೆ 23.8 ಲಕ್ಷಕ್ಕೆ ಗುತ್ತಿಗೆ ನೀಡಲಾಗಿದೆ. ಕಸ ಸಂಗ್ರಹ ಹಾಗೂ ವಿಲೇವಾರಿ ವೆಚ್ಚ ಭರಿಸಲು ಪ್ರತೀ ಮನೆಗೆ

ತಿಂಗಳಿಗೆ ರೂಪಾಯಿ 60, ಸಣ್ಣ ಅಂಗಡಿಗಳಿಗೆ ರೂ 100 ಹಾಗೂ ಬಾರ್/ಹೊಟೇಲುಗಳಿಗೆ ರೂ 500 ರಂತೆ ಕರ ವಿಧಿಸಲಾಗಿದೆ (2016ರಲ್ಲಿ). ತ್ಯಾಜ್ಯ ನಿರ್ವಹಣೆಗಾಗಿ ಪಂಚಾಯತ್ ವರ್ಷಕ್ಕೆ 2.85 ಕೋಟಿ ವೆಚ್ಚ ಮಾಡುತ್ತಿದೆ.

ಬಜ್ಪೆ ಪಂಚಾಯತ್ ವ್ಯಾಪ್ತಿಯಲ್ಲಿರುವ ಎಲ್ಲಾ ಮನೆಗಳಿಂದ ತೆರಿಗೆ ಸಂಗ್ರಹಿಸುವುದಿಲ್ಲ. ಕೇವಲ ಯಾವ ಮನೆಗಳಿಂದ ತ್ಯಾಜ್ಯ ಸಂಗ್ರಹ ಮಾಡುತ್ತಾರೋ ಆ ಮನೆಗಳಿಗೆ ಮಾತ್ರ ತೆರಿಗೆ ವಿಧಸಲಾಗಿದೆ. ತೆರಿಗೆ ನಿರ್ವಹಣೆಯನ್ನು ಪರಣಾಮಕಾರಿಯಾಗಿ ಮಾಡಲು ಮನೆಮನೆಗೆ ಕರಪತ್ರ ಹಂಚಲಾಗಿದೆ ಹಾಗೂ ಧ್ವನಿವರ್ಧಕದ ಮೂಲಕ ಮಾಹಿತಿ ನೀಡಲಾಗಿದೆ. ತ್ಯಾಜ್ಯ ರಾಶಿ ಹಾಕಲು ಪಂಚಾಯತ್ ಸ್ವಂತ ಜಾಗವನ್ನು ಹೊಂದಿದೆ. ಆದರೆ ಎಲ್ಲಾ ತ್ಯಾಜ್ಯವನ್ನು ಭೂಭರ್ತಿ ಮಾಡಲಾಗುತ್ತಿದ್ದು, ಯಾವುದೇ ಗೊಬ್ಬರ ತಯಾರಿಕಾ ಘಟಕಗಳನ್ನು ಹೊಂದಿರದ ಕಾರಣ ಶೇಕಡ 100ರಷ್ಟು ಬಳಕೆಯಾಗದೆ ಸಮಸ್ಯೆಯನ್ನು ಸೃಷ್ಟಿಸುತ್ತಿದೆ.

ಬಜ್ಪೆ ಪಂಚಾಯತ್ ವ್ಯಾಪ್ತಿಯಲ್ಲಿ ಕಸದ ತೊಟ್ಟಿಗಳನ್ನು ತೆಗೆಯಲಾಗಿದೆ. ಹಿಂದೆ ತೊಟ್ಟಿ ಇದ್ದ ಜಾಗಗಳಲ್ಲಿ ಸಾರ್ವಜನಿಕರು ಕಸವನ್ನು ಎಸೆಯುವುದರಿಂದ ಸ್ವಚ್ಛತಾ ಕಾರ್ಯಕ್ಕೆ ಅಡ್ಡಿಯಾಗಿದೆ. ಇಂತಹ ಜಾಗಗಳಿಂದ ತ್ಯಾಜ್ಯ ಸಂಗ್ರಹಿಸುವ ಕಾರ್ಯ 2–3 ದಿನಗಳಿಗೊಮ್ಮೆ ನಡೆಯುವ ಕಾರಣ ತ್ಯಾಜ್ಯದ ಸಮಸ್ಯೆ ಎದ್ದು ತೋರುತ್ತಿದೆ.

ಬಜ್ಪೆ ಪೇಟೆಯು ಕಟೀಲು ಹಾಗೂ ಗುರುಪುರದ ನಾಗರಿಕರಿಗೆ ಕೇಂದ್ರ ಸ್ಥಾನವಾಗಿದೆ. ದಿನನಿತ್ಯ ಸಾವಿರಾರು ಪ್ರಯಾಣಿಕರು ಬಜ್ಪೆ ಮೂಲಕ ವಿವಿಧೆಡೆ ಸಂಚರಿಸುತ್ತಿರುವುದರಿಂದ ಸಹಜವಾಗಿಯೇ ತರಕಾರಿ, ಹಣ್ಣು, ಹೂ, ಬೇಕರಿ ಹಾಗೂ ಹೋಟೇಲು ಉದ್ಯಮ ಉತ್ತಮ ರೀತಿಯಲ್ಲಿ ನಡೆಯುತ್ತಿದೆ ಹಾಗೂ ಪಂಚಾಯತ್‌ಗೆ ಸಾಕಷ್ಟು ಆದಾಯವನ್ನು ತಂದು ಕೊಡುತ್ತಿದೆ. ತರಕಾರಿ, ಮೀನು, ಮಾಂಸ ಮಾರಾಟ ಮಾಡಲು ಪ್ರತ್ಯೇಕ ಮಾರುಕಟ್ಟೆ ಇದ್ದು ಇದೇ ಜಾಗದಲ್ಲಿ ಪ್ರತಿ ಸೋಮವಾರ ವಾರದ ಸಂತೆ ನಡೆಯುತ್ತಿದೆ. ಪಂಚಾಯತ್ ಸ್ಥಳೀಯ ಸಂಸ್ಥೆಯೊಂದರ ಸಹಕಾರದಿಂದ ತ್ಯಾಜ್ಯ ಸಂಗ್ರಹ, ಸಾಗಾಟ ಮತ್ತು ನಿರ್ವಹಣಾ ಕಾರ್ಯವನ್ನು ಕೈಗೊಂಡಿದೆ. ಪ್ರತಿನಿತ್ಯ 5 ಟನ್‌ಗಳಷ್ಟು ತ್ಯಾಜ್ಯವನ್ನು 'ಗ್ರೀನ್ ಬಜ್ಪೆ ಸರ್ವಿಸ್' ಎನ್ನುವ ಸ್ಥಳೀಯ ಸಂಸ್ಥೆಯೊಂದು ಸಂಗ್ರಹಿಸಿ, ಹಳೆ ವಿಮಾನ ನಿಲ್ದಾಣ ರಸ್ತೆಯಲ್ಲಿ ಮಳವೂರು ಎನ್ನುವ ಖಾಸಗಿ ಜಾಗದಲ್ಲಿ ನಿರ್ವಹಣೆ ಮಾಡುತ್ತಿದೆ. ಪಂಚಾಯತ್ ಸ್ವಂತ ತ್ಯಾಜ್ಯ ನಿರ್ವಹಣಾ ಘಟಕಕ್ಕೆ ಸ್ಥಳವನ್ನು ಹೊಂದಿದ್ದರೂ ಅದರ ಬಳಕೆಯಾಗುತ್ತಿಲ್ಲ.

ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು ಪಂಚಾಯತ್ ಜನಪ್ರತಿನಿಧಿಗಳು ಹಾಗೂ ಸಿಬ್ಬಂದಿಗಳ ಮೂಲಕ ಹಮ್ಮಿಕೊಂಡಿದ್ದರೂ, ನಾಗರಿಕರಲ್ಲಿ ಸಾಕಷ್ಟು ಜಾಗೃತಿ ಮೂಡದಿರು

ವುದು ಸ್ವಚ್ಛತೆಯನ್ನು ಗಮನಿಸಿದಾಗ ಕಂಡುಬರುತ್ತದೆ. ಪ್ಲಾಸ್ಟಿಕ್ ತ್ಯಾಜ್ಯ ಸಾಮಾನ್ಯವಾಗಿ ಎಲ್ಲಾ ರಸ್ತೆಗಳ ಬದಿಯಲ್ಲಿ, ಚರಂಡಿಯಲ್ಲಿ, ಅಂಗಡಿಗಳ ಮುಂಭಾಗದಲ್ಲಿ ಕಂಡುಬರುತ್ತಿದ್ದು, ಪ್ಲಾಸ್ಟಿಕ್ ಸೌಧ, ಕೊಳವೆ ಗೊಬ್ಬರ ಮುಂತಾದ ಯಾವುದೇ ಸಾಂಪ್ರಾದಾಯಿಕ ವಿಧಾನಗಳನ್ನು ಅಳವಡಿಸಿಲ್ಲ. ಇದರ ವ್ಯಾಪ್ತಿಯಲ್ಲಿ ಬರುವ ಶೈಕ್ಷಣಿಕ ಸಂಸ್ಥೆಗಳು ಹಾಗೂ ಸ್ವಯಂಸೇವಾ ಸಂಸ್ಥೆಗಳೂ ವಿಶೇಷವಾದ ಗಮನವನ್ನು ಕೊಡದಿರುವುದು ಕ್ಷೇತ್ರಕಾರ್ಯದಲ್ಲಿ ಕಂಡು ಬಂದಿದೆ. ಸಾರ್ವಜನಿಕ ತೊಟ್ಟಿಗಳನ್ನು ತೆಗೆಯಲಾಗಿದೆಯಾದರೂ, ಹಿಂದೆ ತೊಟ್ಟಿಗಳಿದ್ದ ಜಾಗಗಳಲ್ಲಿ ಈಗಲೂ ಜನ ಅನಾಗರಿಕ ರೀತಿಯಲ್ಲಿ ತ್ಯಾಜ್ಯ ಎಸೆಯುವುದು ಕಂಡು ಬರುತ್ತಿದೆ. ಪ್ರತಿನಿತ್ಯ ತ್ಯಾಜ್ಯ ಸಂಗ್ರಹ ಮಾಡದಿರುವುದರಿಂದ ನಾಯಿ, ದನ, ಕಾಗೆ ಮುಂತಾದ ಪ್ರಾಣಿ ಪಕ್ಷಿಗಳಿಂದ ತ್ಯಾಜ್ಯ ಸಮಸ್ಯೆ ಇನ್ನಷ್ಟು ಈ ಪಂಚಾಯತ್ ವ್ಯಾಪ್ತಿಯಲ್ಲಿ ಉಲ್ಬಣಿಸಿದೆ. ಒಟ್ಟು 8 ವಾರ್ಡುಗಳಿದ್ದರೂ ಕೇವಲ ಪೇಟೆಯ ಭಾಗದ ಜನರಿಂದ ಮಾತ್ರ ತ್ಯಾಜ್ಯ ಸಂಗ್ರಹಣಾ ಶುಲ್ಕವನ್ನು ಸಂಗ್ರಹಿಸಲಾಗುತ್ತಿದೆ. ಪ್ರತಿ ಮನೆಗೆ ತಿಂಗಳಿಗೆ 60 ರೂಪಾಯಿ, ಅಂಗಡಿಗಳಿಗೆ 100 ರೂಪಾಯಿ ಮತ್ತು ಹೋಟೇಲುಗಳಿಗೆ 500 ರೂಪಾಯಿಗಳಷ್ಟು ಶುಲ್ಕ ವಿಧಿಸಲಾಗಿದೆ. ತ್ಯಾಜ್ಯ ಸಾಗಾಟ ಮಾಡುವಾಗ ಮುಚ್ಚಿ ಸಾಗಾಟ ಮಾಡುವುದನ್ನು ಕಡ್ಡಾಯಗೊಳಿಸಲಾಗಿದೆ. ಪಂಚಾಯತ್‌ಗೆ ಕಾರ್ಮಿಕರ ಕೊರತೆಯಿದ್ದು ಸಾವಯವ ಗೊಬ್ಬರ ತಯಾರಿಕೆ, ಎರೆಹುಳು ಗೊಬ್ಬರ ತಯಾರಿಕೆಯಂತಹ ಕೆಲಸಗಳಿಗೆ ಹಣಕಾಸಿನ ಕೊರತೆಯೂ ಇದೆ. ಶೇಕಡ 10ಕ್ಕಿಂತಲೂ ಕಡಿಮೆ ತ್ಯಾಜ್ಯವನ್ನು ಗೊಬ್ಬರಕ್ಕೆ ಬಳಸಲಾಗುತ್ತಿದೆ. ಜನರ ಹಾಗೂ ಜನಪ್ರತಿನಿಧಿಗಳ ಸಹಕಾರ ನಿರೀಕ್ಷಿತ ಮಟ್ಟದಲ್ಲಿ ಇಲ್ಲದೇ ಇರುವುದು ತ್ಯಾಜ್ಯ ನಿರ್ವಹಣೆಗೆ ತೊಡಕಾಗಿರುವುದು ಕಂಡು ಬಂದಿದೆ. ಪ್ರತಿನಿತ್ಯ ತ್ಯಾಜ್ಯ ಸಂಗ್ರಹ ಮಾಡದೇ ಇರುವುದು, ಸಾರ್ವಜನಿಕ ಸ್ಥಳಗಳಲ್ಲಿ ರಾಶಿಬಿದ್ದ ತ್ಯಾಜ್ಯಗಳನ್ನು 3–4 ದಿನಗಳಿಗೊಮ್ಮೆ ಸಾಗಾಟ ಮಾಡುವುದು, ಸ್ವಂತ ನಿರ್ವಹಣಾ ಘಟಕ ಹೊಂದದೇ ಇರುವುದು, ವ್ಯಾಪಾರಸ್ಥರೂ ನಿರೀಕ್ಷಿತ ಮಟ್ಟದಲ್ಲಿ ಸಹಕಾರ ನೀಡದೇ ಇರುವುದು, ವಿಮಾನ ನಿಲ್ದಾಣ ಹಾಗೂ ಕಟೀಲು ಕ್ಷೇತ್ರಕ್ಕೆ ಬರುವ ಪ್ರಯಾಣಿಕರು ಅಧಿಕ ಪ್ರಮಾಣದಲ್ಲಿರುವುದು ತ್ಯಾಜ್ಯ ನಿರ್ವಹಣೆಗೆ ತೊಡಕಾಗಿರುವ ಇತರ ಅಂಶಗಳಾಗಿವೆ ಎಂಬುದು ಅಧ್ಯಯನದಿಂದ ತಿಳಿದು ಬಂದಿದೆ.

**ಹಳೆಯಂಗಡಿ ಗ್ರಾಮ ಪಂಚಾಯತ್**

ಮಂಗಳೂರು ತಾಲೂಕಿನ ಹಳೆಯಂಗಡಿ ಗ್ರಾಮ ಪಂಚಾಯತ್ ಮಂಗಳೂರು ನಗರದಿಂದ 22 ಕಿ.ಮೀ ದೂರದಲ್ಲಿದ್ದು ರಾಷ್ಟ್ರೀಯ ಹೆದ್ದಾರಿ 66 ಇದರ ಮೂಲಕ ಹಾದು ಹೋಗುತ್ತದೆ. ಹಳೆಯಂಗಡಿ ಗ್ರಾಮ ಪಂಚಾಯತ್ ಹಳೆಯಂಗಡಿ, ಪಾವಂಜೆ ಮತ್ತು ಸಸಿಹಿತ್ಲು ಗ್ರಾಮಗಳನ್ನು ಒಳಗೊಂಡಿದ್ದು, ಕ್ರಮವಾಗಿ ಪ್ರತೀ ಗ್ರಾಮದ ಜನಸಂಖ್ಯೆ 930, 371 ಮತ್ತು 478 ಆಗಿದ್ದು ಒಟ್ಟು

8528 ಜನಸಂಖ್ಯೆಯಿದೆ. ಇದು 579.99 ಹೆಕ್ಟೇರ್ ವಿಸ್ತೀರ್ಣವನ್ನು ಹೊಂದಿದ್ದು 500ಕ್ಕೂ ಅಧಿಕ ವ್ಯಾಪಾರ ವಹಿವಾಟುಗಳಿವೆ. ತರಕಾರಿ, ಮೀನು-ಮಾಂಸ ಮಾರುವ ಪ್ರತ್ಯೇಕ ಮಾರುಕಟ್ಟೆ ಯಿದ್ದು ವಾರದ ಸಂತೆಯೂ ಈ ಜಾಗದಲ್ಲಿ ಜರಗುತ್ತಿದೆ. ತ್ಯಾಜ್ಯ ನಿರ್ವಹಣೆಗಾಗಿ 4 ಜನ ಕಾರ್ಮಿಕರು ಹಾಗೂ 1 ಆಪೆ ರಿಕ್ಷಾವನ್ನು ನಿಯೋಜಿಸಲಾಗಿದೆ. ಪಂಚಾಯತ್ ಕಛೇರಿಯಿಂದ 1 ಕಿ.ಮೀ ದೂರದಲ್ಲಿರುವ ಪಡುಪಣಂಬೂರು ಎಂಬಲ್ಲಿ 35 ಸೆಂಟ್ಸ್ ಜಾಗವನ್ನು ಘನತ್ಯಾಜ್ಯ ನಿರ್ವಹಣ ಘಟಕಕ್ಕೆ ಮೀಸಲಿರಿಸಲಾಗಿದೆ. ಆದರೆ ಅಲ್ಲಿ ಕೇವಲ ಭೂಭರ್ತಿ ಕಾರ್ಯ ಮಾತ್ರ ನಡೆಯುತ್ತಿದ್ದು ಯಾವುದೇ ತ್ಯಾಜ್ಯ ವಿಲೇವಾರಿ ವಿಧಾನವನ್ನು ಅಳವಡಿಸದ ಕಾರಣ ಬಹುಪಾಲು ತ್ಯಾಜ್ಯ ನಿಷ್ಪ್ರಯೋಜಕವಾಗಿದೆ. ಪಂಚಾಯತ್ ವ್ಯಾಪ್ತಿಯಲ್ಲಿ ಹಿಂದೆ ಅಳವಡಿಸಲಾಗಿದ್ದ ಸಾರ್ವಜನಿಕ ಕಸದ ತೊಟ್ಟಿಗಳನ್ನು ತೆಗೆಯಲಾಗಿದೆ. ಪ್ರತಿನಿತ್ಯ ತ್ಯಾಜ್ಯ ಸಂಗ್ರಹಿಸಲು ಮತ್ತು ವಿಲೇವಾರಿ ಮಾಡಲು ಪಂಚಾಯತ್‌ಗೆ ಸಾಕಷ್ಟು ಸಂಪನ್ಮೂಲದ ಕೊರತೆ ಇರುವುದರಿಂದ 'ಬ್ರೈಟ್ ಎಂಟರ್‌ಪ್ರೈಸಸ್' ಎನ್ನುವ ಸ್ಥಳೀಯ ಸಂಸ್ಥೆಗೆ ಆ ಜವಾಬ್ದಾರಿಯನ್ನು ನೀಡಲಾಗಿದೆ. ಪ್ರತೀ ತಿಂಗಳು 35,000 ರೂಪಾಯಿ ಶುಲ್ಕವನ್ನು ಪಂಚಾಯತ್ ನೀಡುತ್ತಿದ್ದು ಪ್ರತಿನಿತ್ಯ ಸುಮಾರು 3 ಟನ್‌ನಷ್ಟು ತ್ಯಾಜ್ಯವನ್ನು ಈ ಸಂಸ್ಥೆ ಸಂಗ್ರಹಿಸಿ ವಿಲೇವಾರಿ ಮಾಡುತ್ತಿದೆ. ಆದರೆ ಪಂಚಾಯತ್‌ನ ಯಾವುದೇ ಜಾಗವನ್ನು ವಿಲೇವಾರಿಗೆ ಬಳಕೆ ಮಾಡಿಕೊಂಡಿರುವುದಿಲ್ಲ.

ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು ಜನಪ್ರತಿನಿಧಿಗಳು ಮತ್ತು ಸಿಬ್ಬಂದಿ ವರ್ಗ ಸ್ಥಳೀಯ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಹಮ್ಮಿಕೊಂಡಿದ್ದು, ಸ್ವಚ್ಛತಾ ನೀತಿಯ ಅನುಷ್ಠಾನದಲ್ಲಿ ಯಶಸ್ಸನ್ನು ಕಂಡಿದೆ. ಪಂಚಾಯತ್ ಮೂಲಕ ರಾಷ್ಟ್ರೀಯ ಹೆದ್ದಾರಿ ಹಾದು ಹೋಗುವುದರಿಂದ ಸಹಜವಾಗಿಯೇ ಬೇರೆ ಊರುಗಳಿಂದ ವಾಹನದ ಮೂಲಕ ಪ್ರಯಾಣಿಸುವವರು ಪಂಚಾಯತ್ ವ್ಯಾಪ್ತಿಯ ರಸ್ತೆಬದಿ ಮತ್ತು ನದಿಗೆ ಕಸ ಎಸೆಯುತ್ತಿದ್ದು ತಪ್ಪಿತಸ್ಥರನ್ನು ಪತ್ತೆ ಹಚ್ಚಿ ಅವರಿಗೆ ದಂಡ ವಿಧಿಸಲಾಗುತ್ತಿದೆ. ಇದಕ್ಕಾಗಿಯೇ ವಿಶೇಷ ಪರಿವೀಕ್ಷಣಾ ದಳವನ್ನು ಸಹ ನೇಮಿಸಲಾಗಿದೆ. ಪಂಚಾಯತ್ ವ್ಯಾಪ್ತಿಯ ಎಲ್ಲಾ ಕುಟುಂಬಗಳಿಗೆ ಹಾಗೂ ಅಂಗಡಿ, ವಹಿವಾಟುಗಳಿಗೆ ಮಾಸಿಕ ಶುಲ್ಕವನ್ನು ವಿಧಿಸಲಾಗಿದೆ. ಸ್ವಚ್ಛತಾ ಕಾರ್ಯಕ್ರಮವು ತ್ಯಾಜ್ಯ ಸಂಗ್ರಹ, ವಿಲೇವಾರಿಯೊಂದಿಗೆ ರಸ್ತೆ ಬದಿಯ ಹುಲ್ಲು, ಗಿಡ, ಬಳ್ಳಿಗಳನ್ನು ಕಡಿಯುವುದು, ಮಳೆಗಾಲದಲ್ಲಿ ಚರಂಡಿಯ ದುರಸ್ಥಿ, ಸಾರ್ವಜನಿಕ ಸ್ಥಳಗಳ ಸ್ವಚ್ಛತೆ ಮುಂತಾದುವುಗಳನ್ನು ಒಳಗೊಂಡಿದೆ. ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಆದ್ಯತೆ ನೀಡಿದರೂ ನಾಗರಿಕರ ಸಹಕಾರ ನಿರೀಕ್ಷಿತ ಮಟ್ಟದಲ್ಲಿರದ ಕಾರಣ ತ್ಯಾಜ್ಯ ವಿಲೇವಾರಿಗೆ ತೊಡಕುಂಟಾಗಿದೆ.

ತ್ಯಾಜ್ಯ ಮರುಬಳಕೆಯಿಂದ ಪಂಚಾಯತ್‌ಗೆ ಯಾವುದೇ ಆದಾಯವು ದೊರೆಯುವುದಿಲ್ಲ. ಸಾರ್ವಜನಿಕರಿಗೆ ಜಾಗೃತಿ ಮೂಡಿಸಲು ಸಾಕಷ್ಟು ಎಚ್ಚರಿಕೆ ಫಲಕಗಳನ್ನು ಹಾಕಲಾಗಿದೆ.

ಪ್ರತಿನಿತ್ಯ ತ್ಯಾಜ್ಯ ಸಂಗ್ರಹಿಸದೇ ಇರುವುದು, ಸ್ವಂತ ನಿರ್ವಹಣಾ ಘಟಕ ಹೊಂದದಿರುವುದು, ಕ್ಲಪ್ತ ಸಮಯದಲ್ಲಿ ಶುಲ್ಕ ಪಾವತಿಯಾಗದಿರುವುದು, ಸಾಂಪ್ರದಾಯಿಕ ವಿಧಾನಗಳಾದ ಕೊಳವೆ ಗೊಬ್ಬರ, ಪ್ಲಾಸ್ಟಿಕ್ ಸೌಧ ಮುಂತಾದುವುಗಳಿಗೆ ಆದ್ಯತೆ ನೀಡದೇ ಇರುವುದು ಪಂಚಾಯತ್‌ನ ತ್ಯಾಜ್ಯ ನೀತಿಯಲ್ಲಿ ಕಂಡು ಬಂದಿರುವ ಋಣಾತ್ಮಕ ಅಂಶಗಳಾಗಿವೆ. ತಪ್ಪಿಸತ್ಥರಿಗೆ ದಂಡ ವಿಧಿಸುವುದು, ಎಲ್ಲಾ ನಾಗರಿಕರಿಗೂ ಏಕ ರೀತಿಯ ಶುಲ್ಕ(ಕುಟುಂಬಗಳಿಗೆ) ವಿಧಿಸಿರುವುದು, ಜನಪ್ರತಿನಿಧಿಗಳ ಉತ್ತೇಜನ, ಅಧಿಕಾರಿಗಳ ಆಸಕ್ತಿ ಧನಾತ್ಮಕ ಅಂಶಗಳಾಗಿವೆ.

**ಗುರುಪುರ ಗ್ರಾಮ ಪಂಚಾಯತ್**

ಮಂಗಳೂರು ತಾಲೂಕಿನ ಗುರುಪುರ ಗ್ರಾಮಪಂಚಾಯತ್ ಮಂಗಳೂರು ನಗರದಿಂದ 24 ಕಿ.ಮೀ ದೂರದಲ್ಲಿದ್ದು, ರಾಷ್ಟ್ರೀಯ ಹೆದ್ದಾರಿ 169 ಇದರ ಮೂಲಕ ಹಾದು ಹೋಗುತ್ತದೆ. ಶೇಕಡ 100 ರಷ್ಟು ಸಾಕ್ಷರತೆಯನ್ನು ದಾಖಲಿಸಿಕೊಂಡಿರುವ ಈ ಪಂಚಾಯತ್‌ನಲ್ಲಿ 8 ವಾರ್ಡ್‌ಗಳಿದ್ದು 590.5 ಹೆಕ್ಟೇರ್ ವಿಸ್ತೀರ್ಣವಿದೆ. ಇದರ ಒಟ್ಟು ಜನಸಂಖ್ಯೆ 2011ರ ಜನಗಣತಿ ಪ್ರಕಾರ 10871. ಕೈಕಂಬ ಮಾರುಕಟ್ಟೆ ಪ್ರದೇಶದಲ್ಲಿ ಪ್ರತೀ ವಾರ ವಾರದ ಸಂತೆಯಾಗುತ್ತಿದೆ. ಸಂತೆ ದಿವಸದ ತ್ಯಾಜ್ಯ ಸಂಗ್ರಹಕ್ಕೆ ವಿಶೇಷ ವ್ಯವಸ್ಥೆಯನ್ನು ಮಾಡಲಾಗಿದ್ದು ವ್ಯಾಪಾರಿಗಳಿಂದ ಪ್ರತ್ಯೇಕ ಶುಲ್ಕವನ್ನು ವಸೂಲಿ ಮಾಡಲಾಗುತ್ತಿದೆ. ಇದರ ವ್ಯಾಪ್ತಿಯಲ್ಲಿ 1193 ಕುಟುಂಬಗಳು ಮತ್ತು 207 ವಾಣಿಜ್ಯ/ವ್ಯಾಪಾರ ಚಟುವಟಿಕೆಗಳಿವೆ. ಪಂಚಾಯತ್ ವ್ಯಾಪ್ತಿಯಲ್ಲಿ ಹೋಟೇಲು/ ಬಾರ್ ಮುಂತಾದುವುಗಳಿಂದ ತ್ಯಾಜ್ಯ ಪ್ರಮಾಣವು ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದನೆಯಾಗುತ್ತಿದ್ದರೂ ಪಂಚಾಯತ್ ಸೂಕ್ತ ಕ್ರಮ ಕೈಗೊಳ್ಳದಿರುವುದು ಕಂಡು ಬಂದಿದೆ. ಪ್ರತೀದಿನ 1 ಲೋಡ್ ತ್ಯಾಜ್ಯವನ್ನು ಪಂಚಾಯತ್ ಸಂಗ್ರಹಿಸುತ್ತಿದ್ದು ಅದನ್ನು ಹೊರಗುತ್ತಿಗೆ ಪಡೆದ ಸಂಸ್ಥೆಯು ನಿರ್ವಹಿಸುತ್ತಿದೆ. ಪಂಚಾಯತ್ ಸ್ವಂತ ವಿಲೇವಾರಿ ಘಟಕವನ್ನು ಹೊಂದಿರುವುದಿಲ್ಲ ಹಾಗೂ ಗೊಬ್ಬರ ತಯಾರಿಕೆಯಂತಹ ಯಾವುದೇ ಸಾಂಪ್ರಾದಾಯಿಕ ವಿಧಾನವನ್ನು ಅಳವಡಿಸಿಕೊಂಡಿರು ವುದಿಲ್ಲ.

ತ್ಯಾಜ್ಯ ನಿರ್ವಹಣಾ ವೆಚ್ಚವನ್ನು ಭರಿಸಲು ಹೋಟೇಲು, ಅಂಗಡಿ ಮುಂತಾದ ವಾಣಿಜ್ಯ ಚಟುವಟಿಕೆಗಳಿಗೆ ಘನತ್ಯಾಜ್ಯ ನಿರ್ವಹಣಾ ಶುಲ್ಕಗಳನ್ನು ವಿಧಿಸಲಾಗಿದೆ. ಪ್ರತೀ ಕುಟುಂಬಕ್ಕೆ ಮಾಸಿಕ ತ್ಯಾಜ್ಯ ನಿರ್ವಹಣಾ ತೆರಿಗೆಯನ್ನು ವಿಧಿಸಲಾಗುತ್ತಿದೆ. ಸಾಂಪ್ರಾದಾಯಿಕ ವಿಧಾನಗಳಾದ ಕೊಳವೆ, ಗೊಬ್ಬರ, ಪ್ಲಾಸ್ಟಿಕ್ ಸೌಧ ಇತ್ಯಾದಿಗಳನ್ನು ಅಳವಡಿಸಲಾಗಿಲ್ಲ. ನಾಗರಿಕರಲ್ಲಿ ಜಾಗೃತಿ ಮೂಡಿಸಲು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ತ್ಯಾಜ್ಯವನ್ನು ನದಿ/ತೋಡು, ಚರಂಡಿಗಳಿಗೆ ಎಸೆಯುವವರಿಗೆ ದಂಡ ವಿಧಿಸಲಾಗುತ್ತಿದೆ. ಸಾರ್ವಜನಿಕ ಕಸದ ತೊಟ್ಟಿಗಳನ್ನು ತೆಗೆಯಲಾಗಿದೆ

ಯಾದರೂ, ಹಿಂದೆ ಅವುಗಳಿದ್ದ ಸ್ಥಳಗಳಲ್ಲಿ ಜನರು ತ್ಯಾಜ್ಯ ಎಸೆಯುವುದು ಮಾಮೂಲಿಯಾಗಿದೆ. ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡುವಂತೆ ನಾಗರಿಕರಲ್ಲಿ ಜಾಗೃತಿ ಮೂಡಿಸಿದರೂ, ಗೃಹತ್ಯಾಜ್ಯವು ಸಮರ್ಪಕವಾಗಿ ವಿಭಜನೆಯಾಗುತ್ತಿಲ್ಲ. ಪಂಚಾಯತ್‌ನ ನಾಗರಿಕರು ಹಾಗೂ ಜನಪ್ರತಿನಿಧಿಗಳು ಉತ್ತಮ ಸಹಕಾರ ನೀಡುತ್ತಿದ್ದರೂ ಕಾರ್ಮಿಕರ ಕೊರತೆ, ಸ್ವಂತ ನಿರ್ವಹಣಾ ಘಟಕ ಹೊಂದದೇ ಇರುವುದು, ಸ್ವಂತ ಸಾಗಾಟ ವಾಹನ ಇಲ್ಲದೇ ಇರುವುದು ಮುಂತಾದ ಕಾರಣಗಳಿಂದಾಗಿ ಗುರುಪುರ ಪಂಚಾಯತ್‌ನ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣೆಗೆ ತೊಡಕುಂಟಾಗಿದೆ. ತ್ಯಾಜ್ಯ ಮರುಬಳಕೆಯಿಂದ ಯಾವುದೇ ಆದಾಯ ದೊರೆಯದ ಕಾರಣ ಸ್ವಲ್ಪ ಪ್ರಮಾಣದ ಹಣಕಾಸಿನ ಕೊರತೆಯೂ ಇದೆ.

ಅಂಗಡಿ, ಹೋಟೇಲು ಮುಂತಾದ ವ್ಯಾಪಾರಸ್ಥರು ಸ್ವಲ್ಪ ಪ್ರಮಾಣದಲ್ಲಿ ತ್ಯಾಜ್ಯ ವಿಭಜನೆಗೆ ಆದ್ಯತೆಯನ್ನು ನೀಡಿರುತ್ತಾರೆ. ತ್ಯಾಜ್ಯ ನಿರ್ವಹಣಾ ಶುಲ್ಕ ವಿಧಿಸುವುದು, ತಪ್ಪತಸ್ಥರಿಗೆ ದಂಡ ವಿಧಿಸುವುದು ಇತ್ಯಾದಿ ಧನಾತ್ಮಕ ಅಂಶಗಳಾಗಿವೆ. ಪ್ಲಾಸ್ಟಿಕ್, ಬಾಟಲಿ, ಲೋಹ ಮುಂತಾದ ತ್ಯಾಜ್ಯಗಳನ್ನು ಮರುತ್ಪಾದನಾ ಘಟಕಗಳಿಗೆ ನೀಡುವ ವ್ಯವಸ್ಥೆ ಇಲ್ಲದಿರುವುದರಿಂದ ಬಹುಪಾಲು ತ್ಯಾಜ್ಯ ಭೂಭರ್ತಿಗೆ ಹೋಗುತ್ತದೆ. ಅಲ್ಲಲ್ಲಿ ಎಚ್ಚರಿಕೆ ಫಲಕಗಳನ್ನು ಅಳವಡಿಸಿರುವುದು ಕಂಡು ಬರುತ್ತಿದೆ.

**ಪುತ್ತೂರು ತಾಲೂಕು**

ದ.ಕ ಜಿಲ್ಲೆಯ ಪುತ್ತೂರು ತಾಲೂಕು ಬಹುಪಾಲು ಗ್ರಾಮೀಣ ಪ್ರದೇಶವಾದರೂ ಪುತ್ತೂರು ನಗರ ಸೇರಿದಂತೆ ಕಬಕ, ಕಡಬ, ಉಪ್ಪಿನಂಗಡಿ, ಸವಣೂರು, ರಾಮಕುಂಜಗಳಂತಹ ಸಣ್ಣ ಪಟ್ಟಣಗಳನ್ನು ಒಳಗೊಂಡಿದ್ದು, ತಾಲೂಕಿನ ಒಟ್ಟು ಭೌಗೋಳಿಕ ವಿಸ್ತೀರ್ಣವು 1000 ಚ.ಕಿ.ಮೀ ಆಗಿದ್ದು ಜಿಲ್ಲೆಯ ಶೇಕಡ 20.58 ಭಾಗವನ್ನು ಹೊಂದಿದೆ(ದ.ಕ ಜಿಲ್ಲಾ ಮಾನವ ಅಭಿವೃದ್ಧಿ ವರದಿ, 2014). ತಾಲೂಕಿನ ಒಟ್ಟು ಜನಸಂಖ್ಯೆಯು 2011 ರ ಜನಗಣತಿ ಪ್ರಕಾರ 2,87,851 ಇದ್ದು 8.18 ದಶವಾರ್ಷಿಕ ಬೆಳವಣಿಗೆ ದರವನ್ನು ಹೊಂದಿದೆ. ತಾಲೂಕಿನಲ್ಲಿ 1011 ಲಿಂಗಾನುಪಾತವು ದಾಖಲಾಗಿದ್ದು (2011) ಶೇಕಡ 78.85ರಷ್ಟು ಜನ ಗ್ರಾಮೀಣ ವಾಸಿಗಳಾಗಿದ್ದರೆ, ಶೇ.21.15 ನಗರವಾಸಿಗಳು. ತಾಲೂಕಿನ ಸಾಕ್ಷರತಾ ಪ್ರಮಾಣವು 86.02 ಇದ್ದು ತಾಲೂಕುವಾರು 2ನೇ ಸ್ಥಾನವನ್ನು ಹೊಂದಿದೆ.

ಪುತ್ತೂರು ತಾಲೂಕು ಒಂದು ನಗರ ಸಭೆ ಸಹಿತ 41 ಗ್ರಾಮ ಪಂಚಾಯತ್‌ಗಳನ್ನು ಹೊಂದಿದೆ. ಇವುಗಳಲ್ಲಿ ಬಹುಪಾಲು ಗ್ರಾಮ ಪಂಚಾಯತ್‌ಗಳು ಗ್ರಾಮೀಣ ಪ್ರದೇಶವನ್ನು ಒಳಗೊಂಡಿದ್ದು, ಕಬಕ, ಕಡಬ, ಕಾಣಿಯೂರು ಮತ್ತು ಉಪ್ಪಿನಂಗಡಿ ಗ್ರಾಮ ಪಂಚಾಯತ್‌ಗಳು

ಸಣ್ಣ ಪ್ರಮಾಣದ ವಾಣಿಜ್ಯ ಚಟುವಟಿಕೆಗಳನ್ನು ಹೊಂದಿದ್ದು ಇವುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಕಬಕ ಗ್ರಾಮ ಪಂಚಾಯತ್**

ಪುತ್ತೂರು ತಾಲೂಕಿನ ಕಬಕ ಗ್ರಾಮ ಪಂಚಾಯತ್ ಪುತ್ತೂರು ನಗರದಿಂದ ಸುಮಾರು 12 ಕಿ.ಮೀ ದೂರದಲ್ಲಿದ್ದು ಮಾಣಿ-ಮೈಸೂರು ರಾಜ್ಯ ಹೆದ್ದಾರಿ ಸಂಖ್ಯೆ 275ರಲ್ಲಿ ಬರುತ್ತದೆ. ಕಬಕ ಪಂಚಾಯತ್‌ನ ಒಟ್ಟು ವಿಸ್ತೀರ್ಣ 844.41 ಹೆಕ್ಟೇರ್ ಇದ್ದು ಒಟ್ಟು 1615 ಕುಟುಂಬಗಳಿವೆ. ಪಂಚಾಯತ್‌ನ ಒಟ್ಟು ಜನಸಂಖ್ಯೆ 4532 ಆಗಿದ್ದು ಶೇಕಡ 90ಕ್ಕಿಂತ ಹೆಚ್ಚು ಸಾಕ್ಷರತೆಯನ್ನು ಹೊಂದಿದೆ. ಮಂಗಳೂರು-ಮೈಸೂರು ರಾಜ್ಯ ಹೆದ್ದಾರಿಯು ಈ ಪಂಚಾಯತ್ ಮೂಲಕ ಹಾದು ಹೋಗುವುದರಿಂದ ವಾಹನ ದಟ್ಟನೆ ಹಾಗೂ ಪ್ರವಹಿಸುವ ಜನಸಂಖ್ಯೆ ಅಧಿಕವಾಗಿದೆ. ತ್ಯಾಜ್ಯ ಉತ್ಪಾದನಾ ಪ್ರಮಾಣವು ಸಹಜವಾಗಿಯೇ ಸರಾಸರಿ ಮಿತಿಗಿಂತ ಹೆಚ್ಚಿರುವುದನ್ನು ಪಂಚಾಯತ್ ಅಧಿಕಾರಿಗಳು ಗುರುತಿಸಿದ್ದಾರೆ. ವ್ಯಾಪಾರ/ಉದ್ದಿಮೆಗಳು ಇದರ ವ್ಯಾಪ್ತಿಯಲ್ಲಿ ಹೆಚ್ಚಿದ್ದರೂ, ತ್ಯಾಜ್ಯ ನಿರ್ವಹಣೆಗೆ ಆದ್ಯತೆ ನೀಡದಿರುವುದು ಕಂಡು ಬಂದಿದೆ. ಜನರಿಂದ ಯಾವುದೇ ತ್ಯಾಜ್ಯ ಸಂಗ್ರಹ ಶುಲ್ಕವನ್ನು ಈ ತನಕ ಸಂಗ್ರಹಿಸಿರುವುದಿಲ್ಲ ಹಾಗೂ ಮನೆ-ಮನೆಗಳಿಂದ ತ್ಯಾಜ್ಯ ಸಂಗ್ರಹಿಸುವ ಯಾವುದೇ ಯೋಜನೆಯನ್ನು ಈ ತನಕ ಹೊಂದಿಲ್ಲ. ಸ್ಥಳೀಯ ಅಂಗಡಿ/ವ್ಯಾಪಾರಿಗಳಿಂದ ತಿಂಗಳಿಗೊಮ್ಮೆ ತ್ಯಾಜ್ಯ ಸಂಗ್ರಹಿಸಿ ವಿಲೇವಾರಿ ಮಾಡುತ್ತಿದೆ. ತಿಂಗಳಿಗೊಮ್ಮೆ ಸಂಗ್ರಹವಾಗುವ ಒಟ್ಟು ತ್ಯಾಜ್ಯ ಕೇವಲ 3 ಲೋಡುಗಳು. ಇವುಗಳ ಸಾಗಾಟಕ್ಕೆ ಖಾಸಗಿ ಲಾರಿಯನ್ನು ಬಳಸಿಕೊಳ್ಳಲಾಗುತ್ತಿದ್ದು ಪಂಚಾಯತ್ ಸ್ವಂತ ವಾಹನವನ್ನು ಹೊಂದಿರುವುದಿಲ್ಲ. ಸಾಮಾನ್ಯವಾಗಿ ಸಾವಯವ ತ್ಯಾಜ್ಯಗಳನ್ನು ನಾಗರಿಕರೇ ಸ್ವತಃ ವಿಲೇವಾರಿ ಮಾಡುತ್ತಿದ್ದು ಕೇವಲ ಅನುಪಯುಕ್ತ ತ್ಯಾಜ್ಯಗಳನ್ನು ಮಾತ್ರ ಪಂಚಾಯತ್ ಸಂಗ್ರಹಿಸಿ ವಿಲೇವಾರಿ ಘಟಕಕ್ಕೆ ಸಾಗಿಸುತ್ತಿದೆ. ವಿಲೇವಾರಿ ಘಟಕವು ಪಂಚಾಯತ್ ಕಛೇರಿಯಿಂದ ಮೂರು ಕಿ.ಮೀ. ದೂರದ ವಿದ್ಯಾಪುರ-ಪರನೀರುಕಟ್ಟೆ ಎಂಬಲ್ಲಿ ಪಂಚಾಯತ್‌ನ ಸ್ವಂತ ಜಾಗದಲ್ಲಿದ್ದು 1 ಎಕ್ರೆಯಷ್ಟು ವಿಸ್ತಾರವನ್ನು ಹೊಂದಿದೆ.

ಹೆಚ್ಚಿನ ಪಂಚಾಯತ್‌ಗಳು ಮನೆ-ಮನೆ ಕಸಸಂಗ್ರಹ ಮಾಡುತ್ತಿದ್ದು ಸಾರ್ವಜನಿಕ ಕಸದ ತೊಟ್ಟಿಗಳನ್ನು ಬಳಕೆ ಮಾಡುತ್ತಿಲ್ಲ. ಆದರೆ ಕಬಕ ಪಂಚಾಯತ್‌ನಲ್ಲಿ 10ಕ್ಕೂ ಹೆಚ್ಚು ಸಾರ್ವಜನಿಕ ಕಸದ ತೊಟ್ಟಿಗಳಿದ್ದು ಮನೆ-ಮನೆ ಕಸ ಸಂಗ್ರಹ ಇಲ್ಲದ ಕಾರಣ ನಾಗರಿಕರು ಈ ಕಸದ ತೊಟ್ಟಿಗಳಿಗೆ ತ್ಯಾಜ್ಯವನ್ನು ಎಸೆಯುತ್ತಾರೆ. ಸಾರ್ವಜನಿಕ ಕಸದ ತೊಟ್ಟಿಗಳನ್ನು ಪಂಚಾಯತ್ ತಿಂಗಳಿಗೊಮ್ಮೆ ಸ್ವಚ್ಛಗೊಳಿಸುವ ಕಾರಣ ಕಸದಿಂದ ಉಂಟಾಗುವ ಎಲ್ಲಾ ಸಮಸ್ಯೆಗಳು ಇಲ್ಲಿ

ಕಂಡು ಬರುತ್ತದೆ. ಮೂಲದಲ್ಲಿ ತ್ಯಾಜ್ಯ ವಿಭಜನೆ ಸರಿಯಾಗಿ ಆಗದ ಕಾರಣ ಬಹುಪಾಲು ತ್ಯಾಜ್ಯ ಭೂಭರ್ತಿಗೆ ಹೋಗುತ್ತಿದ್ದು, ಯಾವುದೇ ಸಾವಯವ/ಎರೆಹುಳ ಘಟಕಗಳು ಕಾರ್ಯ ನಿರ್ವಹಿಸುತ್ತಿಲ್ಲ. ಜನಜಾಗೃತಿ ದೃಷ್ಟಿಯಿಂದ ಕೇವಲ ಕೆಲವು 'ಕೊಳವೆ ಗೊಬ್ಬರ'ಗಳನ್ನು ನಿರ್ಮಿಸಿದರೂ, ಹೆಚ್ಚಿನ ಪ್ರಯೋಜನವಾಗದಿರುವುದನ್ನು ಸಾರ್ವಜನಿಕರು ವ್ಯಕ್ತಪಡಿಸಿದ್ದಾರೆ.

ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು ಪಂಚಾಯತ್ ಅಧಿಕಾರಿಗಳು ಹಾಗೂ ಜನಪ್ರತಿನಿಧಿಗಳು ವಿಶೇಷವಾಗಿ ಹಮ್ಮಿಕೊಳ್ಳದಿರುವುದು, ಪ್ಲಾಸ್ಟಿಕ್ ನಿರ್ಮೂಲನಕ್ಕೆ ಆದ್ಯತೆ ನೀಡದಿರುವುದು, ಸಾರ್ವಜನಿಕ ಸ್ಥಳಗಳಲ್ಲಿ ಕಸ ಎಸೆಯುವವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳದಿರುವುದು, ಮೂಲದಲ್ಲಿ ವಿಭಜನೆಗೆ ಆದ್ಯತೆ ನೀಡದಿರುವುದು, ಮರುತ್ಪಾದನಾ ಘಟಕಗಳಿಗೆ ಯಾವುದೇ ರೀತಿಯ ಮರು ಆವರ್ತನೀಯ ತ್ಯಾಜ್ಯ ನೀಡದಿರುವುದು, ತ್ಯಾಜ್ಯ ಸಂಗ್ರಹ-ಸಾಗಾಟಕ್ಕಾಗಿ ಸ್ವಂತ ವಾಹನ ಹೊಂದದೇ ಇರುವುದು, ಕ್ಲಪ್ತ ಸಮಯದಲ್ಲಿ ತ್ಯಾಜ್ಯ ಸಂಗ್ರಹಿಸದೇ ಇರುವುದು ಈ ಪಂಚಾಯತ್ ವ್ಯಾಪ್ತಿಯ ಸಾರ್ವಜನಿಕ ಸ್ಥಳಗಳಲ್ಲಿ ಸ್ವಚ್ಛತೆ ಕಂಡುಬರದಿರಲು ಕಾರಣವಾಗಿದೆ ಎಂಬುದು ಸಾರ್ವಜನಿಕರ ಅಭಿಪ್ರಾಯ. ಪಂಚಾಯತ್ ಯಾವುದೇ ಸಂಗ್ರಹಣಾ ಶುಲ್ಕ ವಿಧಿಸದ ಕಾರಣ ಪಂಚಾಯತ್‌ಗೆ ಹಣಕಾಸಿನ ಕೊರತೆಯೂ ಎದ್ದು ಕಾಣುತ್ತಿದೆ. ನಿಯಮಾವಳಿಗಳ ಅನುಷ್ಠಾನಕ್ಕೆ ಪಂಚಾಯತ್ ಹೆಚ್ಚಿನ ಆಸಕ್ತಿ ನೀಡದಿರುವುದು ಕ್ಷೇತ್ರಕಾರ್ಯದಲ್ಲಿ ಕಂಡು ಬಂದಿದೆ.

**ಕಡಬ ಗ್ರಾಮ ಪಂಚಾಯತ್**

ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಕಡಬ ಗ್ರಾಮ ಪಂಚಾಯತ್ ಜನರ ಬದುಕನ್ನು ಆರೋಗ್ಯಕರವಾಗಿಡಲು ಹಾಗೂ ಪರಿಸರವನ್ನು ಸಂರಕ್ಷಿಸಲು ಘನ ಮತ್ತು ದ್ರವ ತ್ಯಾಜ್ಯಗಳ ವಿಲೇವಾರಿ ಘಟಕಗಳನ್ನು ಅಳವಡಿಸಿ ರಾಜ್ಯಕ್ಕೆ ಮಾದರಿ ಕೆಲಸವನ್ನು ಮಾಡಿದೆ. ಈ ಪಂಚಾಯತ್ ವ್ಯಾಪ್ತಿಯಲ್ಲಿ ಕಡಬ ಗ್ರಾಮ ಮತ್ತು ಕೋಡಿಂಬಾಳ ಗ್ರಾಮಗಳು ಒಳಗೊಂಡಿದ್ದು, 22 ಚುನಾಯಿತ ಸದಸ್ಯರನ್ನು ಹೊಂದಿದೆ. ಒಟ್ಟು 5629.67 ಎಕ್ರೆ ಭೌಗೋಳಿಕ ವಿಸ್ತೀರ್ಣವನ್ನು ಹೊಂದಿದ್ದು 4316 ಪುರುಷರು ಮತ್ತು 4301 ಮಹಿಳೆಯರ ಸಹಿತ ಒಟ್ಟು 8617 ಜನಸಂಖ್ಯೆ ಇದೆ. ಈ ಪಂಚಾಯತ್ ವ್ಯಾಪ್ತಿಯಲ್ಲಿ 1502ರಷ್ಟು ಜನ ಅಕ್ಷರಸ್ಥರಾಗಿದ್ದಾರೆ. ಅಂದರೆ ಸಾಕ್ಷರತಾ ಪ್ರಮಾಣವು ಶೇಕಡ 82.5 ಇದ್ದು 1366 ಕುಟುಂಬಗಳನ್ನು ಒಳಗೊಂಡಿದೆ. ವಾರದ ಸಂತೆಯಾಗುವ ಸ್ಥಳವು ಕಡಬ ಪೇಟೆಯಲ್ಲಿಯೇ ಇದ್ದು ವ್ಯಾಪಾರಸ್ಥರಿಗೆ ಹಸಿಕಸ ಮತ್ತು ಒಣಕಸ ಬೇರ್ಪಡಿಸಿ ಕೊಡುವಂತೆ ನಿರ್ದೇಶನ ನೀಡಿರುತ್ತಾರೆ ಹಾಗೂ ವ್ಯವಸ್ಥಿತವಾಗಿ ತ್ಯಾಜ್ಯ ವಿಭಜನೆ ಕಾರ್ಯವು ವಾರದ ಸಂತೆ ಮಾರುಕಟ್ಟೆಯಲ್ಲಿ ನಡೆಯುತ್ತಿದೆ.

ಪ್ರತೀ ದಿನ ಸುಮಾರು 800 ಕಿ.ಗ್ರಾಂ ಒಣಕಸ ಅಂದರೆ ಶೇಕಡ 75ರಷ್ಟು ಒಣಕಸವನ್ನು ತ್ಯಾಜ್ಯ ಸಂಗ್ರಹಕಾರರು ಸಂಗ್ರಹಿಸುತ್ತಾರೆ. ಶೇಕಡ 80ರಷ್ಟು ತ್ಯಾಜ್ಯವು ಅಂಗಡಿ/ಹೊಟೇಲುಗಳಿಂದ ಸಂಗ್ರಹವಾದರೆ ಉಳಿದ ಶೇಕಡ 20ರಷ್ಟು ತ್ಯಾಜ್ಯ ಕಡಬ ಪೇಟೆಯ ನಾಗರಿಕರಿಂದ ಸಂಗ್ರಹವಾಗುತ್ತದೆ. ಕಡಬದ ಗ್ರಾಮೀಣ ಪ್ರದೇಶದ ರೈತರು ತ್ಯಾಜ್ಯ ವಿಲೇವಾರಿ ಮಾಡಲು ತಮ್ಮ ಜಾಗದಲ್ಲಿಯೇ ಸೂಕ್ತವಾದ ವ್ಯವಸ್ಥೆಯನ್ನು ಮಾಡಿರುತ್ತಾರೆ. ಉಳಿದ ಪಂಚಾಯತ್‌ಗಳಿಗೆ ಹೋಲಿಸಿದರೆ ನಾಗರಿಕರಿಗೆ ತ್ಯಾಜ್ಯ ನಿರ್ವಹಣೆಯ ಬಗ್ಗೆ ಹೆಚ್ಚಿನ ಮಾಹಿತಿ/ ತರಬೇತಿ/ ಜಾಹೀರಾತನ್ನು ನೀಡಿದೆ. ಪಂಚಾಯತ್ ವ್ಯಾಪ್ತಿಯಲ್ಲಿ ವಿವಿಧ ಉದ್ಯಮ/ ವ್ಯಾಪಾರ ನಡೆಸುತ್ತಿರುವ 360 ಅಂಗಡಿಗಳಿದ್ದು ವ್ಯಾಪಾರಕ್ಕೆ ಅನುಗುಣವಾಗಿ ವಿವಿಧ ಘನತ್ಯಾಜ್ಯ ತೆರಿಗೆಗಳನ್ನು ವಿಧಿಸಲಾಗುತ್ತಿದೆ. ಸಾಮಾನ್ಯ ಅಂಗಡಿ/ ಮನೆಗಳಿಗೆ ತಿಂಗಳಿಗೆ ರೂ.30ರಿಂದ 50ರವರೆಗೆ ರೂಪಾಯಿ ತೆರಿಗೆ ವಿಧಿಸಲಾಗುವುದು. ಮದ್ಯದಂಗಡಿ, ತಳ್ಳುಗಾಡಿಗಳಿಗೆ ರೂ.250ರಿಂದ 300 ತನಕ ತೆರಿಗೆಯನ್ನು ಹಾಕುತ್ತಾರೆ. ಒಟ್ಟು ವಿವಿಧ ಮೂಲಗಳಿಂದ ಸಂಗ್ರಹವಾಗುವ ಮಾಸಿಕ ಆದಾಯ 38,410.00 ರೂಪಾಯಿಗಳು.

ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ಅನೇಕ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಘನತ್ಯಾಜ್ಯ ನಿರ್ವಹಣಾ ಘಟಕ ಹಾಗೂ ದ್ರವತ್ಯಾಜ್ಯ ನಿರ್ವಹಣಾ ಘಟಕಗಳು ಕಾರ್ಯ ನಿರ್ವಹಿಸುತ್ತಿದ್ದು, ವ್ಯವಸ್ಥಿತವಾಗಿ ಕಾರ್ಯ ನಿರ್ವಹಿಸುತ್ತಿರುವ ಪಂಚಾಯತ್‌ಗಳಲ್ಲಿ ಕಡಬ ಮುಂಚೂಣಿಯಲ್ಲಿದೆ. ಈ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಬರುವ ಹೊಟೇಲ್ ಮತ್ತು ಜ್ಯೂಸ್ ಅಂಗಡಿಗಳಿಂದ ಉತ್ಪತ್ತಿಯಾಗುವ ದ್ರವತ್ಯಾಜ್ಯವನ್ನು ಒಳಚರಂಡಿ ಮೂಲಕ ದ್ರವತ್ಯಾಜ್ಯ ಘಟಕಕ್ಕೆ ಸಾಗಿಸಿ, ಸೂಕ್ತ ರೀತಿಯಲ್ಲಿ ನಿರ್ವಹಣೆ ಮಾಡಲಾಗುತ್ತಿದೆ. ಈ ಘಟಕ ಸ್ಥಾಪನೆಗೆ ಸುಮಾರು 24 ಲಕ್ಷ ರೂಪಾಯಿಗಳನ್ನು ವಿನಿಯೋಗಿಸಲಾಗಿದೆ.

ಘನತ್ಯಾಜ್ಯ ನಿರ್ವಹಣೆಗಾಗಿ ಕೋಡಿಂಬಾಳ ಗ್ರಾಮದ ಕಕ್ಕೆತ್ತಿಮಾರು ಎಂಬಲ್ಲಿ 3.2 ಎಕ್ರೆ ಜಾಗದಲ್ಲಿ ವಿಲೇವಾರಿ ಘಟಕವನ್ನು ಸ್ಥಾಪಿಸಲಾಗಿದೆ. ಇಲ್ಲಿ ತ್ಯಾಜ್ಯ ವಿಭಜನೆಯನ್ನು ಅತ್ಯಂತ ಮುತುವರ್ಜಿಯಿಂದ ಕಾರ್ಮಿಕರು ನಡೆಸುತ್ತಿದ್ದು ಗರಿಷ್ಠ ಪ್ರಮಾಣದ ತ್ಯಾಜ್ಯವನ್ನು ಗೊಬ್ಬರ ತಯಾರಿಕೆಗೆ ಹಾಗೂ ಪ್ಲಾಸ್ಟಿಕ್, ಲೋಹ ಇತ್ಯಾದಿಗಳನ್ನು ಮರು ಉತ್ಪಾದನಾ ಘಟಕಗಳಿಗೆ ನೀಡಲಾಗುತ್ತಿದ್ದು ಭೂಭರ್ತಿಗೆ ಹೋಗುವ ನಿರುಪಯುಕ್ತ ತ್ಯಾಜ್ಯದ ಪ್ರಮಾಣ ಶೇಕಡ 10ಕ್ಕಿಂತಲೂ ಕಡಿಮೆ ಎನ್ನಬಹುದು. ಪಂಚಾಯತ್ ವ್ಯಾಪ್ತಿಯಲ್ಲಿ ಪ್ಲಾಸ್ಟಿಕ್ ಮಾಲಿನ್ಯದ ಬಗ್ಗೆ ಜಾಗೃತಿ ಮೂಡಿಸಲು 7 ಪ್ಲಾಸ್ಟಿಕ್ ಸೌಧಗಳನ್ನು ನಿರ್ಮಾಣ ಮಾಡಲಾಗಿದೆ. ಅಲ್ಲಲ್ಲಿ ಎಚ್ಚರಿಕೆ ಫಲಕಗಳನ್ನು ಅಳವಡಿಸಿರುವುದು ಕಂಡು ಬಂದಿದೆ. ಆದರೂ ಜನರು ಕೋಳಿ–ಮಾಂಸ ತ್ಯಾಜ್ಯಗಳನ್ನು ರಸ್ತೆ

ಬದಿಗಳಲ್ಲಿ, ತೋಡುಗಳಲ್ಲಿ ಎಸೆಯುತ್ತಿರುವುದು ಬಹುದೊಡ್ಡ ಸಮಸ್ಯೆಯಾಗಿ ಅಧಿಕಾರಿಗಳನ್ನು ಕಾಡುತ್ತಿದೆ. ಇಲ್ಲಿ ತಯಾರಾದ ಗೊಬ್ಬರಕ್ಕೆ ಸ್ಥಳೀಯ ಮಟ್ಟದಲ್ಲಿ ಬೇಡಿಕೆ ಇರುವುದು ಕಂಡುಬಂದಿದೆ.

**ಉಪ್ಪಿನಂಗಡಿ ಗ್ರಾಮ ಪಂಚಾಯತ್**

ನೇತ್ರಾವತಿ ಮತ್ತು ಕುಮಾರಾಧಾರಾ ನದಿಗಳ ದಡದಲ್ಲಿರುವ ಪುತ್ತೂರು ತಾಲೂಕಿನ ಉಪ್ಪಿನಂಗಡಿ ಗ್ರಾಮ ಪಂಚಾಯತ್ ಮಂಗಳೂರಿನಿಂದ ಸುಮಾರು 60 ಕಿ.ಮೀ ದೂರದಲ್ಲಿದ್ದು ರಾ.ಹೆ. 75 ಇದರ ಮೂಲಕ ಹಾದು ಹೋಗುತ್ತದೆ. ಒಟ್ಟು 6 ವಾರ್ಡ್‌ಗಳನ್ನು ಒಳಗೊಂಡಿದ್ದು 2011ರ ಜನಗಣತಿ ಪ್ರಕಾರ 7813 ಜನಸಂಖ್ಯೆಯನ್ನು ಹೊಂದಿದ್ದು 8328.5 ಹೆಕ್ಟೇರ್ ವಿಸ್ತೀರ್ಣವಿರುವ ಪಂಚಾಯತ್‌ನಲ್ಲಿ 1544 ಕುಟುಂಬಗಳು ಹಾಗೂ 602 ಅಂಗಡಿ, ಹೊಟೇಲು ಮುಂತಾದ ವಾಣಿಜ್ಯ ಚಟುವಟಿಕೆಗಳಿವೆ. ದ.ಕ. ಜಿಲ್ಲೆಯಲ್ಲಿ ತ್ಯಾಜ್ಯ ನಿರ್ವಹಣೆಯನ್ನು ಶಿಸ್ತುಬದ್ಧವಾಗಿ ಮಾಡುತ್ತಿರುವ ಪಂಚಾಯತ್‌ಗಳಲ್ಲಿ ಉಪ್ಪಿನಂಗಡಿ ಮುಂಚೂಣಿಯಲ್ಲಿದೆ. ಧರ್ಮಸ್ಥಳ ಮತ್ತು ಸುಬ್ರಹ್ಮಣ್ಯ ಧಾರ್ಮಿಕ ಯಾತ್ರಾ ಸ್ಥಳಗಳು ಉಪ್ಪಿನಂಗಡಿ ಸಮೀಪವಿದ್ದು, ಪಂಚಾಯತ್‌ಗೆ ಸಾಕಷ್ಟು ಆದಾಯದ ಜೊತೆಗೆ ಘನತ್ಯಾಜ್ಯ ನಿರ್ವಹಣೆಯೂ ಒಂದು ಸವಾಲಾಗಿದೆ. ಈ ಪಂಚಾಯತ್ ವ್ಯಾಪ್ತಿಯಲ್ಲಿ ವಾರಕ್ಕೆ ಸರಾಸರಿ 2.5 ಟನ್ ತ್ಯಾಜ್ಯ ಉತ್ಪಾದನೆಯಾಗುತ್ತದೆ.

ಮುಖ್ಯ ಪೇಟೆಯ ಸುತ್ತುಮುತ್ತ ಮನೆ–ಮನೆ ಕಸ ಸಂಗ್ರಹ ವಿಧಾನವನ್ನು ಅನುಸರಿಸುತ್ತಿದ್ದಾರೆ ಹಾಗೂ ಸಾರ್ವಜನಿಕ ಕಸದ ತೊಟ್ಟಿಗಳನ್ನು ತೆಗೆಯಲಾಗಿದೆ. ತ್ಯಾಜ್ಯ ಸಂಗ್ರಹ, ಸಾಗಾಟ ಮತ್ತು ವಿಲೇವಾರಿಯನ್ನು ಸ್ಥಳೀಯ ಸಂಸ್ಥೆಯೊಂದಕ್ಕೆ ಹೊರ ಗುತ್ತಿಗೆ ನೀಡಲಾಗಿದೆ. ಸಾಮಾನ್ಯವಾಗಿ ವಾರಕ್ಕೊಮ್ಮೆ ಕಸ ಸಂಗ್ರಹ ಕಾರ್ಯವನ್ನು ಈ ಸಂಸ್ಥೆ ನಿರ್ವಹಿಸುತ್ತಿದೆ. ಪಂಚಾಯತ್‌ನಲ್ಲಿ ಒಟ್ಟು 5 ಜನ ಕಾರ್ಮಿಕರಿದ್ದಾರೆ ಹಾಗೂ ತ್ಯಾಜ್ಯ ಸಾಗಾಟಕ್ಕೆ 2 ವಾಹನಗಳನ್ನು ಬಳಸಲಾಗುತ್ತಿದೆ. ಪಂಚಾಯತ್‌ನಿಂದ ಅರ್ಧ ಕಿ.ಮೀ ದೂರದಲ್ಲಿ ಘನತ್ಯಾಜ್ಯ ರಾಶಿ ಹಾಕಲು 45 ಸೆಂಟ್ಸ್ ಜಾಗವಿದ್ದು ಅತ್ಯಂತ ಸೂಕ್ತ ರೀತಿಯಲ್ಲಿ ಬಳಸಿಕೊಳ್ಳಲಾಗಿದೆ. ಇಲ್ಲಿ ಸಾವಯವ ಗೊಬ್ಬರ ತಯಾರಿಸುವ ಘಟಕವನ್ನು ಪ್ರಾರಂಭಿಸಲಾಗಿದೆ. ತ್ಯಾಜ್ಯ ಸಂಗ್ರಹಣಾ ವಾಹನವು ಪ್ರತೀ ವಾರ್ಡ್‌ನಿಂದ ವಾರಕ್ಕೆ ಒಂದು ದಿನದಂತೆ ಕಸ ಸಂಗ್ರಹ ಮಾಡುತ್ತಿದೆ.

ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಪಂಚಾಯತ್ ಆದ್ಯತೆಯನ್ನು ನೀಡಿದೆ. ಸಾವಯವವಲ್ಲದ ಒಣಕಸಗಳನ್ನು ಪಂಚಾಯತ್ ವಾಹನಕ್ಕೆ ನೀಡತಕ್ಕದ್ದು ಹಾಗೂ ಉಳಿದ ಸಾವಯವ ಕಸವನ್ನು ಜನರೇ ಕಂಪೋಸ್ಟ್ ಮಾಡಿ, ಸ್ವಂತ ಉಪಯೋಗಕ್ಕೆ ಬಳಸಿಕೊಳ್ಳುವಂತೆ ಸೂಚಿಸಲಾಗಿದೆ. ನದಿ ಹಾಗೂ ಸಾರ್ವಜನಿಕ ಸ್ಥಳಗಳಲ್ಲಿ ಕಸ ಎಸೆಯದಂತೆ ಎಚ್ಚರಿಕೆ ಫಲಕಗಳನ್ನು ಹಾಕಲಾಗಿದೆ

ಹಾಗೂ ತಪ್ಪಿತಸ್ಥರಿಂದ ಪಂಚಾಯತ್ ದಂಡ ವಸೂಲಿ ಮಾಡುತ್ತಿದೆ. ಇದರ ವ್ಯಾಪ್ತಿಯಲ್ಲಿ ಒಟ್ಟು 35 ಪೈಪ್ ಕಂಪೋಸ್ಟ್‌ಗಳನ್ನು ಹಾಗೂ 5 ಪ್ಲಾಸ್ಟಿಕ್ ಸೌಧಗಳನ್ನು ಸ್ಥಾಪಿಸಲಾಗಿದೆ.

ಪ್ಲಾಸ್ಟಿಕ್ ತ್ಯಾಜ್ಯ ನಿರ್ಮೂಲನಕ್ಕೆ ಪಂಚಾಯತ್ ವಿಶೇಷ ಪ್ರಾಧಾನ್ಯತೆಯನ್ನು ನೀಡಿದೆ. ಅನೇಕ ಜಾಗೃತಿ ಕಾರ್ಯಕ್ರಮಗಳನ್ನು ನಡೆಸಲಾಗಿದೆ. ಪ್ಲಾಸ್ಟಿಕ್‌ನಲ್ಲಿರುವ ಹಾನಿಕಾರಕ ಅಂಶಗಳ ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ನೀಡಲಾಗಿದೆ. ಪ್ಲಾಸ್ಟಿಕ್, ರಬ್ಬರ್ ಸಹಿತ ಯಾವುದೇ ತ್ಯಾಜ್ಯವನ್ನು ಸುಡದಂತೆ ಜಾಗ್ರತೆ ವಹಿಸಲಾಗಿದೆ. ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಆದ್ಯತೆಯನ್ನು ನೀಡಿದರೂ, ಹೆಚ್ಚಿನ ಸಂಗ್ರಹಿತ ತ್ಯಾಜ್ಯ ಮಿಶ್ರ ತ್ಯಾಜ್ಯವಾಗಿರುವುದರಿಂದ, ರಾಶಿ ಹಾಕಿರುವ ಜಾಗದಲ್ಲಿ ಕಾರ್ಮಿಕರು ವಿಭಜನೆ ಕೆಲಸವನ್ನು ಮಾಡುತ್ತಾರೆ. ತ್ಯಾಜ್ಯ ನಿರ್ವಹಣೆ ವೆಚ್ಚ ಅಧಿಕವಿರುವುದರಿಂದ ಪಂಚಾಯತ್ ತ್ಯಾಜ್ಯ ನೀಡುವವರಿಂದ ಮಾಸಿಕ ಶುಲ್ಕವನ್ನು ಸಂಗ್ರಹಿಸುತ್ತಿದೆ. ಪ್ರತಿ ಮನೆಯು ಮಾಸಿಕ ರೂ.60, ಹೋಟೇಲು 1000, ವಸತಿಗೃಹ ಮತ್ತು ಬಾರ್ 1500 ರಂತೆ, ವಿವಿಧ ವಾಣಿಜ್ಯ ಚಟುವಟಿಕೆಗಳಿಗೆ ಬೇರೆ ಬೇರೆ ದರವನ್ನು ಪಂಚಾಯತ್ ನಿಗದಿಪಡಿಸಿದೆ. ಪ್ರತಿಯೊಬ್ಬರೂ ಸೇವಾ ಶುಲ್ಕವನ್ನು ಕ್ಲಪ್ತ ಸಮಯಕ್ಕೆ ಪಾವತಿಸುವಂತೆ ಸೂಚಿಸಿದೆ. ಬೇರ್ಪಡಿಸದೇ ಇರುವ ಕಸವನ್ನು ಸಂಗ್ರಹಿಸಲಾಗುವುದಿಲ್ಲ ಎಂದು ಸೂಚನೆ ನೀಡಿದರೂ ಸಾರ್ವಜನಿಕರು ಸರಿಯಾಗಿ ವಿಭಜಿಸದೆ ತ್ಯಾಜ್ಯ ನೀಡುವುದು ಕಂಡುಬಂದಿದೆ. ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ದೂರನ್ನು ದಾಖಲಿಸಲು ಸಾರ್ವಜನಿಕರಿಗೆ ದೂರವಾಣಿ ಸಂಖ್ಯೆಯನ್ನು ನೀಡಲಾಗಿದೆ. ಪಂಚಾಯತ್ ಉದ್ಯಮಿಗಳೊಂದಿಗೆ, ಅಂಗಡಿ ಮಾಲಿಕರೊಂದಿಗೆ, ವ್ಯಾಪಾರಸ್ಥರೊಂದಿಗೆ, ಅಟೋ/ಕಾರು ವಾಹನ ಚಾಲಕರೊಂದಿಗೆ ಹಾಗೂ ಸ್ಥಳೀಯ ಸಾಮಾಜಿಕ ಸಂಘಟನೆಗಳೊಂದಿಗೆ ಚರ್ಚೆ, ಸಭೆಗಳನ್ನು ನಡೆಸಿ ತ್ಯಾಜ್ಯ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುವಲ್ಲಿ ಸಫಲತೆಯನ್ನು ಹೊಂದಿದೆ. ಪ್ರತೀ ಕುಟುಂಬಗಳು ಸಾವಯವ ತ್ಯಾಜ್ಯವನ್ನು ಗೊಬ್ಬರ ತಯಾರಿಸುವುದರ ಮೂಲಕ ವಿಲೇವಾರಿ ಮಾಡುವ ವಿಧಾನಕ್ಕೆ ಆದ್ಯತೆ ನೀಡಿರುವುದು ಈ ಪಂಚಾಯತ್‌ನ ವಿಶೇಷತೆ. ಇದರಿಂದ ತ್ಯಾಜ್ಯವು ಸರಿಯಾದ ರೀತಿಯಲ್ಲಿ ಸಂಪನ್ಮೂಲವಾಗಿ ಬಳಕೆಯಾಗುವುದಲ್ಲದೆ, ಭೂಭರ್ತಿ ಸಮಸ್ಯೆಗೆ ಹಾಗೂ ತ್ಯಾಜ್ಯ ನಿರ್ವಹಣೆಗೆ ಬೇಕಾದ ಜಾಗದ ಕೊರತೆಗಳಿಗೂ ಪರಿಹಾರ ಕಂಡು ಕೊಂಡಂತಾಗಿದೆ.

### ಕಾಣಿಯೂರು ಗ್ರಾಮ ಪಂಚಾಯತ್

ಪುತ್ತೂರು ತಾಲೂಕಿನ ಕಾಣಿಯೂರು ಗ್ರಾಮ ಪಂಚಾಯತ್ 4050 ಎಕ್ರೆ ವಿಸ್ತೀರ್ಣವನ್ನು ಒಳಗೊಂಡಿದ್ದು 2011ರ ಜನಗಣತಿ ಪ್ರಕಾರ 9714 ಜನಸಂಖ್ಯೆಯನ್ನು ಹೊಂದಿದೆ. ಕಾಣಿಯೂರು ಗ್ರಾಮ ಪಂಚಾಯತ್‌ನ ಬಹುಭಾಗ ಗ್ರಾಮೀಣ ಪ್ರದೇಶವಾಗಿದ್ದು ಕೇವಲ ಬಸ್ ನಿಲ್ದಾಣಗಳ ಸಮೀಪ ಪೇಟೆಯನ್ನು ಹೊಂದಿದೆ. ಅಂಗಡಿ, ಹೊಟೇಲು ಹಾಗೂ ಸಮೀಪದ ಮನೆಗಳಿಂದ

ತ್ಯಾಜ್ಯವನ್ನು ಪೌರ ಕಾರ್ಮಿಕರು ಸಂಗ್ರಹಿಸುತ್ತಿದ್ದು, ಪ್ರತೀ ದಿನ ಅಟೋ ರಿಕ್ಷಾ ಮೂಲಕ ಸಂಗ್ರಹವಾಗುವ ತ್ಯಾಜ್ಯವು 3 ಕ್ವಿಂಟಾಲ್‌ಗಳಿಗಿಂತ ಕಡಿಮೆ. ಒಟ್ಟು 2415 ಮನೆಗಳನ್ನು ಹೊಂದಿದ್ದರೂ ತ್ಯಾಜ್ಯ ಸಂಗ್ರಹವು 500 ಕ್ಕಿಂತಲೂ ಕಡಿಮೆ ಮನೆಗಳಿಂದ ಸಂಗ್ರಹಿಸಲಾಗುತ್ತಿದೆ. ಉಳಿದ ಮನೆಗಳು ತ್ಯಾಜ್ಯವನ್ನು ತಮ್ಮ ಸ್ವಂತ ಜಾಗಗಳಲ್ಲಿಯೇ ವಿಲೇವಾರಿ ಮಾಡುತ್ತಿದ್ದಾರೆ. ಆದರೆ ಹೆಚ್ಚಿನ ಕುಟುಂಬಗಳು ವಿವಿಧ ತ್ಯಾಜ್ಯಗಳ/ವಿಲೇವಾರಿ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಹೊಂದಿರುವುದಿಲ್ಲವಾದ್ದರಿಂದ ಅವೈಜ್ಞಾನಿಕ ರೀತಿಯಲ್ಲಿ ವಿಲೇವಾರಿ ಮಾಡುತ್ತಿದ್ದಾರೆ. ಪಂಚಾಯತ್ ಅಂಗಡಿಗಳಿಂದ, ಹೊಟೇಲುಗಳಿಂದ ಹಾಗೂ ರಸ್ತೆ ಬದಿಯ ಮನೆಗಳಿಂದ ಮಾತ್ರ ತ್ಯಾಜ್ಯ ಸಂಗ್ರಹ ಮಾಡುತ್ತಿದ್ದು ಮೂಲದಲ್ಲಿ ಯಾವುದೇ ರೀತಿಯ ವಿಭಜನೆಯನ್ನು ಮಾಡುವುದಿಲ್ಲ.

ತ್ಯಾಜ್ಯ ವಿಲೇವಾರಿಗಾಗಿ 25 ಸೆಂಟ್ಸ್ ಸ್ವಂತ ಜಾಗವನ್ನು ಹೊಂದಿದ್ದು, ಅಲ್ಲಿ ತ್ಯಾಜ್ಯ ವಿಭಜನೆ ಕಾರ್ಯವನ್ನು ಕಾರ್ಮಿಕರೇ ಮಾಡುತ್ತಿದ್ದು, ಗೊಬ್ಬರ ತಯಾರಿಕೆ ಹಾಗೂ ಪುನರ್ ಬಳಕೆಗೆ ಯೋಗ್ಯವಾದ ತ್ಯಾಜ್ಯಗಳನ್ನು ಬೇರ್ಪಡಿಸುತ್ತಾರೆ. ಪಂಚಾಯತ್ ವ್ಯಾಪ್ತಿಯಲ್ಲಿ 3 ಸಾರ್ವಜನಿಕ ತೊಟ್ಟಿಗಳನ್ನು ಕಸ ಸಂಗ್ರಹಕ್ಕಾಗಿ ಇಟ್ಟಿದ್ದಾರೆ. ಕೊಳವೆ ಗೊಬ್ಬರ ಘಟಕವನ್ನು ಶೈಕ್ಷಣಿಕ ಸಂಸ್ಥೆಗಳಲ್ಲಿ ಅಳವಡಿಸುವುದರ ಮೂಲಕ ಜಾಗೃತಿ ಮೂಡಿಸಲಾಗಿದೆ. ತ್ಯಾಜ್ಯ ಸಂಗ್ರಹ ಕಾರ್ಯವನ್ನು ಸ್ಥಳೀಯ ಸಂಸ್ಥೆಯ ಪೌರ ಕಾರ್ಮಿಕರೇ ನಿರ್ವಹಿಸುತ್ತಿದ್ದು ಶೇಕಡ 10ಕ್ಕಿಂತಲೂ ಕಡಿಮೆ ತ್ಯಾಜ್ಯವನ್ನು ಗೊಬ್ಬರ ತಯಾರಿಕೆಗೆ ಬಳಸಲಾಗುತ್ತಿದೆ. ಸ್ಥಳೀಯ ಜನಪ್ರತಿನಿಧಿಗಳು, ಶೈಕ್ಷಣಿಕ ಸಂಸ್ಥೆಗಳು ಹಾಗು ಸ್ವಯಂ ಸೇವಾ ಸಂಸ್ಥೆಗಳು ಸ್ವಚ್ಛತಾ ಅಭಿಯಾನಗಳಿಗೆ ಉತ್ತಮವಾಗಿ ಸ್ಪಂದಿಸುತ್ತಿವೆ.

**ಸುಳ್ಯ ತಾಲೂಕು**

ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲೂಕು ಬಹುಪಾಲು ಗ್ರಾಮೀಣ ಪ್ರದೇಶವಾಗಿದ್ದು ಅಡಿಕೆ ಮತ್ತು ರಬ್ಬರ್ ಪ್ರಮುಖ ವಾಣಿಜ್ಯ ಬೆಳೆಯಾಗಿದೆ. ತಾಲೂಕಿನ ಒಟ್ಟು ಭೌಗೋಳಿಕ ವಿಸ್ತೀರ್ಣ 826 ಚ. ಕಿ.ಮೀ ಆಗಿದ್ದು ದ.ಕ.ಜಿಲ್ಲೆಯ 17 ಶೇಕಡ ಭಾಗವನ್ನು ಹೊಂದಿದೆ. ಸುಳ್ಯ ತಾಲೂಕಿನ ವ್ಯಾಪ್ತಿಯಲ್ಲಿ ಸುಳ್ಯ ಪಟ್ಟಣ ಪಂಚಾಯತ್ ಹಾಗೂ 28 ಗ್ರಾಮ ಪಂಚಾಯತ್‌ಗಳು ಒಳಗೊಂಡಿವೆ. ತಾಲೂಕಿನ ಒಟ್ಟು ಜನಸಂಖ್ಯೆಯು 2011ರ ಜನಗಣತಿ ಪ್ರಕಾರ 1,45,225 ಮತ್ತು ವಾರ್ಷಿಕ 3.18 ಶೇಕಡ ಕನಿಷ್ಠ ಬೆಳವಣಿಗೆ ಪ್ರಮಾಣವನ್ನು ಹೊಂದಿದೆ. ಇದರಲ್ಲಿ ಗ್ರಾಮೀಣ ಜನಸಂಖ್ಯೆಯು 12,5269 ಮತ್ತು ನಗರ ಜನಸಂಖ್ಯೆಯು 19,956. ಅಂದರೆ ತಾಲೂಕಿನ 86.26 ಶೇಕಡ ಜನ ಗ್ರಾಮೀಣ ವಾಸಿಗಳಾಗಿದ್ದಾರೆ. ತಾಲೂಕಿನ ಸಾಕ್ಷರತಾ ಪ್ರಮಾಣವು 86.69 (ದ.ಕ ಜಿಲ್ಲಾ ಮಾನವ ಅಭಿವೃದ್ಧಿ ವರದಿ, 2014) ಆಗಿದೆ. ಒಟ್ಟಾರೆ

2014ರ ಮಾನವ ಅಭಿವೃದ್ಧಿ ವರದಿಯ ಪ್ರಕಾರ ಸುಳ್ಯ ತಾಲೂಕು ಮಾನವ ಅಭಿವೃದ್ಧಿಯಲ್ಲಿ 2ನೇ ಸ್ಥಾನವನ್ನು ಹೊಂದಿದೆ. ನಗರಾಭಿವೃದ್ಧಿ ಸೂಚಿಯ ಪ್ರಕಾರ ಸುಳ್ಯ ಪಟ್ಟಣ ಪಂಚಾಯತ್ ಮೊದಲ ಸ್ಥಾನವನ್ನು ಹೊಂದಿದೆ. ಆದರೆ ಆರೋಗ್ಯ ಸೂಚಿಯಲ್ಲಿ ತಾಲೂಕು ಕೊನೆಯ ಸ್ಥಾನವನ್ನು ಹೊಂದಿದೆ. ಸುಳ್ಯ ತಾಲೂಕು ಆರೋಗ್ಯ ಸೂಚಿಯಲ್ಲಿ ಅತೀ ಕಡಿಮೆ 0.584 ಮೌಲ್ಯವನ್ನು ದಾಖಲಿಸಿದೆ. ತಾಲೂಕಿನ ಬಹುಪಾಲು ಪಂಚಾಯತ್‌ಗಳು ತೀರಾ ಗ್ರಾಮೀಣ ಪ್ರದೇಶದಲ್ಲಿದ್ದು, ಅಂತಹ ಪಂಚಾಯತ್‌ಗಳಲ್ಲಿ ತ್ಯಾಜ್ಯ ನಿರ್ವಹಣೆಯು ಕೇವಲ ಕೆಲವು ಸಣ್ಣ ಅಂಗಡಿ–ಹೊಟೇಲುಗಳಿಗೆ ಮಾತ್ರ ಅವಶ್ಯಕತೆ ಇದ್ದು ಹೆಚ್ಚಿನ ಅಂಗಡಿ/ಹೊಟೇಲು ಮಾಲೀಕರು ಸ್ವಂತ ವ್ಯವಸ್ಥೆಯನ್ನು ಮಾಡಿಕೊಂಡಿರುತ್ತಾರೆ. ಪಂಚಾಯತ್ ಕೇವಲ ಸ್ಥಳೀಯ ಬಸ್‌ನಿಲ್ದಾಣ, ರಸ್ತೆ ಮತ್ತು ಇತರ ಸಾರ್ವಜನಿಕ ಸ್ಥಳಗಳ ಕಸಗಳನ್ನು ಸ್ವಚ್ಛಗೊಳಿಸಿ, ತಮ್ಮದೇ ಮಟ್ಟದಲ್ಲಿ ಸಂಪ್ರಾದಾಯಿಕ ವಿಧಾನದಲ್ಲಿ ವಿಲೇವಾರಿ ಮಾಡುತ್ತಿವೆ. ಅವುಗಳಿಗೆ ಸ್ವಂತ ವಿಲೇವಾರಿ ಜಾಗ, ವಿಲೇವಾರಿ ಘಟಕಗಳ ಸ್ಥಾಪನೆ ಇತ್ಯಾದಿಗಳ ಅಗತ್ಯತೆ ಇರುವುದಿಲ್ಲ. ಆದರೂ ಸಾರ್ವಜನಿಕರಲ್ಲಿ ಸ್ವಚ್ಛತಾ ಅರಿವಿನ ಕಾರ್ಯಕ್ರಮಗಳನ್ನು ಸ್ಥಳೀಯ ಶಾಲೆ, ಸಂಘ–ಸಂಸ್ಥೆಗಳ ಮೂಲಕ ಮಾಡುತ್ತಿವೆ.

ನನ್ನ ಅಧ್ಯಯನಕ್ಕೆ ಸುಳ್ಯ ತಾಲೂಕಿನ ಮೂರು ಆಯ್ದ ಗ್ರಾಮ ಪಂಚಾಯತ್‌ಗಳಾದ ಸುಬ್ರಹ್ಮಣ್ಯ, ಬೆಳ್ಳಾರೆ ಮತ್ತು ಜಾಲ್ಸೂರು ಪಂಚಾಯತ್‌ಗಳನ್ನು ಹಾಗೂ ಸುಳ್ಯ ಪಟ್ಟಣ ಪಂಚಾಯತ್‌ನ್ನು ಬಳಸಿಕೊಂಡಿದ್ದೇನೆ.

**ಸುಬ್ರಹ್ಮಣ್ಯ ಗ್ರಾಮ ಪಂಚಾಯತ್**

ಸುಳ್ಯ ತಾಲೂಕಿನ ಸುಬ್ರಹ್ಮಣ್ಯ ಗ್ರಾಮ ಪಂಚಾಯತ್ ಘನತ್ಯಾಜ್ಯವನ್ನು ಉತ್ತಮ ರೀತಿಯಲ್ಲಿ ನಿರ್ವಹಿಸುತ್ತಿದೆ. ದಿನನಿತ್ಯ ಸಾವಿರಾರು ಪ್ರವಾಸಿಗಳು ರಾಜ್ಯದ ಪ್ರಮುಖ ಧಾರ್ಮಿಕ ಕ್ಷೇತ್ರವಾದ ಸುಬ್ರಹ್ಮಣ್ಯಕ್ಕೆ ಭೇಟಿ ನೀಡುತ್ತಿದ್ದು, ದೇವಸ್ಥಾನದ ಆಡಳಿತದೊಂದಿಗೆ ಕೈಜೋಡಿಸಿ ಕ್ಷೇತ್ರದ ಸ್ವಚ್ಛತೆಯನ್ನು ಕಾಪಾಡಿಕೊಂಡು ಬರುವುದರ ಮೂಲಕ ಧಾರ್ಮಿಕ ಕ್ಷೇತ್ರದ ಪಾವಿತ್ರ್ಯತೆಯನ್ನು ಹೆಚ್ಚಿಸುವಲ್ಲಿ ಗ್ರಾಮ ಪಂಚಾಯತ್ ನಿರಂತರವಾಗಿ ಶ್ರಮಿಸುತ್ತಿದೆ. ಈ ಪಂಚಾಯತ್ ವ್ಯಾಪ್ತಿಯಲ್ಲಿ ಏನೆಕಲ್ಲು ಮತ್ತು ಸುಬ್ರಹ್ಮಣ್ಯ ಗ್ರಾಮಗಳು ಒಳಗೊಂಡಿದ್ದು, ಒಟ್ಟು 18 ವಾರ್ಡುಗಳಿವೆ. ಸುಬ್ರಹ್ಮಣ್ಯ ಗ್ರಾಮದಲ್ಲಿ ಒಟ್ಟು 4443 ಜನಸಂಖ್ಯೆ ಇದ್ದು 1012 ಕುಟುಂಬಗಳನ್ನು ಹೊಂದಿದೆ. ಪಂಚಾಯತ್ ವ್ಯಾಪ್ತಿಯಲ್ಲಿ ಸಾಕ್ಷರತಾ ಪ್ರಮಾಣವು ಶೇ.85ರಷ್ಟಿದ್ದು, 2 ಪ್ರಾಥಮಿಕ, 1 ಪದವಿಪೂರ್ವ ಹಾಗೂ ಒಂದು ಪದವಿ ಕಾಲೇಜನ್ನು ಹೊಂದಿರುತ್ತದೆ. ವಾರದ ಸಂತೆಯು ಪ್ರತೀ ಬುಧವಾರ ನಡೆಯುತ್ತಿದ್ದು, ಇದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಪ್ರತಿನಿತ್ಯ ಪ್ರವಾಸಿಗರು ಬಂದು ಹೋಗುತ್ತಿದ್ದಾರೆ.

ದಿನಗೂಲಿ ನೌಕರರನ್ನು ಬಳಸಿಕೊಂಡು ತ್ಯಾಜ್ಯ ಸಂಗ್ರಹಣಾ ಘಟಕದಲ್ಲಿ ತ್ಯಾಜ್ಯ ವಿಭಜನೆ ಕಾರ್ಯವನ್ನು ಸುಮಾರು ಶೇಕಡ 90ರಷ್ಟು ಮಾಡುತ್ತಿದ್ದಾರೆ. ರಾಸಾಯನಿಕ ದ್ರಾವಣವನ್ನು ಬಳಸಿ ಸಾವಯವ ತ್ಯಾಜ್ಯಗಳನ್ನು ಕರಗಿಸಿ ಉತ್ತಮ ಮಟ್ಟದ ಗೊಬ್ಬರವನ್ನು ತಯಾರಿಸುತ್ತಾರೆ. ಈ ಗೊಬ್ಬರವನ್ನು ತಮಿಳುನಾಡಿನ ಪೆರಂದಪಳ್ಳಿ, ಹೊಸೂರು ಇಲ್ಲಿರುವ ಕೇಂದ್ರ ಸರ್ಕಾರದ ಜೈವಿಕ ತಂತ್ರಜ್ಞಾನ ಇಲಾಖೆಯಿಂದ ಅನುಮೋದಿತ 'ಜೆನ್‌ವಿನ್ ಬಯೋಟೆಕ್' ಎನ್ನುವ ಸಂಸ್ಥೆಯು ಪರೀಕ್ಷಿಸಿ, ಕೃಷಿ ಕ್ಷೇತ್ರದಲ್ಲಿ ಬಳಸಲು ಯೋಗ್ಯವಿದೆಯೆಂದು ಪ್ರಾಮಾಣೀಕರಿಸಿದೆ. ದಿನನಿತ್ಯ ಸಾವಿರಾರು ಪ್ರವಾಸಿಗರು ಬರುವ ಈ ಪವಿತ್ರ ಧಾರ್ಮಿಕ ಕ್ಷೇತ್ರದ ಶುಚಿತ್ವಕ್ಕೆ ಸ್ಥಳೀಯ ಶಾಲಾ ಕಾಲೇಜುಗಳು, ರೋಟರಿ, ಲಯನ್ಸ್, ಜೇಸಿಸ್ ಅಟೋ ಮಾಲಕ-ಚಾಲಕ ಸಂಘ ಹಾಗೂ ಇತರ ಸ್ಥಳೀಯ ಸ್ವಯಂಸೇವಾ ಸಂಸ್ಥೆಗಳು ಗ್ರಾಮ ಪಂಚಾಯತ್‌ನ ಮುಂದಾಳತ್ವದಲ್ಲಿ ಅನೇಕ ಶುಚಿತ್ವ ಕಾರ್ಯಕ್ರಮಗಳನ್ನು, ಜಾಥಾ ಮುಂತಾದ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ.

ನದಿಗೆ ತ್ಯಾಜ್ಯ ಎಸೆಯುವವರ ಪ್ರಮಾಣ ಅಧಿಕವಾಗಿದ್ದು, ಪ್ರವಾಸಿಗರು ಕಸದ ತೊಟ್ಟಿಯನ್ನು ಸರಿಯಾದ ರೀತಿಯಲ್ಲಿ ಬಳಸದಿರುವುದು, ಅಗತ್ಯ ಸ್ಥಳಗಳಲ್ಲಿ ಕಸದ ತೊಟ್ಟಿಗಳ ಕೊರತೆ ಇತ್ಯಾದಿ ಕಾಣುತ್ತಿದೆ. ಪಂಚಾಯತ್‌ನವರು ವಿಭಜನೆ ಮಾಡದ ತ್ಯಾಜ್ಯವನ್ನು ನಿರಾಕರಿಸುವ ಕಾರಣ ಕೆಲವು ವ್ಯಾಪಾರಸ್ಥರು/ಹೊಟೇಲ್‌ನವರು ತಮ್ಮ ಸ್ವಂತ ವಾಹನದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿರುವ ತಮ್ಮ ಮನೆಗಳಿಗೆ ಸಾಗಿಸಿ ವಿಲೇವಾರಿ ಮಾಡುತ್ತಾರೆ. ಹೆಚ್ಚಿನವರು ತ್ಯಾಜ್ಯವನ್ನು ಸುಡುವುದರ ಮೂಲಕ ಅವೈಜ್ಞಾನಿಕ ರೀತಿಯಲ್ಲಿ ವಿಲೇವಾರಿ ಮಾಡುವುದು ಕ್ಷೇತ್ರಕಾರ್ಯದಲ್ಲಿ ಕಂಡು ಬಂದಿದೆ.

ಈ ಪಂಚಾಯತ್‌ನಲ್ಲಿ ಘನತ್ಯಾಜ್ಯ ವಿಲೇವಾರಿ ದರವನ್ನು ನಿಗದಿಪಡಿಸಿರುತ್ತಾರೆ ಹಾಗೂ ಅದರಂತೆ ಸಂಬಂಧಪಟ್ಟವರಿಂದ ಸಂಗ್ರಹಿಸುತ್ತಾರೆ. ಆದರೆ ತ್ಯಾಜ್ಯ ಸಂಗ್ರಹ ದರವನ್ನು ಎರಡು ಮೂರು ತಿಂಗಳಿಗೊಮ್ಮೆ ಅಥವಾ ವ್ಯಾಪಾರ/ಉದ್ದಿಮೆಗಳ ಪರವಾನಿಗೆಯ ವಾರ್ಷಿಕ ನವೀಕರಣ ಸಂದರ್ಭಗಳಲ್ಲಿ ವಸೂಲಿ ಮಾಡುತ್ತಾರೆ. ದೇವಸ್ಥಾನದ ಆಡಳಿತವು ಬೀದಿ ಗುಡಿಸುವ ಕೆಲಸವನ್ನು ನಿರ್ವಹಿಸುತ್ತಿದೆ. ಅದರೆ ದ್ರವ ತ್ಯಾಜ್ಯ ನಿರ್ವಹಣೆಯಲ್ಲಿ ಸ್ಥಳೀಯಾಡಳಿತ ತನ್ನ ವೈಫಲ್ಯವನ್ನು ತೋರಿಸಿದೆ. ಇದರಿಂದ ಅಲ್ಲಲ್ಲಿ ನದಿ ನೀರು ಕಲುಷಿತಗೊಂಡಿರುವುದು ಕಂಡುಬಂದಿದೆ. ದೇವಸ್ಥಾನದ ತ್ಯಾಜ್ಯವನ್ನು ಟ್ರಾಕ್ಟರ್‌ನಲ್ಲಿ ತುಂಬಿಸಿ ದಿನಕ್ಕೆ ಮೂರು ನಾಲ್ಕು ಬಾರಿ ಪಂಚಾಯತ್‌ನ ನಿರ್ವಹಣಾ ಘಟಕಕ್ಕೆ ಸಾಗಿಸುತ್ತಾರೆ. ದೇವಸ್ಥಾನವು ವಾರ್ಷಿಕ 2 ಲಕ್ಷ ರೂ ಬಾಡಿಗೆಯನ್ನು

ಪಂಚಾಯತ್‌ಗೆ ನೀಡುತ್ತಿದೆ. ಆದರೆ ಪಂಚಾಯತ್ ಇನ್ನಷ್ಟು ಹೆಚ್ಚಿನ ದರವನ್ನು ದೇವಸ್ಥಾನದಿಂದ ನಿರೀಕ್ಷಿಸುತ್ತಿದೆ.

**ಬೆಳ್ಳಾರೆ ಗ್ರಾಮ ಪಂಚಾಯತ್**

ಸುಳ್ಯ ತಾಲೂಕಿನ ಬೆಳ್ಳಾರೆ ಗ್ರಾಮ ಪಂಚಾಯತ್ ತಾಲೂಕಿನ ಅಭಿವೃದ್ಧಿ ಹೊಂದಿದ ಗ್ರಾಮ ಪಂಚಾಯತ್‌ಗಳ ಸಾಲಿಗೆ ಸೇರಿದ್ದು, ಶ್ರೀಕ್ಷೇತ್ರ ಸುಬ್ರಹ್ಮಣ್ಯದಿಂದ 32 ಕಿ.ಮೀ, ಸುಳ್ಯ ಪೇಟೆಯಿಂದ 14 ಕಿ.ಮೀ ದೂರದಲ್ಲಿದೆ. ಪಂಚಾಯತ್‌ನ ಒಟ್ಟು ವಿಸ್ತೀರ್ಣ 1071.48 ಹೆಕ್ಟೇರ್ ಆಗಿದ್ದು 2011ರ ಜನಗಣತಿ ಪ್ರಕಾರ 5259 ಜನಸಂಖ್ಯೆಯನ್ನು ಹೊಂದಿದ್ದು ಶೇಕಡ 95ರಷ್ಟು ಸಾಕ್ಷರತೆಯನ್ನು ಹೊಂದಿದೆ. ಪಂಚಾಯತ್ ವ್ಯಾಪ್ತಿಯಲ್ಲಿ 1096 ಕುಟುಂಬಗಳಿದ್ದು 362 ವ್ಯಾಪಾರ ವಹಿವಾಟುಗಳಿವೆ. ಬೆಳ್ಳಾರೆ ಪೇಟೆ ಸುಳ್ಯ ತಾಲೂಕಿನ ಎರಡನೇ ದೊಡ್ಡ ವಾಣಿಜ್ಯ ಕೇಂದ್ರವಾಗಿದ್ದು, ತ್ಯಾಜ್ಯ ಉತ್ಪಾದನೆಯೂ ಅಧಿಕ ಪ್ರಮಾಣದಲ್ಲಿದೆ. ಇದರ ವ್ಯಾಪ್ತಿಯಲ್ಲಿ ಬರುವ ವಾರದ ಸಂತೆ ನಡೆಯುವ ಸ್ಥಳ ಮತ್ತು ಮಾರುಕಟ್ಟೆ ಪ್ರದೇಶಗಳಲ್ಲಿ ಸಾವಯವ ತ್ಯಾಜ್ಯವು ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದನೆಯಾಗುತ್ತಿದ್ದರೂ, ಸೂಕ್ತ ರೀತಿಯಲ್ಲಿ ನಿರ್ವಹಣೆ ನಡೆಯುತ್ತಿದೆ. ತ್ಯಾಜ್ಯ ನಿರ್ವಹಣೆಗಾಗಿ ಒಬ್ಬ ಚಾಲಕ ಹಾಗೂ ಇಬ್ಬರು ಕಾರ್ಮಿಕರನ್ನು ನಿಯೋಜಿಸಲಾಗಿದೆ. ಬೆಳ್ಳಾರೆ ಪೇಟೆ ಹೊರತುಪಡಿಸಿ ಉಳಿದ ಜಾಗ ಗ್ರಾಮೀಣ ಪ್ರದೇಶವಾಗಿದ್ದು, ರೈತರು ತಮ್ಮದೇ ಸಾಂಪ್ರದಾಯಿಕ ವಿಧಾನದಲ್ಲಿ ತ್ಯಾಜ್ಯ ನಿರ್ವಹಣೆ ಮಾಡುತ್ತಿದ್ದಾರೆ. ಕಾಲ ಕಾಲಕ್ಕೆ ಪಂಚಾಯತ್ ನಾಗರಿಕರಿಗೆ ತ್ಯಾಜ್ಯ ವಿಲೇವಾರಿಗೆ ಸಂಬಂಧಿಸಿ ಜಾಗೃತಿ ಕಾರ್ಯಕ್ರಮಗಳನ್ನೂ ನಡೆಸುತ್ತಿದೆ.

ಈ ಗ್ರಾಮ ಪಂಚಾಯತ್ ಬೆಳ್ಳಾರೆ ಪೇಟೆಯಿಂದ ಕೇವಲ 1 ಕಿ.ಮೀಗಿಂತಲೂ ಕಡಿಮೆ ದೂರದಲ್ಲಿರುವ ತಡಗಜೆ ಎಂಬಲ್ಲಿ 1.6 ಎಕ್ರೆ ವಿಸ್ತೀರ್ಣದ ಸ್ವಂತ ನಿರ್ವಹಣಾ ಘಟಕವನ್ನು ಹೊಂದಿದ್ದು ಅಲ್ಲಿ ಸಾವಯವ ಗೊಬ್ಬರ ತಯಾರಿಕೆ ಮತ್ತು ಎರೆಹುಳು ಗೊಬ್ಬರ ತಯಾರಿಕೆ ನಡೆಸುವುದರ ಮೂಲಕ ಸಾವಯವ (ಹಸಿಕಸ) ಕಸವನ್ನು ಸೂಕ್ತ ರೀತಿಯಲ್ಲಿ ನಿರ್ವಹಿಸುತ್ತಿದೆ. ಒಟ್ಟು 5 ವಾರ್ಡುಗಳನ್ನು ಹೊಂದಿದ್ದು ಪ್ರತೀ ವಾರ್ಡ್‌ನಲ್ಲೂ ಸ್ವಚ್ಛತಾ ಸಮಿತಿ ಕಾರ್ಯ ನಿರ್ವಹಿಸುತ್ತಿದ್ದು ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಪ್ರೋತ್ಸಾಹ ನೀಡಲಾಗಿದೆ. ಪ್ಲಾಸ್ಟಿಕ್ ಬಳಕೆಗೆ ಕಡಿವಾಣ ಹಾಕಲಾಗಿದ್ದು ನಾಗರಿಕರಲ್ಲಿ ಜಾಗೃತಿ ಮೂಡಿಸುವ ದೃಷ್ಟಿಯಿಂದ ಅಲ್ಲಲ್ಲಿ ಪ್ಲಾಸ್ಟಿಕ್ ಸೌಧಗಳನ್ನು ನಿರ್ಮಿಸಲಾಗಿದೆ. ಶೈಕ್ಷಣಿಕ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳಿಗೆ ಜಾಗೃತಿ ಮೂಡಿಸಲು ಪ್ಲಾಸ್ಟಿಕ್ ಸೌಧ ಹಾಗೂ ಕೊಳವೆ ಗೊಬ್ಬರ ವಿಧಾನಗಳನ್ನು ಅಳವಡಿಸಲಾಗಿದೆ. ಪಂಚಾಯತ್ ಘನತ್ಯಾಜ್ಯ ನಿರ್ವಹಣೆಗೆ ಹೆಚ್ಚಿನ ಆದ್ಯತೆ ನೀಡಿದ್ದು ನಿರಂತರವಾಗಿ ಶ್ರಮಿಸುತ್ತಿದೆ. ಜನಪ್ರತಿನಿಧಿಗಳು

ಹಾಗೂ ಸಿಬ್ಬಂದಿಗಳು ಜನರ ಸಹಕಾರದೊಂದಿಗೆ ಉತ್ತಮ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿರುವುದರಿಂದ ಬೆಳ್ಳಾರೆ ಪಂಚಾಯತ್ ಸ್ವಚ್ಛ ಮತ್ತು ಸುಂದರ ಪರಿಸರವನ್ನು ಹೊಂದಿದೆ. ಮೂಲದಲ್ಲಿ ವಿಭಜನೆಗೊಂಡ ತ್ಯಾಜ್ಯವನ್ನು ಪಂಚಾಯತ್ ಪ್ರತಿನಿತ್ಯ ಸಂಗ್ರಹಿಸುತ್ತಿದ್ದು ಸಾವಯವ ಗೊಬ್ಬರಕ್ಕೆ ಬಳಕೆಯಾಗದ ಪ್ಲಾಸ್ಟಿಕ್, ಬಾಟಲಿ, ಲೋಹ ಮುಂತಾದ ತ್ಯಾಜ್ಯಗಳನ್ನು ಮರುತ್ಪಾದನಾ ಘಟಕಗಳಿಗೆ ಮಾರುವ ವ್ಯವಸ್ಥೆಯನ್ನು ಮಾಡಿಕೊಂಡಿದೆ. ಉಳಿದಂತೆ ಕೇವಲ 10 ಶೇಕಡಕ್ಕಿಂತಲೂ ಕಡಿಮೆ ಪ್ರಮಾಣದ ತ್ಯಾಜ್ಯವನ್ನು ಭೂಭರ್ತಿ ಮಾಡಲಾಗುತ್ತಿದೆ.

ತ್ಯಾಜ್ಯ ನಿರ್ವಹಣಾ ವೆಚ್ಚವನ್ನು ಭರಿಸಲು ಪ್ರತೀ ಮನೆಯಿಂದ ತಿಂಗಳಿಗೆ ಕನಿಷ್ಠ 30 ರೂಪಾಯಿಗಳಂತೆ ಸಣ್ಣ ಅಂಗಡಿ/ವ್ಯಾಪಾರಿಗಳಿಂದ ತಿಂಗಳಿಗೆ 50 ರೂಪಾಯಿಗಳಂತೆ ಮತ್ತು ದೊಡ್ಡ ಹೋಟೇಲ್/ಬಾರ್ ಮತ್ತು ರೆಸ್ಟೋರೆಂಟ್‌ಗಳಿಂದ ತಿಂಗಳಿಗೆ ರೂ.500ರಂತೆ ಶುಲ್ಕ ಸಂಗ್ರಹಿಸಲಾಗುತ್ತಿದ್ದು, ಇದರಿಂದ ಜನರಿಗೆ ಜವಾಬ್ದಾರಿ, ಜಾಗೃತಿ ಮೂಡಿಸುವುದಲ್ಲದೆ ಪಂಚಾಯತ್‌ನ ತ್ಯಾಜ್ಯ ನಿರ್ವಹಣೆಗೆ ಯಾವುದೇ ಹಣಕಾಸಿನ ಕೊರತೆ ಇಲ್ಲವೆಂದು ಅಧಿಕಾರಿಗಳು ಮಾಹಿತಿ ನೀಡಿದ್ದಾರೆ. ತ್ಯಾಜ್ಯ ನಿರ್ವಹಣೆ ನಿಯಮಾವಳಿಗಳ ಅನುಷ್ಠಾನ ಸಮರ್ಪಕವಾಗಿದ್ದು ರಸ್ತೆ ಬದಿ, ಚರಂಡಿ, ತೋಡುಗಳಿಗೆ ತ್ಯಾಜ್ಯ ಎಸೆಯುವವರಿಗೆ ಪಂಚಾಯತ್ ದಂಡ ವಿಧಿಸುತ್ತಿದೆ. ಸ್ವಚ್ಛತಾ ನೀತಿಗಳನ್ನು ಪಾಲಿಸದ ವ್ಯಾಪಾರಸ್ಥರ ವಿರುದ್ಧವೂ ಕ್ರಮ ಕೈಗೊಳ್ಳುತ್ತಿದೆ. ಅಲ್ಲದೇ ತ್ಯಾಜ್ಯವನ್ನು ವಾಹನದಲ್ಲಿ ಮುಚ್ಚಿ ಸಾಗಾಟ ಮಾಡುವುದನ್ನು ಕಡ್ಡಾಯಗೊಳಿಸಲಾಗಿದೆ. ಜನರು ಅವೈಜ್ಞಾನಿಕ ರೀತಿಯಲ್ಲಿ ತ್ಯಾಜ್ಯ ಎಸೆಯುವುದನ್ನು ತಡೆಗಟ್ಟಲು 12 ಸಾರ್ವಜನಿಕ ತೊಟ್ಟಿಗಳನ್ನು ಇರಿಸಿದ್ದು ಅವುಗಳಿಂದ ಪ್ರತಿನಿತ್ಯ ತ್ಯಾಜ್ಯವನ್ನು ಹೊರತೆಗೆಯಲಾಗುತ್ತಿದೆ.

**ಜಾಲ್ಸೂರು ಗ್ರಾಮ ಪಂಚಾಯತ್**

ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲೂಕಿನ ಜಾಲ್ಸೂರು ಗ್ರಾಮ ಪಂಚಾಯತ್ ಸುಳ್ಯ ಪೇಟೆಯಿಂದ ಪುತ್ತೂರು ಮಾರ್ಗದಲ್ಲಿ 14 ಕಿ.ಮೀ ದೂರದಲ್ಲಿದೆ. ಜಾಲ್ಸೂರು ಪಂಚಾಯತ್‌ನ ಒಟ್ಟು ವಿಸ್ತೀರ್ಣ 3586.65 ಎಕ್ರೆ ಆಗಿದ್ದು 2011ರ ಜನಗಣತಿ ಪ್ರಕಾರ ಒಟ್ಟು ಜನಸಂಖ್ಯೆ 6642. ಇದರ ವ್ಯಾಪ್ತಿಯಲ್ಲಿ 1404 ಕುಟುಂಬಗಳಿದ್ದು, ಬಹುಭಾಗ ಕೃಷಿ ಚುಟುವಟಿಕೆಗಳನ್ನು ಹೊಂದಿದ್ದು ಕೇವಲ 124 ಅಂಗಡಿ/ವ್ಯಾಪಾರ ಚಟುವಟಿಕೆಗಳಿವೆ. ಪಂಚಾಯತ್‌ನಲ್ಲಿ ತ್ಯಾಜ್ಯ ನಿರ್ವಹಣೆಗೆ ಪ್ರತ್ಯೇಕವಾಗಿ ಕಾರ್ಮಿಕರ ನೇಮಕಾತಿ ಇಲ್ಲದ ಕಾರಣ ಹಾಲಿ ಇರುವ ಇತರ ಕಾರ್ಮಿಕರನ್ನು ಬಳಸಿಕೊಳ್ಳಲಾಗುತ್ತಿದೆ. ನಾಗರಿಕರು ಹೆಚ್ಚಾಗಿ ತಮ್ಮಲ್ಲಿ ಉತ್ಪಾದನೆಯಾಗುವ ಸಾವಯವ ತ್ಯಾಜ್ಯಗಳನ್ನು ತಾವೇ ನಿರ್ವಹಣೆ ಮಾಡಿಕೊಳ್ಳುವುದರಿಂದ ಪಂಚಾಯತ್ ಕೆಲಸ

ಕೇವಲ ಅಂಗಡಿ/ ಹೋಟೇಲುಗಳ ತ್ಯಾಜ್ಯ ನಿರ್ವಹಣೆ ಹಾಗೂ ಪೇಟೆಯ ಸ್ವಚ್ಛತೆಯನ್ನು ಕಾಪಾಡಿಕೊಳ್ಳುವುದಕ್ಕೆ ಮಾತ್ರ ಸೀಮಿತವಾಗಿದೆ. ಗ್ರಾಮ ಪಂಚಾಯತ್ ಕಟ್ಟೆಯ ಸಮೀಪದಲ್ಲೇ ಇರುವ 50 ಸೆಂಟ್ಸ್ ಜಾಗದಲ್ಲಿ ಹಿಂದೆ ತ್ಯಾಜ್ಯ ನಿರ್ವಹಣೆ ಮಾಡುತ್ತಿದ್ದು, ಪ್ರಸ್ತುತ 1 ಕಿ.ಮೀ ದೂರದಲ್ಲಿ 1 ಎಕರೆ ಜಾಗವನ್ನು ನಿರ್ವಹಣಾ ಘಟಕಕ್ಕೆ ಕಾಯ್ದಿರಿಸಲಾಗಿದೆ ಮತ್ತು ಗೊಬ್ಬರ ತಯಾರಿಕಾ ಘಟಕದ ಕೆಲಸ ಪ್ರಗತಿಯಲ್ಲಿದೆ. ತ್ಯಾಜ್ಯ ವಿಭಜನೆ ಮತ್ತು ಸಂಗ್ರಹಕ್ಕೆ ಸಂಬಂಧಿಸಿ ಪಂಚಾಯತ್ ಅನೇಕ ಜನಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರೂ, ಮೂಲದಲ್ಲಿ ವಿಭಜನೆಯು ಸಮರ್ಪಕವಾಗಿ ನಡೆಯದ ಕಾರಣ ಸಿಬ್ಬಂದಿಗಳೇ ಸಂಗ್ರಹಣಾ ಘಟಕದಲ್ಲಿ ವಿಭಜಿಸಿ ಯೋಗ್ಯ ತ್ಯಾಜ್ಯಗಳನ್ನು ಮರುತ್ಪಾದನಾ ಘಟಕಕ್ಕೆ ಮಾರಾಟ ಮಾಡುತ್ತಾರೆ.

ಪಂಚಾಯತ್ ವ್ಯಾಪ್ತಿಯಲ್ಲಿ ಒಟ್ಟು 4 ದ್ವಿತೀಯ ಸಂಗ್ರಹಣಾ ತೊಟ್ಟಿಗಳನ್ನು ಇಡಲಾಗಿದ್ದು, ಜಾಲ್ಸೂರು ಪೇಟೆಯ ನಾಗರಿಕರು ಇದನ್ನು ಬಳಸಿಕೊಳ್ಳುತ್ತಿದ್ದಾರೆ. ಆದರೆ ಪಂಚಾಯತ್ ಬಳಿ ಸ್ವಂತ ವಾಹನದ ಕೊರತೆ ಹಾಗೂ ಖಾಯಂ ಪೌರ ಕಾರ್ಮಿಕರಿಲ್ಲದ ಕಾರಣ ತಿಂಗಳಿಗೊಮ್ಮೆ ಈ ತೊಟ್ಟಿಗಳಿಂದ ತ್ಯಾಜ್ಯಗಳನ್ನು ಹೊರ ತೆಗೆದು ಸಂಗ್ರಹ ಘಟಕಕ್ಕೆ ಸಾಗಿಸುತ್ತಿದೆ. ನಿರ್ವಹಣಾ ವೆಚ್ಚ ಭರಿಸಲು ವಾರ್ಷಿಕ ತೆರಿಗೆ ಹಣವನ್ನು ಉಪಯೋಗಿಸುತ್ತಿದ್ದು ಯಾವುದೇ ತ್ಯಾಜ್ಯ ಸಂಗ್ರಹ ಶುಲ್ಕವನ್ನು ವ್ಯಾಪಾರಿಗಳಿಂದಾಗಲೀ ಅಥವಾ ಸ್ಥಳೀಯ ನಾಗರಿಕರಿಂದಾಗಲಿ ಸಂಗ್ರಹಿಸುವುದಿಲ್ಲ. ಈ ಕಾರಣದಿಂದ ಪಂಚಾಯತ್‌ಗೆ ತ್ಯಾಜ್ಯ ನಿರ್ವಹಣೆಯು ಹಣಕಾಸಿನ ದೃಷ್ಟಿಯಿಂದ ಸವಾಲಾಗಿ ಪರಿಣಮಿಸಿದೆ. ಜನಪ್ರತಿನಿಧಿಗಳು ಹಾಗೂ ನಾಗರಿಕರ ಸಹಕಾರ ನಿರೀಕ್ಷಿತ ಮಟ್ಟದಲ್ಲಿ ದೊರೆಯದ ಕಾರಣ ತ್ಯಾಜ್ಯ ನಿರ್ವಹಣಾ ನಿಯಮಾವಳಿಗಳ ಅನುಷ್ಠಾನದಲ್ಲಿಯೂ ಪಂಚಾಯತ್ ಎಡವಿರುವುದು ಕಂಡು ಬಂದಿದೆ. ತಿಂಗಳಿಗೊಮ್ಮೆ ತ್ಯಾಜ್ಯವನ್ನು ತೊಟ್ಟಿಯಿಂದ ತೆಗೆಯುವುದರಿಂದ ಅವುಗಳ ವಿಭಜನೆ ಹಾಗೂ ಹಸಿಕಸ ಮತ್ತು ಒಣಕಸಗಳ ಸದುಪಯೋಗ ಸರಿಯಾದ ರೀತಿಯಲ್ಲಿ ಆಗುತ್ತಿಲ್ಲ.

ಸ್ವಂತ ನಿರ್ವಹಣಾ ಘಟಕವು ಸಮರ್ಪಕವಾಗಿಲ್ಲದ ಕಾರಣದಿಂದ ಪ್ರತೀ ಅಂಗಡಿ/ಮನೆಗಳಿಗೆ ಕೊಳವೆ ಗೊಬ್ಬರ ಅಳವಡಿಸುವಂತೆ ತಿಳಿಸಲಾಗಿದೆ. ಆದರೆ ನಾಗರಿಕರಿಂದ ನಿರೀಕ್ಷಿತ ಸಹಕಾರ ವ್ಯಕ್ತವಾಗಿಲ್ಲವೆಂದು ಅಧಿಕಾರಿಗಳ ಅಭಿಪ್ರಾಯ. ಜಾಲ್ಸೂರು ಪೇಟೆ ರಾಜ್ಯ ಹೆದ್ದಾರಿಯ ಪಕ್ಕದಲ್ಲಿ ಇರುವುದರಿಂದ ಸಹಜವಾಗಿಯೇ ಪ್ರವಾಸಿಗರು ಎಸೆಯುವ ಪ್ಲಾಸ್ಟಿಕ್ ಮುಂತಾದ ತ್ಯಾಜ್ಯಗಳ ನಿರ್ವಹಣೆಯೇ ಪಂಚಾಯತ್‌ಗೆ ದೊಡ್ಡ ಸವಾಲಾಗಿದೆ. ಪ್ಲಾಸ್ಟಿಕ್ ಸೌಧ, ಎರೆಹುಳು ಗೊಬ್ಬರ ಘಟಕ, ಸಾವಯವ ಗೊಬ್ಬರ ಘಟಕಗಳಂತಹ ಸಾಂಪ್ರದಾಯಿಕ ನಿರ್ವಹಣಾ

ವಿಧಾನಗಳಿಗೂ ಪಂಚಾಯತ್ ಮುಂದಾಗದೇ ಇರುವುದರಿಂದ ತ್ಯಾಜ್ಯ ಸಮಸ್ಯೆ ಇದರ ವ್ಯಾಪ್ತಿಯಲ್ಲಿ ಉಲ್ಬಣಗೊಂಡಿದೆ. ಅಲ್ಲಲ್ಲಿ ಎಚ್ಚರಿಕೆ ಫಲಕಗಳನ್ನು ಪಂಚಾಯತ್ ಹಾಗೂ ಸ್ಥಳೀಯ ರೋಟರಿ, ರೋಟರ್‍ಯಾಕ್ಟ್ ಮುಂತಾದ ಸ್ವಯಂಸೇವಾ ಸಂಸ್ಥೆಗಳು ಅಳವಡಿಸಿರುವುದು ಕಂಡು ಬರುತ್ತದೆ. ಪಂಚಾಯತ್ ಜನರಿಂದ ಹೆಚ್ಚಿನ ಸಹಕಾರವನ್ನು ನಿರೀಕ್ಷಿಸುತ್ತಿದ್ದು, ತ್ಯಾಜ್ಯ ನಿರ್ವಹಣಾ ವೆಚ್ಚವನ್ನು ಭರಿಸಲು ತೆರಿಗೆ ವಿಧಿಸುವ ಬಗ್ಗೆ ಪ್ರಸ್ತಾವನೆಯನ್ನು ಸಿದ್ದಪಡಿಸಿದೆ.

## 4.3 ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ವಿಶ್ಲೇಷಣೆ.

ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಸ್ಥಳೀಯ ಸಂಸ್ಥೆಗಳಿಗೆ ಮತ್ತು ನಾಗರಿಕರಿಗೆ ಪ್ರತ್ಯೇಕ ಪ್ರಶ್ನಾವಳಿಗಳನ್ನು ರಚಿಸಿ ನೇರ ಸಂದರ್ಶನದ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ದ.ಕ. ಜಿಲ್ಲಾ ವ್ಯಾಪ್ತಿಯಲ್ಲಿ ಒಟ್ಟು 10 ನಗರ ಸ್ಥಳೀಯ ಸಂಸ್ಥೆಗಳಿದ್ದು ವಿಟ್ಲ ಮತ್ತು ಕೋಟೆಕಾರು ಪಟ್ಟಣ ಪಂಚಾಯತ್‌ಗಳು ಇದರಲ್ಲಿ ಹೊಸದಾಗಿ ರಚನೆಗೊಂಡಿರುವುದರಿಂದ ಅವುಗಳನ್ನು ಹೊರತುಪಡಿಸಿ ಮಂಗಳೂರು ಮಹಾನಗರ ಪಾಲಿಕೆ ಸೇರಿದಂತೆ ಎಲ್ಲಾ 8 ನಗರ ಸ್ಥಳೀಯ ಸಂಸ್ಥೆಗಳನ್ನು ಸಂದರ್ಶಿಸಿ, ಅಲ್ಲಿಯ ಸಂಬಂಧಪಟ್ಟ ಅಧಿಕಾರಿಗಳಿಂದ ಪೂರ್ವರಚಿತ ಪ್ರಶ್ನಾವಳಿಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಹಾಗೆಯೇ ದ.ಕ. ಜಿಲ್ಲಾ ವ್ಯಾಪ್ತಿಯಲ್ಲಿ ಒಟ್ಟು 232 ಗ್ರಾಮ ಪಂಚಾಯತ್‌ಗಳಿದ್ದು ಅವುಗಳಲ್ಲಿ 29 ಗ್ರಾಮ ಪಂಚಾಯತ್‌ಗಳು 2015ನೇ ಸಾಲಿನಲ್ಲಿ ಹೊಸದಾಗಿ ರಚನೆಯಾದವುಗಳು. ಆದುದರಿಂದ ಉಳಿದ 203 ಗ್ರಾಮ ಪಂಚಾಯತ್‌ಗಳಲ್ಲಿ 21 ಗ್ರಾಮ ಪಂಚಾಯತ್‌ಗಳನ್ನು ಯಾದೃಚ್ಛಿಕ ಮಾದರಿಯಲ್ಲಿ ಆಯ್ಕೆ ಮಾಡಿಕೊಂಡು ಅಲ್ಲಿಯ ಪಂಚಾಯತ್ ಅಭಿವೃದ್ಧಿ ಅಧಿಕಾರಿ ಅಥವಾ ಕಾರ್ಯದರ್ಶಿಯವರನ್ನು ಸಂದರ್ಶಿಸಿ ಪೂರ್ವರಚಿತ ಪ್ರಶ್ನಾವಳಿಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಸ್ಥಳೀಯ ಸಂಸ್ಥೆಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಅಲ್ಲಿಯ ತ್ಯಾಜ್ಯ ಸಂಗ್ರಹ/ವಿಲೇವಾರಿ ಘಟಕಗಳಿಗೂ ಭೇಟಿ ನೀಡಿ ವಿಷಯ ಸಂಗ್ರಹಿಸಲಾಗಿದೆ. ಇದಲ್ಲದೆ ಅಲ್ಲಿಯ ಜನಪ್ರತಿನಿಧಿಗಳು ಹಾಗೂ ನಾಗರಿಕರನ್ನು ಸಂಪರ್ಕಿಸಿ ಸಂಶೋಧನೆಗೆ ಪೂರಕವಾದ ಮಾಹಿತಿ ಪಡೆಯಲಾಗಿದೆ. ಪೇಟೆ ಪಟ್ಟಣಗಳಲ್ಲಿ ತ್ಯಾಜ್ಯ ನಿರ್ವಹಣೆ ಹೇಗೆ ನಡೆಯುತ್ತಿದೆ ಎಂಬುದನ್ನು ಅವಲೋಕನ ವಿಧಾನದಿಂದಲೂ ಕಂಡುಕೊಳ್ಳಲಾಗಿದೆ. ಪ್ರಸ್ತುತ ಭಾಗದಲ್ಲಿ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯ ವಿಭಜನೆ, ಸಂಗ್ರಹ, ಸಾಗಾಟ, ವಿಲೇವಾರಿ ವಿಧಾನಗಳು, ತ್ಯಾಜ್ಯ ಶುಲ್ಕ, ತ್ಯಾಜ್ಯ ವಿಲೇವಾರಿ ಖರ್ಚು, ಮುಂತಾದವುಗಳ ಕುರಿತು ಪ್ರಶ್ನಾವಳಿಗಳ ಮೂಲಕ ದೊರೆತ ಅಂಕಿ-ಅಂಶಗಳನ್ನು ಕ್ರೋಡೀಕರಿಸಿ ವಿಶ್ಲೇಷಣೆ ಮಾಡಲಾಗಿದೆ.

## ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ವಿಭಜನೆಯ ಚಿತ್ರಣ

ತ್ಯಾಜ್ಯ ವಿಭಜನೆಯು ತ್ಯಾಜ್ಯಗಳ ಮರು ಬಳಕೆ ಮತ್ತು ಯಾವುದೇ ವಿಲೇವಾರಿ ವಿಧಾನದ ದೃಷ್ಟಿಯಿಂದ ಅತೀ ಅಗತ್ಯ ಎನ್ನುವುದು ಅಧ್ಯಯನಗಳಿಂದ ತಿಳಿಯುತ್ತದೆ. ಖಾನ್ ಎಚ್.ಇಕ್ಬಾಲ್ (2010)7 ಇವರು ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡುವುದರಿಂದ ತ್ಯಾಜ್ಯ ವಿಲೇವಾರಿಯ ಬಹುದೊಡ್ಡ ಸಮಸ್ಯೆ ಬಗೆಹರಿಯುತ್ತದೆ ಎನ್ನುವುದು ಅಧ್ಯಯನದಿಂದ ತಿಳಿದು ಬಂದಿದೆ ಎಂದಿದ್ದಾರೆ.

ಅಬ್ಬಾಸಿ ಎಸ್.ಎ. ಮತ್ತು ರಾಮಸ್ವಾಮಿ ಇ.ವಿ. (2001)[8] ಇವರು ತಮ್ಮ ಅಧ್ಯಯನದಲ್ಲಿ ಎರೆಹುಳುಗಳು ತಮ್ಮ ಅದ್ಭುತವಾದ ಪಚನಕ್ರಿಯೆ ಮತ್ತು ಜೀರ್ಣಕ್ರಿಯೆಯಿಂದ ಸಾವಯವ ತ್ಯಾಜ್ಯಗಳಾದ ತರಕಾರಿ, ಕಾಗದ, ಆಹಾರ ತ್ಯಾಜ್ಯ ಮುಂತಾದುವುಗಳನ್ನು ಗೊಬ್ಬರವನ್ನಾಗಿ ಪರಿವರ್ತಿಸುತ್ತವೆ. ಸಾವಯವ ಗೊಬ್ಬರವನ್ನು ಇತರ ರಾಸಾಯನಿಕ ಗೊಬ್ಬರಗಳಿಗಿಂತ ಕಡಿಮೆ ವೆಚ್ಚದಲ್ಲಿ ತಯಾರಿಸಬಹುದಾಗಿದೆ. ನಗರ ಪ್ರದೇಶಗಳ ಸಾವಯವ ತ್ಯಾಜ್ಯಗಳ ನಿರ್ವಹಣೆಗೆ 'ಎರೆಹುಳ ಗೊಬ್ಬರ' ತಯಾರಿಕಾ ವಿಧಾನವು ಆಶಾದಾಯಕವಾಗಿದೆ ಎಂದಿದ್ದಾರೆ.

ಸುಭಾಶ್ ಆನಂದ್ (2010)[9] ಇವರು ತ್ಯಾಜ್ಯ ವಿಭಜನೆಯನ್ನು ಕಡ್ಡಾಯಗೊಳಿಸಬೇಕೆಂದು ಸಲಹೆ ನೀಡಿದ್ದಾರೆ. ತ್ಯಾಜ್ಯ ಸಂಗ್ರಹವನ್ನು ಮನೆಯಿಂದ ಕೊನೆಯ ಭೂಭರ್ತಿ ಅಥವಾ ನಿರ್ವಹಣೆ ಹಂತದವರೆಗೆ ಈ ವಿಭಜನಾ ಸರಪಣಿಯು ಮುಂದುವರೆಯಬೇಕು. ಸಾವಯವ ತ್ಯಾಜ್ಯಗಳನ್ನು ಗೊಬ್ಬರವಾಗಿ ಉಪಯೋಗಿಸಬೇಕು. ಕಡಿಮೆ ಆದಾಯ ಹೊಂದಿದ ಹಾಗೂ ಹಿಂದುಳಿದ ಪ್ರದೇಶಗಳ ತ್ಯಾಜ್ಯ ನಿರ್ವಹಣೆಗೆ ಆದ್ಯತೆ ನೀಡಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ.

ಅಧ್ಯಯನ ವ್ಯಾಪ್ತಿಯಲ್ಲಿ ವಿವಿಧ ಹಂತಗಳಲ್ಲಿ ತ್ಯಾಜ್ಯ ವಿಭಜನೆ ಮಾಡುವ ಸ್ಥಳೀಯ ಸಂಸ್ಥೆಗಳ ಅಂಕಿ-ಅಂಶವನ್ನು ಕೋಷ್ಟಕ 4.4ರಲ್ಲಿ ನೀಡಲಾಗಿದೆ

**ಕೋಷ್ಟಕ 4.4**

**ದಕ್ಷಿಣ ಕನ್ನಡ ಜಿಲ್ಲೆಯ ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ವಿಭಜನೆ ಮಾಡುವ ಪ್ರತಿಕ್ರಿಯೆದಾರರ ಪ್ರಮಾಣ**

| ಪ್ರತಿಕ್ರಿಯೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಹೌದು | 16 | 55 | 6 | 21 | 22 | 76 |
| ಇಲ್ಲ | 5 | 17 | 2 | 7 | 7 | 24 |
| ಒಟ್ಟು | 21 | 72 | 8 | 28 | 29 | 100 |

**ಮೂಲ:** ಕ್ಷೇತ್ರಕಾರ್ಯ

ತ್ಯಾಜ್ಯ ವಿಭಜನೆಗೆ ನಗರ ಸ್ಥಳೀಯ ಸಂಸ್ಥೆಗಳು ಗ್ರಾಮೀಣ ಸ್ಥಳೀಯ ಸಂಸ್ಥೆಗಳಿಗಿಂತ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತವೆ ಎನ್ನುವುದು ಸಾಮಾನ್ಯ ಗ್ರಹಿಕೆಯಾದರೂ, ಮೇಲಿನ ಅಂಕಿ-ಅಂಶಗಳನ್ನು ಗಮನಿಸಿದಾಗ, ನಗರ ಹಾಗೂ ಗ್ರಾಮೀಣ ಸ್ಥಳೀಯ ಸರಕಾರಗಳು ಸಮಾನ ಆದ್ಯತೆ ನೀಡುತ್ತಿರುವುದು ಕಂಡು ಬರುತ್ತದೆ. ಒಟ್ಟು ಆಯ್ದ 21 ಗ್ರಾಮೀಣ ಸ್ಥಳೀಯ ಸಂಸ್ಥೆಗಳಲ್ಲಿ (ಪಂಚಾಯತ್‌ಗಳಲ್ಲಿ) 16 ಪಂಚಾಯತ್‌ಗಳು ಮೂಲದಲ್ಲಿ ಹಾಗೂ ವಿಲೇವಾರಿ ಜಾಗದಲ್ಲಿ ತ್ಯಾಜ್ಯ ವಿಭಜನೆಗೆ ಕ್ರಮ ಕೈಗೊಂಡಿದ್ದಾರೆ.ಅಂದರೆ ಶೇಕಡ 76ರಷ್ಟು ಸಂಸ್ಥೆಗಳು ವಿಭಜನೆ ಮಾಡಿದರೆ ಉಳಿದ 24 ಶೇಕಡದಷ್ಟು ಯಾವುದೇ ರೀತಿಯಲ್ಲಿ ವಿಭಜನೆ ಮಾಡದೆ ಕೇವಲ ಸಂಗ್ರಹಿಸಿ ಭೂಭರ್ತಿ ಮಾಡುವುದರ ಮೂಲಕ ಅವೈಜ್ಞಾನಿಕ ಕ್ರಮದಲ್ಲಿ ವಿಲೇವಾರಿ ಕೆಲಸ ನಿರ್ವಹಿಸುತ್ತಿದೆ. ನಗರ ಸ್ಥಳೀಯ ಸಂಸ್ಥೆಗಳ ಚಿತ್ರಣವೂ ಇದಕ್ಕಿಂತ ಭಿನ್ನವಾಗಿಲ್ಲ. ಅವುಗಳಲ್ಲಿಯೂ ಶೇಕಡ 75 ಅಂದರೆ 8ರಲ್ಲಿ 6 ಸಂಸ್ಥೆಗಳು ವಿಭಜನೆಯನ್ನು ಮಾಡುತ್ತಿದ್ದು ಉಳಿದ 2 ಸಂಸ್ಥೆಗಳು (ಶೇಕಡ 25) ವಿಭಜನೆಗೆ ಆದ್ಯತೆ ನೀಡದಿರುವುದು ಕಂಡುಬಂದಿದೆ.

ಸುಮಿತ್ ಗುಪ್ತ ಆಶಿಸ್ ಕುಮಾರ್ (2000) ಇವರು ದೆಹಲಿ ನಗರದಲ್ಲಿ ನಡೆಸಿದ ಅಧ್ಯಯನಗಳಲ್ಲಿ ತ್ಯಾಜ್ಯ ಸಂಗ್ರಹ, ಸಾಗಾಟ ಮತ್ತು ನಿರ್ವಹಣೆಯಲ್ಲಿ ಹೊಂದಾಣಿಕೆ ಇಲ್ಲದಿರುವುದನ್ನು ಗುರುತಿಸಿದ್ದಾರೆ ಹಾಗೂ ಇವೆಲ್ಲವನ್ನು ಒಂದೇ ಕಂಪನಿ ಅಥವಾ ಕ್ರೋಢೀಕೃತ ವ್ಯವಸ್ಥೆ ವಿಧಾನ ವನ್ನು ಅಳವಡಿಸುವುದರ ಮೂಲಕ ನಿರ್ವಹಿಸಬೇಕು ಎಂದು ಸಲಹೆ ನೀಡಿದ್ದಾರೆ. ನನ್ನ ಅಧ್ಯಯನ ವ್ಯಾಪ್ತಿಯಲ್ಲಿ ಈ ರೀತಿಯ ಹೊಂದಾಣಿಕೆಯ ಕೊರತೆಯು ಕಂಡುಬರುವುದಿಲ್ಲ. ಹೆಚ್ಚಿನ ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳು ಪೂರ್ವ ನಿರ್ಧರಿತ ಷರತ್ತುಗಳ ಆಧರದಲ್ಲಿ ಹೊರ ಗುತ್ತಿಗೆಗಳನ್ನು ನೀಡಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ.

ತ್ಯಾಜ್ಯ ಸಂಗ್ರಹ ಕಾರ್ಯವು ಸ್ಥಳೀಯ ಸಂಸ್ಥೆಗಳಿಗೆ ದೊಡ್ಡ ಸವಾಲು. ತ್ಯಾಜ್ಯ ನಿರ್ವಹಣೆಯ ಒಟ್ಟು ವೆಚ್ಚದಲ್ಲಿ ಬಹುಪಾಲು ತ್ಯಾಜ್ಯ ಸಂಗ್ರಹ ಮತ್ತು ಸಾಗಾಟಕ್ಕೆ ಖರ್ಚಾಗುತ್ತದೆ. ಕೆಲವು ಸಂಸ್ಥೆಗಳು ಇದನ್ನು ಖಾಸಗಿ ಸಂಸ್ಥೆಗಳಿಗೆ/ ವ್ಯಕ್ತಿಗಳಿಗೆ ಹೊರಗುತ್ತಿಗೆ ನೀಡಿದರೆ, ಇನ್ನು ಕೆಲವು ತಮ್ಮ ಪೌರ ಕಾರ್ಮಿಕರ ನೆರವಿನಿಂದ ನಿರ್ವಹಿಸುತ್ತಾರೆ. ಕೋಷ್ಟಕ 4.5ರಲ್ಲಿ ಈ ಬಗ್ಗೆ ವಿವರಣೆ ನೀಡಲಾಗಿದೆ.

ಕೋಷ್ಟಕ 4.5

ದಕ್ಷಿಣ ಕನ್ನಡ ಜಿಲ್ಲೆಯ ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ಸಂಗ್ರಹಕಾರರು

| ಸ್ಥಳೀಯ ಸಂಸ್ಥೆ | ಸ್ಥಳೀಯ ಸಂಸ್ಥೆ | ಶೇಕಡ | ಖಾಸಗಿ/ ಹೊರಗುತ್ತಿಗೆ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಗ್ರಾಮೀಣ | 13 | 62 | 8 | 38 | 21 | 100 |
| ನಗರ | 4 | 50 | 4 | 50 | 8 | 100 |
| ಒಟ್ಟು | 17 | 59 | 12 | 41 | 29 | 100 |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ 62 ಶೇಕಡದಷ್ಟು ಗ್ರಾಮೀಣ ಸಂಸ್ಥೆಗಳು ತಾವೇ ಸ್ವತಃ ತಮ್ಮಲ್ಲಿರುವ ಪೌರ ಕಾರ್ಮಿಕರು ಹಾಗೂ ದಿನಗೂಲಿ ನೌಕರರ ಸಹಾಯದಿಂದ ತ್ಯಾಜ್ಯ ಸಂಗ್ರಹಿಸಿದರೆ, ಉಳಿದ 38 ಶೇಕಡದಷ್ಟು ಪಂಚಾಯತ್‌ಗಳು ಸ್ಥಳೀಯ ಮಟ್ಟದ ಸಂಸ್ಥೆಗಳಿಗೆ/ ವ್ಯಕ್ತಿಗಳಿಗೆ ಹೊರಗುತ್ತಿಗೆ ನೀಡಿರುವುದು ಕಂಡು ಬರುತ್ತದೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿ ಶೇಕಡ 50ರಷ್ಟು ತಾವೇ ಸ್ವತಃ ನಿಭಾಯಿಸದರೆ ಉಳಿದ 50 ಶೇಕಡದಷ್ಟು ಸಂಸ್ಥೆಗಳು ಖಾಸಗಿ ಹೊರಗುತ್ತಿಗೆ ನೀಡಿರುವುದು ಕಂಡು ಬರುತ್ತದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿದಂತೆ ಸ್ಥಳೀಯ ಸಂಸ್ಥೆ ಮತ್ತು ಖಾಸಗಿ ಹೊರಗುತ್ತಿಗೆ ಸಂಗ್ರಹ ವ್ಯವಸ್ಥೆಗಳೆರಡರಲ್ಲಿಯೂ ನ್ಯೂನತೆಗಳಿರು ವುದು ಕಂಡುಬಂದಿದೆ. ವಿಭಜನೆಗೆ ಆದ್ಯತೆ ನೀಡದಿರುವುದು, ಕ್ಲಪ್ತ ಸಮಯಕ್ಕೆ ಹಾಗೂ ಪ್ರತಿನಿತ್ಯ ತ್ಯಾಜ್ಯ ಸಂಗ್ರಹಿಸದಿರುವುದು ಮುಂತಾದ ನ್ಯೂನ್ಯತೆಗಳನ್ನು ನಾಗರಿಕರು ಗುರುತಿಸಿದ್ದಾರೆ.

ಜನರಲ್ಲಿ ತ್ಯಾಜ್ಯದಿಂದ ಉಂಟಾಗುವ ಸಮಸ್ಯೆಗಳ ಬಗ್ಗೆ ಸಾಕಷ್ಟು ಅರಿವಿರುವುದು ಕಂಡುಬಂದರೂ ಬೇಜವಾಬ್ದಾರಿ ಹಾಗೂ ಉದಾಸೀನತೆಯಿಂದ ಪ್ಲಾಸ್ಟಿಕ್ ಸಹಿತವಾದ ಅನೇಕ ಗೃಹತ್ಯಾಜ್ಯಗಳನ್ನು ರಸ್ತೆ ಬದಿ ತೋಡುಗಳಿಗೆ, ಹಾಳು ಬಾವಿಗಳಿಗೆ, ಸೇತುವೆಗಳ ಕೆಳಗೆ, ನದಿಗಳಿಗೆ ಎಸೆಯುವುದು ಇತ್ಯಾದಿ ವರದಿಯಾಗುತ್ತಿದೆ. ಉದಾಹರಣೆಗೆ ಬಜ್ಪೆ ಪಂಚಾಯತ್ ವ್ಯಾಪ್ತಿಯಲ್ಲಿ ಜನರು ತೋಡಿಗೆ ಪ್ಲಾಸ್ಟಿಕ್ ವಸ್ತುಗಳನ್ನು ಎಸೆಯುವುದರಿಂದ ತೊಟ್ಟಿಲ ಗುರಿ ಪ್ರದೇಶದ ರೈತರ ಕೃಷಿಗೆ ಹಾನಿಯಾಗಿರುವುದರ ಬಗ್ಗೆ ದೂರು ದಾಖಲಾಗಿದೆ. ನರಿಮೊಗರು ಪಂಚಾಯತ್ ವ್ಯಾಪ್ತಿಯಲ್ಲಿ ಪ್ಲಾಸ್ಟಿಕ್ ಸೌಧ ನಿರ್ಮಿಸಿದರೂ ಜನರು ಅದನ್ನು ಉಪಯೋಗಿಸದೇ ಇರುವುದು ಒಂದೆಡೆಯಾದರೆ ಕಟೀಲು ಪರಿಸರದಲ್ಲಿ ನಿರ್ಮಿಸಿದ ಪ್ಲಾಸ್ಟಿಕ್ ಸೌಧಕ್ಕೆ ಜನರು ಸತ್ತ ಪ್ರಾಣಿಗಳನ್ನು ಬಿಸಾಡುವುದರಿಂದ ಸಂಗ್ರಹಕಾರರಿಗೆ ತೊಂದರೆಯಾಗಿರುವುದು ಕಂಡು ಬಂದಿದೆ. ಜನರು ವಾಹನಗಳಲ್ಲಿ ಸಂಚರಿಸುವಾಗ ದನ, ಹಂದಿ, ಕೋಳಿ, ಕುರಿ ಮುಂತಾದ ಮಾಂಸದ ತ್ಯಾಜ್ಯಗಳನ್ನು ಮತ್ತಿತರ ಗೃಹ ತ್ಯಾಜ್ಯಗಳನ್ನು ನದಿಗೆ ಎಸೆಯುವುದರಿಂದ ನದಿನೀರು

ಮಲೀನಗೊಂಡಿರುವುದರ ಬಗ್ಗೆ ಬೇರೆ ಬೇರೆ ಸ್ಥಳೀಯ ಸಂಸ್ಥೆಗಳಲ್ಲಿ ಚರ್ಚೆಗೆ ಬಂದಿರುತ್ತದೆ. ಇದಕ್ಕೆ ಕಡಿವಾಣ ಹಾಕಲು ಕೆಲವು ಸ್ಥಳೀಯ ಸಂಸ್ಥೆಗಳು ತಪ್ಪಿತಸ್ಥರಿಗೆ ದಂಡ ವಿಧಿಸುವ ಕ್ರಮ ವನ್ನು ಕೈಗೊಂಡಿವೆ. ಕೋಷ್ಟಕ 4.6ರಲ್ಲಿ ಅಂತಹ ದಂಡ ವಿಧಿಸುವ ಸ್ಥಳೀಯ ಸಂಸ್ಥೆಗಳ ಅಂಕಿ-ಅಂಶ ನೀಡಲಾಗಿದೆ.

**ಕೋಷ್ಟಕ 4.6**

**ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಲ್ಲಿ ದಂಡ ವಿಧಿಸುವ ಸ್ಥಳೀಯ ಸಂಸ್ಥೆಗಳು**

| ಪ್ರತಿಕ್ರಿಯೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಹೌದು | 17 | 58 | 7 | 24 | 24 | 82 |
| ಇಲ್ಲ | 4 | 14 | 1 | 4 | 5 | 18 |
| ಒಟ್ಟು | 21 | 72 | 8 | 28 | 29 | 100 |

ಸಾರ್ವಜನಿಕ ಸ್ಥಳಗಳಲ್ಲಿ ಎಲ್ಲೆಂದರಲ್ಲಿ ತ್ಯಾಜ್ಯ ಎಸೆಯುವುದನ್ನು ತಡೆಗಟ್ಟಲು ತಪ್ಪಿತಸ್ಥರಿಗೆ ಅನೇಕ ಸ್ಥಳೀಯ ಸಂಸ್ಥೆಗಳು ದಂಡ ವಿಧಿಸುತ್ತಿವೆ. ಒಟ್ಟು ಆಯ್ದ 21 ಗ್ರಾಮ ಪಂಚಾಯತ್‌ಗಳಲ್ಲಿ 17 ಗ್ರಾಮ ಪಂಚಾಯತ್‌ಗಳು ದಂಡ ವಿಧಿಸುತ್ತಿವೆ. ಅಂದರೆ ಶೇಕಡ 81ರಷ್ಟು ಪಂಚಾಯತ್‌ಗಳು ಈ ಕ್ರಮಕ್ಕೆ ಮುಂದಾದರೆ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಶೇಕಡ 87.5ರಷ್ಟು ಸಂಸ್ಥೆಗಳು ದಂಡ ವಿಧಿಸುತ್ತಿವೆ. ಸುಳ್ಯ ಪಟ್ಟಣ ಪಂಚಾಯತ್ ಜನರಿಂದ ಯಾವುದೇ ಶುಲ್ಕ ಸಂಗ್ರಹಿಸದ ಹಾಗೂ ತಪ್ಪಿತಸ್ಥರಿಗೆ ದಂಡ ವಿಧಿಸದ ನಗರ ಸ್ಥಳೀಯ ಸಂಸ್ಥೆಯಾಗಿದ್ದು, ಸುಳ್ಯ ಪಟ್ಟಣ ಪಂಚಾಯತ್ ಜಿಲ್ಲೆಯಲ್ಲಿಯೇ ಅತ್ಯಂತ ತ್ಯಾಜ್ಯ ಸಮಸ್ಯೆಯನ್ನು ಹೊಂದಿದ್ದು, ಸುಳ್ಯ ನಗರದಲ್ಲಿ ಅತೀ ಹೆಚ್ಚು ಮಲೇರಿಯಾ, ಡೆಂಗ್ಯೂ, ಜಾಂಡೀಸ್‌ನಂತಹ ಸಾಂಕ್ರಾಮಿಕ ರೋಗಗಳು ಆಗಾಗ ಉಲ್ಬಣಿಸಿರುವುದು ಇದಕ್ಕೆ ಪೂರಕವಾಗಿದೆ.

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ತ್ಯಾಜ್ಯ ನಿರ್ವಹಣಾ ಕ್ರಮಗಳನ್ನು ಸೂಚಿಸಿದೆ. ಅವುಗಳಲ್ಲಿ ತ್ಯಾಜ್ಯ ಘಟಕ ಹೊಂದಿಲ್ಲದ ಹಾಗೂ ಸ್ವಂತ ಜಮೀನು ಇಲ್ಲದ ಹಾಗೂ ಇರುವ ಪಂಚಾಯತ್‌ಗಳಿಗೆ ಪ್ರತ್ಯೇಕ ಮಾರ್ಗಸೂಚಿಯನ್ನು ನೀಡಿದೆ. ನಿಯಮಾವಳಿಗಳಲ್ಲಿ ಯಾವುದೇ ಸ್ಥಳೀಯ ಸಂಸ್ಥೆ ಕಡ್ಡಾಯವಾಗಿ ಸ್ವಂತ ನಿರ್ವಹಣಾ ಘಟಕ ಮತ್ತು ಭೂಭರ್ತಿ ಪ್ರದೇಶ ಹೊಂದಬೇಕೆಂದು ತಿಳಿಸಿಲ್ಲ. ಸ್ಥಳೀಯ ಸಂಸ್ಥೆಗಳು ಸ್ವಂತ ಜಮೀನು ಹೊಂದುವ ಬಗ್ಗೆ ಆಸಕ್ತಿ ಇದ್ದರೂ ಜನರು ತಮ್ಮ ತಮ್ಮ ಪ್ರದೇಶಗಳಲ್ಲಿ ಭೂಭರ್ತಿ ಜಮೀನಿನ ಸ್ಥಾಪನೆಗೆ ವಿರೋಧ ವ್ಯಕ್ತಪಡಿಸುತ್ತಿದ್ದಾರೆ. ಪುತ್ತೂರು ನಗರ ಸಭೆ ವ್ಯಾಪ್ತಿಯ ಬನ್ನೂರು, ಸುಳ್ಯದ ಕಲ್ಚರ್ಪೆ ಮುಂತಾದ ಕಡೆಗಳಲ್ಲಿರುವ ಭೂಭರ್ತಿ ಪ್ರದೇಶಗಳನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಜನರು ಒತ್ತಡ

ಹೇರುತ್ತಿದ್ದಾರೆ. ಬಂಟ್ವಾಳ ಮತ್ತು ಉಳ್ಳಾಲ ನಗರ ಸಭೆಗಳಿಗೆ ಸ್ವಂತ ಭೂಭರ್ತಿ ಜಾಗಗಳಿಲ್ಲದ ಕಾರಣ ಮಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿರುವ ಪಚ್ಚನಾಡಿಗೆ ಶುಲ್ಕ ನೀಡಿ ತ್ಯಾಜ್ಯ ಸಾಗಾಟ ಮಾಡುತ್ತಾರೆ. ಕೋಷ್ಟಕ 4.7ರಲ್ಲಿ ತ್ಯಾಜ್ಯ ಸಂಗ್ರಹ ಹಾಗೂ ಭೂಭರ್ತಿಗೆ ಸ್ವಂತ ಜಮೀನು ಹೊಂದಿರುವ ಮತ್ತು ಹೊಂದಿಲ್ಲದ ಸ್ಥಳೀಯ ಸಂಸ್ಥೆಗಳ ಅಂಕಿ–ಅಂಶ ನೀಡಲಾಗಿದೆ.

**ಕೋಷ್ಟಕ 4.7**

**ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯ ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ರಾಶಿ ಹಾಕುವ ಜಾಗದ ಒಡೆತನ**

| ಒಡೆತನ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಸರಕಾರಿ | 15 | 52 | 6 | 21 | 21 | 73 |
| ಖಾಸಗಿ | 1 | 3 | 0 | 0 | 1 | 3 |
| ಇಲ್ಲ | 5 | 17 | 2 | 7 | 7 | 24 |
| ಒಟ್ಟು | **21** | **72** | **8** | **28** | **29** | **100** |

ಕೆಲವು ಸ್ಥಳೀಯ ಸಂಸ್ಥೆಗಳು ಸ್ವಂತ ಭೂಮಿಯನ್ನು ಹೊಂದಿದ್ದರೆ ಇನ್ನು ಕೆಲವು ಸಂಸ್ಥೆಗಳು ಖಾಸಗಿ ಸಂಸ್ಥೆಗಳೊಂದಿಗೆ ಒಪ್ಪಂದ ಮಾಡಿಕೊಂಡಿವೆ. ಕಿನ್ನಿಗೋಳಿ–ಮೆನ್ನಬೆಟ್ಟು ನಂತಹ ಕೆಲವು ಸ್ಥಳೀಯ ಸಂಸ್ಥೆಗಳು ಜಂಟಿಯಾಗಿ ನಿರ್ವಹಣೆ ಮಾಡಿದರೆ ಉಳ್ಳಾಲ–ಬಂಟ್ವಾಳದಂತಹ ನಗರ ಸ್ಥಳೀಯ ಸಂಸ್ಥೆಗಳು ಮಂಗಳೂರು ನಗರಪಾಲಿಕೆಗೆ ಬಾಡಿಗೆ ನೀಡಿ ತಮ್ಮ ಕಸವನ್ನು ವಿಲೇವಾರಿ ಮಾಡುತ್ತವೆ. ಒಟ್ಟು ಆಯ್ಕೆ ಮಾಡಿದ 21 ಗ್ರಾಮ ಪಂಚಾಯತ್‌ಗಳಲ್ಲಿ 1 ಪಂಚಾಯತ್ ಖಾಸಗಿ ಸಂಸ್ಥೆಯ ಜಾಗವನ್ನು ಉಪಯೋಗಿಸಿದರೆ ಉಳಿದ 5 ಗ್ರಾಮ ಪಂಚಾಯತ್‌ಗಳು ಸ್ವಂತ ಜಾಗವನ್ನು ಹೊಂದಿಲ್ಲ. ಅಂದರೆ 71 ಶೇಕಡ ಗ್ರಾಮ ಪಂಚಾಯತ್‌ಗಳು ಸ್ವಂತ ಸಂಗ್ರಹಣಾ ಘಟಕ ಹಾಗೂ ಭೂಭರ್ತಿ ಪ್ರದೇಶಗಳನ್ನು ಹೊಂದಿವೆ. ಶೇಕಡ 75ರಷ್ಟು ನಗರ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ವಿಲೇವಾರಿಗೆ ಸ್ವಂತ ಜಮೀನು ಹೊಂದಿವೆ. ಒಟ್ಟು ಸರಾಸರಿ 73 ಶೇಕಡ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ವಿಲೇವಾರಿಗಾಗಿ ಸ್ವಂತ ಜಮೀನನ್ನು ಹೊಂದಿವೆ.

ಭಾರತ ಸರಕಾರವು ರೂಪಿಸಿ ಹೊರಡಿಸಿರುವ ಘನತ್ಯಾಜ್ಯ ಮತ್ತು ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣೆಯ ನಿಯಮ 2016ರಲ್ಲಿ ಸ್ಥಳೀಯ ಸರಕಾರದ ಜವಾಬ್ದಾರಿ ಮತ್ತು ಕರ್ತವ್ಯಗಳಲ್ಲಿ ಘನತ್ಯಾಜ್ಯ ಘಟಕಗಳನ್ನು ಮಾರುಕಟ್ಟೆ ಸಮೀಪವಿರುವಂತೆ ನಿರ್ಮಿಸಿ ಗೊಬ್ಬರ ತಯಾರಿಕೆಯನ್ನು ಮಾಡಬೇಕು ಎಂದು ಸೂಚಿಸಲಾಗಿದೆ.

ಬೆನ್ನಿ ಜೋಸೆಫ್ (2009)[10]ಇವರು ಪೂರ್ವ ಕೊಲ್ಕತ್ತಾದದಲ್ಲಿ ನಡೆಸಿದ ಅಧ್ಯಯನದಲ್ಲಿ ನಗರಗಳ ಘನ ಮತ್ತು ದ್ರವತ್ಯಾಜ್ಯಗಳನ್ನು ಮರು ಆವರ್ತನೀಯ ವಿಧಾನದ ಮೂಲಕ

ಬಳಸಿಕೊಂಡು ಫಲವತ್ತಾದ ಗೊಬ್ಬರಗಳನ್ನು ಉತ್ಪಾದಿಸಿ ಕೃಷಿಯಲ್ಲಿ ಬಳಸಿಕೊಂಡು ನಗರ ಆಹಾರದ ಬೇಡಿಕೆಯ ಸಮಸ್ಯೆಯನ್ನು ಬಗೆಹರಿಸಿರುವುದನ್ನು ತಿಳಿಸಿದ್ದಾರೆ. ತ್ಯಾಜ್ಯ ನಿರ್ವಹಣೆಯ ಸಹ್ಯ ವಿಧಾನವನ್ನು ಈ ಅಧ್ಯಯನದಲ್ಲಿ ಗುರುತಿಸಿದ್ದಾರೆ. ಸಾವಯವ ತ್ಯಾಜ್ಯದಿಂದ ಎರೆಹುಳು ಗೊಬ್ಬರ ಮತ್ತು ಸಾವಯವ ಗೊಬ್ಬರ ತಯಾರಿಕಾ ಘಟಕಗಳು ಜಗತ್ತಿನಾದ್ಯಂತ ಕಂಡು ಬರುತ್ತಿದೆ ಎಂದಿದ್ದಾರೆ.

ಗೊಬ್ಬರ ತಯಾರಿಕಾ ಘಟಕಗಳು ತ್ಯಾಜ್ಯ ವಿಲೇವಾರಿಯ ಜೊತೆಗೆ ಆದಾಯವನ್ನು ತಂದು ಕೊಡುತ್ತಿವೆ. ಕೋಷ್ಟಕ 4.8ರಲ್ಲಿ ತ್ಯಾಜ್ಯದಿಂದ ಗೊಬ್ಬರ ತಯಾರಿಸುವ ಘಟಕ ಹೊಂದಿರುವ ಸ್ಥಳೀಯ ಸಂಸ್ಥೆಗಳ ಮಾಹಿತಿ ನೀಡಲಾಗಿದೆ.

**ಕೋಷ್ಟಕ 4.8**

**ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತ್ಯಾಜ್ಯದಿಂದ ಗೊಬ್ಬರ ತಯಾರಿಸುವ ಘಟಕ ಹೊಂದಿರುವ ಸ್ಥಳೀಯ ಸಂಸ್ಥೆಗಳು**

| ಪ್ರತಿಕ್ರಿಯೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಹೌದು | 13 | 45 | 4 | 14 | 17 | 59 |
| ಇಲ್ಲ | 8 | 27 | 4 | 14 | 12 | 41 |
| ಒಟ್ಟು | 21 | 72 | 8 | 28 | 29 | 100 |

ಗೊಬ್ಬರ ತಯಾರಿಕಾ ಘಟಕಗಳೆಂದರೆ ಎರೆಹುಳು ಗೊಬ್ಬರ ಹಾಗೂ ಸಾವಯವ ಗೊಬ್ಬರ ತಯಾರಿಸುವ ಘಟಕಗಳು. ಅಧ್ಯಯನ ಪ್ರದೇಶದ ವ್ಯಾಪ್ತಿಯಲ್ಲಿ ಮಂಗಳೂರು ಮಹಾನಗರ ಪಾಲಿಕೆ ಹೊರತುಪಡಿಸಿ ಉಳಿದ ಸ್ಥಳೀಯ ಸಂಸ್ಥೆಗಳಲ್ಲಿ ಕಾರ್ಮಿಕರನ್ನು ಬಳಸಿಕೊಂಡು ಗೊಬ್ಬರ ತಯಾರಿಸಲಾಗುತ್ತಿದೆ. ಮಂಗಳೂರು ಮಹಾನಗರ ಪಾಲಿಕೆಯು ಪಚ್ಚನಾಡಿಯ ತ್ಯಾಜ್ಯ ಸಂಗ್ರಹಗಾರದಲ್ಲಿ ರಾಶಿ ಹಾಕಿ ಅದು ಒಣಗಿದ ನಂತರ ಗಾಳಿ ಹಾಯಿಸುವಿಕೆ ಯಂತ್ರದ (ವಿಂಡ್ರೋ ಕಂಪೋಸ್ಟಿಂಗ್)ಮೂಲಕ ನಿರುಪಯುಕ್ತ ತ್ಯಾಜ್ಯಗಳನ್ನು ಬೇರ್ಪಡಿಸಿ ಗೊಬ್ಬರ ತಯಾರಿಸುತ್ತದೆ. ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿ ಪ್ರಕಾರ ಆಯ್ಕೆ ಮಾಡಿದ 21 ಗ್ರಾಮಪಂಚಾಯತ್‌ಗಳಲ್ಲಿ 13 ಗ್ರಾಮ ಪಂಚಾಯತ್‌ಗಳು ಅಂದರೆ 62 ಶೇಕಡ ಪಂಚಾಯತ್‌ಗಳು ಮಾತ್ರ ಗೊಬ್ಬರ ತಯಾರಿಕಾ ಘಟಕಗಳನ್ನು ಹೊಂದಿದ್ದು ಉಳಿದ ಗ್ರಾಮ ಪಂಚಾಯತ್‌ಗಳು ತ್ಯಾಜ್ಯಗಳನ್ನು ಯಾವುದೇ ರೀತಿಯಲ್ಲಿ ಬಳಸದೆ ಭೂಭರ್ತಿ ಮೂಲಕ ವಿಲೇವಾರಿ ಮಾಡುತ್ತಿವೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿ 8ರಲ್ಲಿ 4 ನಗರ ಸಂಸ್ಥೆಗಳು ಗೊಬ್ಬರ ತಯಾರಿಕಾ ಘಟಕಗಳನ್ನು

ಹೊಂದಿದ್ದು, ಉಳಿದಂತೆ ಎರಡು ನಗರ ಸ್ಥಳೀಯ ಸಂಸ್ಥೆಗಳು ಸ್ವಂತ ಜಾಗವನ್ನು ಹೊಂದಿಲ್ಲ. ಈ ಅಂಕಿ-ಅಂಶಗಳನ್ನು ಗಮನಿಸಿದಾಗ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ನಗರ ಸ್ಥಳೀಯ ಸಂಸ್ಥೆಗಳಿಗಿಂತ ತ್ಯಾಜ್ಯ ಮರುಬಳಕೆಯಲ್ಲಿ ಹೆಚ್ಚಿನ ದಕ್ಷತೆಯನ್ನು ಹೊಂದಿವೆ.

ಭಾಟಿಯ ಎಸ್ ಸಿ (2007)[11] ಇವರ ಅಧ್ಯಯನದ ಪ್ರಕಾರ ತ್ಯಾಜ್ಯ ನಿರ್ವಹಣಾ ವಿಧಾನದಲ್ಲಿ ಗೊಬ್ಬರ ತಯಾರಿಕಾ ವಿಧಾನವು ಪ್ರಮುಖವಾದುದು. ನಿರ್ವಹಣೆ ವೆಚ್ಚವು ತ್ಯಾಜ್ಯ ವಿಲೇವಾರಿ ಹಾಗೂ ವಸ್ತುಗಳ ಮಾರುಕಟ್ಟೆಯನ್ನು ಅವಲಂಬಿಸಿದೆ. ಗೊಬ್ಬರ ತಯಾರಿಕಾ ವಿಧಾನದ ಅನುಕೂಲತೆಗಳೆಂದರೆ, ಇದು ಅನಾವಶ್ಯಕ ವೆಚ್ಚವನ್ನು ನಿಲ್ಲಿಸುತ್ತದೆ. ಗೊಬ್ಬರವನ್ನು ಮಾರಾಟ ಮಾಡಿ ಆದಾಯವನ್ನು ಗಳಿಸಬಹುದು ಹಾಗು ಸಾರ್ವಜನಿಕರಿಂದ ತ್ಯಾಜ್ಯ ಸಂಗ್ರಹಣಾ ವೆಚ್ಚವನ್ನು ಸಂಗ್ರಹಿಸಬಹುದು. ತ್ಯಾಜ್ಯ ನಿರ್ವಹಣೆಯ ಆರ್ಥಿಕತೆಯನ್ನು ವೆಚ್ಚ ಮತ್ತು ಆದಾಯದ ಆಧಾರದಲ್ಲಿ ಅಳೆಯಬಹುದು. ತ್ಯಾಜ್ಯ ಮೂಲಗಳಿಂದ ಉತ್ಪಾದಿಸಿದ ಗೊಬ್ಬರದಲ್ಲಿ ವಿಷಕಾರಿಯಾದ ವಸ್ತುಗಳು ಸೇರದಂತೆ ಜಾಗ್ರತೆ ವಹಿಸಬೇಕು. ಆಹಾರ ಸರಪಣಿಯ ಮೂಲಕ ಅದು ಜನರ ಹಾಗೂ ಪ್ರಾಣಿಗಳ ದೇಹವನ್ನು ಸೇರಿ ಆರೋಗ್ಯ ಸಮಸ್ಯೆಗಳಿಗೆ ಕಾರಣವಾಗುತ್ತವೆ. ಸಾವಯವ ತ್ಯಾಜ್ಯವನ್ನು ಕ್ಲಪ್ತಕಾಲದಲ್ಲಿ ಸಂಗ್ರಹಿಸಿ ವಿಲೇವಾರಿ ಮಾಡದೇ ಹೋದಲ್ಲಿ ನೊಣ, ಸೊಳ್ಳೆ, ಇಲಿ, ಹೆಗ್ಗಣ ಮುಂತಾದುವುಗಳ ಪ್ರಮಾಣ ಹೆಚ್ಚಾಗುತ್ತವೆ ಹಾಗೂ ಇದು ಆರೋಗ್ಯ ಸಮಸ್ಯೆಗೆ ಕಾರಣವಾಗುತ್ತದೆ. ಹಾಗೆಯೇ ಭರ್ತಿ ಮಾಡುವ ಸಂದರ್ಭದಲ್ಲಿಯೂ ಸಹ ಇಲಿ, ಹೆಗ್ಗಣ, ನೊಣ, ಸೊಳ್ಳೆ ಮುಂತಾದುವುಗಳಿಗೆ ಬೆಳೆಯಲು ಅವಕಾಶ ನೀಡಬಾರದು. ಇವುಗಳ ನಿಯಂತ್ರಣಕ್ಕೆ ತ್ಯಾಜ್ಯದ ರಾಶಿಗೆ ಸರಿಯಾದ ಮಣ್ಣಿನ ಹೊದಿಕೆ ಮಾಡಬೇಕು. ಇವರ ಪ್ರಕಾರ ತ್ಯಾಜ್ಯವನ್ನು ಮೂಲದಲ್ಲಿ ವಿಭಜನೆಗೊಳಿಸಿ, ಸಾವಯವ ತ್ಯಾಜ್ಯಗಳನ್ನು ಗೊಬ್ಬರ ತಯಾರಿಕೆಯಲ್ಲಿ ಬಳಸಿದರೆ ಅದು ಆದಾಯವನ್ನು ತಂದು ಕೊಡಬಲ್ಲದು.

ಕೋಷ್ಟಕ 4.9ರಲ್ಲಿ ಸ್ಥಳೀಯ ಸಂಸ್ಥೆಗಳು ತಮ್ಮಲ್ಲಿ ಉತ್ಪಾದನೆಯಾಗುವ ಒಟ್ಟು ತ್ಯಾಜ್ಯದಲ್ಲಿ ಗೊಬ್ಬರಕ್ಕಾಗಿ ಬಳಸುವ ತ್ಯಾಜ್ಯದ ಅಂದಾಜು ಪ್ರಮಾಣದ ಅಂಕಿ-ಅಂಶವನ್ನು ನೀಡಲಾಗಿದೆ.

**ಕೋಷ್ಟಕ 4.9**

**ದಕ್ಷಿಣ ಕನ್ನಡ ಜಿಲ್ಲೆಯ ಸ್ಥಳೀಯ ಸಂಸ್ಥೆಗಳಲ್ಲಿ ಒಟ್ಟು ತ್ಯಾಜ್ಯದಲ್ಲಿ ಗೊಬ್ಬರಕ್ಕಾಗಿ ಉಪಯೋಗವಾಗುವ ಅಂದಾಜು ಘನತ್ಯಾಜ್ಯ ಪ್ರಮಾಣ**

| ಸ್ಥಳೀಯ ಸಂಸ್ಥೆ | ಶೇ. 10 ಕ್ಕಿಂತ ಕಡಿಮೆ | 10–30% | 30–70% | 70 ಕ್ಕಿಂತ ಹೆಚ್ಚು | ಇಲ್ಲ | ಒಟ್ಟು |
|---|---|---|---|---|---|---|
| ಗ್ರಾಮೀಣ | 5 | 6 | 5 | 2 | 3 | 21 |
| ನಗರ | 1 | 3 | 1 | 0 | 3 | 8 |
| ಒಟ್ಟು | 6 | 9 | 6 | 2 | 6 | 29 |
| ಶೇಕಡ | 21 | 31 | 21 | 6 | 21 | 100 |

ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿ ಪ್ರಕಾರ ಒಟ್ಟು ಮಾಹಿತಿ ಸಂಗ್ರಹಿಸಿದ 29 ಸ್ಥಳೀಯ ಸಂಸ್ಥೆಗಳಲ್ಲಿ ಶೇಕಡ 59ರಷ್ಟು ಸ್ಥಳೀಯ ಸಂಸ್ಥೆಗಳು ಮಾತ್ರ (ಕೋಷ್ಟಕ 4.8) ಗೊಬ್ಬರ ತಯಾರಿಕಾ ಘಟಕಗಳನ್ನು ಹೊಂದಿವೆ. ಅವುಗಳ ಒಟ್ಟು ಸರಾಸರಿ ಗಮನಿಸಿದಾಗ ಶೇಕಡ 21ರಷ್ಟು ಸ್ಥಳೀಯ ಸಂಸ್ಥೆಗಳು ತಮ್ಮಲ್ಲಿ ಉತ್ಪಾದನೆಯಾಗುವ ತ್ಯಾಜ್ಯದ ಶೇಕಡ 10ಕ್ಕಿಂತ ಕಡಿಮೆ ಪ್ರಮಾಣದ ತ್ಯಾಜ್ಯವನ್ನು ಗೊಬ್ಬರಕ್ಕೆ ಬಳಸಿಕೊಂಡು ಉಳಿದ ಶೇಕಡ 90ಕ್ಕಿಂತಲೂ ಹೆಚ್ಚಿನ ಪ್ರಮಾಣದ ತ್ಯಾಜ್ಯವು ಭೂಭರ್ತಿ ಮೂಲಕ ವಿಲೇವಾರಿ ಆಗುತ್ತಿದೆ. ಅಂಕಿ–ಅಂಶಗಳ ಪ್ರಕಾರ ಸರಾಸರಿ 6 ಶೇಕಡದಷ್ಟು ಪಂಚಾಯತ್‌ಗಳು ಮಾತ್ರ ಶೇಕಡ 70ಕ್ಕಿಂತ ಹೆಚ್ಚು ಸಾವಯವ ತ್ಯಾಜ್ಯವನ್ನು ಗೊಬ್ಬರ ತಯಾರಿಕೆಯಲ್ಲಿ ಬಳಸುತ್ತಿದೆ. ಗಮನಾರ್ಹವಾದ ಅಂಶವೆಂದರೆ ಶೇಕಡ 70ಕ್ಕಿಂತಲೂ ಹೆಚ್ಚು ಸಾವಯವ ತ್ಯಾಜ್ಯವನ್ನು ಗೊಬ್ಬರ ತಯಾರಿಕೆಯಲ್ಲಿ ಬಳಸುತ್ತಿರುವುದು ಗ್ರಾಮೀಣ ಸ್ಥಳೀಯ ಸಂಸ್ಥೆಗಳು.

## 4.4. ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ಬಗ್ಗೆ ಜನರ ಪ್ರತಿಕ್ರಿಯೆ

ಕ್ಷೇತ್ರ ಕಾರ್ಯದಲ್ಲಿ ಎಲ್ಲಾ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ನಿರ್ವಹಣೆಯನ್ನು ಕೈಗೊಂಡಿದ್ದರೂ ಅವುಗಳ ಅನುಷ್ಠಾನದಲ್ಲಿ ಏಕರೀತಿ ಇಲ್ಲದಿರುವುದು ಕಂಡು ಬಂದಿದೆ. ಮೂಲದಲ್ಲಿ ತ್ಯಾಜ್ಯ ವಿಭಜನೆಯಿಂದ ಪ್ರಾರಂಭಿಸಿ, ಕೊನೆಯ ವಿಲೇವಾರಿ ಹಂತದ ತನಕ ಅನೇಕ ವ್ಯತ್ಯಾಸಗಳು ಕಂಡು ಬಂದಿದ್ದು, ಇದಕ್ಕೆ ಬೇರೆ ಬೇರೆ ಕಾರಣಗಳನ್ನು ಗುರುತಿಸಲಾಗಿದೆ. ಅನುಷ್ಠಾನಕ್ಕೆ ಸಂಬಂಧ ಪಟ್ಟಂತೆ ಜನರ ಅಭಿಪ್ರಾಯ, ತಿಳುವಳಿಕೆ ಮತ್ತು ಸಲಹೆಗಳನ್ನು ಪಡೆಯುವ ಪ್ರಯತ್ನ ಮಾಡಲಾಗಿದೆ. ಮುಂದಿನ ಭಾಗದಲ್ಲಿ ಈ ಬಗ್ಗೆ ದೊರೆತ ಅಂಕಿ–ಅಂಶಗಳ ವಿಶ್ಲೇಷಣೆ ಮಾಡಲಾಗಿದೆ. ಈ

ವಿಶ್ಲೇಷಣೆಯಲ್ಲಿ ಮುಖ್ಯವಾಗಿ ಜನರಿಂದ ದೊರೆತ ಮಾಹಿತಿಯನ್ನು ಗ್ರಾಮೀಣ ಹಾಗೂ ನಗರ ಎಂದು ವಿಭಾಗಿಸಿ ಚರ್ಚೆಗೆ ಒಳಪಡಿಸಲಾಗಿದೆ.

ತ್ಯಾಜ್ಯ ವಿಲೇವಾರಿಗೆ ಸಂಬಂಧಿಸಿ ಸ್ಥಳೀಯ ಸಂಸ್ಥೆಗಳು ಗೊಬ್ಬರ ತಯಾರಿಕೆ, ಮರುತ್ಪಾದನಾ ಘಟಕಗಳಿಗೆ ಉಪಯೋಗವಾಗುವ ತ್ಯಾಜ್ಯಗಳ ಮಾರಾಟ, ಗೊಬ್ಬರ ತಯಾರಿಕಾ ವಿಧಾನಗಳು, ದಹಿಸುವಿಕೆ, ಭೂಭರ್ತಿ ಮುಂತಾದ ಕ್ರಮಗಳನ್ನು ಕೈಗೊಳ್ಳುತ್ತಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ನಾಗರಿಕರಿಗೆ ಸ್ಥಳೀಯ ಸಂಸ್ಥೆಗಳು ಮಾಡುತ್ತಿರುವ ಕೆಲಸದ ಬಗ್ಗೆ ಮಾಹಿತಿ ಇದ್ದಾಗ ಅವರಿಂದ ಹೆಚ್ಚು ಸಹಕಾರ ಹಾಗೂ ಅವರಲ್ಲಿ ಈ ಬಗ್ಗೆ ಹೆಚ್ಚಿನ ಜಾಗೃತಿ ಮೂಡಿಸುತ್ತದೆ. ಈ ದೃಷ್ಟಿಯಿಂದ ಸ್ಥಳೀಯ ಸಂಸ್ಥೆಗಳೂ ಈ ಬಗ್ಗೆ ನಾಗರಿಕರಿಗೆ ಮಾಹಿತಿ ನೀಡಿದರೆ ಉತ್ತಮ ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಕೋಷ್ಟಕ 4.10ರಲ್ಲಿ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ನಿರ್ವಹಣೆಗೆ ಸಂಬಂಧಪಟ್ಟು ಮಾಡುತ್ತಿರುವ ಕೆಲಸದ ಬಗ್ಗೆ ಮಾಹಿತಿ ಹೊಂದಿರುವ ನಾಗರಿಕರ ಅಂಕಿ-ಅಂಶವನ್ನು ನೀಡಲಾಗಿದೆ.

**ಕೋಷ್ಟಕ 4.10**

**ತ್ಯಾಜ್ಯ ವಿಲೇವಾರಿ ಬಗ್ಗೆ ದಕ್ಷಿಣ ಕನ್ನಡ ಜಿಲ್ಲೆಯ ಸ್ಥಳೀಯ ಸಂಸ್ಥೆಗಳು ಮಾಡುತ್ತಿರುವ ಕೆಲಸದ ಬಗ್ಗೆ ಮಾಹಿತಿ ಹೊಂದಿರುವ ಪ್ರತಿಕ್ರಿಯೆದಾರರು**

| ಪ್ರತಿಕ್ರಿಯೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಒಟ್ಟು ಶೇಕಡ |
|---|---|---|---|---|---|---|
| 1 ಹೌದು | 164 | 82 | 187 | 89 | 351 | 86 |
| 2 ಇಲ್ಲ | 36 | 18 | 23 | 11 | 59 | 14 |
| **ಒಟ್ಟು** | **200** | **100** | **210** | **100** | **410** | **100** |

ಮೇಲಿನ ಕೋಷ್ಟಕವನ್ನು ಗಮನಿಸಿದರೆ ಗ್ರಾಮೀಣ ಪ್ರದೇಶದ ಒಟ್ಟು 200 ಪ್ರತಿಕ್ರಿಯೆದಾರರಲ್ಲಿ 164 ಅಂದರೆ ಶೇಕಡ 82ರಷ್ಟು ಮಂದಿಗೆ ತಮ್ಮ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದಂತೆ ನಡೆಯುವ ಕೆಲಸಗಳ ಬಗ್ಗೆ ಅಂದರೆ ತ್ಯಾಜ್ಯ ಸಂಗ್ರಹ, ಸಾಗಾಟ ಮತ್ತು ವಿಲೇವಾರಿಗೆ ಸಂಬಂಧಿಸಿದ ಮಾಹಿತಿ ಇದೆ. ನಗರ ಪ್ರದೇಶದ 210 ಪ್ರತಿಕ್ರಿಯೆದಾರರಲ್ಲಿ ಶೇಕಡ 89 ಮಂದಿಗೆ ಈ ಬಗ್ಗೆ ತಿಳುವಳಿಕೆ ಇದೆ. ಒಟ್ಟು ಸರಾಸರಿ 86 ಶೇಕಡ ಜನರು ತಿಳುವಳಿಕೆ ಹೊಂದಿದವರಾಗಿದ್ದಾರೆ. ಈ ಮೂಲಕ ಸ್ಥಳೀಯ ಸಂಸ್ಥೆಗಳು ತಾವು ನಿರ್ವಹಿಸುವ ಕೆಲಸದ ಬಗ್ಗೆ ಜನರಿಗೆ ತಿಳಿಸಲು ಯಶಸ್ವಿಯಾಗಿರುವುದು ತಿಳಿದು ಬರುತ್ತದೆ.ಇದರೊಂದಿಗೆ ಜನರೂ ತಮ್ಮ ವ್ಯಾಪ್ತಿಯ ಸ್ಥಳೀಯ ಸಂಸ್ಥೆಗಳ ಕಾರ್ಯವೈಖರಿಯನ್ನು ಗಮನಿಸುತ್ತಿದ್ದಾರೆ ಎಂದು ಅಭಿಪ್ರಾಯಕ್ಕೆ ಬರಬಹುದು. ಒಟ್ಟಿನಲ್ಲಿ ತ್ಯಾಜ್ಯ ನಿರ್ವಹಣೆ ಎಷ್ಟು ಮುಖ್ಯವೋ ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಜನರಿಗೆ ಒದಗಿಸುವುದೂ ಅಷ್ಟೇ ಮುಖ್ಯ. ಈ ಮೂಲಕ

ಹೆಚ್ಚಿನ ಜನಜಾಗೃತಿ ಮೂಡಿಸಲು ಸಹಾಯವಾಗುತ್ತದೆ ಮತ್ತು ಸ್ಥಳೀಯ ಸಂಸ್ಥೆಗಳು ನಾಗರಿಕರಿಂದ ಹೆಚ್ಚಿನ ಸಹಕಾರವನ್ನು ಅಪೇಕ್ಷಿಸಬಹುದು.

ಬೊಜಿಂಗ್ ಜೊಸೆಫ್ ಮಾರ್ಪೊ ಮತ್ತು ಔಸು ವಿಕ್ಟರ್ (2011)[12]ಇವರ ಅಧ್ಯಯನದಲ್ಲಿ ಘಾನ ದೇಶದ ಕುಮಾಸಿ ಮೆಟ್ರೊಪಾಲಿಸಿಯಲ್ಲಿ ಗೃಹತ್ಯಾಜ್ಯ ಸಂಗ್ರಹ ಮತ್ತು ನಿರ್ವಹಣೆಯನ್ನು 4 ರೀತಿಯಲ್ಲಿ ನಿರ್ವಹಿಸುತ್ತಾರೆ. ಅವುಗಳೆಂದರೆ ಮನೆ–ಮನೆ–ಸಂಗ್ರಹ, ಪಾವತಿಸಿ ತ್ಯಾಜ್ಯ ನೀಡುವ ಪದ್ಧತಿ, ಮನೆಯ ಆವರಣದಲ್ಲೇ ತ್ಯಾಜ್ಯ ಗುಂಡಿಗಳ ನಿರ್ಮಾಣ ಮತ್ತು ಸಂಗ್ರಹವಾಗದ ತ್ಯಾಜ್ಯ (ಯಾವುದೇ ಸಂಗ್ರಹ ವಿಧಾನ ಅನುಸರಿಸದಿರುವುದು) ಆದಾಗ್ಯೂ ಮನೆ–ಮನೆ ಸಂಗ್ರಹ ಹಾಗೂ ಪಾವತಿಸಿ ತ್ಯಾಜ್ಯ ನೀಡುವ ಪ್ರಮಾಣ ಹೆಚ್ಚು ಜನಪ್ರಿಯವಾಗಿದೆ.ಮನೆ–ಮನೆ ಸಂಗ್ರಹ ವಿಧಾನದಲ್ಲಿ ಪ್ರತಿ ಮನೆಗೂ ಸಂಗ್ರಹ ತೊಟ್ಟಿಯನ್ನು ಸಾಲದ ರೂಪದಲ್ಲಿ ನೀಡಲಾಗುತ್ತದೆ. ಸದಸ್ಯರ ಸಂಖ್ಯೆ ಹೆಚ್ಚಿರುವ ಕುಟುಂಬಗಳು ಹಣಪಾವತಿಸಿ ತ್ಯಾಜ್ಯ ಎಸೆಯುವ ವಿಧಾನವನ್ನು ಅನುಸರಿಸುತ್ತಾರೆ. ಮನೆ–ಮನೆ ಸಂಗ್ರಹ ವಿಧಾನವನ್ನು ದೊಡ್ಡ ಕುಟುಂಬಗಳು ಹೆಚ್ಚು ಬಯಸುವುದಿಲ್ಲ, ಕಾರಣ ಅಧಿಕ ಹಣಕಾಸಿನ ಹೊರೆ.

ಇದೇ ವಿಧಾನವನ್ನು ಕರ್ನಾಟಕದಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಅಳವಡಿಸಿದ್ದು, ನಂತರ ಇದೇ ಮಾದರಿಯನ್ನು ಕರ್ನಾಟಕದಾದ್ಯಂತ ಅನೇಕ ಸ್ಥಳೀಯ ಸಂಸ್ಥೆಗಳು ಅನುಸರಿಸಿರುವುದು ಕಂಡುಬಂದಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೂ ಮಂಗಳೂರು ಮಹಾನಗರಪಾಲಿಕೆಯ ಕೆಲವು ವಾರ್ಡ್‌ಗಳಲ್ಲಿ ಹಾಗೂ ಬಂಟ್ವಾಳ ಪುರಸಭೆ ವ್ಯಾಪ್ತಿಯಲ್ಲಿ ತ್ಯಾಜ್ಯ ವಿಭಜನಾ ಕ್ರಮವನ್ನು ಉತ್ತೇಜಿಸಲು 2 ರೀತಿಯ ಬಕೆಟ್‌ಗಳನ್ನು ನೀಡಲಾಗಿದೆ. ಹಸಿರು ಬಣ್ಣದ ಬಕೆಟ್‌ನಲ್ಲಿ ಸಾವಯವ ತ್ಯಾಜ್ಯ (ಹಸಿಕಸ) ಮತ್ತು ಹಳದಿ ಬಣ್ಣದ ಬಕೆಟ್‌ನಲ್ಲಿ ಸಾವಯವವಲ್ಲದ (ಒಣಕಸ) ತ್ಯಾಜ್ಯ ಹಾಕುವಂತೆ ಸೂಚಿಸಲಾಗಿದೆ. ಕೆಲವು ಪಂಚಾಯತ್‌ಗಳೂ ಈ ಮೂಲದಲ್ಲಿ ತ್ಯಾಜ್ಯ ವಿಭಜನೆಗಾಗಿ ಈ ವಿಧಾನ ಅಳವಡಿಸಿರುವುದು ಕಂಡು ಬಂದಿದೆ. ಕ್ಷೇತ್ರಕಾರ್ಯದಲ್ಲಿ ಈ ಬಗ್ಗೆ ಕೇಳಲಾದ ಪ್ರಶ್ನೆಗೆ ಕೆಲವರು ಮನೆಯಲ್ಲಿ ಜಾಗದ ಕೊರತೆ ಇರುವುದರಿಂದ ಬಕೆಟ್/ ಡಬ್ಬಿಯ ಅವಶ್ಯಕತೆ ಇಲ್ಲವೆಂಬ ಅಭಿಪ್ರಾಯಕ್ಕೆ ಬಂದರೆ ಇನ್ನು ಕೆಲವರು ತಾವೇ ಸ್ವಯಂ ಇಚ್ಛೆಯಿಂದ ತ್ಯಾಜ್ಯ ವಿಭಜಿಸುತ್ತಿರುವುದು ಕಂಡುಬಂದಿದೆ. ಮತ್ತೆ ಕೆಲವರು ಸರಕಾರ ಕೊಟ್ಟರೆ ಉಪಯೋಗಿಸಬಹುದೆಂಬ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. ಕೋಷ್ಟಕ 4.11ರಲ್ಲಿ ತ್ಯಾಜ್ಯ ಸಂಗ್ರಹ ಮಾಡುವ ಬಕೆಟ್ ಅಥವಾ ಡಬ್ಬಿಯನ್ನು ಸ್ಥಳೀಯ ಸಂಸ್ಥೆ ಒದಗಿಸಬೇಕೆಂದು ಹಾಗೂ ಅದರ ಅವಶ್ಯಕತೆ ಇಲ್ಲವೆಂದು ಅಭಿಪ್ರಾಯ ವ್ಯಕ್ತಪಡಿಸಿರುವವರ ಮಾಹಿತಿ ನೀಡಲಾಗಿದೆ.

## ಕೋಷ್ಟಕ 4.11

**ದಕ್ಷಿಣ ಕನ್ನಡ ಜಿಲ್ಲೆಯ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯ ಸಂಗ್ರಹಿಸಲು ಬಕೆಟ್ ಅಥವಾ ಡಬ್ಬಿಯನ್ನು ಸ್ಥಳೀಯ ಸಂಸ್ಥೆ ಒದಗಿಸಬೇಕೆಂದು ಬಯಸುವ ಪ್ರತಿಕ್ರಿಯೆದಾರರು**

| ಪ್ರತಿಕ್ರಿಯೆ | ಗ್ರಾಮೀಣ | % | ನಗರ | % | ಒಟ್ಟು | ಒಟ್ಟು % |
|---|---|---|---|---|---|---|
| 1 ಹೌದು | 84 | 42 | 113 | 54 | 197 | 48 |
| 2 ಇಲ್ಲ | 116 | 58 | 97 | 46 | 213 | 52 |
| **ಒಟ್ಟು** | **200** | **100** | **210** | **100** | **410** | **100** |

ಮೇಲಿನ ಕೋಷ್ಟಕದ ಪ್ರಕಾರ ಗ್ರಾಮೀಣ ಪ್ರದೇಶದಲ್ಲಿ ಶೇಕಡ 42ರಷ್ಟು ಮಂದಿ ಬಕೆಟನ್ನು ಸ್ಥಳೀಯ ಸಂಸ್ಥೆ ಒದಗಿಸಬೇಕೆಂದು ಅಭಿಪ್ರಾಯಪಟ್ಟರೆ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ 210 ಪ್ರತಿಕ್ರಿಯೆದಾರರಲ್ಲಿ 113 ಮಂದಿಗೆ ಅಂದರೆ 54 ಶೇಕಡ ಜನರು ಬಕೆಟ್ ಒದಗಿಸಬೇಕೆಂದು ಬಯಸುತ್ತಾರೆ. ಕ್ಷೇತ್ರಕಾರ್ಯದಲ್ಲಿ ಕಂಡು ಬಂದಂತೆ ಕೆಲವರು ಬಕೆಟ್ ಪಡೆಯಲು ನಿರಾಕರಿಸುತ್ತಿದ್ದು, ತ್ಯಾಜ್ಯ ಸಂಗ್ರಹಕಾರರು ಪ್ರತಿನಿತ್ಯ ಬರದಿರುವುದರಿಂದ ಮೀನು, ಕೋಳಿ ಮುಂತಾದ ಮಾಂಸದ ತ್ಯಾಜ್ಯಗಳನ್ನು ಇವುಗಳಲ್ಲಿ ಸಂಗ್ರಹಿಸಿಡುವುದರಿಂದ ದುರ್ವಾಸನೆ ಹಾಗೂ ಆರೋಗ್ಯದ ಸಮಸ್ಯೆ ಎದುರಿಸಿರುವ ಬಗ್ಗೆ ನಾಗರಿಕರು ತಿಳಿಸಿದ್ದಾರೆ.

ಭಾರತ ಸರಕಾರವು ರೂಪಿಸಿ ಹೊರಡಿಸಿರುವ ಘನತ್ಯಾಜ್ಯ ಮತ್ತು ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣೆಯ ನಿಯಮ 2016ರಲ್ಲಿ ಸ್ಥಳೀಯ ಸರಕಾರದ ಜವಾಬ್ದಾರಿ ಮತ್ತು ಕರ್ತವ್ಯಗಳ ಪ್ರಕಾರ ಮೂಲದಲ್ಲಿ ಪ್ರತ್ಯೇಕಿಸಲ್ಪಟ್ಟ ಕಸವನ್ನು ಮನೆ–ಮನೆಗಳಿಂದ ಸಂಗ್ರಹಿಸುವುದು.

ಬೇಗಮ್ ಅರಾ ಆರ್ ಮತ್ತು ಪೆರೇರಾ ಜಾಕಲಿನ್ ಜೆ (2008)[13] ಇವರು ಮಲೇಶಿಯಾದ ಗುತ್ತಿಗೆದಾರರಲ್ಲಿ ತ್ಯಾಜ್ಯ ಉತ್ಪಾದನೆ, ಪುನರುತ್ಪಾದನೆ, ಬೇರ್ಪಡಿಸುವಿಕೆ ಮತ್ತು ಮೂಲದಲ್ಲಿ ಕಡಿತಗೊಳಿಸುವ ಬಗ್ಗೆ ಅವರ ಜಾಗೃತಿ ಮನೋಭಾವ ಮತ್ತು ವರ್ತನಾ ಸ್ಥಿತಿ ಬಗ್ಗೆ ನಡೆಸಿದ ಅಧ್ಯಯನದಲ್ಲಿ ತ್ಯಾಜ್ಯವನ್ನು ಮೂಲದಲ್ಲಿ ಕಡಿತಗೊಳಿಸುವ ಬಗ್ಗೆ ಭಾಗೀದಾರರಿಗೆ ಸಾಕಷ್ಟು ಜಾಗೃತಿ ಇಲ್ಲದಿರುವುದು ಕಂಡುಬಂದಿದೆ ಎಂದಿದ್ದಾರೆ.

ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡುವುದರಿಂದ ಮುಂದಿನ ಹಂತದಲ್ಲಿ ಸೂಕ್ತವಾದ ವಿಲೇವಾರಿ ವಿಧಾನ ಅನುಸರಿಸಲು ಸುಲಭವಾಗುತ್ತದೆ. ಆದರೆ ಜನರು ಈ ಬಗ್ಗೆ ತಿಳುವಳಿಕೆ ಹೊಂದಿದ್ದರೂ ಬೇರೆ ಬೇರೆ ಕಾರಣಗಳಿಂದ ತ್ಯಾಜ್ಯ ವಿಭಜನೆಗೆ ನಿರಾಸಕ್ತಿ ತೋರಿಸುತ್ತಿದ್ದಾರೆ. ಕೋಷ್ಟಕ 4.12ರಲ್ಲಿ ಮನೆ ಮನೆ ತ್ಯಾಜ್ಯ ಸಂಗ್ರಹ ಮಾಡುವ ಪ್ರಮಾಣ ಮತ್ತು ಅದರಲ್ಲಿ ವಿಭಜನೆಗೆ ಆದ್ಯತೆ ನೀಡುವ ತ್ಯಾಜ್ಯ ಸಂಗ್ರಹಕಾರರ ಬಗ್ಗೆ ವಿವರಣೆ ಇದೆ.

**ಕೋಷ್ಟಕ 4.12**

**ದಕ್ಷಿಣ ಕನ್ನಡ ಜಿಲ್ಲೆಯ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಮನೆ ಬಾಗಿಲಿಗೆ ಬಂದು ತ್ಯಾಜ್ಯ ಸಂಗ್ರಹಿಸುವವರ ಪ್ರಮಾಣ ಮತ್ತು ಮನೆ ಬಾಗಿಲಿಗೆ ಬಂದು ತ್ಯಾಜ್ಯ ಸಂಗ್ರಹಿಸುವವರಲ್ಲಿ ತ್ಯಾಜ್ಯವನ್ನು ವಿಭಜಿಸಿ ಕೊಡಲು ಹೇಳುವವರು**

| ಪ್ರತಿಕ್ರಿಯೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಒಟ್ಟು ಶೇಕಡ |
|---|---|---|---|---|---|---|
| 1 ಹೌದು | 98 | 49 | 160 | 76 | 258 | 63 |
| 2 ಇಲ್ಲ | 102 | 51 | 50 | 24 | 152 | 37 |
| **ಒಟ್ಟು** | **200** | **100** | **210** | **100** | **410** | **100** |

**ತ್ಯಾಜ್ಯವನ್ನು ವಿಭಜಿಸಿ ಕೊಡಲು ಹೇಳುವವರು**

| ಪ್ರತಿಕ್ರಿಯೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಒಟ್ಟು ಶೇಕಡ |
|---|---|---|---|---|---|---|
| 1 ಹೌದು | 94 | 47 | 92 | 44 | 186 | 72 |
| 2 ಇಲ್ಲ | 4 | 2 | 68 | 33 | 72 | 28 |
| **ಒಟ್ಟು** | **98** | **49** | **160** | **76** | **258** | **100** |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ 49 ಶೇಕಡ ಗ್ರಾಮೀಣ ಜನರು ತಮ್ಮ ವ್ಯಾಪ್ತಿಯಲ್ಲಿ ಮನೆ-ಮನೆ ತ್ಯಾಜ್ಯ ಸಂಗ್ರಹ ವ್ಯವಸ್ಥೆ ಇರುವುದನ್ನು ಧೃಢೀಕರಿಸಿದ್ದಾರೆ. ನಗರ ಪ್ರದೇಶದ 210 ಪ್ರತಿಕ್ರಿಯೆದಾರರಲ್ಲಿ 160 ಅಂದರೆ 76 ಶೇಕಡ ಜನರು ಮನೆ-ಮನೆ ಸಂಗ್ರಹ ವ್ಯವಸ್ಥೆ ಇದೆ ಎಂದಿದ್ದಾರೆ. ಒಟ್ಟು ಸರಾಸರಿ 63 ಶೇಕಡ ಪ್ರತಿಕ್ರಿಯೆದಾರರು ಮನೆ-ಮನೆ ತ್ಯಾಜ್ಯ ಸಂಗ್ರಹ ವ್ಯವಸ್ಥೆ ಇರುವುದನ್ನು ಒಪ್ಪಿಕೊಂಡಿದ್ದು, ನಗರ ಪ್ರದೇಶಗಳ ವ್ಯಾಪ್ತಿಯಲ್ಲಿ ಗ್ರಾಮೀಣ ಪ್ರದೇಶಗಳಿಗಿಂತ ಮನೆ-ಮನೆ ಸಂಗ್ರಹ ವ್ಯವಸ್ಥೆ ಅಧಿಕ ಇರುವುದು ಕಂಡು ಬಂದಿದೆ. ಒಟ್ಟು 410 ಪ್ರತಿಕ್ರಿಯೆದಾರರಲ್ಲಿ 152 ಮಂದಿ ಅಂದರೆ 37 ಶೇಕಡ ಮನೆ-ಮನೆ ಸಂಗ್ರಹ ವ್ಯವಸ್ಥೆ ಇಲ್ಲದಿರುವುದೂ ಹೇಳಿದ್ದಾರೆ. ಇವರಲ್ಲಿ 98 ಮಂದಿ ಗ್ರಾಮೀಣ ವ್ಯಾಪ್ತಿಯವರು ಹಾಗೂ 160 ಮಂದಿ ನಗರ ವ್ಯಾಪ್ತಿಯವರಾಗಿದ್ದಾರೆ. ತ್ಯಾಜ್ಯ ವಿಭಜನೆಗೆ ಸ್ಥಳೀಯ ಸರಕಾರ ಆದ್ಯತೆ ನೀಡಿದೆಯೇ ಎನ್ನುವ ಪ್ರಶ್ನೆಗೆ ಎಷ್ಟು ಮಂದಿ ಸಂಗ್ರಹಕಾರರು ತ್ಯಾಜ್ಯ ವಿಭಜಿಸಿ ಕೊಡಲು ಹೇಳುತ್ತಾರೆ ಎನ್ನುವುದರ ಮೂಲಕ ಉತ್ತರ ಕಂಡುಕೊಳ್ಳಲಾಗಿದೆ. ಗ್ರಾಮೀಣ ಪ್ರದೇಶದಲ್ಲಿ 96 ಶೇಕಡ ಸಂಗ್ರಹಕಾರರು ಮಾತ್ರ ವಿಭಜಿಸಿ ಕೊಡಲು ಒತ್ತಾಯಿಸುತ್ತಿದ್ದ ನಗರ ಪ್ರದೇಶದಲ್ಲಿ ಇದರ ಪ್ರಮಾಣ 58 ಶೇಕಡ ಇದೆ. ಹೋಲಿಕೆ ಮಾಡಿದಾಗ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ನಗರ ಸ್ಥಳೀಯ ಸಂಸ್ಥೆಗಳಿಗಿಂತ ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಹೆಚ್ಚಿನ ಆದ್ಯತೆ ನೀಡಿರುವುದು ಕಾಣುತ್ತದೆ. ಒಟ್ಟಾರೆ ಸರಾಸರಿ 72 ಶೇಕಡ ಸಂಗ್ರಹಕಾರರು ವಿಭಜನೆಗೆ ಆಗ್ರಹಿಸುತ್ತಾರೆ.

ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ಜನಜಾಗೃತಿ ಮೂಡಿಸುವ ಅಗತ್ಯವನ್ನು ಅಧ್ಯಯನಗಳು ತಿಳಿಸಿವೆ. ಅಗರ್ವಾಲ್ ಸುನೀತಾ ಮತ್ತು ಆರೋರಾ ಲಲಿತಾ (2013)[14]ಇವರ ಹೇಳಿಕೆಯಂತೆ ತ್ಯಾಜ್ಯ ನಿರ್ವಹಣೆ ವಿಷಯವನ್ನು ಗೃಹವಿಜ್ಞಾನ, ಪ್ರಾಣಿಶಾಸ್ತ್ರ, ಜೀವಶಾಸ್ತ್ರ, ಪರಿಸರ ವಿಜ್ಞಾನದಂತಹ ವಿಷಯಗಳಲ್ಲಿ ಪಠ್ಯವಾಗಿ ಸೇರಿಸಿಕೊಳ್ಳಬೇಕು. ರಾಜಸ್ಥಾನ ಮತ್ತು ಭಾರತದ ಇತರ ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ನಗರಪಾಲಿಕೆಗಳು ತ್ಯಾಜ್ಯ ನಿರ್ವಹಣೆ ಬಗ್ಗೆ ಸಾರ್ವತ್ರಿಕ ಶಿಕ್ಷಣ ಮತ್ತು ಜಾಗೃತಿ ಮೂಡಿಸುವ ಪ್ರತ್ಯೇಕ ವಿಭಾಗಗಳನ್ನು ತೆರೆದಿವೆ. ಬೇರೆ ಬೇರೆ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಸ್ವಯಂಸೇವಾ ಸಂಸ್ಥೆಗಳನ್ನು ತ್ಯಾಜ್ಯ ನಿರ್ವಹಣೆ ಜಾಗೃತಿ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಂತೆ ಸರಕಾರ ಉತ್ತೇಜನ ನೀಡಬೇಕು. ಸಾರ್ವಜನಿಕ ಜಾಗೃತಿ ಮತ್ತು ಸ್ಪಂದನೆಯ ಮೂಲಕ ಸುರಕ್ಷಿತ ತ್ಯಾಜ್ಯ ನಿರ್ವಹಣೆಯನ್ನು ಮಾಡಲು ಸಾಧ್ಯ.

ಸ್ಥಳೀಯ ಸಂಸ್ಥೆಗಳು ತಮ್ಮ ಕಛೇರಿಗಳ ವ್ಯಾಪ್ತಿಯಲ್ಲಿ ಗೋಡೆ ಬರಹ ಹಾಗೂ ಫಲಕಗಳ ಮೂಲಕ ನಿಯಮಾವಳಿಗಳು ಮತ್ತು ಸೂಚನೆಗಳನ್ನು ಪ್ರದರ್ಶಿಸಿರುವುದು ಕಂಡು ಬರುತ್ತದೆ. ಜನರು ಅನಧಿಕೃತವಾಗಿ ತ್ಯಾಜ್ಯ ಎಸೆಯುವ ಸಾರ್ವಜನಿಕ ಸ್ಥಳಗಳಲ್ಲಿಯೂ ಎಚ್ಚರಿಕೆ ಫಲಕಗಳನ್ನು ಹಾಕಿರುವುದನ್ನು ಗಮನಿಸಬಹುದು. ಅಧ್ಯಯನ ವ್ಯಾಪ್ತಿಯಲ್ಲಿ ತ್ಯಾಜ್ಯವನ್ನು ಅನಧಿಕೃತವಾಗಿ ಎಸೆಯುವುದಕ್ಕೆ ಸಂಬಂಧಿಸಿ ಸ್ಥಳೀಯ ಸಂಸ್ಥೆಗಳು ಹಾಕಿದ ಎಚ್ಚರಿಕೆ ಫಲಕಗಳನ್ನು ಜನ ಗಮನಿಸಿದ್ದಾರೆಯೇ ಎನ್ನುವುದನ್ನು ಕೋಷ್ಟಕ 4.13 ತಿಳಿಸುತ್ತದೆ.

**ಕೋಷ್ಟಕ 4.13**

**ತ್ಯಾಜ್ಯ ಎಸೆಯುವುದಕ್ಕೆ ಸಂಬಂಧಿಸಿ ದಕ್ಷಿಣ ಕನ್ನಡ ಜಿಲ್ಲೆಯ ಸ್ಥಳೀಯ ಸಂಸ್ಥೆಗಳು ಹಾಕಿದ ಎಚ್ಚರಿಕೆ ಫಲಕಗಳನ್ನು ಗಮನಿಸಿರುವವರು**

| ಪ್ರತಿಕ್ರಿಯೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಒಟ್ಟು ಶೇಕಡ |
|---|---|---|---|---|---|---|
| 1 ಹೌದು | 138 | 69 | 147 | 70 | 285 | 70 |
| 2 ಇಲ್ಲ | 62 | 31 | 63 | 30 | 125 | 30 |
| **ಒಟ್ಟು** | **200** | **100** | **210** | **100** | **410** | **100** |

ಒಟ್ಟು 200 ಗ್ರಾಮೀಣ ಪ್ರತಿಕ್ರಿಯೆದಾರರಿಂದ ಸಂಗ್ರಹಿಸಿದ ಮಾಹಿತಿ ಪ್ರಕಾರ 138 ಮಂದಿ ಎಚ್ಚರಿಕೆ ಫಲಕಗಳನ್ನು ಗಮನಿಸಿರುವುದು ತಿಳಿದು ಬಂದಿದೆ. ಅಂದರೆ ಶೇಕಡ 69 ರಷ್ಟು ಮಂದಿ ಎಚ್ಚರಿಕೆ ಫಲಕಗಳನ್ನು ಗಮನಿಸಿದ್ದಾರೆ. ನಗರ ಪ್ರದೇಶಗಳಲ್ಲಿಯೂ ಇಂತಹ ಎಚ್ಚರಿಕೆ ಫಲಕಗಳಿದ್ದು ಒಟ್ಟು 200 ಪ್ರತಿಕ್ರಿಯೆದಾರರಲ್ಲಿ 147 ಮಂದಿ ಅಂದರೆ 70 ಶೇಕಡದಷ್ಟು

ಗಮನಿಸಿದ್ದಾರೆ. ಎಚ್ಚರಿಕೆ ಫಲಕಗಳು ಅಗತ್ಯ ಮತ್ತು ಪರಿಣಾಮಕಾರಿ ಎನ್ನುವುದು ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಬರುವ ಪ್ರತಿಕ್ರಿಯೆದಾರರ ಅಭಿಪ್ರಾಯಗಳಿಂದ ವ್ಯಕ್ತವಾಗಿದೆ. ಸರಾಸರಿ 70 ಶೇಕಡ ಜನ ಎಚ್ಚರಿಕೆ ಫಲಕಗಳನ್ನು ಗಮನಿಸಿರುವುದರಿಂದ ಅಗತ್ಯವಿರುವಲ್ಲಿ ಇನ್ನಷ್ಟು ಎಚ್ಚರಿಕೆ ಫಲಕಗಳನ್ನು ಅಳವಡಿಸುವುದು ಸೂಕ್ತ.

ಭಾರತ ಸರ್ಕಾರವು ರೂಪಿಸಿ ಹೊರಡಿಸಿರುವ ನಿಯಮಾವಳಿ–ಘನ ತ್ಯಾಜ್ಯ ಮತ್ತು ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣೆಯ ನಿಯಮ–2016ರಲ್ಲಿ ಸ್ಥಳೀಯ ಸರಕಾರದ ಜವಾಬ್ದಾರಿ ಮತ್ತು ಕರ್ತವ್ಯಗಳನ್ನು ನೀಡಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಇರುವ ನಿಯಮಾವಳಿಗಳೆಂದರೆ– ಮೂಲದಲ್ಲಿ ಪ್ರತ್ಯೇಕಿಸಲ್ಪಟ್ಟ ಕಸವನ್ನು ಮನೆ–ಮನೆಗಳಿಂದ ಸಂಗ್ರಹಿಸವುದು, ತ್ಯಾಜ್ಯ ಸಂಗ್ರಹಣೆಗೆ ಅನುಕೂಲವಾಗುವ ರೀತಿಯಲ್ಲಿ ನಿಯಮಗಳನ್ನು ರೂಪಿಸುವುದು, ಪ್ರತ್ಯೇಕಿಸಲ್ಪಟ್ಟ ಕಸಗಳನ್ನು ಸುಲಭವಾಗಿ ಸಾಗಿಸಲು ಅನುಕೂಲ ಮಾಡಿಕೊಡುವುದು, ಮನೆಗಳಲ್ಲಿ ಉತ್ಪತ್ತಿಯಾಗುವ ಅಪಾಯಕಾರಿ ತ್ಯಾಜ್ಯಗಳು ಮತ್ತು ಕಸಗಳನ್ನು ಸಂಗ್ರಹಿಸಲು ಸುಸಜ್ಜಿತ ಕೊಠಡಿಗಳಿಗೆ ವ್ಯವಸ್ಥೆ ಕಲ್ಪಿಸುವುದು, ಕಸ ಸಂಗ್ರಹಣಕಾರರಿಗೆ ಕಸವನ್ನು ಸುಡದಂತೆ, ಕಸ ನಿರ್ವಹಣೆ ಕುರಿತು ತರಬೇತಿ ನೀಡುವುದು ಮತ್ತು ಮಾರುಕಟ್ಟೆ ಸಮೀಪವಿರುವಂತೆ ಘನ ತ್ಯಾಜ್ಯ ಘಟಕಗಳನ್ನು ನಿರ್ಮಿಸಿ ಗೊಬ್ಬರ ತಯಾರಿಕೆಗೆ ಮುಂದಾಗುವುದು.

ಅಧ್ಯಯನ ವ್ಯಾಪ್ತಿಯಲ್ಲಿ ಸಾಮಾನ್ಯವಾಗಿ ಎರಡು ರೀತಿಯ ತ್ಯಾಜ್ಯ ಸಂಗ್ರಹಣಾ ವ್ಯವಸ್ಥೆ ಇದೆ. ಮೊದಲನೆಯದಾಗಿ ಜನರು ಸಾರ್ವಜನಿಕ ತೊಟ್ಟಿಯಲ್ಲಿ ಹಾಕುವುದು. ಅದನ್ನು ಸ್ಥಳೀಯ ಸಂಸ್ಥೆ ಸಂಗ್ರಹಿಸಿ ವಿಲೇವಾರಿ ಮಾಡುತ್ತದೆ. ಆದರೆ ಕೋರ್ಟು ಆದೇಶದ ಪಾಲನೆಗೋಸ್ಕರ ಅಗತ್ಯವಿದ್ದರೂ ಸಹ ಸಾರ್ವಜನಿಕ ತೊಟ್ಟಿಗಳನ್ನು ಹೆಚ್ಚಿನ ಎಲ್ಲಾ ಸ್ಥಳೀಯ ಸಂಸ್ಥೆಗಳು ತೆಗೆದಿರುವ ಕಾರಣ ಕೆಲವೊಂದು ಪ್ರದೇಶದಲ್ಲಿ ಜನರು ಹಿಂದೆ ತೊಟ್ಟಿ ಇದ್ದ ಜಾಗದಲ್ಲಿ ಅನಧಿಕೃತವಾಗಿ ತ್ಯಾಜ್ಯ ಎಸೆಯುವುದು ಕಂಡು ಬಂದಿದೆ. ಇಂತಹ ಜಾಗಗಳನ್ನು 'ಕಪ್ಪು ಪ್ರದೇಶ' (ಬ್ಲಾಕ್ ಸ್ಪಾಟ್) ಗಳೆಂದು ಗುರುತಿಸಲಾಗಿದೆ. ಎಚ್ಚರಿಕೆ ಫಲಕಗಳನ್ನು ಅಳವಡಿಸಿದರೂ ಜನರು ಅನಿವಾರ್ಯವಾಗಿ ತ್ಯಾಜ್ಯ ಹಾಕಬೇಕಾದ ಪರಿಸ್ಥಿತಿ ಇದೆ. ಕೆಲವೊಂದು ಪ್ರದೇಶಗಳಲ್ಲಿ ಮನೆ–ಮನೆ ತ್ಯಾಜ್ಯ ಸಂಗ್ರಹ ಅಸಾಧ್ಯವಾದ ಕಾರಣ ಸಾರ್ವಜನಿಕ ತೊಟ್ಟಿಯ ಅವಶ್ಯಕತೆ ಇದೆ. ಹಾಗೆಯೇ ಬಸ್‌ನಿಲ್ದಾಣ, ಸಾರ್ವಜನಿಕ ಉದ್ಯಾನ, ಪ್ರವಾಸಿ ತಾಣ ಮುಂತಾದ ಸ್ಥಳಗಳಲ್ಲಿ ತ್ಯಾಜ್ಯ ಸಂಗ್ರಹ ತೊಟ್ಟಿಯ ಅವಶ್ಯಕತೆ ಇದೆ.

ಎರಡನೇ ವಿಧಾನ ಮನೆ–ಮನೆ ತ್ಯಾಜ್ಯ ಸಂಗ್ರಹ, ಈ ಎರಡೂ ವಿಧಾನಗಳಲ್ಲಿಯೂ ತ್ಯಾಜ್ಯ ಸಂಗ್ರಹಕಾರರ ಅವಶ್ಯಕತೆಯಿದ್ದು ಕೆಲವು ಸಂಸ್ಥೆಗಳು ತಮ್ಮ ಪೌರಕಾರ್ಮಿಕರನ್ನು

ಬಳಸಿಕೊಂಡರೆ, ಕೆಲವು ಸಂಸ್ಥೆಗಳು ಹೊರಗುತ್ತಿಗೆ ನೀಡಿದ್ದಾರೆ. ಕೋಷ್ಟಕ 4.14ರಲ್ಲಿ ತ್ಯಾಜ್ಯ ಸಂಗ್ರಹಿಸುವವರ ವಿವರ ನೀಡಲಾಗಿದೆ.

**ಕೋಷ್ಟಕ 4.14**

**ದಕ್ಷಿಣ ಕನ್ನಡ ಜಿಲ್ಲೆಯ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯವನ್ನು ಸಂಗ್ರಹಿಸುವವರು**

| | ಸಂಗ್ರಹಿಸುವವರು | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಒಟ್ಟು ಶೇಕಡ |
|---|---|---|---|---|---|---|---|
| 1 | ಸ್ಥಳೀಯ ಸಂಸ್ಥೆಯ ಪೌರಕಾರ್ಮಿಕರು/ ವಾಹನ | 98 | 49 | 119 | 56 | 217 | 53 |
| 2 | ಖಾಸಗಿ ವ್ಯವಸ್ಥೆ /ಹೊರಗುತ್ತಿಗೆ | 4 | 2 | 40 | 19 | 44 | 11 |
| 3 | ಸ್ವಯಂ ಸೇವಾ ಸಂಸ್ಥೆಗಳು | 0 | 0 | 11 | 5 | 11 | 03 |
| 4 | ಸ್ವತಃ ಹೋಗಿ ಸಾರ್ವಜನಿಕ ತೊಟ್ಟಿಯಲ್ಲಿ ಹಾಕುವುದು | 98 | 49 | 40 | 19 | 138 | 33 |
| | ಒಟ್ಟು | **200** | **100** | **210** | **100** | **410** | **100** |

ಗ್ರಾಮೀಣ ಪ್ರತಿಕ್ರಿಯೆದಾರರಲ್ಲಿ ಶೇಕಡ 49ರಷ್ಟು ಮಂದಿ ಪೌರಕಾರ್ಮಿಕರು ಕಸ ಸಂಗ್ರಹಿಸುತ್ತಾರೆ ಎಂದಿದ್ದಾರೆ. ಉಳಿದ 2 ಶೇಕಡ ಜನರು ಖಾಸಗಿ/ಹೊರಗುತ್ತಿಗೆ ನೀಡಿದ ಸಂಸ್ಥೆಗಳು ಸಂಗ್ರಹಿಸುತ್ತಾರೆ ಎನ್ನುವ ಮಾಹಿತಿ ನೀಡಿದ್ದಾರೆ. ಶೇಕಡ 49ರಷ್ಟು ಪ್ರತಿಕ್ರಿಯೆದಾರರು ತಾವೇ ಸ್ವತಃ ಹೋಗಿ ತೊಟ್ಟಿಯಲ್ಲಿ ಅಥವಾ ರಸ್ತೆಬದಿಯಲ್ಲಿ ಸಾಮಾನ್ಯವಾಗಿ ಕಸಹಾಕುವ ಜಾಗದಲ್ಲಿ ಬಿಸಾಡುತ್ತಿರುವುದಾಗಿ ತಿಳಿಸಿದ್ದಾರೆ. ಆದರೆ ನಗರ ಪ್ರದೇಶದಲ್ಲಿ ಮನೆ-ಮನೆ ಕಸ ಸಂಗ್ರಹಕ್ಕೆ ಆದ್ಯತೆ ಇದ್ದು 53 ಶೇಕಡದಷ್ಟು ಪ್ರತಿಕ್ರಿಯೆದಾರರು ಪೌರ ಕಾರ್ಮಿಕರೇ ಸಂಗ್ರಹಿಸುತ್ತಾರೆ ಎಂದಿದ್ದಾರೆ. ಈ ಜನಾಭಿಪ್ರಾಯದ ಮೂಲಕ ತಿಳಿದು ಬರುವುದೇನೆಂದರೆ ಅಗತ್ಯವಿರುವಲ್ಲಿ ಮತ್ತೆ ಸಾರ್ವಜನಿಕ ತೊಟ್ಟಿಗಳನ್ನು ಅಳವಡಿಸಬೇಕು. ಇಲ್ಲದೇ ಹೋದರೆ ಜನರಿಗೆ ಅನಧಿಕೃತ ಜಾಗಗಳಲ್ಲಿ ತ್ಯಾಜ್ಯ ಎಸೆಯಲು ಅನುವು ಮಾಡಿ ಕೊಟ್ಟಂತಾಗುತ್ತದೆ.

ತ್ಯಾಜ್ಯ ನಿರ್ವಹಣೆ ಯಶಸ್ವಿಯಾಗಬೇಕಾದರೆ ಭಾಗೀದಾರರ ಸಹಕಾರ ಅಗತ್ಯ. ನಾಗರಿಕರ ಸಹಕಾರ ಎಷ್ಟು ಅಗತ್ಯವೋ ಸರಕಾರದ ಕಾರ್ಯ ವೈಖರಿಯೂ ಅಷ್ಟೇ ಪ್ರಮುಖವಾದುದು. ಸ್ಥಳೀಯ ಸರಕಾರಗಳು ಜನರಿಗೆ ತೃಪ್ತಿಕರವಾದ ಸೇವೆ ಒದಗಿಸಿದಾಗ, ನಾಗರಿಕರೂ ಅದಕ್ಕೆ ಪೂರಕವಾಗಿ ಸ್ಪಂದಿಸುತ್ತಾರೆ. ಕೋಷ್ಟಕ 4.15ರಲ್ಲಿ ಸ್ಥಳೀಯ ಸರಕಾರಗಳು ತ್ಯಾಜ್ಯ ನಿರ್ವಹಣೆಯಲ್ಲಿ ಜನರಿಗೆ ತೃಪ್ತಿಕರವಾಗುವ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆಯೇ ಎಂಬ ಪ್ರಶ್ನೆಗೆ ನೀಡಿದ ಪ್ರತಿಕ್ರಿಯೆಯ ಅಂಕಿ-ಅಂಶ ನೀಡಲಾಗಿದೆ.

**ಕೋಷ್ಟಕ 4.15**

**ತ್ಯಾಜ್ಯ ನಿರ್ವಹಣೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸ್ಥಳೀಯ ಸರಕಾರಗಳು ನಿರ್ವಹಿಸುವ ಕೆಲಸದ ಬಗ್ಗೆ ನಾಗರಿಕರ ಪ್ರತಿಕ್ರಿಯೆ**

| ತೃಪ್ತಿಕರವಾಗಿದೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಒಟ್ಟು ಶೇಕಡ |
|---|---|---|---|---|---|---|
| 1 ದೃಢವಾಗಿ ಸಮ್ಮತಿಸುತ್ತೇನೆ | 36 | 18 | 27 | 13 | 63 | 15 |
| 2 ಸಮ್ಮತಿಸುತ್ತೇನೆ | 128 | 64 | 111 | 53 | 238 | 58 |
| 3 ಏನೂ ಹೇಳಲಾರೆ | 24 | 12 | 25 | 12 | 49 | 12 |
| 4 ಸಮ್ಮತಿಸುವುದಿಲ್ಲ | 8 | 4 | 23 | 11 | 31 | 8 |
| 5 ದೃಢವಾಗಿ ಸಮ್ಮತಿಸುವುದಿಲ್ಲ | 4 | 2 | 25 | 12 | 29 | 7 |
| ಒಟ್ಟು | **200** | **100** | **210** | **100** | **410** | **100** |

'ಲಿಕರ್ಟ್ ಸ್ಕೇಲ್' ವಿಧಾನದಲ್ಲಿ ಸ್ಥಳೀಯ ಸರಕಾರಗಳು ನಿರ್ವಹಿಸುವ ಕೆಲಸದ ಬಗ್ಗೆ ಜನಾಭಿಪ್ರಾಯವನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಲಾಗಿದೆ. ನಾಗರಿಕರ ಅಭಿಪ್ರಾಯವನ್ನು 5 ರೀತಿಯಲ್ಲಿ ಕ್ರೋಡೀಕರಿಸಲಾಗಿದೆ. ಗ್ರಾಮೀಣ ಸ್ಥಳೀಯ ಸರಕಾರಗಳ ವ್ಯಾಪ್ತಿಯ 200 ಪ್ರತಿಕ್ರಿಯೆದಾರರಲ್ಲಿ 18 ಶೇಕಡದಷ್ಟು ಸರಕಾರದ ಕೆಲಸವನ್ನು ದೃಢವಾಗಿ ಸಮ್ಮತಿಸಿದ್ದಾರೆ. ಅವರಲ್ಲಿ 12 ಶೇಕಡದಷ್ಟು ಜನ 'ಏನೂ ಹೇಳಲಾರೆ' ಎಂದು ತಟಸ್ಥವಾಗಿದ್ದರೆ ಕೇವಲ 2 ಶೇಕಡದಷ್ಟು ಜನ 'ದೃಢವಾಗಿ ಸಮ್ಮತಿಸುವುದಿಲ್ಲ'. ಅಂದರೆ ಅವರಿಗೆ ಸರಕಾರವು ತ್ಯಾಜ್ಯ ನಿರ್ವಹಣೆ ಬಗ್ಗೆ ಕೈಗೊಂಡ ಕಾರ್ಯಗಳ ಬಗ್ಗೆ ಸಂಪೂರ್ಣ ಅತೃಪ್ತಿಯಿದೆ. ಇದೇ ಮಾನದಂಡದಲ್ಲಿ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಬರುವ ನಿವಾಸಿಗಳ ಅಭಿಪ್ರಾಯವೂ ಹೆಚ್ಚು ಭಿನ್ನವಾಗಿಲ್ಲ. ಇವರಲ್ಲಿ 15 ಶೇಕಡ ಜನ 'ದೃಢವಾಗಿ ಸಮ್ಮತಿಸಿದರೆ' 12 ಶೇಕಡ ಜನ ತಟಸ್ಥವಾಗಿದ್ದಾರೆ.ನಗರ ವ್ಯಾಪ್ತಿಯ 7 ಶೇಕಡ ಜನ 'ದೃಢವಾಗಿ ಸಮ್ಮತಿಸುವುದಿಲ್ಲ' ಎಂದಿದ್ದಾರೆ. ಈ ಅಂಕಿ-ಅಂಶಗಳ ಮೂಲಕ ಸ್ಥಳೀಯ ಸರಕಾರಗಳು ಜನರ ನಿರೀಕ್ಷೆಗಳಿಗೆ ಸರಿಯಾಗಿ ಕಾರ್ಯ ನಿರ್ವಹಿಸುತ್ತಿವೆಯೇ ಎಂದು ಪರೀಕ್ಷಿಸಲಾಗಿದೆ. ಮೊದಲ ಎರಡು ಮಾನದಂಡಗಳಾದ 'ದೃಢವಾಗಿ ಸಮ್ಮತಿಸುತ್ತೇನೆ' ಮತ್ತು 'ಸಮ್ಮತಿಸುತ್ತೇನೆ'. ಇವುಗಳ ಒಟ್ಟು ಪ್ರಮಾಣ 63 ಶೇಕಡ ಇರುವುದನ್ನು ಗಮನಿಸಿದಾಗ ಎಲ್ಲಾ ಸ್ಥಳೀಯ ಸರಕಾರಗಳು ತ್ಯಾಜ್ಯ ನಿರ್ವಹಣೆಗೆ ಆದ್ಯತೆ ನೀಡುತ್ತಿದ್ದು, ಜನರ ನಿರೀಕ್ಷೆಗೆ ಸ್ಪಂದಿಸುತ್ತಿರುವುದು ಸಾಬೀತಾಗಿದೆ. ಕೇವಲ ಸರಾಸರಿ 7 ಶೇಕಡ ಜನ ಮಾತ್ರ ಸರಕಾರದ ಕೆಲಸವನ್ನು 'ದೃಢವಾಗಿ ಸಮ್ಮತಿಸುವುದಿಲ್ಲ' ಎಂದಿದ್ದಾರೆ. ಸ್ಥಳೀಯ ಸಂಸ್ಥೆಗಳು ಕಾಲಕಾಲಕ್ಕೆ ಜನರ ಅಭಿಪ್ರಾಯವನ್ನು ಮತ್ತು ಸಲಹೆ ಸೂಚನೆಗಳನ್ನು ಪಡೆದುಕೊಳ್ಳುವುದರ ಮೂಲಕ ನಿರ್ವಹಣೆಯ ಲೋಪದೋಷಗಳನ್ನು ಸರಿಪಡಿಸಿಕೊಳ್ಳಬಹುದು.

ತ್ಯಾಜ್ಯ ಸಾಗಾಟ ಮಾಡುವಾಗ ಕಸ ಚೆಲ್ಲದಂತೆ ಹಾಗೂ ಸಾರ್ವಜನಿಕರಿಗೆ ಇನ್ಯಾವುದೇ ರೀತಿಯಲ್ಲಿ ತೊಂದರೆಯಾಗದಂತೆ ಜಾಗ್ರತೆ ವಹಿಸುವುದು ಸ್ಥಳೀಯ ಸಂಸ್ಥೆಯ ಕರ್ತವ್ಯ. ಟ್ರಕ್, ರಿಕ್ಷಾ, ಟ್ರಾಕ್ಟರ್ ಮುಂತಾದ ವಾಹನಗಳಲ್ಲಿ ತ್ಯಾಜ್ಯವನ್ನು ಸಾಗಿಸುವಾಗ ಅದನ್ನು ಪ್ಲಾಸ್ಟಿಕ್/ ಟರ್ಪಲ್ ಮುಚ್ಚಿ ಸಾಗಿಸಬೇಕು. ಸಾಗಾಟ ಹಂತದಲ್ಲಿ ಸ್ಥಳೀಯ ಸಂಸ್ಥೆಗಳು ಎಚ್ಚರಿಕೆ ವಹಿಸುತ್ತವೆಯೇ ಎಂಬುದನ್ನು 'ಲಿಕರ್ಟ್ ಸ್ಕೇಲ್' ಮಾನದಂಡ ಬಳಸಿ ಪರೀಕ್ಷೆಗೆ ಒಳಪಡಿಸಲಾಗಿದೆ. ಕೋಷ್ಟಕ 4.16 ಈ ಬಗ್ಗೆ ಮಾಹಿತಿ ನೀಡುತ್ತದೆ.

**ಕೋಷ್ಟಕ 4.16**

**ದ.ಕ.ಜಿಲ್ಲೆಯ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯ ಸಾಗಾಟ ಮಾಡುವಾಗ ತ್ಯಾಜ್ಯವನ್ನು ಮುಚ್ಚಿ ಸಾಗಾಟ ಮಾಡುತ್ತಾರೆಯೇ ಎನ್ನುವ ಬಗ್ಗೆ ಪ್ರತಿಕ್ರಿಯೆದಾರರ ಅಭಿಪ್ರಾಯ**

| ಮುಚ್ಚಿ ಸಾಗಾಟ ಮಾಡುತ್ತಾರೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಒಟ್ಟು ಶೇಕಡ |
|---|---|---|---|---|---|---|
| 1 ದೃಢವಾಗಿ ಸಮ್ಮತಿಸುತ್ತೇನೆ | 16 | 8 | 10 | 5 | 26 | 6 |
| 2 ಸಮ್ಮತಿಸುತ್ತೇನೆ | 62 | 31 | 79 | 38 | 141 | 35 |
| 3 ಏನೂ ಹೇಳಲಾರೆ | 32 | 16 | 31 | 15 | 63 | 15 |
| 4 ಸಮ್ಮತಿಸುವುದಿಲ್ಲ | 40 | 20 | 61 | 29 | 101 | 25 |
| 5 ದೃಢವಾಗಿ ಸಮ್ಮತಿಸುವುದಿಲ್ಲ | 50 | 25 | 29 | 14 | 79 | 19 |
| ಒಟ್ಟು | **200** | **100** | **210** | **100** | **410** | **100** |

ಮೇಲಿನ ಕೋಷ್ಟಕದಂತೆ ಗ್ರಾಮೀಣ ಪ್ರದೇಶದ ಪ್ರತಿಕ್ರಿಯೆದಾರರಲ್ಲಿ 8 ಶೇಕಡ ಜನ ಮಾತ್ರ "ದೃಢವಾಗಿ' ಸಮ್ಮತಿಸಿದ್ದಾರೆ ಮತ್ತು 31 ಶೇಕಡ 'ಸಮ್ಮತಿಸಿದ್ದಾರೆ'. ಒಟ್ಟು 200 ಪ್ರತಿಕ್ರಿಯೆ ದಾರರಲ್ಲಿ 16 ಶೇಕಡದಷ್ಟು ಮಂದಿ ತಟಸ್ಥವಾಗಿದ್ದರೆ, 25 ಶೇಕಡ ಜನರು ಮುಚ್ಚಿ ಸಾಗಾಟ ಮಾಡುವುದಿಲ್ಲವೆಂದು ಧೃಢವಾಗಿ ಹೇಳಿದ್ದಾರೆ. ಅಂದರೆ ಗ್ರಾಮೀಣ ಪ್ರದೇಶದಲ್ಲಿ ಸಾಗಾಟ ಸಂದರ್ಭದಲ್ಲಿ ನಿರ್ಲಕ್ಷ್ಯ ತೋರುವುದು ಕಂಡು ಬರುತ್ತದೆ. ನಗರ ಪ್ರದೇಶದ 210 ಪ್ರತಿಕ್ರಿಯೆದಾರರಲ್ಲಿ ಕೇವಲ 5 ಶೇಕಡ ಮಾತ್ರ ಧೃಢವಾಗಿ ಸಮ್ಮತಿಸಿದರೆ, 38 ಶೇಕಡ ಜನ 'ಸಮ್ಮತಿಸಿದ್ದಾರೆ'. ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿಯೂ 29 ಶೇಕಡ ಜನ 'ಸಮ್ಮತಿಸುವುದಿಲ್ಲ' ಎಂದು ಪ್ರತಿಕ್ರಿಯೆ ನೀಡಿದರೆ, ಉಳಿದ 14 ಶೇಕಡ ಮಂದಿ, 'ಧೃಢವಾಗಿ ಸಮ್ಮತಿಸುವುದಿಲ್ಲ' ಎಂದಿದ್ದಾರೆ. ಒಟ್ಟು ಗ್ರಾಮೀಣ ಮತ್ತು ನಗರದ ಪ್ರತಿಕ್ರಿಯೆದಾರರ ಅಭಿಪ್ರಾಯವನ್ನು ವಿಶ್ಲೇಷಿಸಿದಾಗ ತ್ಯಾಜ್ಯ ಸಾಗಾಟ ಸಂದರ್ಭದಲ್ಲಿ ಸಾಕಷ್ಟು ಮುನ್ನೆಚ್ಚರಿಕೆ ವಹಿಸದಿರುವುದು ಕಂಡು ಬರುತ್ತದೆ. ಈ ಬಗ್ಗೆ ಸಾರ್ವಜನಿಕ ದೂರುಗಳು ದಾಖಲಾಗಿರುವುದು ಕ್ಷೇತ್ರ ಕಾರ್ಯದಲ್ಲಿ ತಿಳಿದು ಬಂದಿದೆ. ಮಂಗಳೂರು ಮಹಾನಗರ

ಪಾಲಿಕೆ ವ್ಯಾಪ್ತಿಯ ಕಸ ನಿರ್ವಹಣೆ ಮಾಡುವ 'ಅಂಟನಿ ವೇಸ್ಟ್ ಹ್ಯಾಂಡ್ಲಿಂಗ್' ಸಂಸ್ಥೆಯು ಸ್ವಯಂಚಾಲಿತ ಟ್ರಕ್‌ಗಳನ್ನು ಬಳಕೆ ಮಾಡುತ್ತಿದ್ದು, ತ್ಯಾಜ್ಯವನ್ನು ವಾಹನಕ್ಕೆ ತುಂಬಿಸಿದ ನಂತರ ಅದನ್ನು ಸ್ವಯಂಚಾಲಿತವಾಗಿ ಮುಚ್ಚುವ ವ್ಯವಸ್ಥೆ ಇದೆ. ಎಲ್ಲಾ ಸ್ಥಳೀಯ ಸಂಸ್ಥೆಗಳು ಈ ರೀತಿಯ ವಾಹನಗಳನ್ನು ಬಳಕೆ ಮಾಡಿದರೆ ಸಾಗಾಟ ವ್ಯವಸ್ಥೆಯು ಸುಸೂತ್ರವಾಗಿ ನಡೆಯಬಹುದು.

ಸ್ಥಳೀಯ ಸರ್ಕಾರಗಳ ಆಡಳಿತ ವ್ಯವಸ್ಥೆಯಲ್ಲಿ ಸಾರ್ವಜನಿಕರು, ಅಧಿಕಾರಿಗಳು ಹಾಗೂ ಜನಪ್ರತಿನಿಧಿಗಳು ಮೂರು ಪ್ರಮುಖ ಅಂಗಗಳಾಗಿರುತ್ತಾರೆ. ಸ್ಥಳೀಯ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಕಾರ್ಪೊರೇಟರ್‌ಗಳು/ಪಂಚಾಯತ್ ಸದಸ್ಯರು/ವಾರ್ಡ್ ಪ್ರತಿನಿಧಿಗಳು ಪ್ರಮುಖ ಪಾತ್ರವನ್ನು ವಹಿಸಬೇಕು. ತ್ಯಾಜ್ಯ ವಿಲೇವಾರಿಗೆ ಸಂಬಂಧಿಸಿ ಜನಪ್ರತಿನಿಧಿಗಳು ಗಮನ ಹರಿಸಿದಷ್ಟು ಸಮಸ್ಯೆ ಕಡಿಮೆಯಾಗುತ್ತದೆ ಎಂಬುದು ಸಾಮಾನ್ಯ ಗ್ರಹಿಕೆ. ಕೋಷ್ಟಕ 4.17ರಲ್ಲಿ ತ್ಯಾಜ್ಯ ನಿರ್ವಹಣೆ ಬಗ್ಗೆ ಜನಪ್ರತಿನಿಧಿಗಳು ಎಷ್ಟರ ಮಟ್ಟಿಗೆ ಗಮನ ಹರಿಸುತ್ತಾರೆ ಎಂಬುದನ್ನು 'ಲಿಕರ್ಟ್ ಸ್ಕೇಲ್' ವಿಧಾನದಲ್ಲಿ ಮಾಪನ ಮಾಡಲಾಗಿದೆ.

**ಕೋಷ್ಟಕ 4.17**

**ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜನಪ್ರತಿನಿಧಿಗಳು ತ್ಯಾಜ್ಯ ನಿರ್ವಹಣೆ ಬಗ್ಗೆ ಗಮನಹರಿಸುತ್ತಾರೆಯೇ? ಎನ್ನುವ ಬಗ್ಗೆ ಪ್ರತಿಕ್ರಿಯೆದಾರರ ಅಭಿಪ್ರಾಯ**

| ಗಮನಹರಿಸುತ್ತಾರೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಒಟ್ಟು ಶೇಕಡ |
|---|---|---|---|---|---|---|
| 1 ದೃಢವಾಗಿ ಸಮ್ಮತಿಸುತ್ತೇನೆ | 32 | 16 | 17 | 8 | 49 | 12 |
| 2 ಸಮ್ಮತಿಸುತ್ತೇನೆ | 76 | 38 | 76 | 36 | 152 | 37 |
| 3 ಏನೂ ಹೇಳಲಾರೆ | 60 | 30 | 63 | 30 | 123 | 30 |
| 4 ಸಮ್ಮತಿಸುವುದಿಲ್ಲ | 32 | 16 | 38 | 18 | 70 | 17 |
| 5 ದೃಢವಾಗಿ ಸಮ್ಮತಿಸುವುದಿಲ್ಲ | 0 | 0 | 15 | 7 | 15 | 4 |
| ಒಟ್ಟು | **200** | **100** | **210** | **100** | **410** | **100** |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಗ್ರಾಮೀಣ ಪ್ರದೇಶದ ಜನಪ್ರತಿನಿಧಿಗಳು ನಗರ ಪ್ರದೇಶದ ಜನಪ್ರತಿನಿಧಿಗಳು ಹೆಚ್ಚಿನ ಗಮನ ಹರಿಸುತ್ತಿರುವುದು ಕಂಡು ಬರುತ್ತದೆ. 'ದೃಢವಾಗಿ ಸಮ್ಮತಿಸುವುದಿಲ್ಲ' ಎನ್ನುವ ಅಭಿಪ್ರಾಯವನ್ನು ನಗರದ 7 ಶೇಕಡ ಜನ ನೀಡಿದರೆ ಗ್ರಾಮೀಣ ಪ್ರದೇಶದಲ್ಲಿ ಯಾರೂ ಆ ರೀತಿಯ ಅಭಿಪ್ರಾಯ ವ್ಯಕ್ತಪಡಿಸಿಲ್ಲ. ಒಟ್ಟು 410 ಪ್ರತಿಕ್ರಿಯೆದಾರರಲ್ಲಿ ಕೇವಲ 12 ಶೇಕಡ ಜನ ಮಾತ್ರ ದೃಢವಾಗಿ ಸಮ್ಮತಿಸಿದ್ದಾರೆ. ಸರಾಸರಿ 30 ಶೇಕಡ ಪ್ರತಿನಿಧಿಗಳು ಈ ಬಗ್ಗೆ 'ತಟಸ್ಥ' ಧೋರಣೆ ಹೊಂದಿದ್ದು 'ಏನೂ ಹೇಳಲಾರೆ' ಎನ್ನುವ ಪ್ರತಿಕ್ರಿಯೆ ವ್ಯಕ್ತ

ಪಡಿಸಿದ್ದಾರೆ. ಜನಪ್ರತಿನಿಧಿಗಳಿಗಿಂತ ಅಧಿಕಾರಿಗಳು ಹೆಚ್ಚಿನ ಮುತುವರ್ಜಿ ವಹಿಸುತ್ತಿರುವುದು ಕ್ಷೇತ್ರಕಾರ್ಯದಲ್ಲಿ ಕಂಡು ಬಂದಿದೆ. ತ್ಯಾಜ್ಯ ನಿರ್ವಹಣೆಯಲ್ಲಿ ಕರ್ತವ್ಯ ಲೋಪ ಎಸಗುವ ಪ್ರತಿನಿಧಿಗಳ ವಿರುದ್ಧವು ಕ್ರಮ ಕೈಗೊಳ್ಳಲು ಅವಕಾಶವಿರುವಂತೆ ನಿಯಮಗಳನ್ನು ರೂಪಿಸಬೇಕು.

ಮಾನಸಿ (2013)[15] ಇವರ ಅಧ್ಯಯನದ ಪ್ರಕಾರ ಕಸದ ರಾಶಿ ಹಾಕುವ ವೈಜ್ಞಾನಿಕ ವಿಧಾನದ ಅನುಪಸ್ಥಿತಿ ಬೆಂಗಳೂರು ನಗರಪಾಲಿಕೆಯಲ್ಲಿದೆ. ಎಲೆಕ್ಟ್ರಾನಿಕ್ ತ್ಯಾಜ್ಯಗಳನ್ನು ಸಂಗ್ರಹಿಸುವವರಿಗೆ ಸರಿಯಾದ ತರಬೇತಿ ಅಗತ್ಯವಿದೆ. ಶಾಲಾ ಮಕ್ಕಳಿಗೆ ಮತ್ತು ಸಾರ್ವಜನಿಕರಿಗೆ ಜಾಗೃತಿ ಮೂಡಿಸುವುದರ ಮೂಲಕವೂ ತ್ಯಾಜ್ಯ ಉತ್ಪಾದನೆ ಮತ್ತು ನಿರ್ವಹಣಾ ಸಮಸ್ಯೆಯನ್ನು ಕಡಿತಗೊಳಿಸಬಹುದು.

ಪೋತಿಮಾಮಕ ಜೆ.(2008)[16] ಇವರ ಅವಲೋಕನದಂತೆ 50 ಶೇಕಡಕ್ಕಿಂತಲೂ ಅಧಿಕ ಕುಟುಂಬಗಳು ತ್ಯಾಜ್ಯ ವಿಭಜನೆಯನ್ನು ಮಾಡುತ್ತಿಲ್ಲ. ಇವರ ಅಧ್ಯಯನದ ಪ್ರಕಾರ ಗೃಹಮಟ್ಟದಲ್ಲಿ ಸರಿಯಾದ ತ್ಯಾಜ್ಯ ನಿರ್ವಹಣೆ ವಿಧಾನಗಳನ್ನು ಅನುಸರಿಸುತ್ತಿಲ್ಲ. ಜನರಿಗೆ ತ್ಯಾಜ್ಯವನ್ನು ಮನೆ, ಕಛೇರಿ ಇನ್ನಿತರ ಕೆಲಸದ ಸ್ಥಳಗಳಲ್ಲಿ ನಿರ್ವಹಣೆ ಮಾಡುವ ವಿಧಾನಗಳ ಬಗ್ಗೆ ತರಬೇತಿಯನ್ನು ನೀಡಬೇಕು.

ಹೀಗೆ ತ್ಯಾಜ್ಯ ನಿರ್ವಹಣೆಯ ಸಮರ್ಪಕ ಅನುಷ್ಠಾನಕ್ಕೆ ಸಾರ್ವಜನಿಕರಲ್ಲಿ ಜನಜಾಗೃತಿ ಮೂಡಿಸುವ ಅವಶ್ಯಕತೆಯನ್ನು ಬೇರೆ ಬೇರೆ ಅಧ್ಯಯನಗಳು ತಿಳಿಸಿವೆ. ಕೋಷ್ಟಕ 4.18ರಲ್ಲಿ ಜನಜಾಗೃತಿ ಕಾರ್ಯಕ್ರಮಗಳು ಉಪಯುಕ್ತವೇ ಎನ್ನುವುದರ ಬಗ್ಗೆ ಜನರು ನೀಡಿರುವ ಪ್ರತಿಕ್ರಿಯೆಯ ಅಂಕಿ–ಅಂಶವನ್ನು ನೀಡಲಾಗಿದೆ.

**ಕೋಷ್ಟಕ 4.18**

**ದ.ಕ. ಜಿಲ್ಲೆಯಲ್ಲಿ ಸ್ಥಳೀಯ ಸರಕಾರಗಳು ಜನಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಉಪಯುಕ್ತವೇ ಎನ್ನುವ ಬಗ್ಗೆ ಪ್ರತಿಕ್ರಿಯೆದಾರರ ಅಭಿಪ್ರಾಯ**

| ಜನಜಾಗೃತಿ ಉಪಯುಕ್ತ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಒಟ್ಟು ಶೇಕಡ |
|---|---|---|---|---|---|---|
| 1 ದೃಢವಾಗಿ ಸಮ್ಮತಿಸುತ್ತೇನೆ | 72 | 36 | 46 | 22 | 118 | 29 |
| 2 ಸಮ್ಮತಿಸುತ್ತೇನೆ | 100 | 50 | 156 | 75 | 256 | 62 |
| 3 ಏನೂ ಹೇಳಲಾರೆ | 28 | 14 | 8 | 4 | 36 | 9 |
| 4 ಸಮ್ಮತಿಸುವುದಿಲ್ಲ | 0 | 0 | 0 | 0 | 0 | 0 |
| 5 ದೃಢವಾಗಿ ಸಮ್ಮತಿಸುವುದಿಲ್ಲ | 0 | 0 | 0 | 0 | 0 | 0 |
| **ಒಟ್ಟು** | **200** | **100** | | **100** | **410** | **100** |

ಮೇಲಿನ ಕೋಷ್ಟಕದಲ್ಲಿರುವ ದತ್ತಾಂಶದ ಪ್ರಕಾರ ಸರಾಸರಿ 86 ಶೇಕಡದಷ್ಟು ಗ್ರಾಮೀಣ ವ್ಯಾಪ್ತಿಯ ಜನರು ಜಾಥಾ, ಬೀದಿ ನಾಟಕ, ಜಾಹೀರಾತು, ಮುಂತಾದ ಜನಜಾಗೃತಿ ಕಾರ್ಯಕ್ರಮಗಳು ಅಗತ್ಯ ಎನ್ನುವ ಅಭಿಪ್ರಾಯ ನೀಡಿದ್ದಾರೆ. ಕೇವಲ 14 ಶೇಕಡ ಜನರು ಈ ಬಗ್ಗೆ 'ತಟಸ್ಥ' ಪ್ರತಿಕ್ರಿಯೆ ನೀಡಿದರೆ, ಯಾರೊಬ್ಬರೂ 'ಅನುಪಯುಕ್ತ' ಎನ್ನುವ ಅಭಿಪ್ರಾಯಕ್ಕೆ ಬಂದಿಲ್ಲ. ನಗರ ಪ್ರದೇಶದಲ್ಲೂ ಜನರು ಜನ ಜಾಗೃತಿ ಕಾರ್ಯಕ್ರಮಗಳ ಪರವಾಗಿದ್ದು 29 ಶೇಕಡ ಜನರು ದೃಢವಾಗಿ ಸಮ್ಮತಿಸಿದರೆ, 62 ಶೇಕಡ ಮಂದಿ ಸಮ್ಮತಿಯನ್ನು ವ್ಯಕ್ತಪಡಿಸಿದ್ದಾರೆ. ಈ ದತ್ತಾಂಶದ ಮೂಲಕ ಜನಜಾಗೃತಿ ಕಾರ್ಯಕ್ರಮಗಳ ಅವಶ್ಯಕತೆ ಇರುವುದು ತಿಳಿದು ಬರುತ್ತದೆ. ಬೇರೆ ಬೇರೆ ಮಾಧ್ಯಮಗಳಲ್ಲಿ ಜಾಹೀರಾತು ಹಾಗೂ ಬೇರೆ ಬೇರೆ ಸಾರ್ವಜನಿಕ ಕಾರ್ಯಕ್ರಮಗಳ ಮೂಲಕ ಎಲ್ಲಾ ವರ್ಗದ ಜನರಿಗೆ ಜಾಗೃತಿ ಹಾಗೂ ತಿಳುವಳಿಕೆ ಮೂಡಿಸ ಬೇಕಾಗಿದೆ. ಈ ಕೆಲಸದಲ್ಲಿ ಸರಕಾರ ಮಾತ್ರವಲ್ಲದೆ ಸ್ವಯಂಸೇವಾ ಸಂಸ್ಥೆಗಳು, ಶಾಲಾ ಕಾಲೇಜುಗಳು, ಹಾಗೂ ಖಾಸಗಿ ವಾಣಿಜ್ಯ ಸಂಸ್ಥೆಗಳು ಕೈ ಜೋಡಿಸಿದರೆ ಹೆಚ್ಚು ಪರಿಣಾಮಕಾರಿ ಯಾಗಬಹುದು.

## ಪರಾಮರ್ಶನ ಗ್ರಂಥಗಳು ಮತ್ತು ಕೊನೆ ಟಿಪ್ಪಣಿಗಳು


1. ವಿಶ್ವ ಬ್ಯಾಂಕ್ ವರದಿ 2008.–www.world bank report 2008.
2. ಮಹೋಪಾತ್ರ, ಎ. ಸಿ. (1999. ಅರ್ಬನ್ ವೇಸ್ಟ್ ಮೆನೇಜ್‌ಮೆಂಟ್: ದಿ ಕ್ಹಾಸ್ಟ್ ಬೆನಿಫಿಟ್ಸ್ ಆಫ್ ಪ್ರೈವೇಟ್ ಸೆಕ್ಟರ್ ಪಾರ್ಟಿಸಿಪೇಶನ್, ನಗರಲೋಕ, 31, ಸಂಖ್ಯೆ 1. ಪು.45–63.
3. ಬರುಚಾ, ಇರಾಚ್. (2005). ಎನ್ವಿರಾನಮೆಂಟಲ್ ಸ್ಟಡೀಸ್. ಯೂನಿವರ್ಸಿಟೀಸ್ ಪ್ರೆಸ್, ಇಂಡಿಯ ಪ್ರೈ.ಲಿ., ಹೈದರಾಬಾದ್. ಪು.138–150.
4. ಮಾಮಿನಿ ಕುಮಾರಿ ಮಹರಾಣ ಮತ್ತು ಇತರರು. ಹೈಟೆಕ್ ಸೈಂಟಿಫಿಕ್ ಸ್ಟಡಿ ಆನ್ ಬಯೋ ಮೆಡಿಕಲ್ ವೇಸ್ಟ್ ಯಾಂಡ್ ಮುನ್ಸಿಪಾಲಿಟಿ ಸೋಲಿಡ್ ವೇಸ್ಟ್ ಮೆನೇಜ್ ಮೆಂಟ್ ಇನ್ ಮೇಜರ್ ಸ್ಟಡಿ ಆಫ್ ಸೌತ್ ಒರಿಸ್ಸಾ. ಇನ್: ಪತ್ರಾವೊ, ಲಿಂಗರಾಜ್. (2012). ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್–(ಸಂ.). ಸೊನಾಲಿ ಪಬ್ಲಿಕೇಷನ್ಸ್, ನ್ಯೂಡೆಲ್ಲಿ. ಪು.59–386.
5. ಜಗನ್ನಾಥ್ ವಿ. ಪರಿವರ್ತನೆಗಾಗಿ ಪ್ರಶಿಕ್ಷಣ, ಮಾಸ ಪತ್ರಿಕೆ, ಎಪ್ರಿಲ್, 2008, ಆಡಳಿತ ತರಬೇತಿ ಸಂಸ್ಥೆ ಮೈಸೂರು. ಪು.17–18.

6. ತಿಂಗಳಾಯ, ನವೀನ್‌ಚಂದ್ರ, ಕೆ. (2009). ಕರಾವಳಿ ಕರ್ನಾಟಕದ ಅಭಿವೃದ್ಧಿ: ಒಂದು ಐತಿಹಾಸಿಕ ದೃಷ್ಟಿ, ಇನ್: ಜೋಶಿ ಜಿ. ವಿ. ಮತ್ತು ನೋರ್ಬರ್ಟ್, ಲೋಬೊ. (ಸಂ.), ಕರಾವಳಿ ಕರ್ನಾಟಕದ ಅರ್ಥವ್ಯವಸ್ಥೆ: ಹಿಂದಿನಿಂದ ಇಂದಿನವರೆಗೆ. ಮಂಗಳ ಪ್ರಕಾಶನ, ಮಂಗಳೂರು. ಪು.5–12.

7. ಇಕ್ಬಾಲ್, ಹೆಚ್. ಖಾನ್. ಮತ್ತು ನವೇದ್, ಆಶಾನ್. (2003). ಟೆಕ್ಸ್ಟ್ ಬುಕ್ ಆಫ್ ವೇಸ್ಟ್ ಮೆನೇಜ್‌ಮೆಂಟ್. ಸಿ.ಬಿ.ಎಸ್ ಪಬ್ಲಿಷರ್ಸ್ ಮತ್ತು ಡಿಸ್ಟ್ರಿಬ್ಯೂಟರ್ಸ್ ಪ್ರೈವೆಟ್ ಲಿ, ನ್ಯೂಡೆಲ್ಲಿ. ಪು.26–28.

8. ಅಬ್ಬಾಸಿ, ಎಸ್.ಎ. ಮತ್ತು ರಾಮಸಾಮಿ, ಇ.ವಿ. (2001). ಸೋಲಿಡ್ ವೇಸ್ಟ್ ಮ್ಯಾನೇಜ್ ಮೆಂಟ್ ವಿದ್ ಅರ್ಥವರ್ಮ್ಸ್. ಡಿಸ್ಕವರಿ ಪಬ್ಲಿಷಿಂಗ್ ಹೌಸ್, ನ್ಯೂಡೆಲ್ಲಿ. ಪು.64–66.

9. ಆನಂದ್, ಸುಭಾಶ್. (2010). ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್. ಮಿತ್ತಲ್ ಪಬ್ಲಿಕೇಶನ್ಸ್, ನ್ಯೂಡೆಲ್ಲಿ. ಪು.87–130.

10. ಬೆನ್ನಿ, ಜೋಸೆಫ್. (2009). ಎನ್ವಿರಾನ್‌ಮೆಂಟಲ್ ಸ್ಟಡೀಸ್. ಟಾಟಾ ಮೆಕ್‌ಗ್ರೊ ಹಿಲ್ ಪಬ್ಲಿಷಿಂಗ್ ಕಂ.ಲಿ., ನ್ಯೂಡೆಲ್ಲಿ. ಪು.43–54.

11. ಬಾಟಿಯ, ಎಸ್.ಸಿ. (2007). ಸಾಲಿಡ್ ಆಂಡ್ ಹೆಸಾರ್ಡಸ್ ವೇಸ್ಟ್ ಮೆನೇಜ್‌ಮೆಂಟ್. ಅಂಟ್ಲಾಂಟಿಕ್ ಪಬ್ಲಿಷರ್ ಮತ್ತು ಡಿಸ್ಟ್ರಿಬ್ಯೂಟರ್ಸ್, ಪ್ರೈ.ಲಿಮಿಟೆಡ್, ನ್ಯೂಡೆಲ್ಲಿ. ಪು.18–22.

12. ಬೋಜಿಂಗ್, ಜೋಸೆಫ್ ಮಾರ್ಪೊ ಮತ್ತು ಔಸು, ವಿಕ್ಟರ್. (2011). ಸೋಶಿಯೋ–ಇಕಾನಾಮಿಕ್ ಡಿಟರ್‌ಮಿನೆಂಟ್ಸ್ ಆಫ್ ಹೌಸ್‌ಹೋಲ್ಡ್ ಪಾರ್ಟಿಸಿಪೇಶನ್ ಇನ್ ಸೋಲಿಡ್ ವೇಸ್ಟ್ ಕಲೆಕ್ಷನ್ ಸಿಸ್ಟಮ್ಸ್ ಇನ್ ಘಾನ. ಇನ್: ಘೋಶ್ ಕೆ ಸದನ್. (ಸಂಪ). ಸಸ್ಟೈನೆಬಲ್ ವೇಸ್ಟ್ ಮೆನೇಜ್‌ಮೆಂಟ್ ವೋಲ್ಯುಂ–1. ಆಕ್ಸಫರ್ಡ್ ಪಬ್ಲಿಶಿಂಗ್ ಹೌಸ್, ಕೊಲ್ಕತ್ತ, ಪು.132–152.

13. ಬೋಗುನ್, ಅರ, ರಾಶಾನ್ ಅಂಡ್ ಪಿರೇರಾ, ಜೆಕ್ವಿಲಿನ, ಜೋಯ್. (2008). ಎವೇರ್‌ನೆಸ್ ಎಟಿಟ್ಯೂಡ್ ಅಂಡ್ ಬಿಹೇವಿಯರಲ್ ಸ್ಟೇಟಸ್ ಆಫ್ ವೇಸ್ಟ್ ಮ್ಯಾನೇಜ್‌ಮೆಂಟ್: ಎ ಪ್ರೋಫೈಲ್ ಆಫ್ ಮಲೇಸಿಯನ್ ಕಾಂಟ್ರೆಕ್ಟರ್ಸ್. ಏಷ್ಯಾ ಜರ್ನಲ್ ಆಫ ವಾಟರ್, ಎನ್ವರಾಯಿನ್‌ಮೆಂಟ್ ಆಂಡ್ ಪೊಲ್ಯೂಷನ್. ವೊಲ್ಯುಮ್ 5(3), ಪು.15–22.

14. ಅಗರವಾಲ್, ಸುನೀತಾ ಮತ್ತು ಲಲಿತಾ, ಅರೋರ. (2013). ಡೊಮೆಸ್ಟಿಕ್ ವೇಸ್ಟ್ ಮೆನೇಜ್‌ಮೆಂಟ್. ಆವಿಷ್ಕಾರ್ ಪಬ್ಲಿಷರ್ಸ್ & ಡಿಸ್ಟ್ರಿಬ್ಯೂಟರ್ಸ್, ಜೈಪುರ. ಪು.36–42.

15. ಮಾನಸಿ, ಎಸ್. ನಾಯಕ್. ಪ್ರಸಾದ, ಒ.ಬಿ. ಮತ್ತು ಲತಾ, ಎನ್.ಸಿ. (2010). ಇಕೊ–ಫ್ರೆಟ್ಸ್ ಆಫ್ ಇ–ವೇಸ್ಟ್: ಎ ಕೇಸ್ ಸ್ಟಡಿ ಆಫ್ ಬೆಂಗಳೂರು ಸಿಟಿ. ಐಸೆಕ್, ಬೆಂಗಳೂರು. ಪು.71–78.

16. ಪೋತಿಮಮಕ, ಜೆ. (2008). *ಕಮ್ಯೂನಿಟಿ ಲೆರ್ನಿಂಗ್ ಪ್ರೊಸೆಸ್: ಎ ಮೊಡೆಲ್ ಆಫ್ ಸಾಲಿಡ್ ವೇಸ್ಟ್ ರಿಡಕ್ಷನ್ ಅಂಡ್ ಸಪರೇಷನ್– ಎನ್ವರಾಯಿನ್‌ಮೆಂಟಲ್* ಏಷ್ಯಾ. ಡಬ್ಲೂ ಡಬ್ಲೂ ಡಬ್ಲ್ಯೂ. ಟಿಎಸ್‌ಹೆಚ್‌ಇ. ಒಆರ್ಜಿ/ಇಎ. (www.tshe.org/EA).

## ಅಧ್ಯಾಯ: ಐದು

# ಘನತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳು

5.1. ಘನತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಆಯಾಮಗಳು
5.2. ಘನತ್ಯಾಜ್ಯ ನಿರ್ವಹಣೆಯ ಆರ್ಥಿಕ ಆಯಾಮಗಳು

## ಅಧ್ಯಾಯ: ಐದು

# ಘನತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳು

**ಪೀಠಿಕೆ**

ತ್ಯಾಜ್ಯ ಉತ್ಪಾದನೆ ಮತ್ತು ನಿರ್ವಹಣೆಯಲ್ಲಿ ಭಿನ್ನತೆಗಳಿರುವುದನ್ನು ತಳಮಟ್ಟದಿಂದ ಅಂತರ್ರಾಷ್ಟ್ರೀಯ ಮಟ್ಟದವರೆಗೆ ಕಾಣಬಹುದು. ಬೇರೆ ಬೇರೆ ಮೂಲಗಳಿಂದ ತಿಳಿದುಬಂದ ಮಾಹಿತಿ ಪ್ರಕಾರ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ತ್ಯಾಜ್ಯ ಉತ್ಪಾದನೆ ಮತ್ತು ನಿರ್ವಹಣೆಯಲ್ಲಿ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಿಗಿಂತ ಹೆಚ್ಚು ದಕ್ಷತೆ ಇದ್ದು, ಸ್ವಚ್ಛತೆಗೆ ಗರಿಷ್ಠ ಪ್ರಾಮುಖ್ಯತೆ ನೀಡಲಾಗಿದೆ. ತ್ಯಾಜ್ಯವು ಜಾಗತಿಕ ಮಟ್ಟದಲ್ಲಿ ಸವಾಲಾಗಿರುವ ಸ್ಥಳೀಯ ಸಮಸ್ಯೆಯಾಗಿರುವ ಕಾರಣ, ಜಾಗತಿಕ ಮಟ್ಟದಲ್ಲಿ ನೀತಿ ನಿಯಮಾವಳಿಗಳ ಸಹಿತ ಅನೇಕ ವೈಜ್ಞಾನಿಕ ಕ್ರಮಗಳನ್ನು ಕೈಗೊಳ್ಳಲಾಗಿದೆ. ಸಂಗ್ರಹ–ಸಾಗಾಟದಿಂದ ವಿಲೇವಾರಿ ಹಂತದವರೆಗೆ ಅನೇಕ ವೈಜ್ಞಾನಿಕ ಕ್ರಮಗಳನ್ನು ಕೈಗೊಳ್ಳಲಾಗಿದೆ. ಈ ಕ್ಷೇತ್ರದಲ್ಲಿಯೂ ಸಂಶೋಧನೆಗಳು ನಿರಂತರವಾಗಿ ನಡೆಯುತ್ತಿವೆ. ಹಾಗಿದ್ದರೂ ಅಭಿವೃದ್ಧಿಶೀಲ ರಾಷ್ಟ್ರಗಳು ಹಿನ್ನಡೆ ಅನುಭವಿಸಲು ಸಾಮಾಜಿಕ ಹಾಗೂ ಆರ್ಥಿಕ ಅಂಶಗಳು ಅಡ್ಡಿಪಡಿಸಿವೆಯೇ ಎನ್ನುವುದನ್ನು ಚರ್ಚಿಸಬೇಕಾಗಿದೆ.

ದ.ಕ ಜಿಲ್ಲೆಯು ಮಾನವ ಅಭಿವೃದ್ಧಿ ವರದಿ (2014)[1]ರಲ್ಲಿ ಘನತ್ಯಾಜ್ಯದ ವೈಜ್ಞಾನಿಕ ನಿರ್ವಹಣೆಯೂ ಮಾನವ ಅಭಿವೃದ್ಧಿಯ ದೃಷ್ಟಿಯಿಂದ ಆದ್ಯತೆಯ ಕ್ಷೇತ್ರವಾಗಿದೆ ಎಂದು ದಾಖಲಾಗಿದೆ. ಆದ್ದರಿಂದ ಇದು ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಪರಿಗಣಿತವಾಗುವ ಅಂಶವಾಗಿದೆ. ಮಾನವ ಅಭಿವೃದ್ಧಿಯು ಜನರ ಸರ್ವತೋಮುಖ ಅಭಿವೃದ್ಧಿಯನ್ನು ಒಳಗೊಂಡಿದ್ದು ವಿಶಾಲ ದೃಷ್ಟಿಯಿಂದ ಸಾಮಾಜಿಕ ಹಾಗೂ ಆರ್ಥಿಕ ಸೂಚಿಗಳನ್ನು ಒಳಗೊಂಡಿದೆ. ಪ್ರಸ್ತುತ ಅಧ್ಯಾಯದಲ್ಲಿ ಘನತ್ಯಾಜ್ಯ ನಿರ್ವಹಣೆಯ ಮೇಲೆ ಜನರ ಸಾಮಾಜಿಕ ಹಾಗೂ ಆರ್ಥಿಕ ಅಂಶಗಳು ಯಾವ ರೀತಿಯ ಪ್ರಭಾವ ಬೀರಿವೆ ಎನ್ನುವ ಬಗ್ಗೆ ಚರ್ಚಿಸಲಾಗಿದೆ.

ಚರ್ಚೆಗೆ ಪೂರಕವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಮತ್ತು ನಗರ ಜನಸಂಖ್ಯೆಯ ಅಂಕಿ–ಅಂಶ, ಅಧ್ಯಯನಕ್ಕೆ ಒಳಪಡಿಸಿದ ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ ಕುಟುಂಬಗಳ ವಿವರ ಮತ್ತು ಅಧ್ಯಯನಕ್ಕೆ ಆಯ್ಕೆ ಮಾಡಿದ ಸ್ಥಳೀಯ ಸಂಸ್ಥೆಗಳ ಪಟ್ಟಿಯನ್ನು ಕೋಷ್ಟಕ 5.1. 5.2 ಮತ್ತು 5.3ರಲ್ಲಿ ನೀಡಲಾಗಿದೆ.

**ಕೋಷ್ಟಕ: 5.1**

**2011ರ ಜನಗಣತಿ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ–ನಗರ ಜನಸಂಖ್ಯೆ ವಿವರ**

| ತಾಲೂಕು | ಗ್ರಾಮೀಣ | ನಗರ | ಗ್ರಾಮೀಣ ಶೇಕಡ | ನಗರ ಶೇಕಡ |
|---|---|---|---|---|
| ಬಂಟ್ವಾಳ | 279482 | 115898 | 70.69 | 29.31 |
| ಬೆಳ್ತಂಗಡಿ | 251802 | 14787 | 94.45 | 5.55 |
| ಮಂಗಳೂರು | 210033 | 784569 | 21.12 | 78.88 |
| ಪುತ್ತೂರು | 226977 | 60874 | 78.85 | 21.15 |
| ಸುಳ್ಯ | 125269 | 19958 | 86.26 | 13.74 |
| ದ.ಕ ಜಿಲ್ಲೆ | 1093563 | 996086 | 52.33 | 47.67 |
| ರಾಜ್ಯ(ಲಕ್ಷಗಳಲ್ಲಿ) | 374.69 | 236.26 | 61.37 | 38.63 |

**ಆಧಾರ:** 2011ರ ಜನಗಣತಿ (ದಕ್ಷಿಣ ಕನ್ನಡ ಜಿಲ್ಲಾ ಮಾನವ ಅಭಿವೃದ್ಧಿ ವರದಿ–2014, ಪು.41)

ಮೇಲಿನ ಅಂಕಿ–ಅಂಶಗಳ ಪ್ರಕಾರ ಬಂಟ್ವಾಳ ತಾಲೂಕಿನಲ್ಲಿ ಅತೀ ಹೆಚ್ಚು ಜನರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದು ಮಂಗಳೂರು ತಾಲೂಕಿನಲ್ಲಿ ಅತೀ ಕಡಿಮೆ ಇದೆ. ನಗರ ಪ್ರದೇಶಗಳಲ್ಲಿ ಅತೀ ಹೆಚ್ಚು ಜನ ಮಂಗಳೂರು ತಾಲೂಕಿನಲ್ಲಿದ್ದರೆ, ಅತೀ ಕಡಿಮೆ ಜನರು ಸುಳ್ಯ ತಾಲೂಕಿನಲ್ಲಿರುವುದು ಕಂಡುಬಂದಿದೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಶೇಕಡ 52.33 ಜನರು ಗ್ರಾಮೀಣ ಪ್ರದೇಶದಲ್ಲಿದ್ದು ಉಳಿದ 47.67 ಶೇಕಡ ಜನ ನಗರ ಪ್ರದೇಶದಲ್ಲಿರುವುದನ್ನು ಗಮನಿಸಿದರೆ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಜನಸಂಖ್ಯೆಯ ಹಂಚುವಿಕೆಯಲ್ಲಿ ಕೇವಲ 5 ಶೇಕಡ ವ್ಯತ್ಯಾಸವಿದೆ.

ಕೋಷ್ಟಕ 5.2ರಲ್ಲಿ ಅಧ್ಯಯನಕ್ಕೆ ಒಳಪಡಿಸಿದ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ ಒಟ್ಟು ವಿಸ್ತೀರ್ಣ (ಚದರ ಕಿ.ಮೀ ಗಳಲ್ಲಿ), ವಾರ್ಡ್‌ಗಳ ಸಂಖ್ಯೆ, ಕುಟುಂಬಗಳ ಸಂಖ್ಯೆ, ಒಟ್ಟು ಜನಸಂಖ್ಯೆ ಮತ್ತು ಅಧ್ಯಯನಕ್ಕೆ ಒಳಪಡಿಸಿದ ಕುಟುಂಬಗಳ ಸಂಖ್ಯೆಯ ವಿವರಗಳನ್ನು ನೀಡಲಾಗಿದೆ.

## ಕೋಷ್ಟಕ: 5.2

### ಅಧ್ಯಯನಕ್ಕೆ ಒಳಪಡಿಸಿದ ದ.ಕ.ಜಿಲ್ಲೆಯ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ ಕುಟುಂಬಗಳ ವಿವರ

| ನಗರ ಸ್ಥಳೀಯ ಸಂಸ್ಥೆಗಳು | ಒಟ್ಟು ವಿಸ್ತೀರ್ಣ ಚದರ ಕಿ.ಮೀ | ವಾರ್ಡ್‌ಗಳ ಸಂಖ್ಯೆ | ಕುಟುಂಬಗಳ ಸಂಖ್ಯೆ | ಒಟ್ಟು ಜನಸಂಖ್ಯೆ | ಅಧ್ಯಯನಕ್ಕೆ ಒಳಪಡಿಸಿದ ಕುಟುಂಬಗಳ ಸಂಖ್ಯೆ-210 |
|---|---|---|---|---|---|
| ಮಂಗಳೂರು ಮಹಾನಗರ ಪಾಲಿಕೆ | 132.45 | 60 | 115036 | 499487 | 50 |
| ಪುತ್ತೂರು ನಗರಸಭೆ | 36.11 | 27 | 11378 | 53061 | 30 |
| ಉಳ್ಳಾಲ ನಗರಸಭೆ | 11.80 | 27 | 9588 | 53773 | 30 |
| ಬಂಟ್ವಾಳ ಪುರಸಭೆ | 27.05 | 23 | 7939 | 40155 | 20 |
| ಮೂಡಬಿದ್ರಿ ಪುರಸಭೆ | 39.62 | 23 | 6517 | 29431 | 20 |
| ಮುಲ್ಕಿ ಪುರಸಭೆ | 11.00 | 17 | 3962 | 17274 | 20 |
| ಬೆಳ್ತಂಗಡಿ ಪಟ್ಟಣ ಪಂಚಾಯತ್ | 8.87 | 11 | 1821 | 7746 | 20 |
| ಸುಳ್ಯ ಪಟ್ಟಣ ಪಂಚಾಯತ್ | 6.61 | 18 | 4194 | 19958 | 20 |
| ಕೋಟೆಕಾರ್ ಪಟ್ಟಣ ಪಂಚಾಯತ್ | — | — | — | — | — |
| ವಿಟ್ಲ ಪಟ್ಟಣ ಪಂಚಾಯತ್ | —- | — | — | — | — |
| ಒಟ್ಟು | 273.51 | 206 | 160435 | 720885 | 210 |

**ಆಧಾರ:** 2011ರ ಜನಗಣತಿ/ಜಿಲ್ಲಾ ನಗರ ಅಭಿವೃದ್ಧಿಕೋಶ, ಜಿಲ್ಲಾಧಿಕಾರಿಯವರ ಕಾರ್ಯಾಲಯ. (ದಕ್ಷಿಣ ಕನ್ನಡ ಜಿಲ್ಲಾ ಮಾನವ ಅಭಿವೃದ್ಧಿ ವರದಿ-2014, ಪು.283)

**ಸೂಚನೆ:** ಕೋಟೆಕಾರ್ ಪಟ್ಟಣ ಪಂಚಾಯತ್ ಮತ್ತು ವಿಟ್ಲ ಪಂಚಾಯತ್‌ನ ಅಂಕಿ-ಅಂಶಗಳು ಜಿಲ್ಲೆಯ ಒಟ್ಟು ಅಂಕಿ-ಅಂಶಗಳಿಗೆ ಸೇರ್ಪಡೆಯಾಗಿಲ್ಲ.

ಕೋಷ್ಟಕ 5.3ರಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಗ್ರಾಮೀಣ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ ತಾಲೂಕುಗಳು, ಒಟ್ಟು ಗ್ರಾಮ ಪಂಚಾಯತ್‌ಗಳು, ಅಧ್ಯಯನಕ್ಕೆ ಒಳಪಟ್ಟ ಕುಟುಂಬಗಳಿರುವ ಪಂಚಾಯತ್‌ಗಳು ಮತ್ತು ಅಧ್ಯಯನಕ್ಕೆ ಒಳಪಡಿಸಿದ ಕುಟುಂಬಗಳ ಸಂಖ್ಯೆಯ ವಿವರಗಳನ್ನು ನೀಡಲಾಗಿದೆ.

ಕೋಷ್ಟಕ: 5.3

ಅಧ್ಯಯನಕ್ಕೆ ಒಳಪಡಿಸಿದ ದ.ಕ.ಜಿಲ್ಲೆಯ ಗ್ರಾಮೀಣ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ ಒಟ್ಟು ಕುಟುಂಬಗಳ ವಿವರ

| ಕ್ರಸಂ | ತಾಲೂಕು | ಒಟ್ಟು ಗ್ರಾಮ ಪಂಚಾಯತ್‌ಗಳು | ಅಧ್ಯಯನಕ್ಕೆ ಒಳಪಟ್ಟ ಕುಟುಂಬಗಳಿರುವ ಪಂಚಾಯತ್‌ಗಳು | ಅಧ್ಯಯನಕ್ಕೆ ಒಳಪಡಿಸಿದ ಕುಟುಂಬಗಳ ಸಂಖ್ಯೆ |
|---|---|---|---|---|
| 1 | ಬೆಳ್ತಂಗಡಿ | 48 | ಉಜಿರೆ | 40 |
| 2 | ಬಂಟ್ವಾಳ | 59 | ವಿಟ್ಲ | 40 |
| 3 | ಮಂಗಳೂರು | 56 | ಕೆಮ್ರಾಲ್ | 40 |
| 4 | ಪುತ್ತೂರು | 41 | ಕಡಬ | 40 |
| 5 | ಸುಳ್ಯ | 28 | ಸುಬ್ರಹ್ಮಣ್ಯ | 40 |
| | ಒಟ್ಟು | **232** | **5** | **200** |

ಕ್ಷೇತ್ರ ಕಾರ್ಯವನ್ನು ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಗಳಲ್ಲಿ ನಡೆಸಲಾಗಿದೆ. ಬೆಳ್ತಂಗಡಿ ತಾಲೂಕಿನ ಉಜಿರೆ, ಬಂಟ್ವಾಳ ತಾಲೂಕಿನ ವಿಟ್ಲ ಪಂಚಾಯತ್, ಮಂಗಳೂರು ತಾಲೂಕಿನ ಕೆಮ್ರಾಲ್ ಪಂಚಾಯತ್, ಪುತ್ತೂರು ತಾಲೂಕಿನ ಕಡಬ ಮತ್ತು ಸುಳ್ಯ ತಾಲೂಕಿನ ಸುಬ್ರಹ್ಮಣ್ಯ ಗ್ರಾಮ ಪಂಚಾಯತ್ ವ್ಯಾಪ್ತಿಗಳಿಂದ ತಲಾ 40 ಕುಟುಂಬಗಳಂತೆ ಒಟ್ಟು 200 ಕುಟುಂಬಗಳನ್ನು ಸಂದರ್ಶಿಸಲಾಗಿದೆ. ಇದರೊಂದಿಗೆ ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಿಂದ 50, ಪುತ್ತೂರು ನಗರ ಸಭೆ ವ್ಯಾಪ್ತಿಯಿಂದ 30, ಉಳ್ಳಾಲ ನಗರಸಭೆ ವ್ಯಾಪ್ತಿಯಿಂದ 30, ಬಂಟ್ವಾಳ ಪುರಸಭೆಯಿಂದ 20 ಮೂಲ್ಕಿ ಪುರಸಭೆ ವ್ಯಾಪ್ತಿಯಿಂದ 20, ಮೂಡಬಿದ್ರಿ ಪುರಸಭೆಯಿಂದ 20, ಬೆಳ್ತಂಗಡಿ ಪಟ್ಟಣ ಪಂಚಾಯತ್ ವ್ಯಾಪ್ತಿಯಿಂದ 20 ಹಾಗೂ ಸುಳ್ಯ ಪಟ್ಟಣ ಪಂಚಾಯತ್ ನಿಂದ 20 ರಂತೆ ಒಟ್ಟು 210 ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ವಾಸಿಸುವ ಕುಟುಂಬಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ಈ ಮೂಲಕ ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ 73 ಶೇಕಡ ಪುರುಷರು (299) ಹಾಗೂ 27 ಶೇಕಡ ಮಹಿಳೆಯರ (111) ಸಹಿತ ಒಟ್ಟು 410 ಕುಟುಂಬಗಳನ್ನು ಸಂದರ್ಶಿಸಿ ಪ್ರಶ್ನಾವಳಿ ಮೂಲಕ ಮಾಹಿತಿಗಳನ್ನು ಸಂಗ್ರಹಿಸಿದ್ದೇನೆ.

## 5.1. ಘನತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಆಯಾಮಗಳು

ಜನರ ತಿಳುವಳಿಕೆ, ಜಾಗೃತಿ, ಚಟುವಟಿಕೆ ಇತ್ಯಾದಿ ವೈಯಕ್ತಿಕ ನಡವಳಿಕೆ ಮತ್ತು ಮನಸ್ಥಿತಿಯ ಮೇಲೆ ಅವರ ವಯಸ್ಸು, ಲಿಂಗ, ವರ್ಗ, ಧರ್ಮ, ಶಿಕ್ಷಣ ಮುಂತಾದ

ಸಾಮಾಜಿಕ ಅಂಶಗಳು ಬೇರೆ ಬೇರೆ ಸಂದರ್ಭಗಳಲ್ಲಿ ಪ್ರಭಾವ ಬೀರುತ್ತವೆ. ಘನತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಆಯಾಮಗಳನ್ನು ಈ ಎಲ್ಲಾ ಅಂಶಗಳನ್ನು ಪ್ರಧಾನವಾಗಿಟ್ಟುಕೊಂಡು ವಿಶ್ಲೇಷಿಸಲಾಗಿದೆ. ಗ್ರಾಮೀಣ ಮತ್ತು ನಗರ ಪ್ರದೇಶಗಳ ಪ್ರತಿಕ್ರಿಯೆದಾರರನ್ನು ಅನುಕೂಲಕ್ಕೆ ತಕ್ಕಂತೆ ಯಾಧೃಚ್ಛಿಕ ಮಾದರಿಯಲ್ಲಿ ಆಯ್ಕೆ ಮಾಡಲಾಗಿದೆಯೇ ಹೊರತು ಯಾವುದೇ ಗಣಿತದ ವಿಧಾನವನ್ನು ಬಳಸಿಕೊಂಡಿಲ್ಲ. ಕೋಷ್ಟಕ 5.4ರಲ್ಲಿ ಕ್ಷೇತ್ರ ಕಾರ್ಯ ನಡೆಸಿದ ಕುಟುಂಬಗಳ ಸಾಮಾಜಿಕ ಅಂಶಗಳ ವಿವರಗಳನ್ನು ನೀಡಲಾಗಿದೆ. ಈ ಕೋಷ್ಟಕದಲ್ಲಿ ಪ್ರತಿಕ್ರಿಯೆದಾರರ ವಯಸ್ಸು, ಲಿಂಗ, ವರ್ಗ, ಧರ್ಮ ಮತ್ತು ಶೈಕ್ಷಣಿಕ ಅಂಶಗಳನ್ನು ಗ್ರಾಮೀಣ ಮತ್ತು ನಗರ ವ್ಯಾಪ್ತಿಯಲ್ಲಿ ಪ್ರತ್ಯೇಕವಾಗಿ ನೀಡಲಾಗಿದೆ.

**ಕೋಷ್ಟಕ: 5.4**

**ದ.ಕ. ಜಿಲ್ಲೆಯಲ್ಲಿ ಅಧ್ಯಯನಕ್ಕೊಳಪಡಿಸಿದ ಮಾಹಿತಿದಾರರ ಸಂಕ್ಷಿಪ್ತ ಸಾಮಾಜಿಕ ವಿವರಗಳು**

| ಸೂಚಿಗಳು | ವಿಭಾಗ/ವರ್ಗ | ಗ್ರಾಮೀಣ 200 | ನಗರ 210 | ಒಟ್ಟು 410 | ಶೇಕಡ |
|---|---|---|---|---|---|
| ವಯಸ್ಸು | 30 ಕ್ಕಿಂತ ಕಡಿಮೆ | 18 | 38 | 56 | 13 |
| | 30–50 | 114 | 107 | 221 | 54 |
| | 50 ಕ್ಕಿಂತ ಮೇಲ್ಪಟ್ಟು | 68 | 65 | 133 | 33 |
| ಲಿಂಗ | ಪುರುಷ | 152 | 147 | 299 | 73 |
| | ಮಹಿಳೆ | 48 | 63 | 111 | 27 |
| ವರ್ಗ | ಸಾಮಾನ್ಯ | 78 | 147 | 225 | 55 |
| | ಹಿಂದುಳಿದ | 76 | 31 | 107 | 26 |
| | ಪ.ಜಾ | 24 | 19 | 43 | 10 |
| | ಪ.ಪ | 22 | 13 | 35 | 9 |
| ಧರ್ಮ | ಹಿಂದು | 162 | 160 | 322 | 79 |
| | ಮುಸ್ಲಿಂ | 22 | 17 | 39 | 10 |
| | ಕ್ರಿಶ್ಚಿಯನ್ | 16 | 31 | 47 | 11 |
| | ಇತರ | 0 | 2 | 2 | 0.5 |
| ಶಿಕ್ಷಣ | ಪ್ರಾಥಮಿಕ | 36 | 31 | 67 | 16 |
| | ಪ್ರೌಢ | 78 | 51 | 129 | 32 |
| | ಪದವಿಪೂರ್ವ | 42 | 61 | 103 | 25 |
| | ಪದವಿ | 36 | 42 | 78 | 19 |
| | ಸ್ನಾತಕೋತ್ತರ | 8 | 25 | 33 | 8 |

ಒಟ್ಟು 410 ಪ್ರತಿಕ್ರಿಯೆದಾರರಲ್ಲಿ 9.3 ಶೇಕಡ 30 ವರ್ಷಕ್ಕಿಂತ ಕಡಿಮೆ ವಯಸ್ಸಿನವರು. 54 ಶೇಕಡ 30ರಿಂದ 50 ವರ್ಷ ವಯಸ್ಸಿನವರು ಮತ್ತು 33 ಶೇಕಡ ಪ್ರತಿಕ್ರಿಯೆದಾರರು 50 ವರ್ಷಕ್ಕಿಂತ ಮೇಲ್ಪಟ್ಟವರು. ತ್ಯಾಜ್ಯ ನಿರ್ವಹಣೆಯಲ್ಲಿ ಎಲ್ಲಾ ವಯಸ್ಸಿನವರೂ ಪಾಲ್ಗೊಳ್ಳುವುದರಿಂದ ಎಲ್ಲಾ ವಯೋಮಿತಿಯವರನ್ನು ತೆಗೆದುಕೊಳ್ಳಲಾಗಿದೆ. ಪ್ರತಿಕ್ರಿಯೆದಾರರಲ್ಲಿ 73 ಶೇಕಡ ಪುರುಷರು ಮತ್ತು 27 ಶೇಕಡ ಮಹಿಳೆಯರಿದ್ದು 55 ಶೇಕಡ ಸಾಮಾನ್ಯ ವರ್ಗಕ್ಕೆ ಸೇರಿದವರಾಗಿದ್ದು, 26 ಶೇಕಡ ಹಿಂದುಳಿದ, 10 ಶೇಕಡ ಪರಿಶಿಷ್ಟ ಜಾತಿ ಮತ್ತು 9 ಶೇಕಡ ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದಾರೆ. ಪ್ರತಿಕ್ರಿಯೆದಾರರಲ್ಲಿ ಎಲ್ಲಾ ಧರ್ಮಗಳಿಗೆ ಸಂಬಂಧಪಟ್ಟವರು ಇದ್ದು 79 ಶೇಕಡ ಹಿಂದುಗಳು, 11 ಶೇಕಡ ಕ್ರಿಶ್ಚಿಯನ್, 10 ಶೇಕಡ ಮುಸ್ಲಿಮರು ಮತ್ತು 0.5 ಶೇಕಡ ಇತರ ಧರ್ಮದವರಿದ್ದಾರೆ. ತ್ಯಾಜ್ಯ ನಿರ್ವಹಣೆಯ ಮೇಲೆ ಶೈಕ್ಷಣಿಕ ಮಟ್ಟದ ಪ್ರಭಾವವನ್ನು ವಿಶ್ಲೇಷಿಸುವ ದೃಷ್ಟಿಯಿಂದ ಪ್ರತಿಕ್ರಿಯೆದಾರರ ಶೈಕ್ಷಣಿಕ ಅರ್ಹತೆಯ ಅಂಕಿ–ಅಂಶವನ್ನು ನೀಡಲಾಗಿದೆ. ಒಟ್ಟು 410 ಪ್ರತಿಕ್ರಿಯೆದಾರರಲ್ಲಿ 16 ಶೇಕಡ ಪ್ರಾಥಮಿಕ ಶಿಕ್ಷಣ ಹೊಂದಿದವರಾಗಿದ್ದು 32 ಶೇಕಡ ಪ್ರೌಢ ಶಿಕ್ಷಣ, 25 ಶೇಕಡ ಪದವಿಪೂರ್ವ, 19 ಶೇಕಡ ಪದವಿ ಮತ್ತು 8 ಶೇಕಡ ಸ್ನಾತಕೋತ್ತರ ಶಿಕ್ಷಣ ಪಡೆದವರಾಗಿದ್ದಾರೆ. ಮೇಲಿನ ಎಲ್ಲಾ ಸಾಮಾಜಿಕ ಅಂಶಗಳನ್ನು ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ.

ಜನಸಾಮಾನ್ಯರಲ್ಲಿ ನಿಯಮಾವಳಿಗಳ ಪಾಲನೆ ಹಾಗೂ ತ್ಯಾಜ್ಯ ನಿರ್ವಹಣಾ ಶಿಸ್ತು ಹೇಗಿದೆ ಎನ್ನುವುದನ್ನು ಅರ್ಥ ಮಾಡಿಕೊಳ್ಳಲು ಮೂಲದಲ್ಲಿ ಕಸ ವಿಂಗಡಣೆ ಮಾಡುವ ಪ್ರಮಾಣ ವನ್ನು ಒಂದು ಸೂಚಿಯಾಗಿ ಬಳಸಿಕೊಳ್ಳಲಾಗಿದೆ.

ಬೌದ್ ಇಸ್ ಮತ್ತು ಶೆಂಕ್ ಹನ್ಸ್(1994)[2] ಇವರ ಅಭಿಪ್ರಾಯದಂತೆ ಮೂಲದಲ್ಲಿ ತ್ಯಾಜ್ಯ ವಿಭಜನೆ ಮತ್ತು ತ್ಯಾಜ್ಯ ಪುನರುತ್ಪಾದನೆ ತ್ಯಾಜ್ಯದ ಪ್ರಮಾಣವನ್ನು ಕಡಿಮೆ ಮಾಡುತ್ತದೆ. ಅಂದರೆ ತ್ಯಾಜ್ಯ ಸಂಗ್ರಹದ ವೆಚ್ಚ ಮತ್ತು ಪರಿಸರ ಹಾನಿಯನ್ನು ಕಡಿಮೆಗೊಳಿಸುತ್ತದೆ. ಇದು ಪ್ರಾಕೃತಿಕ ಸಂಪನ್ಮೂಲಗಳ ದುರ್ಬಳಕೆಯನ್ನೂ ಕಡಿತಗೊಳಿಸುತ್ತದೆ.

ದಿ ಹಿಂದು (2016)[3] ವರದಿಯಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ನಿವೃತ್ತ ಯೋಧರನ್ನು ಮೂಲದಲ್ಲಿ ತ್ಯಾಜ್ಯ ವಿಭಜನೆಯನ್ನು ಅನುಷ್ಠಾನಗೊಳಿಸುವ ಕಾರ್ಯದಲ್ಲಿ ತೊಡಗಿಸಿಕೊಳ್ಳುವ ನಿರ್ಧಾರ ಮಾಡಿದೆ. ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡುವುದು ಕಡ್ಡಾಯ ವಾದರೂ ಅನೇಕ ಮಂದಿ ಈ ನಿಯಮವನ್ನು ಅನುಸರಿಸುತ್ತಿಲ್ಲ. ಇದರಿಂದ ತ್ಯಾಜ್ಯ ನಿರ್ವಹಣಾ

ಕಾರ್ಯಕ್ಕೆ ತೊಂದರೆಯುಂಟಾಗುತ್ತದೆ ಹಾಗೂ ಹೆಚ್ಚಿನ ತ್ಯಾಜ್ಯಗಳು ನಿರುಪಯುಕ್ತವಾಗುವ ಕಾರಣ ಭೂಭರ್ತಿ ಮಾಡಬೇಕಾಗುತ್ತದೆ. ತ್ಯಾಜ್ಯ ಸಂಗ್ರಹಿಸುವ ಕಂಪೆನಿಗಳು ಅನೇಕ ಸಲ ಇಂತಹ ನಿರುಪಯುಕ್ತ ತ್ಯಾಜ್ಯಗಳನ್ನು ರಸ್ತೆಗಳಲ್ಲೇ ಚೆಲ್ಲಿ ಬಿಡುತ್ತಾರೆ. ತ್ಯಾಜ್ಯ ನಿರ್ವಹಣಾ ತಜ್ಞ ಎನ್ ಎಸ್ ರಮಾಕಾಂತ್ ಇವರ ಅಧ್ಯಯನದ ಪ್ರಕಾರ ಶೇಕಡ 40ರಷ್ಟು ಪ್ರಮಾಣದ ತ್ಯಾಜ್ಯ ಮಾತ್ರ ಮೂಲದಲ್ಲಿ ವಿಭಜನೆಗೊಳ್ಳುತ್ತದೆ. ಮನೆ ಮನೆಗಳಲ್ಲಿ ತ್ಯಾಜ್ಯ ವಿಭಜನೆಯನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ನೋಡಿಕೊಳ್ಳುವುದು ಹಾಗೂ ಪೌರ ಕಾರ್ಮಿಕರು/ಸಿಬ್ಬಂದಿಗಳು ಸಂಗ್ರಹ ಮತ್ತು ಸಾಗಾಟ ಸಮಯದಲ್ಲಿ ತ್ಯಾಜ್ಯಗಳನ್ನು ಮಿಶ್ರವಾಗದಂತೆ ನೋಡಿಕೊಳ್ಳುವ ಬಗ್ಗೆ ನಿಯೋಜಿತ ನಿವೃತ್ತ ಯೋಧರು (ತ್ಯಾಜ್ಯ ಶಿಸ್ತು ಪಾಲಕರು) ನೋಡಿಕೊಳ್ಳಲಿದ್ದಾರೆ. ಈ ವರದಿಯ ಪ್ರಕಾರ ಸದ್ಯಕ್ಕೆ ಈ ಕಾನೂನು ಬೆಂಗಳೂರು ನಗರಕ್ಕೆ ಮಾತ್ರ ಅನ್ವಯಿಸಲಾಗಿದೆ. ಮೂಲದಲ್ಲಿ ತ್ಯಾಜ್ಯ ವಿಭಜನೆಯು ತ್ಯಾಜ್ಯ ನಿರ್ವಹಣೆಯ ಪ್ರಮುಖ ಭಾಗವಾಗಿರುವುದು ಅಧ್ಯಯನಗಳಿಂದ ತಿಳಿದುಬರುತ್ತದೆ. ಎಲ್ಲಾ ಸ್ಥಳೀಯ ಸರಕಾರಗಳು ಮೂಲದಲ್ಲಿ ತ್ಯಾಜ್ಯ ವಿಭಜನೆಯನ್ನು ಕಟ್ಟುನಿಟ್ಟಾಗಿ ಪಾಲಿಸಲು ಕ್ರಮ ಕೈಗೊಳ್ಳಲು ಸಾಧ್ಯವೇ ಎಂದು ಅಧ್ಯಯನದಲ್ಲಿ ಪರಿಶೀಲಿಸಲಾಗಿದೆ.

ಚಂದೋರ್ಕರ್ ಮತ್ತು ರತ್ನಮ್ ಎ.ವಿ (2003)[4] ಇವರು ತ್ಯಾಜ್ಯ ಸಂಗ್ರಹ, ವಿಭಜನೆ ಮತ್ತು ವಿಲೇವಾರಿಗೆ ಸಂಬಂಧಿಸಿ ಆಸ್ಪತ್ರೆಗಳ ವ್ಯವಸ್ಥೆಗಳ ಕುರಿತು ನಡೆಸಿದ ಅಧ್ಯಯನದ ಪ್ರಕಾರ ತ್ಯಾಜ್ಯ ವಿಭಜನೆಯು ತ್ಯಾಜ್ಯ ಉತ್ಪಾದನಾ ಪ್ರಮಾಣವನ್ನು ಕಡಿಮೆ ಮಾಡುತ್ತದೆ ಹಾಗೂ ಸರಿಯಾದ ನಿರ್ವಹಣೆಗೆ ಸಹಾಯಕವಾಗುತ್ತದೆ. ಒಂದು ವೇಳೆ ರೋಗಾಣು ಮಿಶ್ರಿತ ತ್ಯಾಜ್ಯವು ಇತರ ತ್ಯಾಜ್ಯಗಳೊಂದಿಗೆ ಬೆರೆತರೆ ಇಡೀ ತ್ಯಾಜ್ಯವು ಮಲೀನವಾಗುತ್ತದೆ ಮತ್ತು ನಿರುಪಯೋಗ ವಾಗುತ್ತದೆ. ಆಸ್ಪತ್ರೆಯ ಇತರ ತ್ಯಾಜ್ಯಗಳನ್ನು ರೋಗಾಣು ಮಿಶ್ರಿತ ತ್ಯಾಜ್ಯಗಳಿಂದ ಪ್ರತ್ಯೇಕಿಸಿದರೆ ತ್ಯಾಜ್ಯ ನಿರ್ವಹಣೆಯು ಪರಿಣಾಮಕಾರಿಯಾದೀತು.ಇದಕ್ಕಾಗಿ ವಿವಿಧ ಬಣ್ಣಗಳ ಗುರುತಿನ ಕಸದ ತೊಟ್ಟಿಗಳನ್ನು ಅಳವಡಿಸಬೇಕು. ಹಾಗೆಯೇ ಅತ್ಯಂತ ಅಪಾಯಕಾರಿ ಲೋಹ ಮತ್ತು ರಾಸಾಯನಿಕ ತ್ಯಾಜ್ಯಗಳನ್ನು ಬೇರೆಯೇ ಸಂಗ್ರಹ ಮಾಡಬೇಕು. ಈ ಎಲ್ಲಾ ತ್ಯಾಜ್ಯಗಳನ್ನು ನಿರ್ವಹಿಸುವಾಗ ಆರೋಗ್ಯಕ್ಕೆ ಹಾನಿಯಾಗದ ರೀತಿಯಲ್ಲಿ ಜಾಗರೂಕರಾಗಿರಬೇಕು ಎಂದಿದ್ದಾರೆ.

ಕೋಷ್ಟಕ 5.5ರಲ್ಲಿ ವಿವಿಧ ವರ್ಗಗಳ ಪ್ರತಿಕ್ರಿಯೆದಾರರಲ್ಲಿ ಮನೆಯಲ್ಲಿ ತ್ಯಾಜ್ಯ ವಿಭಜನೆಯನ್ನು ಅನುಸರಿಸುವವರ ಅಂಕಿ-ಅಂಶವನ್ನು ನೀಡಲಾಗಿದೆ.ಈ ಮಾಹಿತಿಯು ವಿವಿಧ ವರ್ಗ ಮತ್ತು ತ್ಯಾಜ್ಯ ನಿರ್ವಹಣೆಯ ನಡುವಿನ ಸಂಬಂಧವನ್ನು ಅರ್ಥೈಸಿಕೊಳ್ಳಲು ಅಗತ್ಯವಾಗಿದೆ.

**ಕೋಷ್ಟಕ: 5.5**

**ಅಧ್ಯಯನ ವ್ಯಾಪ್ತಿಯಲ್ಲಿ ವಿವಿಧ ವರ್ಗಗಳ ಪ್ರತಿಕ್ರಿಯೆದಾರರ ಮನೆಯಲ್ಲಿ ತ್ಯಾಜ್ಯ ವಿಭಜನೆ ಅನುಸರಿಸುವವರು**

| ವರ್ಗ | ಹೌದು | ಶೇಕಡ | ಇಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಸಾಮಾನ್ಯ | 167 | 41 | 58 | 14 | 225 | 55 |
| ಹಿಂದುಳಿದ | 66 | 16 | 21 | 10 | 107 | 26 |
| ಪರಿಶಿಷ್ಟ ಜಾತಿ | 31 | 8 | 12 | 3 | 43 | 10 |
| ಪರಿಶಿಷ್ಟ ಪಂಗಡ | 23 | 6 | 12 | 3 | 35 | 9 |
| ಒಟ್ಟು | **287** | **70** | **123** | **30** | **410** | **100** |

ಒಟ್ಟು 55 ಶೇಕಡ ಸಾಮಾನ್ಯ ವರ್ಗದ ಜನರಲ್ಲಿ ಅಂದರೆ 225 ರಲ್ಲಿ 167 ಮಂದಿ ಮನೆಯಲ್ಲಿ ತ್ಯಾಜ್ಯ ವಿಭಜಿಸುವುದಾಗಿ ತಿಳಿಸಿದ್ದಾರೆ. ಶೇಕಡಾವಾರು ಕ್ರಮದಲ್ಲಿ ಹೇಳುವುದಾದರೆ 74 ಶೇಕಡ ಜನರು ವಿಂಗಡಿಸುವುದಾಗಿ ಹಾಗೂ 26 ಶೇಕಡ ಜನರು ಮೂಲದಲ್ಲಿ ವಿಭಜನೆಗೆ ಯಾವುದೇ ಕ್ರಮ ಕೈಗೊಂಡಿಲ್ಲ ಎಂದಿದ್ದಾರೆ. ಒಟ್ಟು ಹಿಂದುಳಿದ ವರ್ಗದವರಲ್ಲಿ 66 ಮಂದಿ ವಿಂಗಡಿಸುವುದಾಗಿ ಹೇಳಿದರೆ ಉಳಿದ 21 ಮಂದಿ ವಿಭಜನೆಯನ್ನು ಅನುಸರಿಸುವುದಿಲ್ಲ ಎಂದಿದ್ದಾರೆ. ಶೇಕಡಾವಾರು ಪ್ರಮಾಣದಲ್ಲಿ ವಿಭಜಿಸುವವರು 62 ಶೇಕಡ. ಪರಿಶಿಷ್ಟ ಜಾತಿಯಲ್ಲಿ 72 ಶೇಕಡ ವಿಂಗಡಿಸಿದರೆ, ಪರಿಶಿಷ್ಟ ಪಂಗಡದಲ್ಲಿ 65 ಶೇಕಡ ಜನ ವಿಂಗಡಣೆ ನಡೆಸುತ್ತಾರೆ. ಒಟ್ಟು 410 ಪ್ರತಿಕ್ರಿಯೆದಾರರಲ್ಲಿ 287 ಅಂದರೆ ಸರಾಸರಿ 70 ಶೇಕಡ ಜನರು ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಆದ್ಯತೆ ನೀಡುತ್ತಿರುವುದು ಅಂಕಿ ಅಂಶಗಳಿಂದ ತಿಳಿಯುತ್ತದೆ. ವರ್ಗಗಳ ನಡುವೆ ಹೋಲಿಕೆ ಮಾಡಿದಾಗ ಅತೀ ಹೆಚ್ಚು ಸಾಮಾನ್ಯ ವರ್ಗದಲ್ಲಿ ಕಂಡು ಬಂದರೂ, ಇತರ ವರ್ಗಗಳಲ್ಲಿ ನಿರ್ಲಕ್ಷ್ಯ ಕಂಡುಬರುವುದಿಲ್ಲ. ಆದ್ದರಿಂದ ತ್ಯಾಜ್ಯ ವಿಂಗಡಣೆಯ ಮೇಲೆ ಜಾತಿ–ವರ್ಗಗಳ ಪ್ರಭಾವ ಕಡಿಮೆ ಇರುವುದು ಕಂಡು ಬರುತ್ತದೆ.

ಮೂಲದಲ್ಲಿ ಕಸ ವಿಂಗಡಣೆ ಮಾಡುವಲ್ಲಿ ಬೇರೆ ಬೇರೆ ಧರ್ಮಗಳಿಗೆ ಸಂಬಂಧಿಸಿದ ಪ್ರತಿಕ್ರಿಯೆದಾರರು ನೀಡಿದ ಅಭಿಪ್ರಾಯವನ್ನು ಕೋಷ್ಟಕ 5.6ರಲ್ಲಿ ನೀಡಲಾಗಿದೆ.

**ಕೋಷ್ಟಕ: 5.6**

**ವಿವಿಧ ಧರ್ಮಗಳ ಒಟ್ಟು ಪ್ರತಿಕ್ರಿಯೆದಾರರ ಮನೆಯಲ್ಲಿ ತ್ಯಾಜ್ಯ ವಿಭಜನೆಯನ್ನು ಅನುಸರಿಸುವವರು**

| ಧರ್ಮ | ಹೌದು | ಶೇಕಡ | ಇಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಹಿಂದು | 239 | 58 | 83 | 20 | 322 | 79 |
| ಮುಸ್ಲಿಂ | 17 | 4 | 22 | 5 | 39 | 10 |
| ಕ್ರೈಸ್ತ | 30 | 7 | 17 | 4 | 47 | 11 |
| ಇತರ(ಜೈನ) | 2 | 0 | 0 | 0 | 02 | 0 |
| ಒಟ್ಟು | **288** | **70** | **122** | **30** | **410** | **100** |

ಒಟ್ಟು ಪ್ರತಿಕ್ರಿಯೆದಾರರಲ್ಲಿ 79 ಶೇಕಡ ಹಿಂದುಗಳು, 10 ಶೇಕಡ ಮುಸ್ಲಿಮರು ಮತ್ತು 11 ಶೇಕಡ ಕ್ರೈಸ್ತರು. ಒಟ್ಟು 322 ಹಿಂದುಗಳಲ್ಲಿ 239 ಮಂದಿ ವಿಭಜನೆ ಮಾಡುವವರು, ಅಂದರೆ 74 ಶೇಕಡ, 39 ಮುಸ್ಲಿಮರಲ್ಲಿ 17 ಮಂದಿ, ಅಂದರೆ 44 ಶೇಕಡ ಮತ್ತು 47 ಕ್ರೈಸ್ತರಲ್ಲಿ 30 ಮಂದಿ ಅಂದರೆ 64 ಶೇಕಡ ಮೂಲದಲ್ಲಿ ವಿಂಗಡಣೆ ನಡೆಸುತ್ತಾರೆ. ಧರ್ಮಗಳ ನಡುವೆ ಹೋಲಿಕೆ ಮಾಡಿದಾಗ ಮುಸ್ಲಿಮರಲ್ಲಿ ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡುವವರ ಪ್ರಮಾಣ ತುಂಬಾ ಕಡಿಮೆ ಇದೆ.

ಶಿಕ್ಷಣವು ಸಾಮಾಜಿಕ ಸುಧಾರಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ತ್ಯಾಜ್ಯ ವಿಲೇವಾರಿಗೆ ಸಂಬಂಧಿಸಿಯೂ ಸುಶಿಕ್ಷಿತ ಸಮಾಜದಿಂದ ಹೆಚ್ಚಿನ ಸಹಕಾರವನ್ನು ನಿರೀಕ್ಷಿಸಬಹುದು. ಕೋಷ್ಟಕ 5.7ರಲ್ಲಿ ವಿವಿಧ ಶೈಕ್ಷಣಿಕ ಅರ್ಹತೆ ಹೊಂದಿದವರಲ್ಲಿ ಮನೆಯಲ್ಲಿ ತ್ಯಾಜ್ಯ ವಿಭಜನೆ ನಡೆಸುವವರ ಅಂಕಿ–ಅಂಶ ನೀಡಲಾಗಿದೆ.

**ಕೋಷ್ಟಕ:5.7**

**ಒಟ್ಟು ಮಾಹಿತಿದಾರರಲ್ಲಿ ವಿವಿಧ ಶೈಕ್ಷಣಿಕ ಅರ್ಹತೆ ಹೊಂದಿದವರ ಮನೆಯಲ್ಲಿ ತ್ಯಾಜ್ಯ ವಿಭಜನೆಯನ್ನು ಅನುಸರಿಸುವವರು**

| ಶಿಕ್ಷಣ | ಹೌದು | ಶೇಕಡ | ಇಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಪ್ರಾಥಮಿಕ | 40 | 10 | 27 | 7 | 67 | 16 |
| ಪ್ರೌಢ ಶಾಲೆ | 81 | 20 | 48 | 12 | 129 | 31 |
| ಪದವಿ ಪೂರ್ವ | 78 | 19 | 5 | 6 | 103 | 25 |
| ಪದವಿ | 62 | 15 | 16 | 4 | 78 | 19 |
| ಸ್ನಾತಕೋತ್ತರ | 28 | 7 | 5 | 1 | 33 | 8 |
| ಒಟ್ಟು | **289** | **70** | **121** | **30** | **410** | **100** |

ಕ್ಷೇತ್ರಕಾರ್ಯದಲ್ಲಿ ಸಂದರ್ಶನ ಮಾಡಿದ ಒಟ್ಟು 67 ಮಂದಿ ಪ್ರಾಥಮಿಕ ಶಿಕ್ಷಣ ಪಡೆದವರಲ್ಲಿ 40 ಮಂದಿ ಅಂದರೆ 60 ಶೇಕಡ ತ್ಯಾಜ್ಯ ವಿಭಜನೆಯನ್ನು ಅನುಸರಿಸುವವರು. ಪ್ರೌಢ ಶಿಕ್ಷಣ ಪಡೆದವರಲ್ಲಿ 63 ಶೇಕಡ ಮೂಲದಲ್ಲಿ ವಿಭಜಿಸುತ್ತಿರುವುದಾಗಿ ತಿಳಿಸಿದ್ದಾರೆ. ಪದವಿ ಶಿಕ್ಷಣ ಪಡೆದವರಲ್ಲಿ ಇದು ಇನ್ನೂ ಹೆಚ್ಚಿದ್ದು 76 ಶೇಕಡ ಇದೆ. ಸ್ನಾತಕೋತ್ತರ ಪದವೀಧರರು ಮೂಲದಲ್ಲಿ ಕಸ ವಿಂಗಡಣೆಗೆ ಇನ್ನೂ ಹೆಚ್ಚು ಆದ್ಯತೆ ನೀಡುತ್ತಿದ್ದು ಅದು 85 ಶೇಕಡ ಇದೆ. ಮೇಲಿನ ಅಂಕಿ-ಅಂಶವನ್ನು ಗಮನಿಸಿದಾಗ ಶೈಕ್ಷಣಿಕ ಅರ್ಹತೆ ಹಾಗೂ ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡುವವರ ಸಂಖ್ಯೆಗೆ ನೇರ ಸಂಬಂಧವಿರುವುದು ಕಂಡುಬರುತ್ತದೆ. ಸರಕಾರಗಳು ತ್ಯಾಜ್ಯ ವಿಭಜನೆಗೆ ಸಂಬಂಧಿಸಿ ಕೈಗೊಂಡ ಕಾನೂನಾತ್ಮಕ ಹಾಗೂ ಇತರ ಕ್ರಮಗಳು ಹೆಚ್ಚು ಶಿಕ್ಷಣ ಪಡೆದವರ ಮೇಲೆ ಹೆಚ್ಚು ಪ್ರಭಾವ ಬೀರಿರುವುದು ಇದಕ್ಕೆ ಕಾರಣವಿರಬಹುದೆಂದು ಊಹಿಸಬಹುದು. ತ್ಯಾಜ್ಯ ನಿರ್ವಹಣೆಯ ಅನುಷ್ಠಾನಕ್ಕೆ ಜನರಲ್ಲಿ ಜಾಗೃತಿ ಮೂಡಿಸುವುದು ಹೆಚ್ಚು ಪರಿಣಾಮಕಾರಿ ಎಂಬುದು ಮೇಲಿನ ಅಂಕಿ-ಅಂಶಗಳಿಂದ ತಿಳಿದುಬರುತ್ತದೆ.

ಸ್ಥಳೀಯ ಸರಕಾರಗಳು ತ್ಯಾಜ್ಯ ನಿರ್ವಹಣಾ ಅಭಿಯಾನದಲ್ಲಿ ಸ್ವಯಂಸೇವಾ ಸಂಸ್ಥೆಗಳನ್ನು, ಶಾಲಾ-ಕಾಲೇಜು ವಿದ್ಯಾರ್ಥಿಗಳನ್ನು ಮತ್ತು ಸಾರ್ವಜನಿಕರನ್ನು ತೊಡಗಿಸಿಕೊಳ್ಳುತ್ತವೆ. ಜನರ ಭಾಗವಹಿಸುವಿಕೆ ಹೆಚ್ಚಾದಷ್ಟು ಉದ್ದೇಶ ಯಶಸ್ವಿಯಾಗುತ್ತದೆ. ಕೋಷ್ಟಕ 5.8ರಲ್ಲಿ ತ್ಯಾಜ್ಯ ನಿರ್ವಹಣಾ ಅಭಿಯಾನದಲ್ಲಿ ವಿವಿಧ ಕಾರಣಕ್ಕಾಗಿ ಭಾಗವಹಿಸಿರುವ ಪುರುಷರು ಮತ್ತು ಮಹಿಳೆಯರ ಅಂಕಿ ಅಂಶ ನೀಡಲಾಗಿದೆ.

**ಕೋಷ್ಟಕ: 5.8**

**ಒಟ್ಟು ಮಾಹಿತಿದಾರರಲ್ಲಿ ತ್ಯಾಜ್ಯ ನಿರ್ವಹಣಾ ಅಭಿಯಾನದಲ್ಲಿ ವಿವಿಧ ಕಾರಣಕ್ಕಾಗಿ ಭಾಗವಹಿಸಿರುವ ಪುರುಷರು ಹಾಗೂ ಮಹಿಳೆಯರು**

| ಲಿಂಗ | ಪರಿಸರ ಸೌಂದರ್ಯ | ಶೇಕಡ | ಆರೋಗ್ಯ | ಶೇಕಡ | ಪರಿಸರ ಸಂರಕ್ಷಣೆ | ಶೇಕಡ | ಅಭಿವೃದ್ಧಿ | ಶೇಕಡ | ಭಾಗವ ಹಿಸಿಲ್ಲ | ಶೇಕಡ | ಒಟ್ಟು |
|---|---|---|---|---|---|---|---|---|---|---|---|
| ಪುರುಷ | 8 | 2 | 69 | 17 | 49 | 12 | 13 | 3 | 160 | 39 | 299 |
| ಮಹಿಳೆ | 9 | 2 | 29 | 7 | 12 | 3 | 8 | 2 | 53 | 13 | 111 |
| **ಒಟ್ಟು** | **17** | **4** | **98** | **24** | **61** | **15** | **21** | **5** | **213** | **52** | **410** |
| ಗ್ರಾಮೀಣ | 10 | 5 | 54 | 27 | 38 | 19 | 12 | 6 | 86 | 43 | 200 |
| **ನಗರ** | **5** | **3** | **46** | **22** | **23** | **11** | **10** | **5** | **126** | **60** | **210** |

ಜನರ ಪಾಲ್ಗೊಳ್ಳುವಿಕೆಗೆ ಬೇರೆ ಬೇರೆ ಕಾರಣಗಳಿರುತ್ತವೆ. ಜನರೇ ತಿಳಿಸಿದಂತೆ ಸಾಮಾನ್ಯವಾಗಿ ಪರಿಸರ ಸೌಂದರ್ಯ, ಆರೋಗ್ಯ, ಪರಿಸರ ಸಂರಕ್ಷಣೆ, ಅಭಿವೃದ್ಧಿ ಮುಂತಾದುವು ಪ್ರಮುಖ ಕಾರಣಗಳು. ಇದಲ್ಲದೆ ಇನ್ನಿತರ ವೈಯಕ್ತಿಕ ಲಾಭ, ಸಾಮಾಜಿಕ ಪ್ರತಿಷ್ಠೆ, ಸಂಗಡಿಗರ ಒತ್ತಡ

ಮುಂತಾದ ಅಂಶಗಳೂ ಕೆಲವರಿಗೆ ಭಾಗವಹಿಸುವಂತೆ ಮಾಡುತ್ತವೆ. ಹಾಗೆಯೇ ಎಷ್ಟೋ ಸಂದರ್ಭಗಳಲ್ಲಿ ಜನರು ಬೇರೆ ಬೇರೆ ಕಾರಣಗಳಿಗೋಸ್ಕರ ಭಾಗವಹಿಸುವುದಿಲ್ಲ. ಅವುಗಳಲ್ಲಿ ಮುಖ್ಯವಾಗಿ ಆಸಕ್ತಿ ಇಲ್ಲದಿರುವುದು, ಸಮಯದ ಅಭಾವ, ನಿಷ್ಪ್ರಯೋಜಕ ಎನ್ನುವ ಭಾವನೆ ಹೀಗೆ ಅನೇಕ ಕಾರಣಗಳಿರುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಒಟ್ಟು 410 ಪ್ರತಿಕ್ರಿಯೆದಾರರಲ್ಲಿ 160 ಮಹಿಳೆಯರು ಮತ್ತು 53 ಪುರುಷರ ಸಹಿತ ಒಟ್ಟು 52 ಶೇಕಡ ಜನ ಯಾವುದೇ ಅಭಿಯಾನದಲ್ಲಿ ಭಾಗವಹಿಸಿಲ್ಲ ಎನ್ನುವ ಉತ್ತರ ನೀಡಿದ್ದಾರೆ.

ಪುರುಷರು ಮತ್ತು ಮಹಿಳೆಯರ ಪ್ರಮಾಣವನ್ನು ತೆಗೆದುಕೊಂಡಾಗ ಒಟ್ಟು 299 ಪುರುಷರಲ್ಲಿ 139 ಮಂದಿ ಭಾಗವಹಿಸಿದ್ದು 46 ಶೇಕಡ ಇದೆ. ಒಟ್ಟು 111 ಮಹಿಳಾ ಪ್ರತಿಕ್ರಿಯೆದಾರರಲ್ಲಿ 58 ಮಂದಿ ಅಂದರೆ 52 ಶೇಕಡ ಭಾಗವಹಿಸಿರುವುದಾಗಿ ತಿಳಿಸಿದ್ದಾರೆ. ಒಟ್ಟು ಸರಾಸರಿ 48 ಶೇಕಡ ಮಂದಿ ಮಾತ್ರ ಬೇರೆ ಬೇರೆ ತ್ಯಾಜ್ಯ ನಿರ್ವಹಣೆ, ಸ್ವಚ್ಛತೆ ಹಾಗು ಆರೋಗ್ಯಕ್ಕೆ ಸಂಬಂಧಿಸಿದ ಸಭೆ, ಜಾಥಾ, ಮೆರವಣಿಗೆ ಮುಂತಾದ ಅಭಿಯಾನಗಳಲ್ಲಿ ಭಾಗವಹಿಸಿದ್ದು, ಜನರ ಪಾಲ್ಗೊಳ್ಳುವಿಕೆಯನ್ನು ಇನ್ನಷ್ಟು ಹೆಚ್ಚಿಸುವುದರ ಮೂಲಕ ಜನಜಾಗೃತಿ ಮೂಡಿಸಲು ಸಾಧ್ಯವಾಗುತ್ತದೆ.

ಸಾಮಾನ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಸ್ವಸಹಾಯ ಸಂಘ, ಶಾಲಾಭಿವೃದ್ಧಿ ಸಮಿತಿ, ಯುವಕ–ಯುವತಿ ಸಂಘಗಳ ಮೂಲಕ ಜನಸಾಮಾನ್ಯರು ಭಾಗವಹಿಸುತ್ತಾರೆ. ನಗರ ಸ್ಥಳೀಯ ಸರಕಾರಗಳ ವ್ಯಾಪ್ತಿಯಲ್ಲಿ ಜನಸಾಮಾನ್ಯರ ಭಾಗವಹಿಸುವಿಕೆ ಕಡಿಮೆ ಇರುವುದು ಕಂಡು ಬರುತ್ತದೆ. ಗ್ರಾಮೀಣ ಪ್ರದೇಶಲ್ಲಿ 43 ಶೇಕಡ ಜನ ಭಾಗವಹಿಸಿಲ್ಲ ಎಂದು ಪ್ರತಿಕ್ರಿಯೆ ನೀಡಿದರೆ ನಗರ ವ್ಯಾಪ್ತಿಯ ಪ್ರತಿಕ್ರಿಯೆದಾರರಲ್ಲಿ 60 ಶೇಕಡ ಜನ ಭಾಗವಹಿಸಿಲ್ಲ ಎಂದಿದ್ದಾರೆ. ಹಾಗೆಯೇ ಕಾರಣಗಳನ್ನು ವಿಶ್ಲೇಷಿಸಿದಾಗ ಆರೋಗ್ಯ ದೃಷ್ಟಿಯಿಂದ ಭಾಗವಹಿಸುವವರ ಸಂಖ್ಯೆ ಹೆಚ್ಚಿದ್ದು, ನಂತರದ ಕಾರಣ ಪರಿಸರ ಸಂರಕ್ಷಣೆಯಾಗಿದೆ. ಜನರು ಆರೋಗ್ಯ ಮತ್ತು ಪರಿಸರ ಸಂರಕ್ಷಣೆಗೆ ಆದ್ಯತೆ ನೀಡುತ್ತಿರುವುದು ಈ ಮೂಲಕ ವ್ಯಕ್ತವಾಗಿದೆ. ಗ್ರಾಮೀಣ ಮತ್ತು ನಗರ ಪ್ರದೇಶಗಳ ವ್ಯಾಪ್ತಿಯಲ್ಲಿ ಜನಾಭಿಪ್ರಾಯದ ಪ್ರಮಾಣ ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿದೆ.

ಜನಸಾಮಾನ್ಯರು ತಮ್ಮಲ್ಲಿ ಉತ್ಪಾದನೆಯಾಗುವ ತ್ಯಾಜ್ಯವನ್ನು ಹೊರಹಾಕಲು ಸಾಮಾನ್ಯವಾಗಿ ಸಾರ್ವಜನಿಕ ತೊಟ್ಟಿಯನ್ನು ಅವಲಂಬಿಸುತ್ತಾರೆ. ತೊಟ್ಟಿಗಳಿಲ್ಲದ ಕಡೆ ರಸ್ತೆ ಬದಿಯಲ್ಲಿ/ಚರಂಡಿಯಲ್ಲಿ ಅನಧಿಕೃತವಾಗಿ ಎಸೆಯುತ್ತಾರೆ. ಕೆಲವು ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಮನೆ ಬಾಗಿಲಿನಿಂದ

ಕಸ ಸಂಗ್ರಹಿಸುವ ವ್ಯವಸ್ಥೆ ಇದೆ. ಕೋಷ್ಟಕ 5.9ರಲ್ಲಿ ವಿವಿಧ ಶೈಕ್ಷಣಿಕ ಅರ್ಹತೆ ಹೊಂದಿರುವವರು ತ್ಯಾಜ್ಯವನ್ನು ಹೊರಹಾಕುವ ವಿಧಾನದ ಬಗ್ಗೆ ನೀಡಿದ ಪ್ರತಿಕ್ರಿಯೆಯ ಅಂಕಿ-ಅಂಶವಿದೆ.

**ಕೋಷ್ಟಕ: 5.9**

**ಒಟ್ಟು ಮಾಹಿತಿದಾರರಲ್ಲಿ ವಿವಿಧ ಶೈಕ್ಷಣಿಕ ಅರ್ಹತೆ ಹೊಂದಿದವರು ತಮ್ಮ ಮನೆ ತ್ಯಾಜ್ಯವನ್ನು ಹೊರಹಾಕುವ ವಿಧಾನದ ವಿವರ**

| ಶಿಕ್ಷಣ | ಸಾರ್ವಜನಿಕ ತೊಟ್ಟಿ | ಶೇಕಡ | ರಸ್ತೆ ಬದಿ ಚರಂಡಿ | ಶೇಕಡ | ಬಯಲು ಪ್ರದೇಶ | ಶೇಕಡ | ಮನೆ ಬಾಗಿಲಿನಿಂದ ಸಂಗ್ರಹಿಸುತ್ತಾರೆ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|---|---|---|---|
| ಪ್ರಾಥಮಿಕ | 24 | 6 | 5 | 1 | 0 | 0 | 38 | 9 | 67 | 16 |
| ಪ್ರೌಢ ಶಾಲೆ | 45 | 11 | 8 | 2 | 0 | 0 | 76 | 19 | 129 | 31 |
| ಪದವಿಪೂರ್ವ | 37 | 9 | 5 | 1 | 0 | 0 | 61 | 15 | 103 | 25 |
| ಪದವಿ | 29 | 7 | 2 | 0 | 0 | 0 | 47 | 11 | 78 | 19 |
| ಸ್ನಾತಕೋತ್ತರ | 12 | 3 | 0 | 0 | 0 | 0 | 21 | 5 | 33 | 8 |
| **ಒಟ್ಟು** | **147** | **36** | **20** | **5** | **0** | **0** | **243** | **59** | **410** | **100** |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಪ್ರಾಥಮಿಕ ಶಿಕ್ಷಣ ಪಡೆದವರಲ್ಲಿ ಕೇವಲ 1 ಶೇಕಡ ಮಾತ್ರ ಅವೈಜ್ಞಾನಿಕ ಕ್ರಮವನ್ನು(ರಸ್ತೆ ಬದಿ/ಚರಂಡಿ/ಬಯಲು ಪ್ರದೇಶಗಳು ಎಸೆಯುವುದು) ಅನುಸರಿಸಿರುವುದು ಕಂಡು ಬಂದರೆ, ಪ್ರೌಢ ಶಿಕ್ಷಣ ಪಡೆದವರಲ್ಲಿ 2 ಶೇಕಡ ಮತ್ತು ಪದವಿಪೂರ್ವ ಶಿಕ್ಷಣ ಪಡೆದವರಲ್ಲಿ 1 ಶೇಕಡ ಇದೆ. ಉಳಿದಂತೆ ಪದವಿ ಹಾಗೂ ಸ್ನಾತಕೋತ್ತರ ಪದವಿ ಪಡೆದವರಲ್ಲಿ ಅವೈಜ್ಞಾನಿಕ ಕ್ರಮವನ್ನು ಅನುಸರಿಸುವವರು ಕಂಡು ಬಂದಿಲ್ಲ. ಶೈಕ್ಷಣಿಕ ಅರ್ಹತೆ ಹಾಗೂ ತ್ಯಾಜ್ಯ ಹೊರ ಹಾಕುವ ವಿಧಾನಕ್ಕೆ ಧನಾತ್ಮಕ ಸಂಬಂಧ ವಿರುವುದು ಈ ಮೂಲಕ ಧೃಢಪಟ್ಟಿದೆ.

ತ್ಯಾಜ್ಯ ನಿರ್ವಹಣಾ ಅಭಿಯಾನದಲ್ಲಿ ಭಾಗವಹಿಸಿರುವವರಲ್ಲಿ ವಿವಿಧ ಶೈಕ್ಷಣಿಕ ಅರ್ಹತೆ ಹೊಂದಿದವರಿದ್ದು, ಅವರು ಯಾವ ಕಾರಣಕ್ಕೆ ಭಾಗವಹಿಸಿದ್ದಾರೆ ಎನ್ನುವ ಮಾಹಿತಿಯನ್ನು ಕೋಷ್ಟಕ 5.10ರಲ್ಲಿ ಕಾಣಬಹುದು.

## ಕೋಷ್ಟಕ: 5.10

### ಒಟ್ಟು ಮಾಹಿತಿದಾರರಲ್ಲಿ ವಿವಿಧ ಶೈಕ್ಷಣಿಕ ಅರ್ಹತೆ ಹೊಂದಿದವರು ತ್ಯಾಜ್ಯ ನಿರ್ವಹಣಾ ಅಭಿಯಾನದಲ್ಲಿ ಭಾಗವಹಿಸಿರುವುದಕ್ಕೆ ನೀಡಿದ ಕಾರಣಗಳು

| ಶಿಕ್ಷಣ | ಪರಿಸರ ಸೌಂದರ್ಯ | ಶೇಕಡ | ಆರೋಗ್ಯ | ಶೇಕಡ | ಪರಿಸರ ಸಂರಕ್ಷಣೆ | ಶೇಕಡ | ಅಭಿವೃದ್ಧಿ | ಶೇಕಡ | ಒಟ್ಟು | ಶೇಕಡ | ಭಾಗವಹಿಸಿಲ್ಲ | ಶೇಕಡ | ಒಟ್ಟು |
|---|---|---|---|---|---|---|---|---|---|---|---|---|---|
| ಪ್ರಾಥಮಿಕ | 6 | 1 | 23 | 5 | 4 | 1 | 1 | 0 | 34 | 51 | 33 | 67 | 16 |
| ಪ್ರೌಢ ಶಾಲೆ | 5 | 1 | 34 | 8 | 13 | 3 | 4 | 1 | 56 | 43 | 73 | 129 | 31 |
| ಪ. ಪೂರ್ವ | 1 | 0 | 20 | 5 | 20 | 5 | 8 | 2 | 49 | 48 | 54 | 103 | 25 |
| ಪದವಿ | 1 | 0 | 16 | 4 | 10 | 2 | 10 | 2 | 37 | 47 | 41 | 78 | 19 |
| ಸ್ನಾತಕೋತ್ತರ | 0 | 0 | 9 | 2 | 12 | 3 | 0 | 0 | 21 | 64 | 12 | 33 | 8 |
| ಒಟ್ಟು | **13** | **4** | **102** | **24** | **59** | **15** | **23** | **5** | **197** | **–** | **213** | **410** | **100** |

ಶೈಕ್ಷಣಿಕ ಅರ್ಹತೆಯ ಆಧಾರದ ಮೇಲೆ ವಿಶ್ಲೇಷಿಸಿದಾಗ ಯಾವುದೇ ಅಭಿಯಾನದಲ್ಲಿ ಭಾಗವಹಿಸಿದವರ ಪ್ರಮಾಣ ಒಟ್ಟು 52 ಶೇಕಡ ಇದ್ದು ಉಳಿದ 48 ಶೇಕಡದಲ್ಲಿ ಪ್ರಾಥಮಿಕ ಶಿಕ್ಷಣ ಪಡೆದ 67 ಪ್ರತಿಕ್ರಿಯೆದಾರರಲ್ಲಿ 34 ಮಂದಿ ಅಂದರೆ 51 ಶೇಕಡ ಜನ ಭಾಗವಹಿಸಿದ್ದಾರೆ.ಪ್ರೌಢ ಶಿಕ್ಷಣ ಪಡೆದವರಲ್ಲಿ 43 ಶೇಕಡ, ಪದವಿಪೂರ್ವ ಶಿಕ್ಷಣ ಪಡೆದವರಲ್ಲಿ 48 ಶೇಕಡ, ಪದವಿ ಶಿಕ್ಷಣ ಪಡೆದವರಲ್ಲಿ 47 ಶೇಕಡ ಹಾಗೂ ಸ್ನಾತಕೋತ್ತರ ಪದವಿ ಪಡೆದವರಲ್ಲಿ 97 ಮಂದಿಯಲ್ಲಿ 64 ಮಂದಿ ಅಂದರೆ 66 ಶೇಕಡ ಭಾಗವಹಿಸಿರುವುದಾಗಿ ತಿಳಿಸಿದ್ದಾರೆ. ಶೈಕ್ಷಣಿಕ ಆಧಾರದಲ್ಲಿ ವಿಶ್ಲೇಷಿಸಿದಾಗ ಮಹತ್ವದ ವ್ಯತ್ಯಾಸಗಳು ಕಂಡುಬರುವುದಿಲ್ಲ. ಕೋಷ್ಟಕ 5.8ರಲ್ಲಿ ಕಂಡು ಬರುವಂತೆ ಆರೋಗ್ಯ ಮತ್ತು ಪರಿಸರ ಸಂರಕ್ಷಣೆ ದೃಷ್ಟಿಯಿಂದ ಸ್ವಚ್ಛತಾ ಅಭಿಯಾನಗಳಲ್ಲಿ ಭಾಗವಹಿಸಿರುವವರ ಸಂಖ್ಯೆ ಅಧಿಕವಿದೆ. ಜನರ ಪಾಲ್ಗೊಳ್ಳುವಿಕೆಯನ್ನು ಹೆಚ್ಚು ಮಾಡುವ ಅವಶ್ಯಕತೆಯಿರುವುದು ಈ ಅಂಕಿ–ಅಂಶಗಳಿಂದ ತಿಳಿದುಬರುತ್ತದೆ.

ಅನೇಕ ತ್ಯಾಜ್ಯ ವಿಲೇವಾರಿ ವಿಧಾನಗಳು ಚಾಲ್ತಿಯಲ್ಲಿದ್ದು, ವಿಲೇವಾರಿ ವಿಧಾನದ ಅಳವಡಿಕೆ ಸಂಪನ್ಮೂಲ ಮತ್ತು ದೊರಕುವ ತ್ಯಾಜ್ಯ ವಿಧ ಹಾಗೂ ಪರಿಮಾಣವನ್ನು ಅವಲಂಬಿಸಿದೆ. ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡಂತೆ ಕೆಲವು ಸ್ಥಳೀಯ ಸಂಸ್ಥೆಗಳು ಬಹುಪಾಲು ತ್ಯಾಜ್ಯವನ್ನು ಭೂಭರ್ತಿ ಮಾಡುತ್ತಿದ್ದು ಯಾವುದೇ ಆದಾಯವನ್ನು ತ್ಯಾಜ್ಯದಿಂದ ಗಳಿಸುವುದಿಲ್ಲ. ಆರಂಭದಲ್ಲಿ ಭೂಭರ್ತಿಗೆ ಸಾಕಷ್ಟು ಜಾಗ ದೊರೆತರೂ, ಮುಂದಿನ ದಿನಗಳಲ್ಲಿ ಜಾಗದ ಕೊರತೆಯ ಜೊತೆಗೆ ಲೀಚೆಟ್ ಸಮಸ್ಯೆಯೂ ಉದ್ಭವಿಸುತ್ತದೆ. ಸಾವಯವ ಗೊಬ್ಬರ ತಯಾರಿಕೆ ಉಳಿದ ವಿಲೇವಾರಿ ವಿಧಾನಗಳಿಗಿಂತ ಹೆಚ್ಚು ಮಿತವ್ಯಯ ಮತ್ತು ಸಣ್ಣ ಪ್ರಮಾಣದ ಆದಾಯವನ್ನೂ ತಂದುಕೊಡುತ್ತದೆ.

ದಹಿಸುವಿಕೆ ಮಿತವ್ಯಯ ವಿಧಾನ ಆದರೆ ಯಾವುದೇ ಆದಾಯಗಳಿಸಲು ಸಾಧ್ಯವಿಲ್ಲ, ಜೊತೆಗೆ ವಾಯುಮಾಲಿನ್ಯವನ್ನು ಹೆಚ್ಚಿಸುತ್ತದೆ. ವಿಂಗಡಣೆಯಾಗದ, ನಿರುಪಯುಕ್ತ ತ್ಯಾಜ್ಯಗಳ ವಿಲೇವಾರಿಗೆ ಭೂಭರ್ತಿಯೊಂದೇ ಪರಿಹಾರ. ಇವು ಮೂರು ಸಾಮಾನ್ಯ ವಿಧಾನಗಳಾದರೆ ಇತರ ಅನೇಕ ವೈಜ್ಞಾನಿಕ ವಿಧಾನಗಳನ್ನು ಜಗತ್ತಿನಾದ್ಯಂತ ಅನುಸರಿಸುತ್ತಿದ್ದಾರೆ. ವಿವಿಧ ತ್ಯಾಜ್ಯಗಳನ್ನು ಪುನರುತ್ಪಾದನೆ ಮಾಡುವುದು ವೆಚ್ಚದಾಯಕವಾದರೂ ಸಂಪನ್ಮೂಲಗಳ ಸಂರಕ್ಷಣೆ ಹಾಗೂ ತ್ಯಾಜ್ಯ ವಿಲೇವಾರಿ ಏಕಕಾಲದಲ್ಲಿ ನಡೆಯುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನ ಊರ್ವದಲ್ಲಿರುವ ಬಯೋ ಮಿಥೆನೈಸೇಶನ್ ಘಟಕ ಹೊರತುಪಡಿಸಿ ಎರೆಹುಳು ಗೊಬ್ಬರ ಮತ್ತು ಸಾವಯವ ಗೊಬ್ಬರ ಘಟಕಗಳು ಮಾತ್ರ ಬೇರೆ ಬೇರೆ ಗ್ರಾಮ ಪಂಚಾಯತ್ ಹಾಗೂ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಕಾರ್ಯಾಚರಿಸುತ್ತಿದ್ದು, ಇನ್ನುಳಿದ ಯಾವುದೇ ವೈಜ್ಞಾನಿಕ ವಿಧಾನಗಳನ್ನು ಅಳವಡಿಸಿಲ್ಲ. ತಳಮಟ್ಟದಲ್ಲಿ ಶೈಕ್ಷಣಿಕ ಸಂಸ್ಥೆಗಳಲ್ಲಿ ಕೊಳವೆ ಗೊಬ್ಬರ (ಪೈಪ್ ಕಂಪೋಸ್ಟ್), ದಹನ ಕುಲುಮೆ, ನ್ಯಾಪ್‌ಕಿನ್ ಬರ್ನರ್ ಇತ್ಯಾದಿಗಳನ್ನು ಕಾಣಬಹುದು. ಆಸ್ಪತ್ರೆ ತ್ಯಾಜ್ಯ ಹಾಗೂ ಎಮ್‌ಆರ್ ಪಿ ಎಲ್ ನಂತಹ ದೊಡ್ಡ ಕೈಗಾರಿಕೆಗಳು ತಮ್ಮಲ್ಲಿ ಉತ್ಪಾದನೆಯಾಗುವ ತ್ಯಾಜ್ಯಗಳನ್ನು ವೈಜ್ಞಾನಿಕ ವಿಧಾನಗಳಲ್ಲಿ ವಿಲೇವಾರಿ ಮಾಡುತ್ತಿವೆ. ಕೋಷ್ಟಕ 5.11ರಲ್ಲಿ ವಿವಿಧ ಶೈಕ್ಷಣಿಕ ಅರ್ಹತೆ ಹೊಂದಿದವರು ಅಭಿಪ್ರಾಯಪಡುವ ಅತ್ಯುತ್ತಮ ವಿಲೇವಾರಿ ವಿಧಾನಗಳ ಬಗ್ಗೆ ಮಾಹಿತಿ ನೀಡಲಾಗಿದೆ.

**ಕೋಷ್ಟಕ: 5.11**

**ಒಟ್ಟು ಪ್ರತಿಕ್ರಿಯೆದಾರರಲ್ಲಿ ವಿವಿಧ ಶೈಕ್ಷಣಿಕ ಅರ್ಹತೆ ಹೊಂದಿದವರು ಅಭಿಪ್ರಾಯಪಡುವ ಅತ್ಯುತ್ತಮ ವಿಲೇವಾರಿ ವಿಧಾನದ ವಿವರ**

| ಶಿಕ್ಷಣ | ಗೊಬ್ಬರ ತಯಾರಿಕೆ | ಶೇಕಡ | ದಹಿಸುವಿಕೆ | ಶೇಕಡ | ಭೂಭರ್ತಿ | ಶೇಕಡ | ಇತರ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|---|---|---|---|
| ಪ್ರಾಥಮಿಕ | 37 | 9 | 13 | 3 | 5 | 1 | 12 | 3 | 67 | 16 |
| ಪ್ರೌಢ ಶಾಲೆ | 76 | 19 | 16 | 4 | 5 | 1 | 32 | 8 | 129 | 32 |
| ಪದವಿಪೂರ್ವ | 57 | 14 | 17 | 4 | 8 | 2 | 21 | 5 | 103 | 25 |
| ಪದವಿ | 36 | 9 | 0 | 0 | 11 | 3 | 31 | 8 | 78 | 19 |
| ಸ್ನಾತಕೋತ್ತರ | 22 | 5 | 2 | 0 | 1 | 0 | 8 | 2 | 33 | 8 |
| **ಒಟ್ಟು** | **228** | **55** | **48** | **12** | **30** | **8** | **104** | **25** | **410** | **100** |

ಈ ಅಧ್ಯಯನದಲ್ಲಿ ಜಿಲ್ಲಾ ವ್ಯಾಪ್ತಿಯಲ್ಲಿ ಸಾಮಾನ್ಯವಾಗಿ ಅನುಸರಿಸುವ ವಿಲೇವಾರಿ ವಿಧಾನಗಳನ್ನು ತೆಗೆದುಕೊಂಡು ಮಾಹಿತಿ ಸಂಗ್ರಹಿಸಲಾಗಿದೆ. ನಾಲ್ಕು ರೀತಿಯ ವಿಲೇವಾರಿ

ವಿಧಾನಗಳನ್ನು ಗುರುತಿಸಿ, ಜನಾಭಿಪ್ರಾಯ ಪಡೆಯಲಾಗಿದೆ. ಒಟ್ಟು 41 ಪ್ರತಿಕ್ರಿಯೆದಾರರಲ್ಲಿ 228 ಮಂದಿ ಅಂದರೆ 55 ಶೇಕಡ ಜನ ಗೊಬ್ಬರ ತಯಾರಿಕೆ ಅತ್ಯುತ್ತಮ ವಿಧಾನವೆಂಬ ಅಭಿಪ್ರಾಯ ಹೊಂದಿದ್ದಾರೆ. ದಹಿಸುವಿಕೆ ಮತ್ತು ಭೂಭರ್ತಿಗೆ ಜನ ಹೆಚ್ಚಿನ ಆಸಕ್ತಿಯನ್ನು ಹೊಂದಿಲ್ಲ. ಎಲ್ಲಾ ಮಟ್ಟದ ಶೈಕ್ಷಣಿಕ ಅರ್ಹತೆ ಹೊಂದಿದವರೂ ಗೊಬ್ಬರ ತಯಾರಿಕೆಗೆ ಪ್ರಾಮುಖ್ಯತೆ ನೀಡಿದ್ದಾರೆ ಹಾಗೂ ಭೂಭರ್ತಿಗಿಂತ ದಹಿಸುವಿಕೆಗೆ ಆಸಕ್ತಿ ತೋರಿಸಿದ್ದಾರೆ. ಒಟ್ಟು ಅಂಕಿ-ಅಂಶಗಳನ್ನು ವಿಶ್ಲೇಷಿಸಿದಾಗ ಎಲ್ಲಾ ಮಟ್ಟದ ಶೈಕ್ಷಣಿಕ ಅರ್ಹತೆ ಹೊಂದಿದವರು ಗೊಬ್ಬರ ತಯಾರಿಕೆಗೆ ಪ್ರಥಮ ಆದ್ಯತೆ ನೀಡಿದರೆ, ಭೂಭರ್ತಿಯನ್ನು ಅತೀ ಕಡಿಮೆ, ಅಂದರೆ ಸರಾಸರಿ 4 ಶೇಕಡದಷ್ಟು ಮಾತ್ರ ಆಯ್ಕೆ ಮಾಡಿದ್ದಾರೆ. ಜಾಗದ ಕೊರತೆ ಹಾಗೂ ತ್ಯಾಜ್ಯ ರಾಶಿ ಹಾಕಿದ ಜಾಗಗಳಲ್ಲಿ ಸುತ್ತಮುತ್ತ ಜನ ಎದುರಿಸುತ್ತಿರುವ ಸಮಸ್ಯೆಗಳು, ಭವಿಷ್ಯದಲ್ಲಿ ಉಂಟಾಗಬಹುದಾದ ಅಪಾಯಗಳು ಮುಂತಾದುವುಗಳನ್ನು ಗಮನಿಸಿ ಜನರು ಭೂಭರ್ತಿಗೆ ವಿರೋಧ ವ್ಯಕ್ತಪಡಿಸಿದ್ದಾರೆ.ಈಗಾಗಲೇ ಪುತ್ತೂರಿನ ಬನ್ನೂರು ಘಟಕ, ಸುಳ್ಯದ ಕಲ್ಚರ್ಪೆ ಸಹಿತ ಇನ್ನಿತರ ಪಂಚಾಯತ್‌ಗಳ ವ್ಯಾಪ್ತಿಯಲ್ಲಿ ಭೂಭರ್ತಿ ಪ್ರದೇಶಗಳಲ್ಲಿ ಬೆಂಕಿ ಅನಾಹುತದಿಂದಾಗಿ ಜನ ಆರೋಗ್ಯ ಸಮಸ್ಯೆಗಳನ್ನು ಎದುರಿಸಿರುವುದು ವರದಿಯಾಗಿದೆ. ಆದ್ದರಿಂದ ಸ್ಥಳೀಯ ಸರ್ಕಾರಗಳು ಭೂಭರ್ತಿಗೆ ಕೊನೆಯ ಆದ್ಯತೆ ನೀಡಬೇಕು. ಸಾಧ್ಯವಾದಷ್ಟು ಎಲ್ಲಾ ರೀತಿಯ ಹಸಿಕಸ ಮತ್ತು ಒಣಕಸಗಳನ್ನು ಸಂಪನ್ಮೂಲಗಳಾಗಿ ಪರಿವರ್ತಿಸುವ ಕ್ರಮಗಳನ್ನು ಅಳವಡಿಸಬೇಕು.

ದಿನನಿತ್ಯ ಉತ್ಪಾದನೆಯಾಗುವ ಘನತ್ಯಾಜ್ಯಗಳಲ್ಲಿ ಬಹುಪಾಲು ಅಹಾರ ತ್ಯಾಜ್ಯವಾಗಿದ್ದು, ಇದರ ಉತ್ಪಾದನೆಯ ಪ್ರಮಾಣಕ್ಕೂ ಜನರ ಆಹಾರ ಪದ್ಧತಿಗೂ ಇರುವ ಸಂಬಂಧ ಅಧ್ಯಯನ ಗಳಿಂದ ತಿಳಿದುಬರುತ್ತದೆ.

ಸೋಮಶೇಖರ (2010)[5] ಇವರು ಮಂಗಳೂರು ನಗರದಲ್ಲಿ ನಡೆಸಿದ ಅಧ್ಯಯನದಲ್ಲಿ ಆಹಾರ ಪದ್ಧತಿ ಹಾಗೂ ತ್ಯಾಜ್ಯ ಉತ್ಪಾದನೆಗೆ ನೇರ ಸಂಬಂಧ ಇರುವುದನ್ನು ಗುರುತಿಸಿದ್ದಾರೆ. ಇವರು ತಮ್ಮ ಅಧ್ಯಯನದಲ್ಲಿ ಆಹಾರ ಪದ್ಧತಿಯನ್ನು ಮೂರು ರೀತಿಯಾಗಿ ವಿಂಗಡಿಸಿ ವಿಶ್ಲೇಷಿಸಿದ್ದಾರೆ. ಅವುಗಳೆಂದರೆ ಸಸ್ಯಾಹಾರಿ, ಮಾಂಸಾಹಾರಿ ಮತ್ತು ಮಿಶ್ರಾಹಾರಿ. ಪ್ರಸ್ತುತ ಅಧ್ಯಯನದಲ್ಲಿ ಶುದ್ಧ ಸಸ್ಯಾಹಾರ, ಗರಿಷ್ಠ ಸಸ್ಯಾಹಾರ, ಗರಿಷ್ಠ ಮಾಂಸಾಹಾರ ಮತ್ತು ಮಿಶ್ರಾಹಾರ ಎಂಬುದಾಗಿ ನಾಲ್ಕು ರೀತಿಯ ಆಹಾರ ಪದ್ಧತಿಯನ್ನು ಗುರುತಿಸಲಾಗಿದೆ. ಸಾಮಾನ್ಯವಾಗಿ ಶುದ್ಧ ಮಾಂಸಹಾರಿಗಳು ಕಂಡುಬರದ ಕಾರಣ ಗರಿಷ್ಠ ಮಾಂಸಾಹಾರಿಗಳು ಎಂದು ವರ್ಗೀಕರಿಸ ಲಾಗಿದೆ. ಕೋಷ್ಟಕ 5.12ರಲ್ಲಿ ಬೇರೆ ಬೇರೆ ಆಹಾರ ಪದ್ಧತಿಯನ್ನು ಅನುಸರಿಸಿರುವವರು ಉತ್ಪಾದನೆ ಮಾಡುವ ತ್ಯಾಜ್ಯದ ಅಂದಾಜು ಪ್ರಮಾಣವನ್ನು ನೀಡಲಾಗಿದೆ.

ಕೋಷ್ಟಕ: 5.12

ಒಟ್ಟು ಮಾಹಿತಿದಾರರಲ್ಲಿಯ ಆಹಾರ ಪದ್ಧತಿ ಮತ್ತು ತ್ಯಾಜ್ಯ ಉತ್ಪಾದನಾ ಪ್ರಮಾಣದ ವಿವರ

| ಆಹಾರ ಪದ್ಧತಿ | 1 ಕಿ.ಗ್ರಾಂ ಗಿಂತ ಕಡಿಮೆ | ಶೇಕಡ | 1ರಿಂದ 3 ಕಿ.ಗ್ರಾಂ | ಶೇಕಡ | 3ರಿಂದ 5 ಕಿ.ಗ್ರಾಂ | ಶೇಕಡ | 5ಕ್ಕಿಂತ ಹೆಚ್ಚು | ಶೇಕಡ | ಒಟ್ಟು | ಶೇಕಡ |
|---|---|---|---|---|---|---|---|---|---|---|
| ಶುದ್ಧ ಸಸ್ಯಾಹಾರ | 32 | 8 | 9 | 2 | 0 | 0 | 0 | 0 | 41 | 10 |
| ಗರಿಷ್ಠ ಸಸ್ಯಾಹಾರ | 12 | 3 | 19 | 5 | 0 | 0 | 0 | 0 | 31 | 8 |
| ಗರಿಷ್ಠ ಮಾಂಸಾಹಾರ | 59 | 14 | 33 | 8 | 0 | 0 | 0 | 0 | 92 | 22 |
| ಮಿಶ್ರಾಹಾರ | 157 | 38 | 78 | 19 | 9 | 2 | 2 | 0 | 246 | 60 |
| **ಒಟ್ಟು** | **260** | **63** | **139** | **34** | **9** | **2** | **2** | **0** | **410** | **10** |

ಒಟ್ಟು 410 ಪ್ರತಿಕ್ರಿಯೆದಾರರಲ್ಲಿ 10 ಶೇಕಡ ಶುದ್ಧ ಸಸ್ಯಾಹಾರಿಗಳಾದರೆ, 60 ಶೇಕಡ ಮಿಶ್ರಾಹಾರಿಗಳು. ಉಳಿದ 8 ಶೇಕಡ ಗರಿಷ್ಠ ಸಸ್ಯಾಹಾರ ಹಾಗೂ 22 ಶೇಕಡ ಗರಿಷ್ಠ ಮಾಂಸಾಹಾರಿಗಳು. ಸಾಮಾನ್ಯವಾಗಿ ಸರಾಸರಿ ದಿನಕ್ಕೆ ಕನಿಷ್ಠ ಎರಡು ಸಲ ಮಾಂಸಾಹಾರವನ್ನು ಸೇವಿಸುವವರನ್ನು ಗರಿಷ್ಠ ಮಾಂಸಾಹಾರ ಎಂದು ವರ್ಗೀಕರಿಸಲಾಗಿದೆ. ಹಾಗೆಯೇ ಸರಾಸರಿ ದಿನಕ್ಕೆ ಕನಿಷ್ಠ ಎರಡು ಸಲ ಸಸ್ಯಾಹಾರವನ್ನು ಸೇವಿಸುವವರನ್ನು 'ಗರಿಷ್ಠ ಸಸ್ಯಾಹಾರ' ಗುಂಪಿಗೆ ಸೇರಿಸಲಾಗಿದೆ. ಅಂಕಿ–ಅಂಶದಲ್ಲಿ ಕಂಡುಬಂದಂತೆ ಒಟ್ಟು 63 ಶೇಕಡ ಜನ ಪ್ರತಿನಿತ್ಯ 1 ಕಿ.ಗ್ರಾಂ.ಗಿಂತ ಕಡಿಮೆ ಘನತ್ಯಾಜ್ಯ ಉತ್ಪಾದಿಸುತ್ತಾರೆ. ದಿನನಿತ್ಯ 3 ಕಿ.ಗ್ರಾಂ.ಗಿಂತ ಹೆಚ್ಚು ತ್ಯಾಜ್ಯ ಉತ್ಪಾದಿಸುವವರಲ್ಲಿ 'ಗರಿಷ್ಠ ಮಾಂಸಾಹಾರ' ಮತ್ತು 'ಮಿಶ್ರಾಹಾರ' ಗುಂಪಿನವರು ಮಾತ್ರ ಒಳಗೊಂಡಿದ್ದಾರೆ. ಒಟ್ಟು ಅಂಶವನ್ನು ತೆಗೆದುಕೊಂಡರೆ 95 ಶೇಕಡ ಜನ ಪ್ರತಿನಿತ್ಯ 1 ರಿಂದ 3 ಕಿ.ಗ್ರಾಂ. ತನಕ ಘನ ತ್ಯಾಜ್ಯವನ್ನು ಉತ್ಪಾದನೆ ಮಾಡುತ್ತಾರೆ.

## 5.2. ಘನತ್ಯಾಜ್ಯ ನಿರ್ವಹಣೆಯ ಆರ್ಥಿಕ ಆಯಾಮಗಳು

ತ್ಯಾಜ್ಯ ಉತ್ಪಾದನಾ ಪ್ರಮಾಣಕ್ಕೂ ಆರ್ಥಿಕ ಸ್ಥಿತಿಗತಿಗೂ ನೇರ ಸಂಬಂಧವಿರುವುದನ್ನು ಅಧ್ಯಯನಗಳು ತಿಳಿಸುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ತ್ಯಾಜ್ಯ ನಿರ್ವಹಣೆಯ ಆರ್ಥಿಕ ಆಯಾಮಗಳನ್ನು ಅಧ್ಯಯನ ಮಾಡುವ ಉದ್ದೇಶದಿಂದ ಜನರ ಆದಾಯ, ಆದಾಯದ ಮೂಲ, ವಾಸದ ಮನೆ, ಮನೆಯ ವಿಧ, ವಾಹನ ಮಾಲಕತ್ವ ಮತ್ತು ಮನೆಯ ವಿಸ್ತೀರ್ಣ ಇವುಗಳನ್ನು ಸೂಚಿಗಳಾಗಿ ಬಳಸಲಾಗಿದೆ. ಕೋಷ್ಟಕ 5.13ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಲ್ಲಿ ನಡೆಸಿದ ಕೌಟುಂಬಿಕ ಕ್ಷೇತ್ರಕಾರ್ಯದ ಆರ್ಥಿಕ ಅಂಶಗಳ ಸಂಕ್ಷಿಪ್ತ ಮಾಹಿತಿಯನ್ನು ನೀಡಲಾಗಿದೆ.

### ಕೋಷ್ಟಕ 5.13

### ಒಟ್ಟು ಮಾಹಿತಿದಾರರ ಸಂಕ್ಷಿಪ್ತ ಆರ್ಥಿಕ ಮಟ್ಟದ ವಿವರಗಳು

| ಸೂಚಿಗಳು | ವಿಭಾಗ/ವರ್ಗ | ಗ್ರಾಮೀಣ | ನಗರ | ಒಟ್ಟು |
|---|---|---|---|---|
| ಪ್ರಮುಖ ಆದಾಯದ ಮೂಲ | ಕೃಷಿ | 16 | 10 | 26 |
| | ಖಾಸಗಿ/ಸರ್ಕಾರಿ ಉದ್ಯೋಗ | 62 | 110 | 172 |
| | ಉದ್ಯಮ/ ವ್ಯಾಪಾರ | 56 | 48 | 104 |
| | ಇತರ | 66 | 42 | 108 |
| ವಾರ್ಷಿಕ ಆದಾಯ | 1 ಲಕ್ಷಕ್ಕಿಂತ ಕಡಿಮೆ | 10 | 32 | 42 |
| | 1 ಲಕ್ಷದಿಂದ 2 ಲಕ್ಷ | 40 | 31 | 71 |
| | 2 ಲಕ್ಷದಿಂದ 5 ಲಕ್ಷದವರು | 110 | 101 | 211 |
| | 5 ಲಕ್ಷಕ್ಕಿಂತ ಮೇಲ್ಪಟ್ಟು | 40 | 46 | 86 |
| ವಾಸದ ಮನೆ | ಸ್ವಂತ | 190 | 185 | 375 |
| | ಬಾಡಿಗೆ | 10 | 25 | 35 |
| ಮನೆಯ ವಿಧ | ಹೆಂಚು | 82 | 71 | 153 |
| | ಆರ್ ಸಿ ಸಿ | 110 | 125 | 235 |
| | ವಸತಿ ಸಂಕೀರ್ಣ | 6 | 10 | 16 |
| | ಇತರ–ತಾತ್ಕಾಲಿಕ | 2 | 4 | 6 |
| ವಾಹನದ ವಿವರ | ದ್ವಿಚಕ್ರ | 112 | 94 | 206 |
| | ಕಾರು/ರಿಕ್ಷಾ | 20 | 29 | 49 |
| | ದ್ವಿಚಕ್ರ ಮತ್ತು ಕಾರು | 42 | 49 | 91 |
| | ಇತರ ವಾಹನ | 2 | 2 | 4 |
| | ಯಾವುದೂ ಇಲ್ಲ | 24 | 36 | 60 |
| ಮನೆಯ ವಿಸ್ತೀರ್ಣ | 6 ಸೆಂಟ್ಸ್ ಗಿಂತ ಕಡಿಮೆ | 94 | 124 | 218 |
| | 6 ರಿಂದ 20 ಸೆಂಟ್ಸ್ | 92 | 80 | 172 |
| | 2 ರಿಂದ ಎಕ್ರೆ | 10 | 6 | 16 |
| | 1 ಎಕ್ರೆಗಿಂತ ಹೆಚ್ಚು | 4 | 0 | 4 |

ಆರ್ಥಿಕ ಆಯಾಮಗಳ ವಿಶ್ಲೇಷಣೆಗೆ ಪ್ರತಿಕ್ರಿಯೆದಾರರ ಆರ್ಥಿಕ ಚಿತ್ರಣದ ಜೊತೆಗೆ ತ್ಯಾಜ್ಯ ನಿರ್ವಹಣೆಯಲ್ಲಿ ಒಳಗೊಂಡಿರುವ ಆರ್ಥಿಕ ಅಂಶಗಳಾದ ತ್ಯಾಜ್ಯ ನಿರ್ವಹಣಾ ವೆಚ್ಚ,

ತ್ಯಾಜ್ಯ ಸಂಗ್ರಹ ಶುಲ್ಕ ಇತ್ಯಾದಿ ಅಂಶಗಳನ್ನು ಚರ್ಚೆಯಲ್ಲಿ ಬಳಸಿಕೊಳ್ಳಲಾಗಿದೆ. ಪ್ರತಿಕ್ರಿಯೆದಾರರ ಉದ್ಯೋಗದ ಮೂಲಗಳನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗಿದೆ. ಹಾಗೆಯೇ ವಾರ್ಷಿಕ ಆದಾಯವನ್ನು ಸಹ ನಾಲ್ಕು ಗುಂಪುಗಳಾಗಿ ವಿಭಾಗಿಸಲಾಗಿದೆ. ಪ್ರತಿಕ್ರಿಯೆದಾರರ ವಾಸದ ಮನೆಯ ಮಾಲಿಕತ್ವ, ಮನೆಯ ವಿಧ, ಹೊಂದಿರುವ ವಾಹನಗಳ ಲೆಕ್ಕ ಮತ್ತು ಮನೆಯ ವಿಸ್ತೀರ್ಣದ ಅಂಕಿ-ಅಂಶಗಳನ್ನು ಪ್ರತಿಕ್ರಿಯೆದಾರರ ಆರ್ಥಿಕ ಸ್ಥಿತಿಗತಿಯನ್ನು ಅರ್ಥಮಾಡಿಕೊಳ್ಳುವ ದೃಷ್ಟಿಯಿಂದ ಬಳಸಲಾಗಿದೆ.

ಆದಾಯ ಹೆಚ್ಚಿದಂತೆ ತ್ಯಾಜ್ಯ ಉತ್ಪಾದನಾ ಪ್ರಮಾಣವೂ ಹೆಚ್ಚುತ್ತದೆ ಎನ್ನುವುದು ಅಧ್ಯಯನಗಳಿಂದ ತಿಳಿದು ಬಂದಿದೆ. ಆದಾಯ ಹೆಚ್ಚಿದಷ್ಟು ಜನರು ಗ್ರಾಹಕ ವಸ್ತುಗಳನ್ನು ಕೊಂಡುಕೊಳ್ಳುವ ಪ್ರಮಾಣ ಹೆಚ್ಚಾಗುತ್ತದೆ. ಅತೀ ಗ್ರಾಹಕತೆಯ ಪರಿಣಾಮವೇ ತ್ಯಾಜ್ಯ ಉತ್ಪಾದನೆ ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಹೆಚ್ಚು ಆದಾಯ ಹೊಂದಿರುವವರು ತ್ಯಾಜ್ಯ ನಿರ್ವಹಣೆಗೆ ಹೆಚ್ಚು ವ್ಯಯಿಸುವುದು ಸೂಕ್ತ. ಕೋಷ್ಟಕ 5.14ರಲ್ಲಿ ಕುಟುಂಬದ ವಾರ್ಷಿಕ ಆದಾಯ ಮತ್ತು ಅವರು ತ್ಯಾಜ್ಯ ನಿರ್ವಹಣೆಗಾಗಿ ವ್ಯಯಿಸುವ ಅಂದಾಜು ವಾರ್ಷಿಕ ವೆಚ್ಚದ ಅಂಕಿ-ಅಂಶ ನೀಡಲಾಗಿದೆ.

**ಕೋಷ್ಟಕ: 5.14**

**ಒಟ್ಟು ಮಾಹಿತಿದಾರರ ಕುಟುಂಬದ ವಾರ್ಷಿಕ ಆದಾಯ ಮತ್ತು ತ್ಯಾಜ್ಯ ನಿರ್ವಹಣೆಗಾಗಿ ವ್ಯಯಿಸುವ ವಾರ್ಷಿಕ ವೆಚ್ಚದ ವಿವರ**

| ಆದಾಯ | 500ಕ್ಕಿಂತ ಕಡಿಮೆ | ಶೇಕಡ | 500ರಿಂದ 750 | ಶೇಕಡ | 751ರಿಂದ 1000 | ಶೇಕಡ | 1000ಕ್ಕಿಂತ ಮೇಲ್ಪಟ್ಟು | ಶೇಕಡ | ಒಟ್ಟು | ಶೇಕಡ |
|---|---|---|---|---|---|---|---|---|---|---|
| 1 ಲಕ್ಷಕ್ಕಿಂತ ಕಡಿಮೆ | 2 | 0 | 16 | 4 | 2 | 0 | 1 | 0 | 21 | 5 |
| 1 ರಿಂದ 2 ಲಕ್ಷ | 13 | 3 | 36 | 9 | 0 | 0 | 1 | 0 | 50 | 12 |
| 2 ರಿಂದ 5 ಲಕ್ಷ | 77 | 19 | 82 | 20 | 0 | 0 | 5 | 1 | 164 | 40 |
| 5 ಕ್ಕಿಂತ ಮೇಲ್ಪಟ್ಟು | 42 | 10 | 25 | 6 | 4 | 1 | 2 | 0 | 73 | 18 |
| **ಒಟ್ಟು** | **134** | **32** | **159** | **39** | **6** | **1** | **9** | **3** | **308** | **75** |

ಈ ಅಧ್ಯಯನದಲ್ಲಿ ಕುಟುಂಬದ ವಾರ್ಷಿಕ ಆದಾಯವನ್ನು 4 ವಿಭಾಗಗಳಾಗಿ ವಿಂಗಡಿಸಿದ್ದು, ಮೊದಲನೆಯದಾಗಿ 1 ಲಕ್ಷಕ್ಕಿಂತ ಕಡಿಮೆ ಆದಾಯ ಹೊಂದಿದವರಲ್ಲಿ ಒಟ್ಟು 42 ಪ್ರತಿಕ್ರಿಯೆದಾರರಿದ್ದು 50 ಶೇಕಡ ಮಾತ್ರ ಶುಲ್ಕ ಪಾವತಿಸುವವರು. ಇವರಲ್ಲಿ 76 ಶೇಕಡ ಪಾವತಿದಾರರು ವಾರ್ಷಿಕ

500 ರೂಪಾಯಿಗಳಿಗಿಂತ ಕಡಿಮೆ ಖರ್ಚು ಮಾಡುತ್ತಾರೆ. ಎರಡನೇದಾಗಿ 1ರಿಂದ 2 ಲಕ್ಷ ಆದಾಯ ಹೊಂದಿದವರಲ್ಲಿ ಒಟ್ಟು 71 ಪ್ರತಿಕ್ರಿಯೆದಾರರಿದ್ದು ಅವರಲ್ಲಿ 70 ಶೇಕಡ ಜನ ಶುಲ್ಕ ಪಾವತಿಸುತ್ತಾರೆ. ಇದರಲ್ಲಿ 72 ಶೇಕಡ ಅಂದರೆ 50ರಲ್ಲಿ 36 ಜನ ವಾರ್ಷಿಕ 500ರಿಂದ 750 ರೂ ತ್ಯಾಜ್ಯ ಸಂಗ್ರಹಣಾ ಶುಲ್ಕ ಪಾವತಿ ಮಾಡುತ್ತಾರೆ. ಮೂರನೇ ವರ್ಗದ 2ರಿಂದ 5 ಲಕ್ಷದವರೆಗೆ ವಾರ್ಷಿಕ ಆದಾಯ ಹೊಂದಿದ 211 ಪ್ರತಿಕ್ರಿಯೆದಾರರಲ್ಲಿ ಶೇಕಡ 78 ಮಂದಿ ಶುಲ್ಕ ಪಾವತಿಸುತ್ತಾರೆ. ಇವರಲ್ಲಿ 47 ಶೇಕಡ ಅಂದರೆ 164 ಶುಲ್ಕ ಪಾವತಿದಾರರಲ್ಲಿ 77 ಮಂದಿ ವಾರ್ಷಿಕ 500ಕ್ಕಿಂತ ಕಡಿಮೆ ಪಾವತಿಸಿದರೆ 82 ಮಂದಿ ಅಂದರೆ 50 ಶೇಕಡ ರೂ 500 ರಿಂದ 750 ಪಾವತಿಸುತ್ತಾರೆ. ನಾಲ್ಕನೇದಾಗಿ 5 ಲಕ್ಷಕ್ಕಿಂತ ಮೇಲ್ಪಟ್ಟವರಲ್ಲಿ 88 ಪ್ರತಿಕ್ರಿಯೆದಾರರಿದ್ದು ಅವರಲ್ಲಿ ಶುಲ್ಕ ಪಾವತಿಸುವವರು 73 ಮಂದಿ, ಅಂದರೆ 85 ಶೇಕಡ. ಇವರಲ್ಲಿ 58 ಶೇಕಡ ಜನ 500 ಕ್ಕಿಂತ ಕಡಿಮೆ ಶುಲ್ಕ ಪಾವತಿಸುತ್ತಿದ್ದು 34 ಶೇಕಡ ಜನ ವಾರ್ಷಿಕ 500ರಿಂದ 750 ರೂಪಾಯಿವರೆಗೆ ಪಾವತಿಸುತ್ತಾರೆ. ವಾರ್ಷಿಕ 1000ಕ್ಕಿಂತ ಹೆಚ್ಚು ತ್ಯಾಜ್ಯ ಶುಲ್ಕ ಪಾವತಿಸುವವರ ಪ್ರಮಾಣ ಕೇವಲ 3 ಶೇಕಡ ಮಾತ್ರ. ಮೇಲಿನ ಅಂಕಿ–ಅಂಶಗಳನ್ನು ವಿಶ್ಲೇಷಿಸಿದಾಗ ಹೆಚ್ಚು ಆದಾಯ ಹೊಂದಿದವರು ಹೆಚ್ಚು ಸಂಗ್ರಹಣಾ ಶುಲ್ಕ ಪಾವತಿಸುತ್ತಿರುವುದು ಕಂಡುಬರುತ್ತದೆ. ಆದರೆ ಹೆಚ್ಚು ಆದಾಯ ಹೊಂದಿದ ಶೇಕಡ 100ರಷ್ಟು ಮಂದಿ ಶುಲ್ಕ ಪಾವತಿದಾರರಲ್ಲಿ ಮೇಲಿನ ಕೋಷ್ಟಕದಂತೆ 2ರಿಂದ 5 ಲಕ್ಷ ಆದಾಯ ಹೊಂದಿದವರಲ್ಲಿ 22 ಶೇಕಡ ಜನ ಯಾವುದೇ ಶುಲ್ಕ ಪಾವತಿಸುವುದಿಲ್ಲ. ಹಾಗೆಯೇ 5 ಲಕ್ಷಕ್ಕಿಂತ ಹೆಚ್ಚು ಆದಾಯ ಹೊಂದಿದವರಲ್ಲಿಯೂ 15 ಶೇಕಡ ಜನ ಯಾವುದೇ ಶುಲ್ಕ ಪಾವತಿಸುವುದಿಲ್ಲ. ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಹೆಚ್ಚು ಆದಾಯ ಹೊಂದಿದವರು ಶುಲ್ಕದಿಂದ ತಪ್ಪಿಸಿಕೊಳ್ಳದಂತೆ ಸ್ಥಳೀಯಾಡಳಿತ ಎಚ್ಚರಿಕೆ ವಹಿಸಬೇಕು ಮತ್ತು ಅವರು ಹೆಚ್ಚು ತ್ಯಾಜ್ಯ ಉತ್ಪಾದಕರಾದ ಕಾರಣ ಹೆಚ್ಚಿನ ಕೊಡುಗೆ ಸಲ್ಲಿಸಬೇಕು. ಹಾಗೆಯೇ ಎಲ್ಲರಿಗೂ ಶುಲ್ಕ ವಿಧಿಸುವ ಅಗತ್ಯತೆ ಇದ್ದು, ಇದು ಕೇವಲ ವೆಚ್ಚ ನಿಭಾವಣೆ ಮಾತ್ರವಲ್ಲದೆ ಪ್ರತಿಯೊಬ್ಬರಲ್ಲೂ ಜವಾಬ್ದಾರಿಯನ್ನು ಮೂಡಿಸುತ್ತದೆ. ಈ ಅಧ್ಯಯನದಲ್ಲಿ ಮಾಸಿಕ ತೆರಿಗೆ ಪ್ರಮಾಣವನ್ನು ಅಂದಾಜಿಸಿದರೂ ಅದನ್ನು ವಿಶ್ಲೇಷಣೆಗೆ ಒಳಪಡಿಸಿಲ್ಲ. ಕಾರಣ ಕೆಲವರು 3 ತಿಂಗಳಿಗೊಮ್ಮೆ, 6 ತಿಂಗಳಿಗೊಮ್ಮೆ ಅಥವಾ ವರ್ಷಕ್ಕೊಮ್ಮೆ ವಾರ್ಷಿಕ ತೆರಿಗೆಯೊಂದಿಗೆ ಪಾವತಿಸುತ್ತಾರೆ.

ಲಿಂಗರಾಜ್ ಪತ್ರಾವೋ ಇವರ ಸಂಪಾದಿತ ಕೃತಿ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ (2012)[6] ಇದರಲ್ಲಿ ಒಮನ ಜೆ ಇವರು 'ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಯಾಸ್ ಎ ಕುಡುಂಬಶ್ರೀ ಪ್ರಾಗ್ರಾಮ್ ಇನ್ ಕೇರಳ' ಎನ್ನುವ ಲೇಖನದಲ್ಲಿ ನೀಡಿದ ವರದಿ ಈ ರೀತಿ ಇದೆ– 'ಕೇರಳದಲ್ಲಿ ಬಡತನ ನಿರ್ಮೂಲನೆ ಯೋಜನೆಯಡಿ ಸಣ್ಣ ಹಣಕಾಸು ಮತ್ತು ಸ್ವಸಹಾಯ

ಗುಂಪುಗಳ ಸಂಘಟನೆ ಕುಟುಂಬ ಶ್ರೀ (ಕೌಟುಂಬಿಕ ಏಳಿಗೆ) ಎನ್ನುವ ಯೋಜನೆಯನ್ನು ಮೇ 1998ರಲ್ಲಿ ಪ್ರಾರಂಭಿಸಿತು. ಮಹಿಳಾ ಸಬಲೀಕರಣ ಉದ್ದೇಶದ ಈ ಯೋಜನೆಯಲ್ಲಿ ಸ್ವಚ್ಛ ಕೇರಳ ಉದ್ಯೋಗವೂ ಒಂದು. ಕೇರಳ ರಾಜ್ಯದಾದ್ಯಂತ ಘನತ್ಯಾಜ್ಯ ನಿರ್ವಹಣೆ ಮಾಡುವ ಉದ್ದೇಶದಿಂದ 155 "ಸ್ವಚ್ಛ ಕೇರಳ ಉದ್ಯೋಗ ಘಟಕ"ಗಳನ್ನು ಪ್ರಾರಂಭಿಸಲಾಯಿತು. ಇವುಗಳಿಗೆ ಪೂರಕವಾಗಿ 18 ಸ್ಥಳೀಯ ನಗರ ಸಂಸ್ಥೆಗಳಲ್ಲಿ 40ಕ್ಕೂ ಅಧಿಕ ತ್ಯಾಜ್ಯ ಸಂಸ್ಕರಣ ಘಟಕ ಗಳನ್ನು ಸ್ಥಾಪಿಸಲಾಯಿತು. ಮಹಿಳೆಯರಿಂದಲೇ ನಡೆಸಲ್ಪಡುವ ಈ ಯೋಜನೆ ಮುಂದೆ ಇಡೀ ಕೇರಳದಾದ್ಯಂತ ಸುಮಾರು 580ಕ್ಕೂ ಅಧಿಕ ನಗರ ಸ್ಥಳೀಯ ಸಂಸ್ಥೆಗಳಲ್ಲಿ 30,000 ಕ್ಕೂ ಅಧಿಕ ಮಹಿಳೆಯರಿಗೆ ಉದ್ಯೋಗ ದೊರಕಿಸಿಕೊಟ್ಟಿತು. ತ್ಯಾಜ್ಯ ಸಂಗ್ರಹ ಕಾರ್ಯದಲ್ಲಿ ತೊಡಗಿದ ಮಹಿಳೆಗೆ ಪ್ರತಿ ಮನೆಯವರು ತಿಂಗಳಿಗೆ ರೂ 30ರಂತೆ ಶುಲ್ಕ ನೀಡುತ್ತಾರೆ. ತ್ಯಾಜ್ಯವನ್ನು ಮನೆ, ಹೋಟೇಲ್, ಆಸ್ಪತ್ರೆ, ವಸತಿಗೃಹ, ರೈಲ್ವೆ ನಿಲ್ದಾಣ, ಬಸ್ ನಿಲ್ದಾಣ, ಮಾರುಕಟ್ಟೆ ಮತ್ತಿತರ ಸಂಸ್ಥೆಗಳಿಂದ ಸಂಗ್ರಹಿಸಿದ ತ್ಯಾಜ್ಯವನ್ನು ನಿರ್ದಿಷ್ಟಪಡಿಸಿದ ಸ್ಥಳದಲ್ಲಿ ವಿಲೇವಾರಿ ಮಾಡುತ್ತಾರೆ.' ಇದು ಸ್ವಚ್ಛ ಪರಿಸರ, ಸಹ್ಯ ಅಭಿವೃದ್ಧಿ, ಉದ್ಯೋಗ ಸೃಷ್ಟಿ, ಬಡತನ ನಿರ್ಮೂಲನೆ ಹಾಗೂ ಆರ್ಥಿಕ ಅಭಿವೃದ್ಧಿಯ ಉದ್ದೇಶಗಳನ್ನು ಏಕಕಾಲದಲ್ಲಿ ಈಡೇರಿಸಿದೆ.

ತ್ಯಾಜ್ಯ ನಿರ್ವಹಣೆಗಾಗಿ ಜನರಿಂದ ಶುಲ್ಕ ಸಂಗ್ರಹಿಸುವುದು ಸ್ಥಳೀಯ ಸಂಸ್ಥೆಗಳಿಗೆ ದೊಡ್ಡ ಸವಾಲು. ಕೆಲವರು ತ್ಯಾಜ್ಯ ನಿರ್ವಹಣೆಯನ್ನು ತಮ್ಮ ಸ್ವಂತ ಖಾಸಗಿ ಜಾಗಗಳಲ್ಲಿ ನಿರ್ವಹಿಸಿದರೆ, ಇನ್ನು ಕೆಲವರು ಸ್ಥಳೀಯ ಸಂಸ್ಥೆಯನ್ನೇ ಅವಲಂಬಿಸಿರುತ್ತಾರೆ. ಪ್ರತಿಯೊಂದು ಸ್ಥಳೀಯ ಸಂಸ್ಥೆಯ ವ್ಯಾಪ್ತಿಯಲ್ಲಿ ಈ ಎರಡೂ ವರ್ಗದ ಜನರನ್ನು ಕಾಣಬಹುದು. ಕೋಷ್ಟಕ 5.15ರಲ್ಲಿ ವಿವಿಧ ಉದ್ಯೋಗ ಮಾಡುತ್ತಿರುವ ಪ್ರತಿಕ್ರಿಯೆದಾರರಲ್ಲಿ ತ್ಯಾಜ್ಯ ಸಂಗ್ರಹಕ್ಕೆ ಶುಲ್ಕ ನೀಡಲು ಸಿದ್ಧವಿರುವವರ ಮಾಹಿತಿ ನೀಡಲಾಗಿದೆ.

**ಕೋಷ್ಟಕ: 5.15**

**ದ.ಕ.ಜಿಲ್ಲಾ ವ್ಯಾಪ್ತಿಯಲ್ಲಿ ವಿವಿಧ ಉದ್ಯೋಗ ಮಾಡುತ್ತಿರುವ ಒಟ್ಟು ಪ್ರತಿಕ್ರಿಯೆದಾರರಲ್ಲಿ ತ್ಯಾಜ್ಯ ಸಂಗ್ರಹಕಾರರಿಗೆ/ಸ್ಥಳೀಯ ಸಂಸ್ಥೆಗಳಿಗೆ ಶುಲ್ಕ ನೀಡಲು ಸಿದ್ಧವಿರುವವರ ಪ್ರಮಾಣ**

| ಉದ್ಯೋಗ | ನೀಡುತ್ತಿಲ್ಲ | ಶೇಕಡ | ವಾರಕ್ಕೊಮ್ಮೆ | ಶೇಕಡ | ತಿಂಗಳಿಗೊಮ್ಮೆ | ಶೇಕಡ | ವಾರ್ಷಿಕ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|---|---|---|---|
| ಕೃಷಿ | 12 | 3 | 0 | 0 | 22 | 5 | 2 | 0 | 26 | 6 |
| ಖಾಸಗಿ/ಸರ್ಕಾರಿ | 31 | 8 | 0 | 0 | 90 | 22 | 52 | 10 | 173 | 43 |
| ಉದ್ಯಮ/ವ್ಯಾಪಾರ | 16 | 4 | 0 | 0 | 54 | 13 | 34 | 8 | 104 | 25 |
| ಇತರ(ಕೂಲಿ) | 43 | 10 | 1 | 0 | 21 | 5 | 41 | 10 | 107 | 26 |
| **ಒಟ್ಟು** | **102** | **25** | **1** | **0** | **187** | **46** | **119** | **29** | **410** | **100** |

ಒಟ್ಟು ಶುಲ್ಕ ನೀಡಲು ಸಿದ್ಧವಿರುವ 308 ಪ್ರತಿಕ್ರಿಯೆದಾರರಲ್ಲಿ 188 ಮಂದಿ ಅಂದರೆ 61 ಶೇಕಡ ಜನ ತಿಂಗಳಿಗೊಮ್ಮೆ ತ್ಯಾಜ್ಯ ಶುಲ್ಕ ನೀಡಲು ಸಿದ್ಧರಿದ್ದಾರೆ. ವಾರ್ಷಿಕ ಶುಲ್ಕ ನೀಡಲು 119 ಮಂದಿ ಅಂದರೆ 39 ಶೇಕಡ ಜನ ಇಚ್ಛಿಸಿದ್ದಾರೆ. ಬಹುತೇಕ ಜನರು ವಾರಕ್ಕೊಮ್ಮೆ ಶುಲ್ಕ ನೀಡಲು ಒಪ್ಪಿಗೆಯನ್ನು ಸೂಚಿಸಿರುವುದಿಲ್ಲ. ಉದ್ಯೋಗದ ಆಧಾರದಲ್ಲಿ ವಿಶ್ಲೇಷಣೆ ಮಾಡಿದಾಗ ಶುಲ್ಕ ಪಾವತಿ ಮಾಡುವ 14 ಮಂದಿ ಕೃಷಿಕರಲ್ಲಿ 12 ಮಂದಿ ಅಂದರೆ 86 ಶೇಕಡ ಜನ ತಿಂಗಳಿಗೊಮ್ಮೆ ಪಾವತಿಸಲು ಸಿದ್ಧವಿರುವುದಾಗಿ ತಿಳಿಸಿದ್ದಾರೆ. ಆದರೆ ಖಾಸಗಿ ಹಾಗೂ ಸರ್ಕಾರಿ ನೌಕರರು ಮತ್ತು ವ್ಯಾಪಾರ/ ಉದ್ದಿಮೆ ನಡೆಸುವವರು ವಾರ್ಷಿಕ ಶುಲ್ಕ ಪಾವತಿಗೂ ಸಿದ್ಧರಿದ್ದಾರೆ. ಒಟ್ಟು ಪ್ರತಿಕ್ರಿಯೆದಾರರ ಅಭಿಪ್ರಾಯವನ್ನು ವಿಶ್ಲೇಷಿಸಿದಾಗ ತ್ಯಾಜ್ಯ ಸಂಗ್ರಹ ಶುಲ್ಕವನ್ನು ಮಾಸಿಕ ಅಥವಾ ವಾರ್ಷಿಕ ಅವಧಿಗೆ ವಿಧಿಸಿದರೆ ಜನರಿಗೆ ಹೆಚ್ಚಿನ ಅನಾನುಕೂಲವಾಗದು. ಆದರೆ ವಾರಕ್ಕೊಮ್ಮೆ ಶುಲ್ಕ ವಿಧಿಸುವ ಪದ್ಧತಿಯಿದ್ದರೆ ಅವುಗಳನ್ನು ಮಾಸಿಕ ಅಥವಾ ವಾರ್ಷಿಕ ಶುಲ್ಕವಾಗಿ ಪರಿವರ್ತಿಸಬೇಕು. ಇದರಿಂದ ಶುಲ್ಕ ಸಂಗ್ರಹಣಾ ವೆಚ್ಚವೂ ಕಡಿಮೆಯಾಗುತ್ತದೆ.

ಸ್ಥಳೀಯ ಸಂಸ್ಥೆಗಳ ಆದಾಯದಲ್ಲಿ ದೊಡ್ಡ ಪಾಲು ತ್ಯಾಜ್ಯ ನಿರ್ವಹಣೆಗೆ ಬಳಕೆಯಾಗುವುದು ಕಂಡು ಬಂದಿದೆ. ಕೆಲವು ಸಂಸ್ಥೆಗಳು ತಮಗೆ ಕೇಂದ್ರ ಹಾಗೂ ರಾಜ್ಯ ಸರಕಾರಗಳಿಂದ ಬರುವ ಅನುದಾನ ಹಾಗೂ ಸ್ಥಳೀಯ ಮಟ್ಟದಲ್ಲಿ ಸಂಗ್ರಹವಾಗುವ ಆದಾಯದಿಂದ ತ್ಯಾಜ್ಯ ನಿರ್ವಹಣೆಗೆ ಖರ್ಚು ಮಾಡಿದರೆ, ಇನ್ನು ಕೆಲವು ಸ್ಥಳೀಯ ಸಂಸ್ಥೆಗಳು ಶುಲ್ಕ ಹಾಗೂ ದಂಡದ ರೂಪದಲ್ಲಿ ಖರ್ಚನ್ನು ಭರಿಸುತ್ತಿವೆ. ಕೋಷ್ಟಕ 5.16ರಲ್ಲಿ ತ್ಯಾಜ್ಯ ನಿರ್ವಹಣೆಗೆ ಸ್ಥಳೀಯ ಸರಕಾರಗಳು ತಮ್ಮ ಆದಾಯದ ಒಟ್ಟು ಎಷ್ಟು ಭಾಗವನ್ನು ವ್ಯಯಿಸುತ್ತಿವೆ ಎನ್ನುವ ಮಾಹಿತಿ ದೊರಕುತ್ತದೆ.

**ಕೋಷ್ಟಕ: 5.16**

**ದ.ಕ.ಜಿಲ್ಲೆಯ ನಗರ ಮತ್ತು ಗ್ರಾಮೀಣ ಭಾಗದಲ್ಲಿ ತ್ಯಾಜ್ಯ ನಿರ್ವಹಣೆಗೆ ಸ್ಥಳೀಯ ಸರಕಾರಗಳು ಖರ್ಚು ಮಾಡುವ ಒಟ್ಟು ಆದಾಯದ ಭಾಗ**

| ಸ್ಥಳೀಯ ಸಂಸ್ಥೆ | ಶೇಕಡ 5ಕ್ಕಿಂತ ಕಡಿಮೆ | 5ರಿಂದ 10 ಶೇಕಡ | 10ರಿಂದ 20 ಶೇಕಡ | ಶೇಕಡ 20 ಕ್ಕಿಂತ ಅಧಿಕ | ಒಟ್ಟು |
|---|---|---|---|---|---|
| ಗ್ರಾಮೀಣ | 0 | 2 | 4 | 15 | 21 |
| ನಗರ | 1 | 3 | 2 | 2 | 8 |
| ಒಟ್ಟು | 1 | 5 | 6 | 17 | 29 |
| ಶೇಕಡ | 13 | 17 | 21 | 59 | 100 |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಶೇಕಡ 13ರಷ್ಟು ಸ್ಥಳೀಯ ಸಂಸ್ಥೆಗಳು ಮಾತ್ರ ತಮ್ಮ ಆದಾಯದ ಅಂದಾಜು 5 ಶೇಕಡಕ್ಕಿಂತ ಕಡಿಮೆ ತ್ಯಾಜ್ಯ ನಿರ್ವಹಣೆಗೆ ಖರ್ಚು ಮಾಡುತ್ತಿವೆ. ಅಂದರೆ ಶೇಕಡ 17ರಷ್ಟು ಸ್ಥಳೀಯ ಸಂಸ್ಥೆಗಳು 5ರಿಂದ 10 ಶೇಕಡ ಖರ್ಚು ಮಾಡುತ್ತಿವೆ. ದೊರೆತ ಅಂಕಿ-ಅಂಶಗಳ ಪ್ರಕಾರ ಶೇಕಡ 59ರಷ್ಟು ಸ್ಥಳೀಯ ಸಂಸ್ಥೆಗಳು ಶೇಕಡ 20ಕ್ಕಿಂತಲೂ ಅಧಿಕ ಆದಾಯದ ಭಾಗವನ್ನು ತ್ಯಾಜ್ಯ ನಿರ್ವಹಣೆಗೆ ಉಪಯೋಗಿಸುತ್ತಿವೆ. ಗ್ರಾಮೀಣ ಹಾಗೂ ನಗರ ಸಂಸ್ಥೆಗಳನ್ನು ಹೋಲಿಕೆ ಮಾಡಿದಾಗ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಅಧಿಕ ಪ್ರಮಾಣದಲ್ಲಿ ತ್ಯಾಜ್ಯ ನಿರ್ವಹಣೆಗೆ ಖರ್ಚು ಮಾಡುತ್ತಿವೆ.

ಒಟ್ಟು 21 ಗ್ರಾಮ ಪಂಚಾಯತ್‌ಗಳಲ್ಲಿ 15 ಪಂಚಾಯತ್‌ಗಳು ಅಂದರೆ ಶೇಕಡ 71 ರಷ್ಟು ಗ್ರಾಮ ಪಂಚಾಯತ್‌ಗಳು ತಮ್ಮ ಒಟ್ಟು ಆದಾಯದಲ್ಲಿ ಶೇಕಡ 20ಕ್ಕಿಂತಲೂ ಹೆಚ್ಚು ಹಣವನ್ನು ತ್ಯಾಜ್ಯ ನಿರ್ವಹಣಾ ಕಾರ್ಯಕ್ಕೆ ವಿನಿಯೋಗಿಸುತ್ತಿವೆ. ಒಟ್ಟಾರೆ ನಗರ ಸ್ಥಳೀಯ ಸಂಸ್ಥೆಗಳಿಗೆ ಹೋಲಿಸಿದರೆ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ತಮ್ಮ ಆದಾಯದಲ್ಲಿ ಹೆಚ್ಚಿನ ಭಾಗ ತ್ಯಾಜ್ಯ ನಿರ್ವಹಣೆಗೆ ಬಳಕೆ ಮಾಡುತ್ತಿರುವುದು ಕಂಡುಬಂದಿದೆ. ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಕಡಿಮೆ ಆದಾಯ ಹೊಂದಿರುವುದು ಹಾಗೂ ನಗರ ಸ್ಥಳೀಯ ಸಂಸ್ಥೆಗಳು ಹೆಚ್ಚಿನ ಆದಾಯ ಹೊಂದಿರುವುದು ಇದಕ್ಕೆ ಕಾರಣವಾದರೂ, ಗ್ರಾಮೀಣ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ನಿರ್ವಹಣೆಗೆ ಆದ್ಯತೆ ನೀಡುತ್ತಿವೆ ಎಂಬುದನ್ನು ಈ ಮೂಲಕ ಕಂಡುಕೊಳ್ಳಬಹುದು.

ತ್ಯಾಜ್ಯ ನಿರ್ವಹಣಾ ವೆಚ್ಚ ಭರಿಸಲು ಸ್ಥಳೀಯ ಸಂಸ್ಥೆಗಳು ಬೇರೆ ಬೇರೆ ಹಣಕಾಸಿನ ಮೂಲಗಳನ್ನು ಅವಲಂಬಿಸಿದ್ದಾರೆ. ಮಂಗಳೂರು ಮಹಾನಗರ ಪಾಲಿಕೆ, ಲಾಯಿಲ ಗ್ರಾಮ ಪಂಚಾಯತ್, ಕಡಬ ಗ್ರಾಮ ಪಂಚಾಯತ್, ಸುಬ್ರಹ್ಮಣ್ಯ ಗ್ರಾಮ ಪಂಚಾಯತ್ ಸೇರಿದಂತೆ ಕೆಲವು ಸ್ಥಳೀಯ ಸಂಸ್ಥೆಗಳು ಸಾವಯವ ಗೊಬ್ಬರ ತಯಾರಿಸಿ ಆದಾಯ ಗಳಿಸುತ್ತಿವೆ ಹಾಗೂ ಪ್ಲಾಸ್ಟಿಕ್, ಲೋಹ ಮುಂತಾದ ವಸ್ತುಗಳನ್ನು ಪುನರುತ್ಪಾದನಾ ಘಟಕಗಳಿಗೆ ನೀಡುತ್ತಿವೆ. ಆದರೆ ಇವು ನಿರ್ವಹಣಾ ವೆಚ್ಚ ಭರಿಸಲು ಸಾಕಾಗದ ಕಾರಣ ಜನರಿಗೆ ತ್ಯಾಜ್ಯ ಸಂಗ್ರಹ ಶುಲ್ಕ ವಿಧಿಸುತ್ತವೆ. ಕೆಲವು ಪಂಚಾಯತ್‌ಗಳಲ್ಲಿ ಹಾಗೂ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಜನಪ್ರತಿನಿಧಿಗಳು ಶುಲ್ಕ ವಿಧಿಸಲು ವಿರೋಧ ವ್ಯಕ್ತಪಡಿಸಿರುವುದೂ ಕ್ಷೇತ್ರಕಾರ್ಯದಲ್ಲಿ ತಿಳಿದು ಬಂದಿದೆ. ಕೋಷ್ಟಕ 5.17ರಲ್ಲಿ ತ್ಯಾಜ್ಯ ನಿರ್ವಹಣೆಗೆ ವಿಶೇಷ ತೆರಿಗೆ/ಶುಲ್ಕ ವಿಧಿಸುವ ಸ್ಥಳೀಯ ಸಂಸ್ಥೆಗಳ ಅಂಕಿ ಅಂಶ ನೀಡಲಾಗಿದೆ.

**ಕೋಷ್ಟಕ 5.17**

**ದ.ಕ.ಜಿಲ್ಲೆಯ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ತ್ಯಾಜ್ಯ ನಿರ್ವಹಣೆಗೆ ವಿಶೇಷ ತೆರಿಗೆ ವಿಧಿಸುವ ಸ್ಥಳೀಯ ಸಂಸ್ಥೆಗಳ ವಿವರ**

| ಪ್ರತಿಕ್ರಿಯೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಹೌದು | 12 | 41 | 7 | 24 | 19 | 65 |
| ಇಲ್ಲ | 9 | 31 | 1 | 4 | 10 | 35 |
| ಒಟ್ಟು | 21 | 72 | 8 | 28 | 29 | 100 |

ಮೇಲಿನ ಕೋಷ್ಟಕದ ಪ್ರಕಾರ 21 ಗ್ರಾಮ ಪಂಚಾಯತ್‌ಗಳಲ್ಲಿ 12 ಗ್ರಾಮ ಪಂಚಾಯತ್‌ಗಳು ಶುಲ್ಕ ವಿಧಿಸಿದರೆ, 9 ಗ್ರಾಮ ಪಂಚಾಯತ್‌ಗಳು ಇತರ ಮೂಲಗಳಿಂದ ವೆಚ್ಚದ ಹೊಂದಾಣಿಕೆ ಮಾಡುತ್ತಿವೆ. ಅಂದರೆ ಶೇಕಡ 57ರಷ್ಟು ಪಂಚಾಯತ್‌ಗಳು ಮಾತ್ರ ಶುಲ್ಕ ಸಂಗ್ರಹ ಮಾಡುತ್ತಿವೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿ ಸುಳ್ಯ ಪಟ್ಟಣ ಪಂಚಾಯತ್ ಹೊರತುಪಡಿಸಿ ಉಳಿದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ಉತ್ಪಾದನೆಯ ಪ್ರಮಾಣ ಮತ್ತು ಪ್ರದೇಶಕ್ಕನುಗುಣವಾಗಿ ಶುಲ್ಕ ಸಂಗ್ರಹಿಸುತ್ತಿವೆ. ವಾಣಿಜ್ಯ ಚಟುವಟಿಕೆಗಳಿಗೆ ವಿಧಿಸುವ ಶುಲ್ಕ ಮನೆಗಳಿಗೆ ವಿಧಿಸುವ ಶುಲ್ಕಕ್ಕಿಂತ ಸಾಮಾನ್ಯವಾಗಿ ಹೆಚ್ಚಿದ್ದು ಮನೆ ಮತ್ತು ವಾಣಿಜ್ಯ ಕಟ್ಟಡಗಳ ವಿಸ್ತೀರ್ಣವನ್ನು ಹಾಗೂ ವಾಣಿಜ್ಯ ಚಟುವಟಿಕೆಗಳ ವಿಧಗಳನ್ನು ಪರಿಗಣಿಸಿ ದರವನ್ನು ನಿಗದಿಪಡಿಸಿರುವುದು ಕಂಡು ಬಂದಿದೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿ ಶುಲ್ಕ ವಿಧಿಸುವ ಪ್ರಮಾಣ 87.5 ಶೇಕಡವಿದ್ದು ಗ್ರಾಮ ಪಂಚಾಯತ್‌ಗಳಿಗಿಂತ ನಗರ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ಶುಲ್ಕ ಸಂಗ್ರಹದಲ್ಲಿ ಮುಂದಿರುವುದು ಕಂಡು ಬಂದರೂ ಜಿಲ್ಲೆಯಲ್ಲಿರುವ ನಗರ ಸಂಸ್ಥೆಗಳಲ್ಲಾಗಲಿ ಅಥವಾ ಗ್ರಾಮೀಣ ನಗರ ಸ್ಥಳೀಯ ಸಂಸ್ಥೆಗಳಲ್ಲಾಗಲೀ ಶುಲ್ಕ/ತೆರಿಗೆ ವಿಧಿಸುವ ವಿಚಾರದಲ್ಲಿ ಏಕರೀತಿಯ ನಿಯಮ ಜಾರಿಯಲ್ಲಿರದಿರುವುದರಿಂದ ಅಗತ್ಯವಿರುವಷ್ಟು ಶುಲ್ಕ ಸಂಗ್ರಹಿಸಲು ಸ್ಥಳೀಯ ಸಂಸ್ಥೆಗಳಿಗೆ ತೊಡಕಾಗಿರುವುದು ಮತ್ತು ಇದರಿಂದಾಗಿ ತ್ಯಾಜ್ಯ ನಿರ್ವಹಣೆಗೆ ಹಣಕಾಸಿನ ಕೊರತೆ ಎದುರಾಗಿರು ವುದು ಕಂಡು ಬಂದಿದೆ.

ಭಾರತ ಸರಕಾರವು ರೂಪಿಸಿ ಹೊರಡಿಸಿರುವ ಘನತ್ಯಾಜ್ಯ ಮತ್ತು ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣೆಯ ನಿಯಮ 2016ರಲ್ಲಿ ಘನತ್ಯಾಜ್ಯ ನಿರ್ವಹಣಾ ವೆಚ್ಚವನ್ನು ಸ್ಥಳೀಯ ಆಡಳಿತ ಸಂಸ್ಥೆ ನಿಗದಿ ಪಡಿಸಿದಂತೆ ಶುಲ್ಕವನ್ನು ಭರಿಸಬೇಕು ಎಂದು ತಿಳಿಸಿದೆ.

ಈಗಾಗಲೇ ಕೋಷ್ಟಕ 5.17ರಲ್ಲಿ ತಿಳಿಸಿದಂತೆ ತ್ಯಾಜ್ಯ ನಿರ್ವಹಣಾ ವೆಚ್ಚವನ್ನು ಭರಿಸಲು ಶೇಕಡ 65ಕ್ಕಿಂತಲೂ ಹೆಚ್ಚಿನ ಸ್ಥಳೀಯ ಸಂಸ್ಥೆಗಳು ನಾಗರಿಕರಿಂದ ಶುಲ್ಕ ಸಂಗ್ರಹ ಮಾಡುತ್ತಿವೆ.

ಆದರೆ ಕೆಲವೊಂದು ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯ ಶುಲ್ಕ ನೀಡಲು ಜನ ವಿರೋಧಿಸಿರುವುದು ಹಾಗೂ ಕೆಲವು ಸಂಸ್ಥೆಗಳು ಜನ ವಿರೋಧದಿಂದಾಗಿ ಶುಲ್ಕ ವಿಧಿಸದೆ, ತ್ಯಾಜ್ಯ ನಿರ್ವಹಣಾ ಕಾರ್ಯದಲ್ಲಿ ಲೋಪ ಎಸಗಿರುವುದೂ ಕಂಡು ಬಂದಿದೆ. ಕೋಷ್ಟಕ 5.18ರಲ್ಲಿ ತ್ಯಾಜ್ಯ ನಿರ್ವಹಣಾ ವೆಚ್ಚ ಭರಿಸಲು ಸ್ಥಳೀಯ ಸಂಸ್ಥೆಗಳಿಗೆ ಶುಲ್ಕ ನೀಡಲು ಸಿದ್ಧರಿರುವವರ ಅಂಕಿ-ಅಂಶ ನೀಡಲಾಗಿದೆ.

**ಕೋಷ್ಟಕ 5.18**

**ದ.ಕ.ಜಿಲ್ಲೆಯ ಗ್ರಾಮೀಣ ಹಾಗೂ ನಗರ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣಾ ವೆಚ್ಚ ಭರಿಸಲು ಸ್ಥಳೀಯ ಸಂಸ್ಥೆಗಳಿಗೆ ಶುಲ್ಕ ನೀಡಲು ಸಿದ್ಧವಿರುವವರ ಪ್ರಮಾಣ**

| ಪ್ರತಿಕ್ರಿಯೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| 1 ಹೌದು | 166 | 83 | 168 | 80 | 334 | 81 |
| 2 ಇಲ್ಲ | 34 | 17 | 42 | 20 | 76 | 19 |
| ಒಟ್ಟು | **200** | **100** | **210** | **100** | **410** | **100** |

ಸ್ವಚ್ಛತೆ, ಆರೋಗ್ಯ ಮತ್ತು ಸೌಂದರ್ಯದ ದೃಷ್ಟಿಯಿಂದ ಜನರು ತ್ಯಾಜ್ಯ ನಿರ್ವಹಣಾ ಕ್ರಮವನ್ನು ಅಪೇಕ್ಷಿಸುತ್ತಾರೆ. ಆದರೆ ಅದಕ್ಕೆ ಅಗತ್ಯವಿರುವ ಹಣಕಾಸಿನ ನೆರವನ್ನು ನೀಡಲು ಹಿಂಜರಿಯುತ್ತಾರೆ. ಮೇಲಿನ ಕೋಷ್ಟಕದಲ್ಲಿ ಕಂಡು ಬಂದಂತೆ ಗ್ರಾಮೀಣ ಪ್ರದೇಶದಲ್ಲಿ 200ರಲ್ಲಿ 166 ಪ್ರತಿಕ್ರಿಯೆದಾರರು ಅಂದರೆ ಶೇಕಡ 83ರಷ್ಟು ಮಂದಿ ಶುಲ್ಕ ನೀಡಲು ಸಿದ್ಧರಿದ್ದಾರೆ. ಉಳಿದ ಶೇಕಡ 17ರಷ್ಟು ಜನ ವಿವಿಧ ಕಾರಣಗಳಿಗೋಸ್ಕರ ಶುಲ್ಕ ನೀಡಲು ವಿರೋಧ ವ್ಯಕ್ತ ಪಡಿಸಿದ್ದಾರೆ. ನಗರ ಪ್ರದೇಶದ ಜನರಲ್ಲಿ ಶೇಕಡ 81 ಮಂದಿ ಶುಲ್ಕ ನೀಡಲು ಸಿದ್ಧರಿದ್ದಾರೆ. ನಗರ ಪ್ರದೇಶಕ್ಕೆ ಹೋಲಿಸಿದರೆ ಗ್ರಾಮೀಣ ಪ್ರದೇಶದ ಜನರೇ ಶುಲ್ಕ ನೀಡಲು ಹೆಚ್ಚು ಆಸಕ್ತರಾಗಿದ್ದಾರೆ. ಸರಾಸರಿ 81 ಶೇಕಡ ಜನರು ಶುಲ್ಕ ನೀಡಲು ಸಿದ್ಧರಿರುವುದನ್ನು ಗಮನಿಸಿದರೆ, ತ್ಯಾಜ್ಯ ನಿರ್ವಹಣೆಗೆ ಸ್ಥಳೀಯ ಸಂಸ್ಥೆಗಳು ಹಣಕಾಸಿನ ತೊಂದರೆ ಅನುಭವಿಸಬೇಕಾಗಿಲ್ಲ. ಆದರೆ ಏಕರೀತಿಯ ಶುಲ್ಕ ನಿರ್ಧಾರ ಮಾಡಬೇಕಾದ ಅವಶ್ಯಕತೆ ಇದೆ.

ಕ್ಷೇತ್ರ ಕಾರ್ಯದಲ್ಲಿ ಕಂಡು ಬಂದಂತೆ ಎಲ್ಲಾ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ಶುಲ್ಕ ಸಂಗ್ರಹಿಸುವುದಿಲ್ಲ. ಶುಲ್ಕ ಸಂಗ್ರಹಿಸುವ ಸ್ಥಳೀಯ ಸಂಸ್ಥೆಗಳು ಕೆಲವು ಕಡೆ ವಾರಕ್ಕೊಮ್ಮೆ, ತಿಂಗಳಿಗೊಮ್ಮೆ, ವಾರ್ಷಿಕ ಹೀಗೆ ಬೇರೆ ಬೇರೆ ಅವಧಿಗೊಮ್ಮೆ ಶುಲ್ಕ ಸಂಗ್ರಹ ಮಾಡುತ್ತಾರೆ. ಸಾಕಷ್ಟು ಸಿಬ್ಬಂದಿ ಕೊರತೆ ಇರುವ ಕಾರಣ ಕೆಲವು ಪಂಚಾಯತ್‌ಗಳು ವಾರ್ಷಿಕ ತೆರಿಗೆ ಪಾವತಿ ಸಂದರ್ಭದಲ್ಲಿ ವಸೂಲಿ ಮಾಡುತ್ತಾರೆ. ತ್ಯಾಜ್ಯ ಶುಲ್ಕವು ಬಳಕೆದಾರರ ಉದ್ದೇಶ

ಹಾಗೂ ಕಟ್ಟಡದ ವಿಸ್ತೀರ್ಣವನ್ನು ಅವಲಂಬಿಸಿದೆ. ಸಾಮಾನ್ಯವಾಗಿ ಗೃಹ ಬಳಕೆದಾರರಿಗೆ ವಾಣಿಜ್ಯ ಬಳಕೆದಾರರಿಗಿಂತ ಕಡಿಮೆ ಶುಲ್ಕ ವಿಧಿಸಲಾಗುತ್ತಿದೆ. ಕೆಲವು ಸ್ಥಳೀಯ ಸಂಸ್ಥೆಗಳು ವಾಣಿಜ್ಯ ಚಟುವಟಿಕೆಗಳಿಗೆ ದರ ನಿಗದಿ ಮಾಡಿ ಅದರ ಪ್ರಕಾರ ಶುಲ್ಕ ಸಂಗ್ರಹ ಮಾಡುತ್ತಿವೆ. ಇದರಿಂದ ಶುಲ್ಕದ ಬಗ್ಗೆ ಪಾವತಿದಾರರಲ್ಲಿ ಯಾವುದೇ ಗೊಂದಲ ಉಂಟಾಗುವುದಿಲ್ಲ ಮತ್ತು ಸ್ಥಳೀಯ ಸಂಸ್ಥೆಗೆ ವಾರ್ಷಿಕವಾಗಿ ಸಂಗ್ರಹವಾಗುವ ಶುಲ್ಕ ರೂಪದ ಒಟ್ಟು ಆದಾಯವನ್ನು ಅಂದಾಜಿಸಲು ಸಾಧ್ಯವಾಗುತ್ತದೆ.

ಕೋಷ್ಟಕ 5.19ರಲ್ಲಿ ಮೂರು ವಿಭಾಗಗಳಿದ್ದು, ಮೊದಲನೆ ಭಾಗವು ತ್ಯಾಜ್ಯ ಸಂಗ್ರಹಕಾರರಿಗೆ/ ಸ್ಥಳೀಯ ಸಂಸ್ಥೆಗೆ ನೀಡುವ ಶುಲ್ಕದ ಅವಧಿಯ ಬಗ್ಗೆ ಮಾಹಿತಿ ನೀಡಿದರೆ, ಎರಡನೇ ಭಾಗವು ತ್ಯಾಜ್ಯ ಶುಲ್ಕ ನೀಡುವ ಕುಟುಂಬಗಳು ತಿಂಗಳಿಗೆ ಸರಾಸರಿ ನೀಡುವ ಶುಲ್ಕದ ದರವನ್ನು ತಿಳಿಸುತ್ತದೆ. ಮೂರನೇ ಭಾಗವು ಬಳಕೆದಾರರು ನೀಡುವ ತ್ಯಾಜ್ಯ ಶುಲ್ಕ ಮತ್ತು ಇನ್ನಿತರ ತ್ಯಾಜ್ಯ ವಿಲೇವಾರಿಗೆ ಸಂಬಂಧಪಟ್ಟ ವೆಚ್ಚಗಳೂ ಸೇರಿ ಕುಟುಂಬಗಳ ವಾರ್ಷಿಕ ಅಂದಾಜು ಖರ್ಚಿನ ಅಂಕಿ–ಅಂಶವನ್ನು ನೀಡುತ್ತದೆ.

**ಕೋಷ್ಟಕ 5.19**

**ಒಟ್ಟು ಪ್ರತಿಕ್ರಿಯೆದಾರರಲ್ಲಿ ತ್ಯಾಜ್ಯ ಸಂಗ್ರಹಕಾರರಿಗೆ /ಸ್ಥಳೀಯ ಸಂಸ್ಥೆಗೆ ನೀಡುವ ಶುಲ್ಕದ ಅವಧಿ, ದರ ಮತ್ತು ವಾರ್ಷಿಕ ವೆಚ್ಚ**

| | ಶುಲ್ಕ ನೀಡುವ ಅವಧಿ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|---|
| 1 | ನೀಡುತ್ತಿಲ್ಲ | 74 | 37 | 29 | 14 | 103 | 25 |
| 2 | ವಾರಕ್ಕೊಮ್ಮೆ | 2 | 1 | 0 | 0 | 2 | 1 |
| 3 | ಮಾಸಿಕ | 74 | 37 | 112 | 54 | 186 | 45 |
| 4 | ವಾರ್ಷಿಕ | 50 | 25 | 69 | 33 | 119 | 29 |
| | ಒಟ್ಟು | **200** | 100 | **210** | 100 | 410 | 100 |

**ತ್ಯಾಜ್ಯ ಶುಲ್ಕ ನೀಡುವ ಕುಟುಂಬಗಳು ತಿಂಗಳಿಗೆ ಸರಾಸರಿ ನೀಡುವ ಶುಲ್ಕದ ದರ**

| | ತಿಂಗಳ ಶುಲ್ಕ | ಗ್ರಾಮೀಣ | % | ನಗರ | % | ಒಟ್ಟು | ಒಟ್ಟು % |
|---|---|---|---|---|---|---|---|
| 1 | ರೂ. 50ಕ್ಕಿಂತ ಕಡಿಮೆ | 80 | 63 | 126 | 70 | 206 | 67 |
| 2 | ರೂ. 51ರಿಂದ 100 | 46 | 37 | 43 | 24 | 89 | 29 |
| 3 | ರೂ. 100ರಿಂದ 200 | 0 | 0 | 8 | 4 | 8 | 3 |
| 4 | 200ಕ್ಕಿಂತ ಮೇಲ್ಪಟ್ಟು | 0 | 0 | 4 | 2 | 4 | 1 |
| | ಒಟ್ಟು | **126** | **100** | **181** | **100** | **307** | **100** |

ತ್ಯಾಜ್ಯ ಶುಲ್ಕ ಮತ್ತು ಇನ್ನಿತರ ವೆಚ್ಚಗಳು ಸೇರಿ ಕುಟುಂಬದ ವಾರ್ಷಿಕ ಅಂದಾಜು ಖರ್ಚು

| | ವಾರ್ಷಿಕ ಶುಲ್ಕ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಒಟ್ಟು ಶೇಕಡ |
|---|---|---|---|---|---|---|---|
| 1 | ರೂ. 50ಕ್ಕಿಂತ ಕಡಿಮೆ | 60 | 30 | 73 | 35 | 133 | 32 |
| 2 | ರೂ. 501ರಿಂದ 750 | 66 | 33 | 91 | 44 | 157 | 39 |
| 3 | ರೂ. 751ರಿಂದ 1000 | 0 | 0 | 6 | 3 | 6 | 1 |
| 4 | ರೂ. 1000 ಮೇಲ್ಪಟ್ಟು | 0 | 0 | 11 | 5 | 11 | 3 |
| | ಒಟ್ಟು | **126** | **63** | **181** | **86** | **307** | **75** |

ಮೇಲಿನ ಕೋಷ್ಟಕದ ಮೊದಲನೇ ಭಾಗದಲ್ಲಿ ಗ್ರಾಮೀಣ ಪ್ರತಿಕ್ರಿಯೆದಾರರು ನೀಡಿದ ಮಾಹಿತಿಯಂತೆ 200ರಲ್ಲಿ 74 ಮಂದಿ ಅಂದರೆ 37 ಶೇಕಡ ಯಾವುದೇ ಶುಲ್ಕ ನೀಡುವುದಿಲ್ಲ. 32 ಶೇಕಡ ಜನ ತಿಂಗಳಿಗೊಮ್ಮೆ ಶುಲ್ಕ ನೀಡುವುದಾಗಿ ತಿಳಿಸಿದ್ದಾರೆ. ಉಳಿದಂತೆ 1 ಶೇಕಡ ವಾರಕ್ಕೊಮ್ಮೆ ಶುಲ್ಕ ಪಾವತಿಸಿದರೆ 25 ಶೇಕಡದಷ್ಟು ಜನ ವರ್ಷಕ್ಕೊಮ್ಮೆ ಶುಲ್ಕ ಪಾವತಿಸುತ್ತಿರುವುದಾಗಿ ತಿಳಿಸಿದ್ದಾರೆ. ನಗರ ಪ್ರದೇಶಗಳ ಅಂಕಿ-ಅಂಶಗಳನ್ನು ಗಮನಿಸಿದಾಗ 14 ಶೇಕಡದಷ್ಟು ಜನ ಶುಲ್ಕ ನೀಡುವುದಿಲ್ಲ ಎಂದಿದ್ದಾರೆ. ವಾರಕ್ಕೊಮ್ಮೆ ಶುಲ್ಕ ನೀಡುವ ಬಗ್ಗೆ ಯಾರೂ ತಿಳಿಸಿಲ್ಲ. ಉಳಿದಂತೆ 54 ಶೇಕಡ ಜನ ಮಾಸಿಕ ಶುಲ್ಕ ನೀಡಿದರೆ 33 ಶೇಕಡ ಜನ ವರ್ಷಕ್ಕೊಮ್ಮೆ ಶುಲ್ಕ ಪಾವತಿಸುತ್ತಿರುವುದಾಗಿ ತಿಳಿಸಿದ್ದಾರೆ. ಗ್ರಾಮೀಣ ಪ್ರದೇಶಕ್ಕೆ ಹೋಲಿಸಿದರೆ ನಗರ ಪ್ರದೇಶದಲ್ಲಿ ಶುಲ್ಕ ಪಾವತಿಸದಿರುವವರ ಒಟ್ಟು ಪ್ರಮಾಣ ಕಡಿಮೆ ಇದೆ. ಆದರೆ ಮಾಸಿಕ ಮತ್ತು ವಾರ್ಷಿಕ ಅವಧಿಗಳನ್ನು ತೆಗೆದುಕೊಂಡರೆ ಗ್ರಾಮೀಣ ಪ್ರದೇಶದಲ್ಲಿ ಮಾಸಿಕ ಶುಲ್ಕ ಪಾವತಿಸುವವರ ಪ್ರಮಾಣ ನಗರಕ್ಕಿಂತ ಹೆಚ್ಚಿದ್ದು, ವಾರ್ಷಿಕ ಶುಲ್ಕ ಪಾವತಿಸುವವರ ಪ್ರಮಾಣ ನಗರದಲ್ಲಿ ಗ್ರಾಮೀಣ ಪ್ರದೇಶಕ್ಕಿಂತ ಹೆಚ್ಚಿದೆ. ನಗರ ಸ್ಥಳೀಯ ಸಂಸ್ಥೆಗಳು ವಾರ್ಷಿಕ ಕಟ್ಟಡ ತೆರಿಗೆ ಸಂಗ್ರಹಿಸುವ ಅಥವಾ ವ್ಯಾಪಾರ/ ಉದ್ದಿಮೆ ಪರವಾನಿಗೆ ನವೀಕರಣ ಸಂದರ್ಭದಲ್ಲಿ ತ್ಯಾಜ್ಯ ಶುಲ್ಕಗಳನ್ನು ವಸೂಲಿ ಮಾಡುವುದರಿಂದ ಈ ಪ್ರಮಾಣ ಹೆಚ್ಚಿದೆ, ಅಲ್ಲದೇ ಶುಲ್ಕ ಸಂಗ್ರಹ ವೆಚ್ಚವೂ ಈ ಮೂಲಕ ಕಡಿಮೆಯಾಗಿರುವುದು ಕಂಡುಬಂದಿದೆ. ತ್ಯಾಜ್ಯ ಸಂಗ್ರಹ ವೆಚ್ಚ ಕಡಿಮೆ ಮಾಡುವ ದೃಷ್ಟಿಯಿಂದ ವರ್ಷದ ಆರಂಭದಲ್ಲಿಯೇ ವಾರ್ಷಿಕ ಶುಲ್ಕ ವಿಧಿಸುವುದು ಸೂಕ್ತ.

ಕೋಷ್ಟಕದ ಎರಡನೇ ಭಾಗದಲ್ಲಿ ತ್ಯಾಜ್ಯ ಶುಲ್ಕ ನೀಡುವ ಕುಟುಂಬಗಳು ತಿಂಗಳಿಗೆ ಸರಾಸರಿ ನೀಡುವ ಶುಲ್ಕದ ದರದ ಬಗ್ಗೆ ವಿವರಿಸಲಾಗಿದೆ. ಗ್ರಾಮೀಣ ಪ್ರದೇಶದಲ್ಲಿ 63 ಶೇಕಡದಷ್ಟು ಜನ ತಿಂಗಳಿಗೆ ಸರಾಸರಿ ರೂ 50ಕ್ಕಿಂತಲೂ ಕಡಿಮೆ ನೀಡುವುದಾಗಿ ತಿಳಿಸಿದ್ದಾರೆ.

ಉಳಿದಂತೆ 37 ಶೇಕಡದಷ್ಟು ಮಂದಿ ರೂ 51ರಿಂದ 100 ಪಾವತಿಸುವುದಾಗಿ ತಿಳಿಸಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಯಾರೂ ತಿಂಗಳಿಗೆ ರೂ 100ಕ್ಕಿಂತ ಮೇಲ್ಪಟ್ಟು ಶುಲ್ಕ ಪಾವತಿಸುತ್ತಿರುವುದು ಕಂಡುಬಂದಿಲ್ಲ.

ನಗರ ಪ್ರದೇಶಗಳಲ್ಲಿ ಶೇಕಡ 70ರಷ್ಟು ಜನರು ಸರಾಸರಿ ರೂ 50ಕ್ಕಿಂತ ಕಡಿಮೆ ಮಾಸಿಕ ಶುಲ್ಕ ಪಾವತಿಸುತ್ತಿರುವುದಾಗಿ ತಿಳಿಸಿದ್ದಾರೆ. ಆದರೆ ರೂ 100ಕ್ಕಿಂತ ಹೆಚ್ಚು ಪಾವತಿಸುವವರ ಪ್ರಮಾಣ ಶೇಕಡ 6ರಷ್ಟಿದೆ. ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ವಾಣಿಜ್ಯ ಚಟುವಟಿಕೆಗಳು ಹೆಚ್ಚಿರುವ ಕಾರಣ ಸರಾಸರಿ ಶುಲ್ಕ ಪಾವತಿ ಮಾಡುವ ಪ್ರಮಾಣವೂ ಗ್ರಾಮೀಣ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಗಿಂತ ಹೆಚ್ಚಿದೆ, ಅಲ್ಲದೆ ನಗರಗಳಲ್ಲಿ ಗ್ರಾಮೀಣ ಪ್ರದೇಶಗಳಿಗಿಂತ ಜನ ಸಾಂದ್ರತೆಯೂ ಅಧಿಕವಿದೆ.

ಕೋಷ್ಟಕದ ಮೂರನೇ ಭಾಗದಲ್ಲಿ ಎಲ್ಲಾ ರೀತಿ ತ್ಯಾಜ್ಯ ವಿಲೇವಾರಿಗೆ ಸಂಬಂಧಪಟ್ಟು ಕುಟುಂಬವೊಂದಕ್ಕೆ ತಗಲುವ ಅಂದಾಜು ವಾರ್ಷಿಕ ಖರ್ಚಿನ ಬಗ್ಗೆ ಪ್ರತಿಕ್ರಿಯೆದಾರರು ನೀಡಿದ ಮಾಹಿತಿ ಇದೆ. ಗ್ರಾಮೀಣ ವ್ಯಾಪ್ತಿಯಲ್ಲಿ 30 ಶೇಕಡದಷ್ಟು ಜನರು ವಾರ್ಷಿಕ ರೂ 500 ಕ್ಕಿಂತ ಕಡಿಮೆ ವೆಚ್ಚ ಮಾಡುವುದಾಗಿ ತಿಳಿಸಿದ್ದಾರೆ. ಅಂದರೆ ಒಟ್ಟು ಶುಲ್ಕ ಪಾವತಿಸುವ 126 ಮಂದಿಯಲ್ಲಿ 60 ಮಂದಿ. ಇನ್ನುಳಿದ 66 ಮಂದಿ ಅಂದರೆ 52 ಶೇಕಡದಷ್ಟು ಜನ ವಾರ್ಷಿಕ 500 ರಿಂದ 750ರಷ್ಟು ಖರ್ಚುಮಾಡಿದರೆ, 750ಕ್ಕಿಂತ ಹೆಚ್ಚು ಖರ್ಚು ಮಾಡುವವರು ಗ್ರಾಮೀಣ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಇಲ್ಲದಿರುವುದು ಕಂಡು ಬಂದಿದೆ. ನಗರ ಸಂಸ್ಥೆಗಳ ವ್ಯಾಪ್ತಿಯಲ್ಲಿ ಒಟ್ಟು 181 ಪ್ರತಿಕ್ರಿಯೆದಾರರಲ್ಲಿ 41 ಶೇಕಡ ರೂ 500ಕ್ಕಿಂತ ಕಡಿಮೆ ಪಾವತಿಸುತ್ತಿರುವುದಾಗಿ ತಿಳಿಸಿದ್ದಾರೆ. ಇವರಲ್ಲಿ ಶೇಕಡ 50ರಷ್ಟು ಜನ ರೂ 501ರಿಂದ 750ರಷ್ಟು ಪಾವತಿಸುವುದಾಗಿ ಹೇಳಿದ್ದಾರೆ. ನಗರದಲ್ಲಿ ವಾರ್ಷಿಕ 750ಕ್ಕಿಂತ ಹೆಚ್ಚು ಪಾವತಿಸುವವರ ಒಟ್ಟು ಪ್ರಮಾಣ 9 ಶೇಕಡದಷ್ಟಿದೆ. ಒಟ್ಟು 43 ಶೇಕಡದಷ್ಟು ಜನ ರೂ 500ಕ್ಕಿಂತ ಕಡಿಮೆ ಪಾವತಿಸುತ್ತಿದ್ದು 51 ಶೇಕಡ ಜನ ರೂ 501ರಿಂದ 750ವರೆಗೆ ಪಾವತಿಸುತ್ತಿರುವುದಾಗಿ ತಿಳಿಸಿದ್ದಾರೆ.

ಮೇಲಿನ ಕೋಷ್ಟಕದ 2ನೇ ಮತ್ತು 3ನೇ ಭಾಗವನ್ನು ವಿಶ್ಲೇಷಿಸಿದಾಗ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಸರಾಸರಿ ಶುಲ್ಕ ಪಾವತಿಸುವ ಪ್ರಮಾಣ ಗ್ರಾಮೀಣ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಗಿಂತ ಹೆಚ್ಚಿದೆ. ಈ ಫಲಿತವನ್ನು ಗಮನಿಸಿದಾಗ ತ್ಯಾಜ್ಯ ಶುಲ್ಕ ವಿಧಿಸುವಾಗ ಸರಕಾರಗಳು ಜನರ ಕಟ್ಟಡಗಳ ವಿಸ್ತೀರ್ಣವನ್ನು ಪರಿಗಣಿಸದೆ, ಅವರ ಆದಾಯವನ್ನು ಪರಿಗಣಿಸಿ ಶುಲ್ಕ ವಿಧಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ಪ್ರಸ್ತುತ ಹೆಚ್ಚಿನ ಸ್ಥಳೀಯ ಸಂಸ್ಥೆಗಳು ಜನರು ಹೊಂದಿರುವ ಕಟ್ಟಡದ ವಿಸ್ತೀರ್ಣ ಮತ್ತು ವಾಣಿಜ್ಯ ಚಟುವಟಿಕೆಯ ವಿಧಧ ಆಧಾರದಲ್ಲಿ ಶುಲ್ಕ ನಿರ್ಧಾರ

ಮಾಡುತ್ತಿವೆ. ಆದಾಯ ಹೆಚ್ಚಿರುವವರು ಹೆಚ್ಚು ಅನುಭೋಗ ಮಾಡುವುದರಿಂದ ಅವರು ಉತ್ಪಾದನೆ ಮಾಡುವ ತ್ಯಾಜ್ಯದ ಪ್ರಮಾಣವು ಹೆಚ್ಚಿರುತ್ತದೆ ಎಂಬುದನ್ನು ಕ್ಷೇತ್ರಕಾರ್ಯದಲ್ಲಿ ಮಾಹಿತಿದಾರರಿಂದ ಸಂಗ್ರಹಿಸಿದ ಅಭಿಪ್ರಾಯ ಮತ್ತು 'ಅವಲೋಕನ ವಿಧಾನ'ದ ಮೂಲಕ ಕಂಡುಕೊಳ್ಳಲಾಗಿದೆ. ಕಡಿಮೆ ಆದಾಯ ಹೊಂದಿರುವವರ ಮದುವೆ, ಗೃಹಪ್ರವೇಶ ಮುಂತಾದ ಖಾಸಗಿ ಕಾರ್ಯಕ್ರಮಗಳನ್ನು ಆದಾಯ ಹೆಚ್ಚು ಹೊಂದಿರುವವರ ಕಾರ್ಯಕ್ರಮಗಳಿಗೆ ಹೋಲಿಸಿದಾಗ ಅನುಭೋಗ, ತ್ಯಾಜ್ಯ ಉತ್ಪಾದನೆ ಮತ್ತು ಆದಾಯಕ್ಕಿರುವ ಸಂಬಂಧವನ್ನು ಅರ್ಥಮಾಡಿ ಕೊಳ್ಳಬಹುದು. ಬಡವರು ತಮ್ಮ ಸಮಾರಂಭಗಳಲ್ಲಿ ಕುಡಿಯುವ ನೀರನ್ನು ಒಂದು ಸಾಮಾನ್ಯ ಸ್ಟೀಲ್ ಪಾತ್ರೆಯಲ್ಲಿ ಸಂಗ್ರಹಿಸಿ ಲೋಟದಲ್ಲಿ ನೀಡಿದರೆ, ಶ್ರೀಮಂತರು ಮತ್ತು ಮಧ್ಯಮ ವರ್ಗದವರು 200, 500 ಮೀ.ಲೀಟರ್ ಪ್ಲಾಸ್ಟಿಕ್ ಬಾಟಲಿಗಳಲ್ಲಿ ನೀಡುತ್ತಾರೆ. ಅಲಂಕಾರ ಮತ್ತು ಆಹಾರಕ್ಕೆ ಆದಾಯ ಹೆಚ್ಚಿರುವವರು ಮಾಡುವ ವೆಚ್ಚ ಮಾತ್ರ ಅಧಿಕವಾಗಿರದೆ, ಉತ್ಪಾದನೆಯಾಗುವ ತ್ಯಾಜ್ಯವು ಅಧಿಕವಾಗಿರುತ್ತದೆ. ಮಧ್ಯಮ ಮತ್ತು ಶ್ರೀಮಂತ ವರ್ಗದವರು ದಿನನಿತ್ಯ ಉಪಯೋಗಿಸುವ ಚಪ್ಪಲಿ, ಶೋ, ಬಟ್ಟೆ, ಪೇಪರ್, ಪ್ಲಾಸ್ಟಿಕ್, ಬ್ಯಾಗು, ಸೌಂದರ್ಯ ವರ್ಧಕಗಳು ಇತ್ಯಾದಿ ವಸ್ತುಗಳು ಅಧಿಕ ಪ್ರಮಾಣದಲ್ಲಿದ್ದು ಇವೆಲ್ಲವು ಗರಿಷ್ಟ ಮಟ್ಟದ ತ್ಯಾಜ್ಯ ಉತ್ಪಾದನೆಗೆ ಕಾರಣವಾಗಿದೆ. ಈ ದೃಷ್ಟಿಯಿಂದಲೂ ತ್ಯಾಜ್ಯ ಶುಲ್ಕ ನಿರ್ಧಾರ ಮಾಡುವಾಗ ಆದಾಯದ ಪರಿಗಣನೆಯೇ ಹೆಚ್ಚು ಸೂಕ್ತವೆನಿಸುತ್ತದೆ. ಪ್ರಸ್ತುತ ವಾಣಿಜ್ಯ ಉದ್ದೇಶಗಳಿಗೆ ತ್ಯಾಜ್ಯ ಶುಲ್ಕ ವಿಧಿಸುವ ಸ್ಥಳೀಯ ಸಂಸ್ಥೆಗಳು ಕೇವಲ ಕಟ್ಟಡಗಳ ವಿಸ್ತೀರ್ಣ ಮತ್ತು ಯಾವ ರೀತಿಯ ವಾಣಿಜ್ಯ ಚಟುವಟಿಕೆ (ಹೋಟೇಲ್, ಬೇಕರಿ, ಮಾಲ್, ಮೀನು-ಮಾಂಸ ಅಂಗಡಿಗಳು, ತರಕಾರಿ ಅಂಗಡಿ, ಜೀನಸು ಅಂಗಡಿ, ಟೈಲರ್, ಸಲೂನ್, ಗೂಡಂಗಡಿ ಇತ್ಯಾದಿ) ನಡೆಸುತ್ತಾರೆ ಎನ್ನುವುದರ ಆಧಾರದಲ್ಲಿ ದರ ನಿಗದಿ ಮಾಡಿವೆ.

**ಪರಾಮರ್ಶನ ಗ್ರಂಥಗಳು ಮತ್ತು ಕೊನೆ ಟಿಪ್ಪಣಿಗಳು**


1. ದಕ್ಷಿಣ ಕನ್ನಡ ಜಿಲ್ಲೆ ಮಾನವ ಅಭಿವೃದ್ಧಿ ವರದಿ (2014). ದ.ಕ. ಜಿಲ್ಲಾ ಪಂಚಾಯತ್ ಮಂಗಳೂರು ಯೋಜನೆ, ಕಾರ್ಯಕ್ರಮ, ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಕರ್ನಾಟಕ ಸರಕಾರ, ಬೆಂಗಳೂರು. ಪು.306-308.

2. ಬೌದ್, ಇಸಾ ಆಂಡ್ ಶೆಂಕ್, ಹನ್ಸ್. (ಸಂಪ). (1994). ಸೋಲಿಡ್ ವೇಸ್ಟ್‌ಮ್ಯಾನೇಜ್‌ಮೆಂಟ್. ಮನೋಹರ್ ಪಬ್ಲಿಷರ್ಸ್ ಎಂಡ್ ಡಿಸ್ಟ್ರಿಬ್ಯೂಟರ್, ನ್ಯೂಡೆಲ್ಲಿ. ಪು.124

3. ದಿ ಹಿಂದು. ದಿನಾಂಕ 5.9.2016, ಮಂಗಳೂರು ಪ್ರತಿ, ಪುಟ 3, ದಿ ಹಿಂದು, ಶುಕ್ರವಾರ, ಮಾರ್ಚ್ 25.2016, ಮಂಗಳೂರು ಪ್ರತಿ,ಪುಟ–3, ದಿ ಹಿಂದು, ಶುಕ್ರವಾರ, ಜೂನ್ 24, 2016, ಮಂಗಳೂರು ಪ್ರತಿ, ಪು.2

4. ಚಂದೋರ್ಕರ್, ಎ.ಜಿ. ಮತ್ತು ನಾಗೋಬ, ಬಿ. ಎಸ್.(2003). ಹೋಸ್ಪಿಟಲ್ ವೇಸ್ಟ್ ಮೆನೇಜ್‌ಮೆಂಟ್. ಪರಾಸ್ ಮೆಡಿಕಲ್ ಪಬ್ಲಿಷರ್, ಹೈದರಾಬಾದ್. ಪು.134–138.

5. ಸೋಮಶೇಖರ, ಕೆ.ಕೆ.(2010). ಆ್ಯನ್ ಇಕನಾಮಿಕ್ ಇವಾಲ್ಯುವೇಶನ್ ಆಫ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಸರ್ವಿಸಸ್ ಇನ್ ಸಿಟೀಸ್: ಎ ಕೇಸ್ ಸ್ಟಡಿ ಆಫ್ ಮಂಗಳೂರು ಸಿಟಿ ಕೋರ್ಪರೇಶನ್, ಮಂಗಳೂರು. ಅಪ್ರಕಟಿತ ಪಿ.ಎಚ್.ಡಿ. ಮಹಾಪ್ರಬಂಧ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು. ಪು.96–102.

6. ಪತ್ರಾವೊ, ಲಿಂಗರಾಜ್. (2012). ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್–(ಸಂ.). ಸೊನಾಲಿ ಪಬ್ಲಿಕೇಷನ್ಸ್, ನ್ಯೂಡೆಲ್ಲಿ. ಪು.96–102.

# ಅಧ್ಯಾಯ: ಆರು

# ಘನತ್ಯಾಜ್ಯ ನಿರ್ವಹಣಾ ನೀತಿ

6.1. ಅಂತರ್ರಾಷ್ಟ್ರೀಯ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

6.2. ಭಾರತದಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

6.3. ಕರ್ನಾಟಕದಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

6.4. ಅಧ್ಯಯನ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

6.5. ಅಧ್ಯಯನ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳಿಗೆ ಸಂಬಂಧಿಸಿದ ವಿಶ್ಲೇಷಣೆ

## ಅಧ್ಯಾಯ: ಆರು

# ಘನತ್ಯಾಜ್ಯ ನಿರ್ವಹಣಾ ನೀತಿ

**ಪೀಠಿಕೆ**

ಘನತ್ಯಾಜ್ಯ ನಿರ್ವಹಣೆಯ ಸಮರ್ಪಕ ಅನುಷ್ಠಾನಕ್ಕೆ ಜಾಗತಿಕ ಮಟ್ಟದಲ್ಲಿ ಕಾಲಕಾಲಕ್ಕೆ ಅನೇಕ ನಿಯಮಾವಳಿ, ಕಾಯಿದೆ ಮತ್ತು ಕಾನೂನುಗಳನ್ನು ಜಾರಿಗೊಳಿಸಲಾಗಿದೆ. ತ್ಯಾಜ್ಯ ಸಂಗ್ರಹ, ಶೇಖರಣೆ, ಸಾಗಾಟ, ವಿಭಜನೆ, ಭೂಭರ್ತಿ, ವಿಲೇವಾರಿಗೆ ಸಂಬಂಧಿಸಿದ ಅನೇಕ ನಿಯಮಗಳನ್ನು ಸಂದರ್ಭಕ್ಕೆ ಅನುಗುಣವಾಗಿ ತಿದ್ದುಪಡಿ ಮಾಡಲಾಗಿದೆ. ತ್ಯಾಜ್ಯದ ಮೂಲ, ವಿಧ, ಕಾರಣ ಹಾಗೂ ಪರಿಣಾಮಗಳ ದೃಷ್ಟಿಯಿಂದ ತ್ಯಾಜ್ಯಗಳನ್ನು ಅಪಾಯಕಾರಿ ತ್ಯಾಜ್ಯಗಳು, ಪ್ಲಾಸ್ಟಿಕ್ ತ್ಯಾಜ್ಯಗಳು, ಜೈವಿಕ ತ್ಯಾಜ್ಯಗಳು, ಇಲೆಕ್ಟ್ರಾನಿಕ್ ತ್ಯಾಜ್ಯಗಳು ಇತ್ಯಾದಿಯಾಗಿ ವಿಂಗಡಿಸಲಾಗಿದೆ. ಇವುಗಳ ವಿಲೇವಾರಿಗೆ ಸಂಬಂಧಿಸಿ ಪ್ರತ್ಯೇಕ ಕಾಯಿದೆ/ನಿಯಮಾವಳಿಗಳನ್ನು ರೂಪಿಸಲಾಗಿದೆ. ಈ ಅಧ್ಯಾಯದಲ್ಲಿ ಕೆಲವು ಪ್ರಮುಖ ಅಂತರರಾಷ್ಟ್ರೀಯ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳ ಬಗ್ಗೆ, ಭಾರತದಲ್ಲಿ ಜಾರಿಗೆ ಬಂದ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳ ಬಗ್ಗೆ, ಕರ್ನಾಟಕದಲ್ಲಿ ಜಾರಿಗೊಳಿಸಿದ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳ ಬಗ್ಗೆ ಹಾಗೂ ಅಧ್ಯಯನ ವ್ಯಾಪ್ತಿಯಲ್ಲಿ ಅನುಷ್ಠಾನದಲ್ಲಿರುವ ನಿಯಮಾವಳಿಗಳ ಬಗ್ಗೆ ವಿವರಣೆ ನೀಡಲಾಗಿದೆ. ಈ ಅಧ್ಯಾಯದ ಮುಂದಿನ ಭಾಗವು ಕ್ಷೇತ್ರ ಕಾರ್ಯದಲ್ಲಿ ದೊರೆತ ಮಾಹಿತಿಯ ಆಧಾರದಲ್ಲಿ ಅಧ್ಯಯನ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳ ಅನುಷ್ಠಾನದ ಕುರಿತು ವಿಶ್ಲೇಷಿಸುತ್ತದೆ.

### 6.1 ಅಂತರ್ರಾಷ್ಟ್ರೀಯ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

ಘನತ್ಯಾಜ್ಯ ನಿರ್ವಹಣೆಯು ಮೊಟ್ಟ ಮೊದಲಿಗೆ 1880ರಲ್ಲಿ ಇಂಗ್ಲೇಂಡಿನಲ್ಲಿ ಪ್ರಾರಂಭವಾದ ಬಗ್ಗೆ ಉಲ್ಲೇಖವಿದೆ. ನಂತರ ಪ್ರಪಂಚದ ಇತರ ರಾಷ್ಟ್ರಗಳು ಅನುಷ್ಠಾನಕ್ಕೆ ತಂದವು. ಪ್ರಾರಂಭದಲ್ಲಿ

ತ್ಯಾಜ್ಯ ನಿರ್ವಹಣೆಯು ತ್ಯಾಜ್ಯ ಸಂಗ್ರಹಿಸಿ ಭೂಮಿಯಲ್ಲಿ ಹೂಳುವುದು ಅಥವಾ ಕೆರೆ–ನೀರಿನ ಗುಂಡಿಗಳಿಗೆ ಹಾಕುವುದು, ಹಂದಿಗಳಿಗೆ ಹಾಕುವುದು ಇಲ್ಲವೇ ಸುಡುವುದರ ಮೂಲಕ ನಡೆಯುತ್ತಿತ್ತು. ಸುಮಾರು 1930ರ ವರೆಗೆ ತೀರ ಪ್ರದೇಶಗಳ ನಗರಗಳಲ್ಲಿ ನೀರಿನಲ್ಲಿ ವಿಲೇವಾರಿ ಮಾಡುತ್ತಿದ್ದರು. ಅದರ ದುಷ್ಪರಿಣಾಮಗಳ ಬಗ್ಗೆ ತಿಳಿದ ಬಳಿಕ ನೀರಿಗೆ ಹಾಕುವುದನ್ನು ನಿಷೇಧಿಸಲಾಯಿತು.[1]

ಎರಡನೇ ಮಹಾಯುದ್ಧದ ನಂತರ 1960–70ರ ದಶಕದಲ್ಲಿ ರಾಸಾಯನಿಕ ತ್ಯಾಜ್ಯಗಳ ದುರಂತಗಳು ಸಂಭವಿಸಿದವು. ಇಂಗ್ಲೇಂಡಿನ ನ್ಯೂನೇಟೋನ್‌ನಲ್ಲಿ 1972ರಲ್ಲಿ ಸಯನೈಡ್ ತ್ಯಾಜ್ಯವನ್ನು ಶಾಲಾ ಮೈದಾನದಲ್ಲಿ ಎಸೆದ ಪರಿಣಾಮವಾಗಿ ಅನೇಕ ತೊಂದರೆಗಳಾದವು. ನಂತರ 1977ರಲ್ಲಿ ಅಮೇರಿಕಾದ ಲೋವ್ ಕ್ಯಾನೆಲ್‌ನಲ್ಲಿ ತ್ಯಾಜ್ಯ ರಸದ ಸೋರಿಕೆಯಿಂದಾಗಿ ಜನ ತೊಂದರೆ ಅನುಭವಿಸಿದರು. ಹೀಗೆಯೇ 1971ರಲ್ಲಿ ಜರ್ಮನಿಯಲ್ಲಿ 3000 ಟನ್ ಆರ್ಸೆನಿಕ್ ಮತ್ತು ಸಯನೈಡ್ ತ್ಯಾಜ್ಯವನ್ನು ಸರೋವರಕ್ಕೆ ಹಾಕಿದ ಪರಿಣಾಮವಾಗಿ ಮಾಲಿನ್ಯ ಉಂಟಾಯಿತು. ಜಗತ್ತಿನಾದ್ಯಂತ ಇಂತಹ ಅನೇಕ ದುರಂತಗಳು ಸಂಭವಿಸಿರುವುದರಿಂದ, ಸಾರ್ವಜನಿಕರು ಕಾನೂನಿನ ಮೂಲಕ ತ್ಯಾಜ್ಯ ನಿರ್ವಹಣೆಯನ್ನು ಮಾಡುವಂತೆ ಆಗ್ರಹಿಸಿದ ಪರಿಣಾಮವಾಗಿ ಇಂಗ್ಲೇಂಡಿನಲ್ಲಿ 1972ರಲ್ಲಿ 'ದಿ ಡೆಪಾಸಿಟ್ ಆಫ್ ಪೋಯಿಸನಸ್ ವೇಸ್ಟ್ಆ್ಯಕ್ಟ್" (ವಿಷಕಾರಿ ತ್ಯಾಜ್ಯ ಸಂಗ್ರಹ ಕಾಯ್ದೆ) ಜಾರಿಗೆ ಬಂದಿತು.[2] ಮುಂದುವರಿದು 1974ರಲ್ಲಿ ತ್ಯಾಜ್ಯ ನಿರ್ವಹಣೆ ಮತ್ತು ವಿಲೇವಾರಿಗಾಗಿ ಮಾಲಿನ್ಯ ತಡೆ ಕಾಯ್ದೆಯನ್ನು ತರಲಾಯಿತು. ಇದೇ ಸಂದರ್ಭದಲ್ಲಿ ಯುರೋಪಿಯನ್ ಯೂನಿಯನ್ ಕೆಲವು ಕಾಯ್ದೆಗಳನ್ನು ಜಾರಿಗೆ ತಂದಿತು.[3]

ಯುರೋಪಿಯನ್ ಯೂನಿಯನ್‌ನ ತ್ಯಾಜ್ಯ ನಿರ್ವಹಣಾ ನೀತಿಯನ್ನು ಬೇರೆ ಬೇರೆ ಪರಿಸರ ಕ್ರಿಯಾ ಕಾರ್ಯಕ್ರಮಗಳ ಮೂಲಕ ಜಾರಿಗೊಳಿಸಲಾಯಿತು. 1989ರಲ್ಲಿ 4ನೇ ಪರಿಸರ ಕ್ರಿಯಾ ಕಾರ್ಯಕ್ರಮ (1987–92)ದಲ್ಲಿ ತ್ಯಾಜ್ಯ ನಿರ್ವಹಣೆಗೆ ಸಮುದಾಯವು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ನಿರ್ಧರಿಸಲಾಯಿತು. ಯೂರೋಪಿಯನ್ ಯೂನಿಯನ್‌ನ ಸದಸ್ಯ ರಾಷ್ಟ್ರಗಳ ರಾಷ್ಟ್ರೀಯ ತ್ಯಾಜ್ಯ ನಿರ್ವಹಣಾ ನೀತಿಯು 1995ರಲ್ಲಿ ಜಾರಿಗೆ ಬಂದಿತು.[4] ಇದರ ಪ್ರಮುಖ ಉದ್ದೇಶಗಳೆಂದರೆ:

- ತ್ಯಾಜ್ಯ ಸಂಗ್ರಹ ಹಾಗೂ ವಿಲೇವಾರಿ ಜನರ ಆರೋಗ್ಯಕ್ಕೆ ಅಪಾಯವಾಗಬಾರದು ಮತ್ತು ವಿಧಾನಗಳು ಅಥವಾ ಪ್ರಕ್ರಿಯೆಗಳು ಪರಿಸರಕ್ಕೆ ಹಾನಿಯುಂಟುಮಾಡಬಾರದು.
- ಉತ್ತಮವಾದ ತಂತ್ರಜ್ಞಾನವನ್ನು ಬಳಸಬೇಕು. ಹೆಚ್ಚು ವೆಚ್ಚದಾಯಕವಾಗದಂತೆ ಜಾಗ್ರತೆ ವಹಿಸಬೇಕು.

- ತ್ಯಾಜ್ಯ ವಿಲೇವಾರಿಯಲ್ಲಿ ಸ್ವಾವಲಂಬನೆಯನ್ನು ಹೊಂದಿರಬೇಕು.
- ತ್ಯಾಜ್ಯ ಉತ್ಪಾದನೆಯಲ್ಲಿ ಸ್ವಾವಲಂಬನೆಯನ್ನು ಹೊಂದಿರಬೇಕು.
- ತ್ಯಾಜ್ಯ ಉತ್ಪಾದನೆಯಾಗದಂತೆ ಅಥವಾ ಕಡಿಮೆಗೊಳಿಸಲು ಉತ್ತೇಜನ ನೀಡಬೇಕು.
- ತ್ಯಾಜ್ಯ ಮರು ಸಂಗ್ರಹಕ್ಕೆ ಆದ್ಯತೆ ನೀಡಬೇಕು. ತ್ಯಾಜ್ಯವನ್ನು ಮರುತ್ಪಾದನಾ ಘಟಕಗಳಿಗೆ ನೀಡುವುದು, ಪುನರ್‌ಬಳಕೆ, ಶಕ್ತಿಯ ಮೂಲವಾಗಿ ಬಳಸುವುದು ಮುಂತಾದ ಕ್ರಮಗಳ ಮೂಲಕ ತ್ಯಾಜ್ಯವನ್ನು ಮರುಬಳಕೆ ಮಾಡುವಂತೆ ಪ್ರೋತ್ಸಾಹಿಸುವುದು.
- ತ್ಯಾಜ್ಯ ಸಂಗ್ರಹ, ಸಾಗಾಟ ಹಾಗೂ ವಿಲೇವಾರಿಗೆ ಸಂಬಂಧಿಸಿ ಸದಸ್ಯ ರಾಷ್ಟ್ರಗಳಿಗೆ ಸೂಚಿಯನ್ನು ನೀಡಿದೆ. 1991ರಲ್ಲಿ ಎಲ್ಲಾ ರಾಷ್ಟ್ರಗಳು ತ್ಯಾಜ್ಯ ವಿಲೇವಾರಿ ಪ್ರಾಧಿಕಾರ, ತ್ಯಾಜ್ಯ ನಿಯಂತ್ರಣ ಮಂಡಳಿ ಮತ್ತು ತ್ಯಾಜ್ಯ ಯೋಜನೆಯನ್ನು ರೂಪಿಸುವಂತೆ ತಿಳಿಸಿದೆ. ಹಾಗೆಯೇ ಅಪಾಯಕಾರಿ ತ್ಯಾಜ್ಯ ನಿಯಂತ್ರಣ, ತ್ಯಾಜ್ಯದಿಂದ ಅಂತರ್ಜಲ ಸಂರಕ್ಷಣೆ, ಸಾವಯವ ತ್ಯಾಜ್ಯವನ್ನು ಭೂಭರ್ತಿಗೆ ಹೋಗದಂತೆ ತಡೆಯುವುದು, ತ್ಯಾಜ್ಯ ಸುಡುವ ಪ್ರಕ್ರಿಯೆಯ ನಿಯಂತ್ರಣ ಮತ್ತು ತ್ಯಾಜ್ಯ ಆವರ್ತನೀಯಕ್ಕೆ ಕೌನ್ಸಿಲ್ ಮಾರ್ಗ ಸೂಚಿಯನ್ನು ನೀಡಿದೆ.

ಜಪಾನಿನ ಶೇಕಡ 10ರಷ್ಟು ಭೂಭಾಗ ಮಾತ್ರ ವಾಸಕ್ಕೆ ಯೋಗ್ಯವಾಗಿರುವುದರಿಂದ ಭೂಭರ್ತಿಗೆ ಸಾಕಷ್ಟು ಜಾಗದ ಕೊರತೆ ಇರುವ ಕಾರಣ ಮೂಲದಲ್ಲಿ ತ್ಯಾಜ್ಯ ಉತ್ಪಾದನೆಯ ಕಡಿತ ಮತ್ತು ಪುನರುತ್ಪಾದನೆಗೆ ಆದ್ಯತೆ ನೀಡುವ ಉದ್ದೇಶವನ್ನಿಟ್ಟುಕೊಂಡು 1970ರಲ್ಲಿ ತ್ಯಾಜ್ಯ ವಿಲೇವಾರಿ ಕಾನೂನನ್ನು ಜಾರಿಗೆ ತಂದಿತು. ಈ ಕಾನೂನಿನಲ್ಲಿ ತ್ಯಾಜ್ಯವನ್ನು ಕೈಗಾರಿಕಾ ತ್ಯಾಜ್ಯ ಮತ್ತು ಸಾಮಾನ್ಯ ತ್ಯಾಜ್ಯ (ಮುನ್ಸಿಪಾಲ್ ತ್ಯಾಜ್ಯ) ವೆಂದು ವರ್ಗೀಕರಿಸಲಾಗಿದೆ.[5]

ಅಮೇರಿಕವು 1965ರಲ್ಲಿ ಘನತ್ಯಾಜ್ಯ ವಿಲೇವಾರಿ ಕಾಯಿದೆಯನ್ನು ಜಾರಿಗೆ ತಂದಿದ್ದು, ಈ ಕಾಯಿದೆಯನ್ನು 1976ರಲ್ಲಿ "ಸಂಪನ್ಮೂಲ ಮತ್ತು ಪುನರ್ ಸಂಗ್ರಹ ಕಾಯಿದೆ" ಎಂಬುದಾಗಿ ತಿದ್ದುಪಡಿ ಮಾಡಲಾಯಿತು.[6] ಅಮೇರಿಕ ಮೊದಲ ಬಾರಿಗೆ ಇ–ವೇಸ್ಟ್ ಕಾನೂನನ್ನು ಜಾರಿಗೆ ತಂದಿದೆ. ಅಮೇರಿಕಾದ ಕ್ಯಾಲಿಫೋರ್ನಿಯವು ಇಲೆಕ್ಟ್ರಾನಿಕ್ ವೇಸ್ಟ್ ರೀಸೈಕ್ಲಿಂಗ್ ಆ್ಯಕ್ಟ್ 2003 ನ್ನು ಜಾರಿಗೆ ತಂದಿತು.

ಹೀಗೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಎಲ್ಲಾ ದೇಶಗಳು ಪ್ರತ್ಯೇಕವಾಗಿ ತಮ್ಮ ಪರಿಸರಕ್ಕೆ ಹೊಂದಿಕೊಳ್ಳುವ ಕಾಯಿದೆ/ಕಾನೂನುಗಳನ್ನು ರೂಪಿಸಿಕೊಂಡಿವೆ.

## 6.2 ಭಾರತದಲ್ಲಿ ಘನತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

1957ರಲ್ಲಿ ಜಾರಿಗೆ ಬಂದ 'ಮುನ್ಸಿಪಾಲ್ ಕಾಯಿದೆಯು' ಸ್ವತಂತ್ರ ಭಾರತದಲ್ಲಿ ಪ್ರಥಮ ಕಾಯಿದೆಯಾಗಿದೆ. ಭಾರತದಲ್ಲಿ ಸರಕಾರವು ಘನತ್ಯಾಜ್ಯ ನಿರ್ವಹಣೆಗೆ ಸ್ಪಷ್ಟ ನಿಯಾಮಾವಳಿಗಳನ್ನು ರೂಪಿಸುವ ದೃಷ್ಟಿಯಿಂದ ಯೋಜನಾ ಆಯೋಗವು 1994ರಲ್ಲಿ ಜೆ. ಎಲ್. ಬಾಲಾಜಿಯವರ ಅಧ್ಯಕ್ಷತೆಯಲ್ಲಿ ಉನ್ನತಾಧಿಕಾರ ಸಮಿತಿಯೊಂದನ್ನು ನೇಮಿಸಿತು. ಈ ಸಮಿತಿಯ ವರದಿಯು ಘನತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ನಗರಗಳ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳುವ ದೃಷ್ಟಿಯಿಂದ ಒಂದು ರಾಷ್ಟ್ರೀಯ ನೀತಿಯನ್ನು ರೂಪಿಸುವಂತೆ ಸಲಹೆ ಮಾಡಿತು. ಹಾಗೆಯೇ ಸರ್ವೋಚ್ಛ ನ್ಯಾಯಾಲಯವು ಕೇಂದ್ರ, ರಾಜ್ಯ ಹಾಗೂ ಸ್ಥಳೀಯ ಮಟ್ಟದಲ್ಲಿ ತ್ಯಾಜ್ಯ ನಿರ್ವಹಣಾ ವಿಧಾನವನ್ನು ಉನ್ನತೀಕರಿಸುವ ದೃಷ್ಟಿಯಿಂದ ಬರ್ಮನ್ ಸಮಿತಿಯನ್ನು ನೇಮಕ ಮಾಡಿತು.[7] ಘನತ್ಯಾಜ್ಯ, ದ್ರವತ್ಯಾಜ್ಯ ಹಾಗೂ ಅನಿಲತ್ಯಾಜ್ಯ ನಿರ್ವಹಣೆಗೆ ಪ್ರತ್ಯೇಕ ನಿಯಮಾವಳಿಗಳನ್ನು ರೂಪಿಸಲಾಗಿದೆ. ಆದರೆ ಘನತ್ಯಾಜ್ಯಕ್ಕೆ ಸಂಬಂಧಿಸಿ ಅನುಷ್ಠಾನದಲ್ಲಿರುವ ಬಹುತೇಕ ನಿಯಮಾವಳಿ/ಕಾಯಿದೆಗಳು ನಗರ ಸ್ಥಳೀಯ ಸಂಸ್ಥೆಗಳನ್ನು ಗಮನದಲ್ಲಿಟ್ಟುಕೊಂಡು ರಚಿತವಾಗಿರುವುದು ಅಧ್ಯಯನದಿಂದ ತಿಳಿದು ಬಂದಿದೆ. ಜಿಲ್ಲಾಡಳಿತ, ಜಿಲ್ಲಾ ಪಂಚಾಯತ್‌ಗಳು, ತಾಲೂಕು ಪಂಚಾಯತ್ ಗಳು ಹಾಗೂ ಗ್ರಾಮ ಪಂಚಾಯತ್‌ಗಳು ಸ್ವಚ್ಛತೆ, ಪರಿಸರ ಕಾಳಜಿ, ಆರೋಗ್ಯ ಮತ್ತು ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು ಗ್ರಾಮೀಣ ಮಟ್ಟದಲ್ಲಿ ತ್ಯಾಜ್ಯ ನಿರ್ವಹಣೆಗೆ ನಿಯಮಗಳನ್ನು ರೂಪಿಸಿವೆ. ಭಾರತದಲ್ಲಿ ಜಾರಿಗೆ ಬಂದ ಮತ್ತು ಕಾಲ ಕಾಲಕ್ಕೆ ತಿದ್ದುಪಡಿಗೊಳಪಟ್ಟ ನಿಯಮಾವಳಿಗಳ ಬಗ್ಗೆ ಸ್ಥೂಲ ವಿವರಣೆಯನ್ನು ಈ ಕೆಳಗಿನ ಭಾಗದಲ್ಲಿ ನೀಡಲಾಗಿದೆ.

### ಪರಿಸರ ಸಂರಕ್ಷಣಾ ಕಾಯಿದೆ–1986[8]

ಈ ಕಾಯಿದೆಯ ಮುಖ್ಯ ಗುರಿ ಪರಿಸರ ಸಂರಕ್ಷಣೆ ಮತ್ತು ಪರಿಸರ ಅಭಿವೃದ್ಧಿ. ಪರಿಸರವು ನೀರು, ಗಾಳಿ, ಭೂಮಿ, ಮಾನವರು, ಇತರೆ ಜೀವಿಗಳು, ಗಿಡಗಳು, ಸೂಕ್ಷ್ಮ ಜೀವಿಗಳು ಮತ್ತು ಪರಿಸರದ ಇತರ ಸ್ವತ್ತುಗಳನ್ನು ಒಳಗೊಂಡಿದೆ. ಈ ಕಾಯಿದೆಯು ಪರಿಸರ ಮತ್ತು ಅದಕ್ಕೆ ಸಂಬಂಧಿಸಿರುವ ಅಂಶಗಳಿಗೆ ರಕ್ಷಣೆ ನೀಡುವುದಲ್ಲದೆ ಅದರ ಉನ್ನತಿಗಾಗಿ ಹಲವಾರು ಯೋಜನೆಗಳನ್ನು ಕೊಟ್ಟಿದೆ.

ಕಾಯಿದೆಯು ನಿಯಮಾವಳಿಗಳನ್ನು ಯಾರು ಪಾಲಿಸುವುದಿಲ್ಲವೋ ಅಥವಾ ಯಾವುದೇ ಅಂಶಗಳ ವಿರುದ್ಧವಾಗಿ ನಡೆದರೆ ಅಥವಾ ಯಾವುದೇ ಆದೇಶ, ನಿರ್ದೇಶನಗಳನ್ನು ಪರಿಪಾಲನೆ ಮಾಡದಿದ್ದರೆ 5 ವರ್ಷಗಳ ತನಕ ಜೈಲು ಶಿಕ್ಷೆ ಅಥವಾ 1 ಲಕ್ಷದವರೆಗೆ ದಂಡ ಅಥವಾ

ಎರಡೂ ವಿಧಿಸುವ ಅವಕಾಶವನ್ನು ಕಾಯಿದೆಯಲ್ಲಿ ಸೇರಿಸಲಾಗಿದೆ. ಕಾಯಿದೆಯನ್ನು ಮತ್ತೆ ಉಲ್ಲಂಘನೆ ಮಾಡಿದವರಿಂದ ಪ್ರತಿ ದಿನ 5 ಸಾವಿರ ರೂಪಾಯಿಗಳ ಹೆಚ್ಚಿನ ದಂಡವನ್ನು ವಸೂಲಿ ಮಾಡಲಾಗುವುದು.

ಈ ನಿಯಮಾವಳಿಯು ಪರಿಸರ ಮಾಲಿನ್ಯಕಾರಕಗಳ ಬಗ್ಗೆ ತಿಳಿಸುತ್ತದೆ.ಪರಿಸರ ಮಾಲಿನ್ಯಕಾರಕಗಳೆಂದರೆ ಪರಿಸರಕ್ಕೆ ಹಾನಿಯುಂಟುಮಾಡುವ ಘನ, ದ್ರವ ಅಥವಾ ಅನಿಲ ವಸ್ತುಗಳು. ನಿಯಮಾವಳಿಯು ಅಪಾಯಕಾರಿ ತ್ಯಾಜ್ಯಗಳ ನಿರ್ವಹಣೆ, ಉತ್ಪಾದನೆ, ಸಂಸ್ಕರಣೆ, ಉಪಚಾರ, ಸಂಗ್ರಹ, ಸಾಗಾಟ, ಶೇಖರಣೆ ವ್ಯವಸ್ಥೆ, ಅನುಪಯುಕ್ತ ತ್ಯಾಜ್ಯಗಳ ನಾಶ, ಪರಿವರ್ತಿಸುವುದು, ಮಾರಾಟ ಮಾಡುವುದು, ಸುರಕ್ಷತಾ ಕ್ರಮಗಳನ್ನು ಅನುಸರಿಸುವುದು ಇತ್ಯಾದಿಗಳನ್ನು ಒಳಗೊಂಡಿದೆ. ಇದಲ್ಲದೆ ಅಪಾಯಕಾರಿ ವಸ್ತುಗಳ ಬಳಕೆ, ಅವುಗಳ ನಿಷೇಧ ಹಾಗೂ ಬಳಕೆಗೆ ಸಂಬಂಧಿಸಿದ ಕಾನೂನನ್ನು ಒಳಗೊಂಡಿದೆ.

ಪರಿಸರದ ರಕ್ಷಣೆ, ಗುಣಮಟ್ಟದ ಸುಧಾರಣೆ, ಪರಿಸರ ಮಾಲಿನ್ಯದ ತಡೆ, ಹತೋಟಿ ಮತ್ತು ಕಡಿಮೆಗೊಳಿಸಲು ಕೇಂದ್ರ ಸರ್ಕಾರಕ್ಕೆ ಈ ಕಾಯಿದೆಯನ್ನು ಬಳಸಿಕೊಳ್ಳುವ ಅಧಿಕಾರವನ್ನು ನೀಡಲಾಗಿದೆ. ಈ ನಿಯಮಾವಳಿಗಳನ್ನು ಉಲ್ಲಂಘಿಸುವ ಸರಕಾರದ ಯಾವುದೇ ಇಲಾಖೆ ಅಥವಾ ವಿಭಾಗದ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಅಧಿಕಾರವನ್ನು ನೀಡಲಾಗಿದೆ.[8]

**ಮುನ್ಸಿಪಾಲ್ ಘನತ್ಯಾಜ್ಯ ನಿಯಮ-2000[9]**

ಸಾರ್ವಜನಿಕ ಹಿತಾಸಕ್ತಿ ದಾವೆಗೆ ಪ್ರತಿಕ್ರಿಯಿಸಿದ ಸರ್ವೋಚ್ಚ ನ್ಯಾಯಾಲಯವು ಭಾರತದ ಪ್ರಥಮ ದರ್ಜೆ ನಗರಗಳಲ್ಲಿ ಘನತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ಸೂಕ್ತ ಮಾರ್ಗದರ್ಶನಗಳನ್ನು ಶಿಫಾರಸ್ಸು ಮಾಡಲು ನೇಮಿಸಿದ ಸಮಿತಿಯು 1998ರಲ್ಲಿ ವರದಿಯನ್ನು ನೀಡಿತ್ತು. ಇದರ ಶಿಫಾರಸ್ಸಿನಂತೆ ಮುಂದೆ ಪರಿಸರ ಮತ್ತು ಅರಣ್ಯ ಸಚಿವಾಲಯವು ಮುನ್ಸಿಪಾಲ್ ಘನತ್ಯಾಜ್ಯ ನಿಯಮ 2000 ಇದರ ಕರಡು ಪ್ರತಿಯನ್ನು 1999ರಲ್ಲಿ ನೀಡಿ, ಅಂತಿಮ ವರದಿಯು ಸೆಪ್ಟಂಬರ್ 2000ರಲ್ಲಿ ಜಾರಿಗೆ ಬಂದಿತು. ಈ ನಿಯಮಾವಳಿಯು ದೇಶದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ಸಂಗ್ರಹಣೆ, ಶೇಖರಣೆ, ಸಾಗಾಟ, ಸಂಸ್ಕರಣ ಮತ್ತು ವಿಲೇವಾರಿಗೆ ಸಂಬಂಧಿಸಿದ್ದಾಗಿದೆ.

**ಪ್ರಮುಖ ಅಂಶಗಳು**

ಪುರಸಭಾ ಘನತ್ಯಾಜ್ಯ ನಿಯಮವು ಸಂಗ್ರಹಣೆ, ಶೇಖರಣೆ, ಸಾಗಾಣಿಕೆ, ಸಂಸ್ಕರಣೆ ಮತ್ತು ವಿಲೇವಾರಿಗೆ ಸಂಬಂಧಿಸಿ ಈ ಕೆಳಗಿನ ನೀತಿ ನಿಯಮಗಳನ್ನು ರೂಪಿಸಿದೆ.

- ಪುರಸಭಾ ಘನತ್ಯಾಜ್ಯ ವಸ್ತುಗಳನ್ನು ಸಮುದ್ರದಲ್ಲಿ, ನದಿಗಳಲ್ಲಿ, ಖಾಲಿ ಪ್ರದೇಶಗಳಲ್ಲಿ ಎಸೆಯುವಂತಿಲ್ಲ.
- ಸಾವಯವ ತ್ಯಾಜ್ಯವನ್ನು ಸಾವಯವ ಗೊಬ್ಬರ ಹಾಗು ಎರೆಹುಳು ಗೊಬ್ಬರವಾಗಿ ಪರಿವರ್ತಿಸಬೇಕು.
- ಮಿಶ್ರಿತ ತ್ಯಾಜ್ಯದಲ್ಲಿ ಪುನರ್ ಬಳಸಬಹುದಾದುದನ್ನು ಉಪಯೋಗಿಸಿಕೊಳ್ಳಬೇಕು.
- ಭೂಭರ್ತಿ ಪ್ರದೇಶಗಳನ್ನು ವಿಭಜಿಸಲಾಗದ, ಉಪಯೋಗಕ್ಕೆ ಬಾರದ, ನಿರುಪಯುಕ್ತ ವಸ್ತುಗಳನ್ನು ಭರ್ತಿ ಮಾಡಲು ಮಾತ್ರ ಸೀಮಿತಗೊಳಿಸಬೇಕು.

**ಗುರಿಗಳು**

- ಸಾರ್ವಜನಿಕರ ಆರೋಗ್ಯ ಹಾಗೂ ನೈಸರ್ಗಿಕ ಸಂಪನ್ಮೂಲಗಳನ್ನು ಸಂರಕ್ಷಿಸುವುದು, ತ್ಯಾಜ್ಯ ಉತ್ಪತ್ತಿಯನ್ನು ಕಡಿಮೆಗೊಳಿಸುವುದು, ವ್ಯವಸ್ಥಿತವಾಗಿ ಸಾಗಾಣಿಕೆ, ಸಂಗ್ರಹಣೆ, ಬೇರ್ಪಡಿಸುವುದು ಹಾಗೂ ಪುನರ್ ಬಳಸಬಹುದಾದುದನ್ನು ನವೀಕರಿಸುವುದು.
- ಸೂಕ್ತ ರೀತಿಯಲ್ಲಿ ಪೂರಕ ಪುರಸಭಾ ಘನತ್ಯಾಜ್ಯ ನಿರ್ವಹಣೆ ನಿಯಮದ ಪ್ರಕಾರ ಭೂಭರ್ತಿ ಹಾಗೂ ಸಂಗ್ರಹಣೆ, ಸಾಗಾಣಿಕೆ ಹಾಗೂ ವಿಲೇವಾರಿಯನ್ನು ಅನುಷ್ಠಾನಕ್ಕೆ ತರುವುದು.
- ನಗರ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ನಿರ್ವಹಣೆಯನ್ನು ಗಂಭೀರವಾಗಿ ತೆಗೆದುಕೊಂಡು ಸೂಕ್ತ ಸೌಲಭ್ಯಗಳನ್ನು ತನ್ನ ನಾಗರಿಕರಿಗೆ ಒದಗಿಸುವುದು.

**ಪುರಸಭಾ ಜವಾಬ್ದಾರಿಗಳು**

ಪ್ರತಿಯೊಂದು ನಗರ ಸ್ಥಳೀಯ ಸಂಸ್ಥೆಯೂ ಸಹ ತನ್ನ ವ್ಯಾಪ್ತಿ ಪ್ರದೇಶದಲ್ಲಿ ಘನತ್ಯಾಜ್ಯ ನಿರ್ವಹಣಾ ನಿಯಮಗಳನ್ನು ಪಾಲಿಸಬೇಕು. ತನಗೆ ಸೇರಿದ ಭೂಭಾಗದಲ್ಲಿ ತ್ಯಾಜ್ಯ ಸಂಗ್ರಹಣೆ, ಸಾಗಾಣಿಕೆ, ಸಂಸ್ಕರಣೆ ಹಾಗೂ ವಿಲೇವಾರಿಗೆ ಸಂಬಂಧಿಸಿದಂತೆ ನೀತಿ ನಿಯಮಗಳ ಪ್ರಕಾರ ಕಾರ್ಯ ನಿರ್ವಹಿಸಬೇಕು. ಪುರಸಭೆ ಹಾಗೂ ಸಂಬಂಧಿಸಿದ ಸಂಸ್ಥೆಯು ತ್ಯಾಜ್ಯ ನಿರ್ವಹಣೆ, ವಿಲೇವಾರಿ ಹಾಗೂ ಭೂಭರ್ತಿಗೆ ಸಂಬಂಧ ಪಟ್ಟಂತೆ ನಮೂನೆ–1ರಲ್ಲಿ ಅರ್ಜಿಯನ್ನು ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಅಥವಾ ಸಮಿತಿಗೆ ಸಲ್ಲಿಸಿ ಅನುಮತಿಯನ್ನು ಪಡೆದುಕೊಳ್ಳಬೇಕು. ಪುರಸಭೆಯು ನಿಯಮಗಳಿಗನುಗುಣವಾಗಿ ತ್ಯಾಜ್ಯ ನಿರ್ವಹಣೆಯನ್ನು ಪಾಲಿಸಬೇಕು. ಇದನ್ನು ನಿಯಮಾವಳಿ 1ರಲ್ಲಿ ನೀಡಲಾಗಿದೆ. ಪುರಸಭೆಯು ತನ್ನ ವಾರ್ಷಿಕ ವರದಿಯನ್ನು ನಮೂನೆ–

2ರಲ್ಲಿ 1. ಸಂಬಂಧಿಸಿದ ರಾಜ್ಯದ, ಕೇಂದ್ರಾಡಳಿತ ಪ್ರದೇಶದ ನಗರಾಭಿವೃದ್ಧಿ ಇಲಾಖೆಯ ಕಾರ್ಯದರ್ಶಿಗಳು ಮತ್ತು 2. ಜಿಲ್ಲಾ ನ್ಯಾಯಾಧೀಶರು ಅಥವಾ ಜಿಲ್ಲಾಧಿಕಾರಿಗಳಿಗೆ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಅಥವಾ ಸಮಿತಿಯ ಪ್ರತಿಯೊಂದಿಗೆ ಪ್ರತಿ ವರ್ಷ 30ನೇ ಜೂನ್ ಅವಧಿಯೊಳಗೆ ಸಲ್ಲಿಸುವುದು.

**1. ರಾಜ್ಯ ಸರ್ಕಾರ ಹಾಗೂ ಕೇಂದ್ರಾಡಳಿತ ಪ್ರದೇಶಗಳ ಜವಾಬ್ದಾರಿಗಳು:** ಸಂಬಂಧಪಟ್ಟ ರಾಜ್ಯ ಸರ್ಕಾರ ಹಾಗೂ ಕೇಂದ್ರಾಡಳಿತ ಪ್ರದೇಶಗಳ ನಗರಾಭಿವೃದ್ಧಿ ಇಲಾಖೆಯ ಕಾರ್ಯದರ್ಶಿಗಳು ಆ ರಾಜ್ಯದ ಅಥವಾ ಪ್ರದೇಶದಲ್ಲಿ ನೀತಿ ನಿಯಮಗಳನ್ನು ಜಾರಿ ಮಾಡುವಲ್ಲಿ ಸಂಪೂರ್ಣ ಜವಾಬ್ದಾರಿ ಹೊಂದಿರುತ್ತಾರೆ. ಜಿಲ್ಲಾ ದಂಡಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿ ಪ್ರದೇಶಗಳಲ್ಲಿ ನೀತಿ ನಿಯಮಗಳನ್ನು ಅನುಷ್ಠಾನಕ್ಕೆ ತರುವಲ್ಲಿ ಸಂಪೂರ್ಣ ಹೊಣೆ ಅವರದಾಗಿರುತ್ತದೆ.

**2. ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಅಥವಾ ಸಮಿತಿಗಳ ಜವಾಬ್ದಾರಿಗಳು:** ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಅಥವಾ ಸಮಿತಿಯು ನೀತಿ ನಿಯಮಗಳಿಗನುಸಾರ ತಮ್ಮ ವ್ಯಾಪ್ತಿ ಪ್ರದೇಶಗಳಲ್ಲಿ ಅಂತರ್ಜಲ, ವಾತಾವರಣದ ವಾಯು, ರಾಸಾಯನಿಕಗಳನ್ನು ಪರಿವೀಕ್ಷಿಸಬೇಕು.

ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯು ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಹಾಗೂ ಸಮಿತಿಗಳ ಜೊತೆ ಚರ್ಚಿಸಿ ತ್ಯಾಜ್ಯ ನಿರ್ವಹಣೆ ಹಾಗೂ ಪರಿವೀಕ್ಷಣೆಗೆ ಸಂಬಂಧಿಸಿದಂತೆ ಸೂಕ್ತ ಮಾನದಂಡಗಳನ್ನು ನಿರ್ಧರಿಸುತ್ತದೆ. ರಾಜ್ಯ ಮಂಡಳಿಯು ಅಥವಾ ಸಮಿತಿಯು ತನಗೆ ಬರುವ ತ್ಯಾಜ್ಯ ನಿರ್ವಹಣೆ ಹಾಗೂ ಭೂಭರ್ತಿಗೆ ಸಂಬಂಧಿಸಿದ ಅರ್ಜಿಯನ್ನು ಅನುಮತಿಸುವ ಮುನ್ನ ಸಂಬಂಧಪಟ್ಟ ಇತರೆ ಇಲಾಖೆಗಳಾದ ರಾಜ್ಯ ನಗರಾಭಿವೃದ್ಧಿ ಇಲಾಖೆ, ನಗರ ಮತ್ತು ದೇಶ ಯೋಜನೆ ಇಲಾಖೆ, ವಿಮಾನ ನಿಲ್ದಾಣ, ಅಂತರ್ಜಲ ಇಲಾಖೆ ಹಾಗೂ ಇತರೆ ಇಲಾಖೆಗಳೊಂದಿಗೆ ಚರ್ಚಿಸಿ ಸೂಕ್ತ ನಿರ್ಧಾರಗಳೊಂದಿಗೆ ಅನುಮತಿ ನೀಡಬೇಕು. ಅನುಮತಿಯಲ್ಲಿ ಸೇವಾವಧಿಯನ್ನು ತಿಳಿಸಲಾಗಿರುತ್ತದೆ. ಈ ಅವಧಿ ಮುಗಿದ ಬಳಿಕ ಪುನಃ ಅನುಮತಿಯನ್ನು ಪಡೆಯಬೇಕಾಗುತ್ತದೆ.

**ಪುರಸಭೆ ಘನತ್ಯಾಜ್ಯ ನಿರ್ವಹಣೆ**

- ಯಾವುದೇ ಮುನ್ಸಿಪಾಲಿಟಿಯು ತನ್ನ ವ್ಯಾಪ್ತಿ ಪ್ರದೇಶದಲ್ಲಿ ಉತ್ಪಾದನೆಯಾಗುವ ಕಸವನ್ನು ನೀತಿ ನಿಯಮಗಳಿಗನುಸಾರ ನಿಭಾಯಿಸುವುದು ಮತ್ತು ನಿರ್ವಹಿಸುವುದು(ಷೆಡ್ಯೂಲ್–2ರಂತೆ).

* ಮುನ್ಸಿಪಾಲಿಟಿ ಅಥವಾ ನಿಯೋಜಿತ ಸಂಸ್ಥೆಯು ತ್ಯಾಜ್ಯ ಸಂಸ್ಕರಣೆ ಹಾಗೂ ವಿಲೇವಾರಿಗೆ ಸಂಬಂಧಿಸಿದಂತೆ ಸೂಕ್ತ ಸೌಲಭ್ಯಗಳನ್ನು ಮಾನದಂಡಗಳ (ಷೆಡ್ಯೂಲ್-3 ಮತ್ತು 4) ರೀತ್ಯಾ ಹೊಂದಿರಬೇಕು.

**ಜೈವಿಕ ವೈದ್ಯಕೀಯ ತ್ಯಾಜ್ಯ ಕಾನೂನು (ನಿಭಾಯಿಸುವ ಮತ್ತು ನಿರ್ವಹಿಸುವ) ನಿಯಮ, 1998.**[10]

**ಗುಣಲಕ್ಷಣಗಳು:**

* ಜೈವಿಕ ವೈದ್ಯಕೀಯ ತ್ಯಾಜ್ಯ ಕಾಯ್ದೆಯು ಎಲ್ಲಾ ರೀತಿಯ ಜೈವಿಕ ತ್ಯಾಜ್ಯಗಳ ಉತ್ಪಾದನೆ, ನಿಭಾಯಿಸುವಿಕೆ, ಸಂಗ್ರಹಣೆ, ದಾಸ್ತಾನು, ಸಾಗಾಣಿಕೆ, ಉಪಚಾರ ಮತ್ತು ವಿಲೇವಾರಿಗೆ ಅನ್ವಯಿಸುತ್ತದೆ.
* ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ಈ ಕಾಯ್ದೆಯನ್ನು ಜಾರಿಗೆ ತರುವಲ್ಲಿ ಸಂಪೂರ್ಣ ಅಧಿಕಾರ ಹೊಂದಿದೆ.
* ಜೈವಿಕ ವೈದ್ಯಕೀಯ ತ್ಯಾಜ್ಯವನ್ನು ಇತರೆ ತ್ಯಾಜ್ಯಗಳೊಂದಿಗೆ ಮಿಶ್ರಣ ಮಾಡಬಾರದು.
* ನಗರ ಸ್ಥಳೀಯ ಸಂಸ್ಥೆಗಳು ಆಸ್ಪತ್ರೆಗಳಲ್ಲಿ ಉತ್ಪಾದನೆಯಾದ ಬೇರ್ಪಡಿಸಿದ ರಾಸಾಯನಿಕ ತ್ಯಾಜ್ಯ ಹಾಗೂ ಪ್ರಾಥಮಿಕವಾಗಿ ಉಪಚರಿಸಿದ ಜೈವಿಕ ವೈದ್ಯಕೀಯ ತ್ಯಾಜ್ಯವನ್ನು ಸಂಗ್ರಹಿಸಿ ಸೂಕ್ತ ರೀತಿಯಲ್ಲಿ ವಿಲೇವಾರಿ ಮಾಡಬೇಕು.
* ಜೈವಿಕ ವೈದ್ಯಕೀಯ ತ್ಯಾಜ್ಯಗಳನ್ನು ವಿವಿಧ ಬಣ್ಣಗಳಿಂದ ಗುರುತಿಸುವುದು. (ಹಳದಿ, ಕೆಂಪು, ನೀಲಿ/ಬಿಳಿ, ಕಪ್ಪು)

**ಪ್ಲಾಸ್ಟಿಕ್ ಪುನರಾವರ್ತನಾ (ಉತ್ಪಾದನೆ ಮತ್ತು ಬಳಕೆ) ನಿಯಮ, 1999**[11]

ಕೇಂದ್ರ ಪರಿಸರ ಮತ್ತು ಅರಣ್ಯ ಸಚಿವಾಲಯ 1999ರಲ್ಲಿ ರಚಿಸಿದ ಪ್ಲಾಸ್ಟಿಕ್ ಪುನರಾವರ್ತನಾ (ಉತ್ಪಾದನಾ ಮತ್ತು ಬಳಕೆ) ನಿಯಮ 1999 ಇದನ್ನು ಪ್ರತಿ ರಾಜ್ಯಗಳ ಮಾಲಿನ್ಯ ನಿಯಂತ್ರಣ ಮಂಡಳಿಗಳು ಅಥವಾ ಕೇಂದ್ರಾಡಳಿತ ಪ್ರದೇಶಗಳ ಮಾಲಿನ್ಯ ನಿಯಂತ್ರಣ ಸಮಿತಿಗಳಿಗೆ ಜಾರಿಗೊಳಿಸುವ ಅಧಿಕಾರವನ್ನು ನೀಡಲಾಗಿದೆ. ರಾಜ್ಯ ಮಟ್ಟದಲ್ಲಿ ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಪ್ಲಾಸ್ಟಿಕ್ ಉಪಯೋಗ, ಸಂಗ್ರಹ, ವಿಭಜನೆ, ಸಾಗಾಟ ಹಾಗೂ ವಿಲೇವಾರಿಗೆ ಸಂಬಂಧಿಸಿ ಅನುಷ್ಠಾನಗೊಳಿಸುವ ಅಧಿಕಾರ ನೀಡಲಾಗಿದೆ. ಯಾವುದೇ ವ್ಯಾಪಾರಿ ಪುನರ್ಬಳಸಿದ ಪ್ಲಾಸ್ಟಿಕ್ ಚೀಲವನ್ನು ಅಥವಾ ಡಬ್ಬಿಯನ್ನು ಆಹಾರಗಳನ್ನು ಸಂಗ್ರಹಿಸಿಡಲು, ತೆಗೆದುಕೊಂಡು ಹೋಗಲು ಅಥವಾ ಆಹಾರದ ಪೊಟ್ಟಣ ತಯಾರಿಸಲು ಬಳಸುವುದನ್ನು ನಿಷೇಧಿಸಲಾಗಿದೆ.

- ಸೆಕ್ಷನ್ 4ರ ಅಡಿಯಲ್ಲಿ, ಕೈಚೀಲಗಳು ಮತ್ತು ಡಬ್ಬಿಗಳನ್ನು ತಾಜಾ ಪ್ಲಾಸ್ಟಿಕ್‌ನಿಂದ ತಯಾರಿಸಿರಬೇಕು ಮತ್ತು ಅವುಗಳು ಬಿಳಿ ಅಥವಾ ನೈಸರ್ಗಿಕ ಬಣ್ಣಗಳನ್ನು ಹೊಂದಿರಬೇಕು. ಪುನರ್ಬಳಸಿದ ಪ್ಲಾಸ್ಟಿಕ್‌ನಲ್ಲಿ ಆಹಾರ ವಸ್ತುಗಳನ್ನು ಸಂಗ್ರಹಿಸಿ ಇಡುವಂತಿಲ್ಲ.
- ಸೆಕ್ಷನ್ 5ರ ಅಡಿಯಲ್ಲಿ ಯಾವುದೇ ವ್ಯಕ್ತಿಯು ಕೈಚೀಲ/ಡಬ್ಬಿಗಳನ್ನು ಆಹಾರೋತ್ಪನ್ನಗಳ ಸಂಗ್ರಹ ಬಿಟ್ಟು ಇತರ ಚಟುವಟಿಕೆಗಳಿಗೆ ಉತ್ಪಾದಿಸಬಹುದು.
- ಸೆಕ್ಷನ್ 8ರ ಅಡಿಯಲ್ಲಿ ತಾಜಾ/ಪುನರ್ಬಳಸಿದ ಪ್ಲಾಸ್ಟಿಕಿನಿಂದ ತಯಾರಿಸಿದ ಕೈ ಚೀಲಗಳ ದಪ್ಪವು 20 ಮೈಕ್ರೋನ್‌ಗಳಿಗಿಂತ ಕಡಿಮೆ ಇರಕೂಡದು.
- ಸೆಕ್ಷನ್ 10ರ ಅಡಿಯಲ್ಲಿ ಉತ್ಪಾದಕನು ಕೇಂದ್ರ ಮಾಲಿನ್ಯ ನಿಯಂತ್ರಣ/ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಲ್ಲಿ ನೋಂದಣಿ ಮಾಡಿಸಿರಬೇಕು.[11]

**ಅಪಾಯಕಾರಿ ತ್ಯಾಜ್ಯ (ನಿರ್ವಹಣೆ ಮತ್ತು ನಿಭಾಯಿಸುವುದು) ನಿಯಮ 1989**[12]

ಕೇಂದ್ರ ಪರಿಸರ ಮತ್ತು ಅರಣ್ಯ ಸಚಿವಾಲಯವು ಅಪಾಯಕಾರಿ ತ್ಯಾಜ್ಯ ನಿರ್ವಹಣಾ ನಿಯಮವನ್ನು ಪರಿಸರ ಕಾಯ್ದೆಯ (ಸಂರಕ್ಷಣೆ) ಅನುಸಾರ ಜುಲೈ 28, 1989ರಲ್ಲಿ ಎತ್ತಿ ಹಿಡಿದಿದೆ. ಈ ನಿಯಮವು ವರ್ಷ 2000 ಹಾಗೂ 2003ರಲ್ಲಿ ನಿಯಮವನ್ನು ಪರಿಣಾಮಕಾರಿ ಯಾಗಿಸಲು ತಿದ್ದುಪಡಿಗೊಳಪಟ್ಟಿದೆ. ಈ ತಿದ್ದುಪಡಿಯು ಮುಖ್ಯವಾಗಿ ಘನ, ಅರೆ ಘನವಸ್ತು ಮತ್ತು ಇತರೆ ಕೈಗಾರಿಕಾ ತ್ಯಾಜ್ಯಗಳು, ಜಲ ದೃಷ್ಟಿಯಲ್ಲಿ ಬಾರದೆ ಉಳಿದಿರುವಂತಹವು (ಮಾಲಿನ್ಯದಿಂದ ಜಲ ಸಂರಕ್ಷಣೆ ಮತ್ತು ಪ್ರಭುತ್ವ ಕಾಯ್ದೆ). ಹಾಗೂ ಈ ಕಾಯ್ದೆಯು ನಗರ ಸ್ಥಳಿಯ ಸಂಸ್ಥೆಗಳಲ್ಲಿ ದಾಸ್ತಾನು, ಸಾಗಾಣಿಕೆ, ಉಪಚಾರ ಮತ್ತು ವಿಲೇವಾರಿಯನ್ನು ಬಲಗೊಳಿಸುತ್ತದೆ.

**ಈ ನಿಯಮದ ವೈಶಿಷ್ಟಗಳು**

ಅಪಾಯಕಾರಿ ತ್ಯಾಜ್ಯಗಳನ್ನು ಉಪಚರಿಸಲು, ಸಂಗ್ರಹಿಸಲು, ಶೇಖರಿಸಲು ಮತ್ತು ವಿಲೇವಾರಿ ಮಾಡಲು ಅಧಿಕಾರ ಹೊಂದಿದವರಿಗೆ ಮಾತ್ರ ಅನುಮತಿ ನೀಡಲಾಗುವುದು. ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಗೆ ಅಪಾಯಕಾರಿ ತ್ಯಾಜ್ಯಗಳನ್ನು ಹೊಂದಿರುವ ಮತ್ತು ನಿರ್ವಹಿಸುವವರ ಮೇಲೆ ನಿಯಂತ್ರಣವಿರುತ್ತದೆ. ಮಂಡಳಿಗೆ ನಿಯಮಾವಳಿಗಳನ್ನು ಅನುಸರಿಸದವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ, ಅಮಾನತಿನಲ್ಲಿಡುವ ಅಥವಾ ರದ್ದುಗೊಳಿಸುವ ಅಧಿಕಾರವಿದೆ.

ಅಪಾಯಕಾರಿ ತ್ಯಾಜ್ಯಗಳನ್ನು ಸಾಗಿಸುವಾಗ ಅವುಗಳನ್ನು ನಿಯಮಾವಳಿಗಳಿಗೆ ಅನುಸಾರವಾಗಿ ಸಂಗ್ರಹಿಸುವ, ವಾಹನಗಳಿಗೆ ತುಂಬಿಸುವ ಮತ್ತು 'ಅಪಾಯಕಾರಿ ತ್ಯಾಜ್ಯ' ಚೀಟಿ ಅಂಟಿಸಿ ಸಾಗಾಟ ಮಾಡುವ ವಿಧಾನವನ್ನು ಅನುಸರಿಸಬೇಕು. ಅಪಾಯಕಾರಿ ತ್ಯಾಜ್ಯ ವಿಲೇವಾರಿ

ಜಾಗವನ್ನು ಅಧಿಕೃತ ಇಲಾಖೆಯು ಪರಿಶೀಲಿಸಿ, ಪರಿಸರದ ಮೇಲಾಗುವ ಪರಿಣಾಮವನ್ನು ಅಧ್ಯಯನ ಮಾಡಬೇಕು. ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಗಳನ್ನು, ಈ ಮೇಲ್ಕಂಡ ವಿಷಯಗಳನ್ನು ನಿರ್ವಹಿಸಲು ಹಾಗೂ ಅನುಮತಿಸಲು ಸದೃಢ ಗೊಳಿಸುವುದು ಹಾಗೂ ಅಪಾಯಕಾರಿ ತ್ಯಾಜ್ಯಗಳನ್ನು ಇತರ ಯಾವುದೇ ತ್ಯಾಜ್ಯಗಳೊಂದಿಗೆ ಮಿಶ್ರಣ ಮಾಡಬಾರದು.[12]

**ಬ್ಯಾಟರಿ (ನಿರ್ವಹಣೆ ಮತ್ತು ನಿಭಾಯಿಸುವ) ನಿಯಮ, 2001[13]**

**ಈ ನಿಯಮದ ವೈಶಿಷ್ಟಗಳು**

ಇಲ್ಲಿ ಬಳಸಲಾಗಿರುವ ಬ್ಯಾಟರಿ ಶಬ್ದದ ಅರ್ಥವು, ಲೀಡ್ ಆಸಿಡ್ ಬ್ಯಾಟರಿ. ಇದು ವಿದ್ಯುತ್ ಶಕ್ತಿಯ ರೂಪಾಂತರವಾಗಿದೆ. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ಈ ಕಾಯ್ದೆ ಅನುಷ್ಠಾನಗೊಳಿಸುವ ಜವಾಬ್ದಾರಿ ಹೊಂದಿದೆ. ಈ ಕಾಯ್ದೆಯು ಎಲ್ಲಾ ಉತ್ಪಾದಕರಿಗೂ, ಆಮದುದಾರರಿಗೂ, ಬದಲಾವಣೆ ಮಾಡುವವರಿಗೂ, ಪುನರ್ ರಚಿಸುವವರಿಗೂ, ಗ್ರಾಹಕರಿಗೂ ಹಾಗೂ ಬೃಹತ್ ಪ್ರಮಾಣದ ಗ್ರಾಹಕರು, ವಿಧಾನ ಹಾಗೂ ಮಾರಾಟಕ್ಕೆ ಅನ್ವಯಿಸುತ್ತದೆ.

## 6.3 ಕರ್ನಾಟಕದಲ್ಲಿ ಘನತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

**ಕರ್ನಾಟಕ ಮುನ್ಸಿಪಾಲ್ ಕಾಯ್ದೆ, 1964[14]**

ಮುನ್ಸಿಪಾಲ್ ಘನತ್ಯಾಜ್ಯ ನಿಯಮ 2000ದ ಮೊದಲು ನಗರ ಸ್ಥಳೀಯ ಸಂಸ್ಥೆಗಳು ಕರ್ನಾಟಕ ಮುನ್ಸಿಪಾಲ್ ಕಾಯ್ದೆಯನುಸಾರ ನಗರಗಳನ್ನು ಶುಚಿಯಾಗಿಡಲು ಕ್ರಮ ಕೈಗೊಳ್ಳುತ್ತಿದ್ದವು. 1964ರ ಕರ್ನಾಟಕ ಮುನ್ಸಿಪಾಲ್ ಕಾಯ್ದೆಯು ಕರ್ನಾಟಕದ ಎಲ್ಲಾ ಪುರಸಭೆಗಳಿಗೆ, ನಗರಸಭೆಗಳಿಗೆ, ಪಟ್ಟಣ ಪಂಚಾಯತ್‌ಗಳಿಗೆ ಹಾಗೂ ಅಧಿಸೂಚಿತ ಪ್ರದೇಶಗಳಿಗೆ ಅನ್ವಯವಾಗುತ್ತದೆ. ಇದರಲ್ಲಿ 17 ಅಧ್ಯಾಯಗಳು, 380 ವಿಭಾಗಗಳು ಮತ್ತು 13 ವಿವರ ಪಟ್ಟಿಗಳಿವೆ. ಇದನ್ನು 1994ರಲ್ಲಿ ತಿದ್ದುಪಡಿ ಮಾಡಲಾಯಿತು. ಈ ಕಾಯ್ದೆಯಲ್ಲಿರುವ ಘನತ್ಯಾಜ್ಯಕ್ಕೆ ಸಂಬಂಧಪಟ್ಟ ವಿವರಗಳು ಸೆಕ್ಷನ್ 224ರಲ್ಲಿ ಈ ಕೆಳಗಿನಂತಿವೆ.

ಈ ಕಾಯ್ದೆ ರಾಜ್ಯದ ಎಲ್ಲಾ ಪುರಸಭೆಗಳಿಗೂ ಅನ್ವಯಿಸುತ್ತದೆ. ಈ ಕಾಯ್ದೆಯ ಪ್ರಕರಣ 87ರಲ್ಲಿ ಮುನ್ಸಿಪಾಲ್ ಕೌನ್ಸಿಲ್ ಅಗತ್ಯವಾಗಿ ಮಾಡಲೇಬೇಕಾದ ಕಾರ್ಯಗಳ ಪಟ್ಟಿ ಮಾಡಲಾಗಿದೆ. ಘನತ್ಯಾಜ್ಯ ಕುರಿತು ಈ ಕಾಯ್ದೆಯಲ್ಲಿ 'ಸಾರ್ವಜನಿಕ ಬೀದಿಗಳು–ಜಾಗಗಳು–ಖಾಸಗಿ ಒಡೆತನದಲ್ಲಿರುವ ಎಲ್ಲಾ ಆಸ್ತಿಗಳು, ಹಾನಿಕಾರಕ ಗಿಡಗಂಟಿಗಳನ್ನು ತೆಗೆಯುವುದು' ಈ ಅಂಶಗಳಿಗೆ ಅನುವು ಮಾಡಿಕೊಡಲಾಗಿದೆ. ಇದೇ ಕಾಯ್ದೆಯಲ್ಲಿ ಕಸವನ್ನು ಸಂಗ್ರಹಿಸಲು ತೆಗೆದುಕೊಳ್ಳಬೇಕಾದ ಕ್ರಮವನ್ನು

ಸೂಚಿಸಲಾಗಿದೆ. ಕಾಯ್ದೆಯ 224ನೇ ಪ್ರಕರಣ ಸಾರ್ವಜನಿಕ ಜಾಗ, ಬೀದಿ, ಚರಂಡಿ, ನೀರು ಹರಿಯುವ ಜಾಗಗಳಲ್ಲಿ ಕಸ, ಹೊಲಸನ್ನು ವಿಲೇವಾರಿ ಮಾಡುವುದನ್ನು ನಿಷೇಧಿಸುತ್ತದೆ. ಕಾಯ್ದೆಯ 226ನೇ ಪ್ರಕರಣದಲ್ಲಿ ಈ ಕಾನೂನುಗಳನ್ನು ಉಲ್ಲಂಘಿಸಿದರೆ ದಂಡ ಮತ್ತು ಜೈಲು ಶಿಕ್ಷೆ ಎರಡನ್ನೂ ವಿಧಿಸಲು ಅವಕಾಶ ಕಲ್ಪಿಸಲಾಗಿದೆ.

**ಸಾಮಾನ್ಯ ದಂಡ, ಅಧಿಸೂಚನೆ ಮತ್ತು ಇತರೆ ಸೇವೆಗಳು, ಸೆಕ್ಷನ್ 263**

ಈ ಮೇಲ್ಕಂಡ ಕಾಯ್ದೆಯನ್ವಯ ಯಾವುದೇ ವ್ಯಕ್ತಿ ಸಾರ್ವಜನಿಕ ಕಿರಿಕಿರಿ(ಕಸ, ಧೂಳು, ಚರಂಡಿಗೆ ತ್ಯಾಜ್ಯ ಹಾಕುವುದು, ಇತ್ಯಾದಿ) ಉಂಟು ಮಾಡಿದಾಗ ದಂಡ ವಿಧಿಸಲು ಅವಕಾಶವಿದೆ.

**ಪೂರಕ ಘನತ್ಯಾಜ್ಯ ನಿರ್ವಹಣೆಯಲ್ಲಿ ಕರ್ನಾಟಕ ರಾಜ್ಯದ ನಿಯಮಗಳು**

ಈ ನಿಯಮವು ಅಗತ್ಯ ತಾಂತ್ರಿಕ ಅಥವಾ ಸಾಂಸ್ಥಿಕ ವಿಷಯಗಳನ್ನು ಒಳಗೊಂಡಿದೆ. ಇದರಲ್ಲಿ ಬೀದಿ ಗುಡಿಸುವಿಕೆ, ನಗರ ಪ್ರದೇಶದ ವಿವಿಧೆಡೆಗಳಲ್ಲಿ ತ್ಯಾಜ್ಯ ಸಂಗ್ರಹಣೆಗೆ ಕಂಟೈನರ್‌ಗಳ ಸೌಲಭ್ಯ ಕಲ್ಪಿಸುವುದು ಇತ್ಯಾದಿಗಳಿವೆ. ಇದರಿಂದ ನಾಗರಿಕರಿಗೆ ತಮ್ಮ ಜವಾಬ್ದಾರಿಯ ಅರಿವು ಉಂಟಾಗುತ್ತದೆ.[14]

**ಸಮಗ್ರ ಘನತ್ಯಾಜ್ಯ ವಸ್ತು ನಿರ್ವಹಣೆಯಲ್ಲಿ ಕರ್ನಾಟಕ ರಾಜ್ಯ ನೀತಿ (2003)[15]**

- ಮೂರು ಲಕ್ಷ ಜನ ಸಂಖ್ಯೆಗಿಂತ ಕಡಿಮೆ ಇರುವ ಸ್ಥಳೀಯ ಸಂಸ್ಥೆಗಳಲ್ಲಿ ಗೊಬ್ಬರ ಗುಂಡಿ ಗಳನ್ನು ಬಳಸುವುದು.
- ಮೂರು ಲಕ್ಷ ಜನ ಸಂಖ್ಯೆಗಿಂತ ಹೆಚ್ಚಾಗಿದ್ದರೆ, ಗೊಬ್ಬರ, ಭೂಭರ್ತಿ ವಿಧಾನಗಳನ್ನು ಅಳವಡಿಸಿಕೊಳ್ಳಬೇಕು.

**ಕರ್ನಾಟಕ ಪಾರದರ್ಶಕತೆ ಖರೀದಿ ಕಾಯಿದೆ 1999[16]**

ಈ ಕಾಯ್ದೆಯ ಮುಖ್ಯ ಲಕ್ಷಣಗಳೆಂದರೆ: ಸಾರ್ವಜನಿಕ ಖರೀದಿಯಲ್ಲಿ ಹೊಣೆಗಾರಿಕೆ, ಟೆಂಡರ್‌ಗಳಿಗೆ ಆಹ್ವಾನವಿಲ್ಲದೆ ಯವುದೇ ವಸ್ತು ಅಥವಾ ಸೇವೆಯನ್ನು ಖರೀದಿ ಮಾಡುವಂತಿಲ್ಲ, ಜಿಲ್ಲಾ/ ರಾಜ್ಯ ಟೆಂಡರ್ ಬುಲೆಟಿನ್‌ಗಳಲ್ಲಿ ಸೂಚನೆ/ಪ್ರಕಟಣೆ ಕೊಟ್ಟು ಖರೀದಿ ಮಾಡುವುದು, ಭದ್ರತಾ ಠೇವಣಿ ಹಣದ ವಿವರಗಳನ್ನು ಕೊಡುವುದು, ದ್ವಿ–ಲಕೋಟೆ ಪದ್ಧತಿ, ಟೆಂಡರ್ ಒಪ್ಪಿಕೊಳ್ಳುವಿಕೆ, ಟೆಂಡರ್ ತಿರಸ್ಕರಿಸುವಿಕೆ, ನಿರ್ಧಾರ ಕೊಡುವ ಶಕ್ತಿ, ಅಪೀಲುಗಳು, ದಂಡನೆಗಳನ್ನು ಕೊಡುವುದು ಇತ್ಯಾದಿ.

**ಕರ್ನಾಟಕ ನಗರಪಾಲಿಕೆ ಕಾಯ್ದೆ 1976**[17]

ಕರ್ನಾಟಕ ನಗರಪಾಲಿಕೆ ಕಾಯ್ದೆಯು ನಗರ ಪಾಲಿಕೆಗಳ ಆಡಳಿತಕ್ಕೆ ಅನ್ವಯವಾಗುತ್ತದೆ. ಇದರಲ್ಲಿ ನಗರಪಾಲಿಕೆಯು ಅನುಸರಿಸಬೇಕಾದ 23 ಕಡ್ಡಾಯ ಕಾರ್ಯಗಳು, 2 ವಿಶೇಷ ಕಾರ್ಯಗಳು ಮತ್ತು 35 ವಿವೇಚನಾಯುಕ್ತ ಕಾರ್ಯಗಳ ಪಟ್ಟಿ ಇದೆ. ಕಡ್ಡಾಯ ಕಾರ್ಯಗಳು ಸಂವಿಧಾನದ 74ನೇ ತಿದ್ದುಪಡಿ ಆಶಯಕ್ಕೆ ಪೂರಕವಾಗಿವೆ.

**ಘನತ್ಯಾಜ್ಯ ನಿಯಮಾವಳಿಗಳ ತಿದ್ದುಪಡಿಗಳು**[18]

ಘನತ್ಯಾಜ್ಯ ನಿಯಮಾವಳಿಗಳನ್ನು ಹಾಗೂ ನೀತಿಗಳನ್ನು ಕಾಲಕಾಲಕ್ಕೆ ತಿದ್ದುಪಡಿ ಮಾಡಿಕೊಂಡು ಸಧೃಡಗೊಳಿಸಲಾಗಿದೆ. ಅವುಗಳಲ್ಲಿ ಪ್ರಮುಖವಾದ ತಿದ್ದುಪಡಿಗಳೆಂದರೆ–

**1. ಸಂಪನ್ಮೂಲ ಪುನರ್‌ನಿರ್ಮಾಣ ಕಾಯಿದೆ 1970:** ಇದು ರಾಜ್ಯ ಸರ್ಕಾರ ಹಾಗೂ ಸ್ಥಳೀಯ ಸರ್ಕಾರಗಳಿಗೆ ಸಂಪನ್ಮೂಲ ಪುನರ್‌ನಿರ್ಮಾಣ ಹಾಗೂ ತ್ಯಾಜ್ಯ ವಿಲೇವಾರಿ ವಿಧಾನಗಳ ಯೋಜನೆ ಮತ್ತು ಅಭಿವೃದ್ಧಿಗೊಳಿಸಲು ತಾಂತ್ರಿಕ ಮತ್ತು ಹಣಕಾಸಿನ ಸಹಾಯವನ್ನು ನೀಡುತ್ತದೆ.

**2. ಬಳಸಿದ ಇಂಧನಗಳ ಪುನರುತ್ಪಾದನೆ ಕಾಯಿದೆ 1980:** ಇದು ಬಳಸಿದ ಇಂಧನ, ಪುನರುತ್ಪಾದಿತ ಇಂಧನ, ಯಂತ್ರ ಇಂಧನ ಮತ್ತು ಮರು ಶುದ್ಧೀಕರಿಸಿದ ಇಂಧನಗಳ ಬಗ್ಗೆ ವ್ಯಾಖ್ಯಾನಿಸುತ್ತದೆ ಮತ್ತು ರಾಜ್ಯಗಳು ಪುನರುತ್ಪಾದಿತ ಇಂಧನಗಳನ್ನು ಬಳಸಲು ಉತ್ತೇಜನ ನೀಡುತ್ತದೆ.

**3. ಘನತ್ಯಾಜ್ಯ ವಿಲೇವಾರಿ ತಿದ್ದುಪಡಿ ಕಾಯಿದೆ 1980:** ಅಪಾಯಕಾರಿ ತ್ಯಾಜ್ಯಗಳನ್ನು ರಾಶಿ ಹಾಕುವುದರ ವಿರುದ್ಧ ಕ್ರಮ ಕೈಗೊಳ್ಳಲು 1980ರಲ್ಲಿ ಘನತ್ಯಾಜ್ಯ ವಿಲೇವಾರಿ ತಿದ್ದುಪಡಿ ಕಾಯಿದೆಯು ಜಾರಿಗೆ ಬಂದಿತು.

**4. ವೈದ್ಯಕೀಯ ತ್ಯಾಜ್ಯ ಪಥ ಕಾಯಿದೆ 1988:** ಇದು ವೈದ್ಯಕೀಯ ತ್ಯಾಜ್ಯದ ವ್ಯಾಖ್ಯಾನವನ್ನು ನೀಡಿದೆ ಮತ್ತು ಈ ತ್ಯಾಜ್ಯಗಳ ವಿಭಜನೆ, ಕಟ್ಟು ತಯಾರಿಸುವುದು, ಹೆಸರಿಸುವುದು ಮತ್ತು ಶೇಖರಣೆಯನ್ನು ಒಳಗೊಂಡಿದೆ.

**5. ಸಮುದ್ರಕ್ಕೆ ಎಸೆಯುವ (ನಿಷೇಧ) ಕಾಯಿದೆ, 1988:** ಇದು ಕೊಳಚೆ ನೀರು ಮತ್ತು ಕೈಗಾರಿಕಾ ತ್ಯಾಜ್ಯಗಳನ್ನು ಸಮುದ್ರಕ್ಕೆ ಎಸೆಯುವುದನ್ನು ನಿಷೇಧಿಸಿದೆ.

**6. ಪ್ಲಾಸ್ಟಿಕ್ (ನಿರ್ವಹಣೆ ಮತ್ತು ನಿಭಾವಣೆ) ತಿದ್ದುಪಡಿ ನಿಯಮ, 2011:** ಪರಿಸರ ಮತ್ತು ಅರಣ್ಯ ಸಚಿವಾಲಯ 2011ರ ಫೆಬ್ರವರಿ 4ರಂದು ಪರಿಸರ (ಸಂರಕ್ಷಣೆ) ಕಾಯ್ದೆಯಡಿ ಪ್ಲಾಸ್ಟಿಕ್ ತ್ಯಾಜ್ಯ

(ನಿರ್ವಹಣೆ ಮತ್ತು ನಿಭಾವಣೆ) ತಿದ್ದುಪಡಿ ನಿಯಮದ ಅಧಿಸೂಚನೆ ನೀಡಿರುತ್ತದೆ. ಪ್ಲಾಸ್ಟಿಕ್ ನಿಯಮಾವಳಿ 1999ರ ತಿದ್ದುಪಡಿಯ ಪ್ರಮುಖ ಲಕ್ಷಣಗಳೆಂದರೆ:

ಕೈ ಚೀಲ ಎಂದರೆ ಪ್ಲಾಸ್ಟಿಕ್ ವಸ್ತುಗಳಿಂದ ತಯಾರಿಸಿದ ಚೀಲ ಹಾಗೂ ಇವುಗಳನ್ನು ವಸ್ತುಗಳನ್ನು ತೆಗೆದುಕೊಂಡು ಹೋಗಲು ಅಥವಾ ಬಿಸಾಡಲು ಉಪಯೋಗಿಸಲಾಗುತ್ತದೆ. ಯಾವುದೇ ವಸ್ತುಗಳನ್ನು ಉಪಯೋಗಿಸುವ ಮೊದಲು ಪ್ಯಾಕ್ ಮಾಡಲು ಪ್ಲಾಸ್ಟಿಕ್ ಬಳಸಿದ್ದರೆ 'ಕೈಚೀಲ' ವೆಂದು ಪರಿಗಣಿಸಲಾಗುವುದಿಲ್ಲ. ಇದು ಬಹು ಮಡಿಕೆಗಳುಳ್ಳ ಪ್ಲಾಸ್ಟಿಕ್ ಪೌಚ್ ಮತ್ತು ಷೀಷೆಯನ್ನು ಒಳಗೊಂಡಿದ್ದು, ಬಹುಮಡಿಕೆ ಹೊಂದಿರುವ ಪ್ಯಾಕೇಜಿಂಗ್ ವಸ್ತುಗಳನ್ನು ಒಳಗೊಂಡಿರುವುದಿಲ್ಲ. ರಫ್ತು ಉದ್ದೇಶಕ್ಕೆ ಬಳಸುವ ಕೈಚೀಲಗಳಿಗೆ ವಿನಾಯಿತಿ ನೀಡಲಾಗಿದೆ. ಬಿಳಿ ಬಣ್ಣದ ಪ್ಲಾಸ್ಟಿಕ್ ಕೈ ಚೀಲಗಳನ್ನು ಮಾತ್ರ ಬಳಸಬೇಕು. ಗುಟ್ಕ ಮುಂತಾದ ವಸ್ತುಗಳ ಪ್ಯಾಕೆಟ್‌ಗಳನ್ನು ತಯಾರಿಸಲು ಪ್ಲಾಸ್ಟಿಕ್ ಬಳಸಬಾರದು. ಗ್ರಾಹಕರಿಗೆ ಚಿಲ್ಲರೆ ವ್ಯಾಪಾರಿಗಳು ಪ್ಲಾಸ್ಟಿಕ್ ಕೈ ಚೀಲಗಳನ್ನು ಉಚಿತವಾಗಿ ನೀಡಬಾರದು. ಸ್ಥಳೀಯ ಸರಕಾರ ಪ್ಲಾಸ್ಟಿಕ್ ಕೈ ಚೀಲದ ದರ ನಿಗದಿಗೊಳಿಸಬೇಕು. ಇದರಿಂದ ಜನರು ಪ್ಲಾಸ್ಟಿಕ್ ಕೈ ಚೀಲಗಳನ್ನು ಪುನರ್‌ಬಳಕೆ ಮಾಡುತ್ತಾರೆ. ಪ್ರತೀ ರಾಜ್ಯ ಸರ್ಕಾರವು ನಿಯಮಾವಳಿಗಳನ್ನು ಅನುಷ್ಠಾನಗೊಳಿಸಲು ರಾಜ್ಯಮಟ್ಟದ ಸಲಹಾ ಮಂಡಳಿಯನ್ನು ರಚಿಸಬೇಕು. ಈ ಸಲಹಾ ಮಂಡಳಿಯು ಕನಿಷ್ಠ ವರ್ಷಕ್ಕೊಮ್ಮೆ ಸಭೆ ಕರೆಯಬೇಕು ಹಾಗೂ ತಜ್ಞರನ್ನು ಸಭೆಗೆ ಆಹ್ವಾನಿಸಬೇಕು.

### ಕರ್ನಾಟಕದಲ್ಲಿ ಮುನ್ಸಿಪಾಲ್ ಘನತ್ಯಾಜ್ಯ ನಿಯಮ–2000

ಭಾರತ ಸರ್ಕಾರವು ಜಾರಿಗೆ ತಂದ ಮುನ್ಸಿಪಾಲ್ ಘನತ್ಯಾಜ್ಯ (ನಿರ್ವಹಣೆ ಮತ್ತು ನಿಭಾವಣೆ)ನಿಯಮ–2000 ಇದನ್ನು ಕರ್ನಾಟಕದಲ್ಲಿ ನಿಯಮಾವಳಿಯಲ್ಲಿ ತಿಳಿಸಿದಂತೆ ನಗರಾಭಿವೃದ್ಧಿ ವಿಭಾಗವು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ಹೊಂದಿದೆ. ಹಾಗೆಯೇ ನಿಯಾಮವಳಿಗಳ ಬೇರೆ ಬೇರೆ ಅಂಶಗಳನ್ನು ವಿವಿಧ ಹಂತಗಳಲ್ಲಿ ಅನುಷ್ಠಾನಗೊಳಿಸಲು ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಜಿಲ್ಲಾಡಳಿತಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳಿಗೆ ಜವಾಬ್ದಾರಿ ನೀಡಲಾಗಿದೆ.

### ಕರ್ನಾಟಕದಲ್ಲಿ ಭೂಭರ್ತಿ ಪ್ರದೇಶಗಳು

ಪೌರಾಡಳಿತ ನಿರ್ದೇಶನಾಲಯವು ಕರ್ನಾಟಕದಲ್ಲಿ ಗುರುತಿಸಿದ ಒಟ್ಟು ಭೂಭರ್ತಿ ಸ್ಥಳಗಳು ಮತ್ತು ಅವುಗಳ ಅನುಷ್ಠಾನದ ಪಟ್ಟಿ ಕೆಳಗೆ ನೀಡಲಾಗಿದೆ.

| ಕ್ರಸಂ. | ವಿವರ | ಸಂಖ್ಯೆ |
|---|---|---|
| 1. | ಹೊಂದಿರುವ ಭೂಭರ್ತಿ ಜಾಗಗಳು | 207 |
| 2. | ನಗರ ಸ್ಥಳೀಯ ಸಂಸ್ಥೆಗಳ ಜಂಟಿ ಕಾರ್ಯಗಳು | 03 |
| 3. | ಹೊಸದಾಗಿ ಗುರುತಿಸಿರುವ ಭೂಭರ್ತಿ ಜಾಗಗಳು | 03 |
| 4. | ಮೂಲಭೂತ ಸೌಕರ್ಯ ಹೊಂದಿರುವ ಭೂಭರ್ತಿ ಜಾಗಗಳು | 180 |
| 5. | ಕಾರ್ಯಾರಂಭವಾಗದ ಭೂಭರ್ತಿ ಜಾಗಗಳು | 08 |
| 6. | ಗುಂಡಿ ತುಂಬುವ ವಿಲೇವಾರಿ ವಿಧಾನಗಳು | 148 |
| 7. | ಮನೆ ಮನೆ ಕಸ ಸಂಗ್ರಹ ಮಾಡುತ್ತಿರುವ ನಗರ ಸ್ಥಳೀಯ ಸಂಸ್ಥೆಗಳ(ಒಟ್ಟು 219ರಲ್ಲಿ-ಅಂಶಿಕವಾಗಿ ಸಹಿತ) | 205 |
| 8. | ವಿಭಜನೆ ಪ್ರಾರಂಭಿಸಿದ ಸಂಸ್ಥೆಗಳು | 82 |
| 9. | ಗಾಳಿಯಂತ್ರದ ಮೂಲಕ ಜೈವಿಕ ಗೊಬ್ಬರ ತಯಾರಿಸುವ ಸಂಸ್ಥೆಗಳು | 70 |

**ಮೂಲ:** ಕರ್ನಾಟಕ ರಾಜ್ಯ ಪೌರಾಡಳಿತ ನಿರ್ದೇಶನಾಲಯದ ಜಾಲತಾಣ

ರಾಜ್ಯಾದಾದ್ಯಂತ ಹೆಚ್ಚಿನ ಎಲ್ಲ ನಗರ ಸ್ಥಳೀಯ ಸಂಸ್ಥೆಗಳು ಸ್ವತಂತ್ರವಾಗಿ ಅಥವಾ ಜಂಟಿಯಾಗಿ ಅನೇಕ ನಿರ್ವಹಣಾ ಘಟಕಗಳನ್ನು ಸ್ಥಾಪಿಸಿರುವುದು ಕಂಡುಬಂದಿದೆ. ಪ್ಲಾಸ್ಟಿಕ್ ನಿರ್ವಹಣಾ ಘಟಕಗಳು, ಜೈವಿಕ ಇಂಧನ ಅನಿಲ ಉತ್ಪಾದನಾ ಘಟಕಗಳು, ತಮ್ಮ ಜೈವಿಕ ಗೊಬ್ಬರ ಉತ್ಪಾದನಾ ಘಟಕಗಳು ಹಾಗೂ ಎರೆಹುಳು ಗೊಬ್ಬರ ಘಟಕಗಳು ರಾಜ್ಯಾದಾದ್ಯಂತ ಕಾರ್ಯನಿರ್ವಹಿಸುತ್ತಿದೆ. ಆನೇಕ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ಮರುಬಳಕೆಗೆ ಆದ್ಯತೆ ನೀಡಿರುವುದು ಕಂಡುಬಂದಿದೆ. ಆದರೆ ಸಂಗ್ರಹದಿಂದ ವಿಲೇವಾರಿವರೆಗಿನ ಬೇರೆ ಬೇರೆ ಹಂತಗಳಲ್ಲಿ ಅನುಷ್ಠಾನದ ವೈಫಲ್ಯತೆಯಿಂದಾಗಿ ತ್ಯಾಜ್ಯ ನಿರ್ವಹಣೆಯಲ್ಲಿ ರಾಜ್ಯದ ಯಾವುದೇ ಸ್ಥಳೀಯ ಸಂಸ್ಥೆ ಪರಿಪೂರ್ಣತೆಯನ್ನು ಸಾಧಿಸಿದಂತೆ ಕಂಡುಬರುವುದಿಲ್ಲ.

### 6.4. ಅಧ್ಯಯನ ವ್ಯಾಪ್ತಿಯಲ್ಲಿ ಘನತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳು

ತ್ಯಾಜ್ಯ ನಿರ್ವಹಣೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸುವ ಉದ್ದೇಶದಿಂದ ತ್ಯಾಜ್ಯ ನಿರ್ವಹಣಾ ನೀತಿಗಳನ್ನು ಸ್ಥಳೀಯ ಸಂಸ್ಥೆಗಳಿಗೆ ನೀಡಲಾಗಿದೆ ಮತ್ತು ಕಾಲಕಾಲಕ್ಕೆ ಅವುಗಳನ್ನು ತಿದ್ದುಪಡಿ ಮಾಡಲಾಗಿದೆ. ಮುನ್ಸಿಪಾಲ್ ಘನತ್ಯಾಜ್ಯ ನಿಯಮ-2000 ಇದರ ಅಂತಿಮ ವರದಿಯು ಸೆಪ್ಟಂಬರ್ 2000ದಲ್ಲಿ ಜಾರಿಗೆ ಬಂದಿತು. ಈ ನಿಯಮಾವಳಿಯು ದೇಶದ ಎಲ್ಲಾ

ನಗರ ಸ್ಥಳೀಯ ಸಂಸ್ಥೆಗಳಲ್ಲಿ ತ್ಯಾಜ್ಯ ಸಂಗ್ರಹಣೆ, ಶೇಖರಣೆ, ಸಾಗಾಟ, ಸಂಸ್ಕರಣ ಮತ್ತು ವಿಲೇವಾರಿಗೆ ಸಂಬಂಧಿಸಿದ್ದಾಗಿದೆ. ಇದಕ್ಕೆ ಪೂರಕವಾಗಿ ಭಾರತ ಸರ್ಕಾರವು ರೂಪಿಸಿ ಹೊರಡಿಸಿರುವ 'ಘನತ್ಯಾಜ್ಯ ಮತ್ತು ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣೆಯ ನಿಯಮ-2016' ರಲ್ಲಿ ಘನತ್ಯಾಜ್ಯ ಉತ್ಪಾದನಾಕಾರರ ಕರ್ತವ್ಯಗಳು ಹಾಗೂ ಸ್ಥಳೀಯ ಸರ್ಕಾರಗಳ ಜವಾಬ್ದಾರಿ ಮತ್ತು ಕರ್ತವ್ಯಗಳನ್ನು ನೀಡಲಾಗಿದೆ. ಹೆಚ್ಚಿನ ಎಲ್ಲಾ ಗ್ರಾಮ ಪಂಚಾಯತ್‌ಗಳು ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು ಕೈಗೊಂಡಿವೆ. ಆದರೂ ಸಾರ್ವಜನಿಕರಲ್ಲಿ ತ್ಯಾಜ್ಯ ನಿರ್ವಹಣೆಯ ನಿಯಮಾವಳಿಗಳ ಅರಿವಿನ ಬಗ್ಗೆ ಕೊರತೆ ಇರುವುದು ಕಂಡು ಬಂದಿದೆ.[19]

1. **ಅರಣ್ಯ ಪರಿಸರ ಮತ್ತು ಜೀವಶಾಸ್ತ್ರ ಇಲಾಖೆಯ ಅಧಿಸೂಚನೆ ಸಂಖ್ಯೆ: ಅಪಜೀ 17 ಇಪಿಸಿ 2012 ಬೆಂಗಳೂರು, ದಿನಾಂಕ 11.03.2016:** ಈ ಆದೇಶದಲ್ಲಿ ಯಾವುದೇ ವ್ಯಕ್ತಿ, ಅಂಗಡಿ ಮಾಲೀಕ, ಮಾರಾಟಗಾರ, ಸಗಟು ಮಾರಾಟಗಾರ ಅಥವಾ ಚಿಲ್ಲರೆ ವ್ಯಾಪಾರಿ, ವ್ಯಾಪಾರಿ ಮತ್ತು ಮಾರಾಟಗಾರರು, ದಪ್ಪದ ಯಾವುದೇ ರೀತಿಯ ಪ್ಲಾಸ್ಟಿಕ್ ಭಿತ್ತಿ ಪತ್ರ, ಕೈಚೀಲ, ತೋರಣ, ಫ್ಲೆಕ್ಸ್, ತಟ್ಟೆ, ಬಾವುಟ, ಲೋಟ, ಚಮಚ ಮತ್ತು ಊಟದ ಮೇಜಿನ ಮೇಲೆ ಹರಡುವ ಪ್ಲಾಸ್ಟಿಕ್ ಹಾಳೆ ಹಾಗೂ ಥರ್ಮೋಕೋಲ್ ಮತ್ತು ಪ್ಲಾಸ್ಟಿಕ್ ಮೈಕ್ರೋ ಬೀಡ್ಸ್‌ನಿಂದ ತಯಾರಾದಂತಹ ಮೇಲ್ಕಂಡ ವಸ್ತುಗಳ ತಯಾರಿಕೆ, ಸರಬರಾಜು ಮತ್ತು ಬಳಕೆಯನ್ನು ನಿಷೇಧಿಸಿ ಸರ್ಕಾರ ನಿರ್ದೇಶನವನ್ನು ಹೊರಡಿಸಿದೆ. ಮುಂದುವರಿದು ಯಾವುದೇ ಕೈಗಾರಿಕೆ ಅಥವಾ ವ್ಯಕ್ತಿ ಈ ಮೇಲ್ಕಂಡ ವಸ್ತುಗಳ ತಯಾರಿಕೆ, ಸರಬರಾಜು, ಸಂಗ್ರಹಣೆ, ಸಾಗಾಣಿಕೆ, ಮಾರಾಟ ಮತ್ತು ವಿತರಣೆ ಮಾಡುವುದನ್ನು ರಾಜ್ಯಾದ್ಯಂತ ನಿಷೇಧಿಸಿದೆ. ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಸಹಾಯಕ ಪರಿಸರ ಅಧಿಕಾರಿ, ಉಪ ಪರಿಸರ ಅಧಿಕಾರಿ, ಪರಿಸರ ಅಧಿಕಾರಿ ಮತ್ತು ಹಿರಿಯ ಪರಿಸರ ಅಧಿಕಾರಿಗಳು, ಕಂದಾಯ ಉಪ ವಿಭಾಗದ ಎಲ್ಲಾ ಸಹಾಯಕ ಆಯುಕ್ತರು, ತಹಶೀಲ್ದಾರರು, ವಾಣಿಜ್ಯ ತೆರಿಗೆ ಇಲಾಖೆಯ ಎಲ್ಲ ಅಧಿಕಾರಿಗಳು, ಆಹಾರ ಮತ್ತು ನಾಗರಿಕ ಪೂರೈಕೆ ಇಲಾಖೆಯ ಎಲ್ಲ ಅಧಿಕಾರಿಗಳು, ತೂಕ ಮಾಪನ ಮತ್ತು ಅಳತೆ ಇಲಾಖೆಯ ನಿಯಂತ್ರಕರು, ಉಪ ನಿಯಂತ್ರಕರು, ಪ್ರಾದೇಶಿಕ ಅಧಿಕಾರಿಗಳು ಆಯಾ ಹುದ್ದೆಗಳಿಗೆ ನಿಯಮಾನುಸಾರ ಪ್ರದತ್ತವಾಗಿರುವ ಅಧಿಕಾರದಂತೆ ಅವರವರ ಕಾರ್ಯವ್ಯಾಪ್ತಿಯಲ್ಲಿ ಜಾರಿಗೊಳಿಸಬಹುದಾಗಿರುತ್ತದೆ. ಈ ನಿರ್ದೇಶನವನ್ನು ಉಲ್ಲಂಘಿಸಿದ ಸಂದರ್ಭದಲ್ಲಿ ಸರಕಾರದ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಶಾಸ್ತ್ರ ಇಲಾಖೆ, ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು, ಕಂದಾಯ ಇಲಾಖೆಯ ಎಲ್ಲಾ ಸಹಾಯಕ ಆಯುಕ್ತರುಗಳು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಅಧ್ಯಕ್ಷರು ಮತ್ತು ಸದಸ್ಯ ಕಾರ್ಯದರ್ಶಿಗಳು,

ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಎಲ್ಲಾ ಪ್ರಾದೇಶಿಕ ಪರಿಸರ ಅಧಿಕಾರಿಗಳು ಅಪರಾಧದ ಸ್ವರೂಪಕ್ಕೆ ಅನುಗುಣವಾಗಿ ಪರಿಸರ ಕಾನೂನನ್ನು ಉಲ್ಲಂಘಿಸಿದವರ ಮೇಲೆ ಆಯಾ ವ್ಯಾಪ್ತಿಯಲ್ಲಿ ಬರುವ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಕ್ರಮ ಜರುಗಿಸುವ ಅಧಿಕಾರವನ್ನು ಹೊಂದಿರುತ್ತಾರೆ. ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜಿ 17 ಇಪಿಸಿ 2012, ದಿನಾಂಕ 11/03/2016ರ ಪ್ಲಾಸ್ಟಿಕ್ ಬಳಕೆಯ ನಿಷೇಧ ಅಧಿಸೂಚನೆಯ ಕಂಡಿಕೆ-2ರ ಕ್ರಮ ಸಂಖ್ಯೆ(ಎ)ಯಲ್ಲಿ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯ ನಿರ್ವಾಹಣಾಧಿಕಾರಿಗಳು, ಉಪ ಕಾರ್ಯದರ್ಶಿಗಳು, ತಾಲೂಕು ಪಂಚಾಯಿತಿಯ ಕಾರ್ಯ ನಿರ್ವಹಣಾಧಿಕಾರಿಗಳು, ಗ್ರಾಮ ಪಂಚಾಯತ್‌ಗಳ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳನ್ನು ಅನುಷ್ಠಾನ ಅಧಿಕಾರಿಗಳೆಂದು ಸೇರ್ಪಡೆಗೊಳಿಸಿ ಆದೇಶಿಸಲಾಗಿದೆ.

3. **ಭಾರತ ಸರ್ಕಾರವು ರೂಪಿಸಿ ಹೊರಡಿಸಿರುವ ನಿಯಮಾವಳಿ-ಘನ ತ್ಯಾಜ್ಯ ಮತ್ತು ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣೆಯ ನಿಯಮ-2016:**

**1. ಘನ ತ್ಯಾಜ್ಯ ಉತ್ಪಾದನಾಕಾರರ ಕರ್ತವ್ಯಗಳು**[20]

1. ಘನ ತ್ಯಾಜ್ಯ ವಸ್ತುಗಳನ್ನು ಮೂಲದಲ್ಲಿಯೇ ವಿಂಗಡಣೆ ಮಾಡುವುದು. ಕರಗುವ, ಕರಗದೇ ಇರುವ ಮತ್ತು ಅಪಾಯಕಾರಿ ತ್ಯಾಜ್ಯಗಳು ಎಂಬುವುದಾಗಿ ಮೂರು ವಿಧವಾಗಿ ವಿಂಗಡಿಸುವುದು.
2. ಸ್ಥಳೀಯ ಆಡಳಿತ ಸಂಸ್ಥೆಯ ನಿರ್ದೇಶನದಂತೆ ವಿಲೇವಾರಿ ಮಾಡುವುದು.
3. ಡಯಾಪರ್, ಸ್ಯಾನಿಟರಿ ಪ್ಯಾಡ್‌ಗಳನ್ನು ನಿರ್ಮಾಣ ಹಂತದ ಕಟ್ಟಡದಲ್ಲಿನ ತ್ಯಾಜ್ಯಗಳನ್ನು ತೋಟಗಾರಿಕೆ ತ್ಯಾಜ್ಯಗಳನ್ನು ಸ್ಥಳೀಯ ಆಡಳಿತ ಸಂಸ್ಥೆಯ ನಿರ್ದೇಶನದಂತೆ ನಿಯಮಾನುಸಾರ ವಿಲೇವಾರಿ ಮಾಡುವುದು.
4. ಘನತ್ಯಾಜ್ಯಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಎಸೆಯುವುದನ್ನು, ಸುಡುವುದನ್ನು, ನೀರಿನ ಮೂಲಗಳಿಗೆ ಸೇರುವುದನ್ನು ತಡೆಯುವುದು.
5. ಘನತ್ಯಾಜ್ಯ ನಿರ್ವಹಣಾ ವೆಚ್ಚವನ್ನು ಸ್ಥಳೀಯ ಆಡಳಿತ ಸಂಸ್ಥೆ ನಿಗದಿಪಡಿಸಿದಂತೆ ಶುಲ್ಕವನ್ನು ಭರಿಸಬೇಕು.
6. ಸಾರ್ವಜನಿಕ ಸ್ಥಳಗಳಲ್ಲಿ 100 ಮಂದಿಗಿಂತಲೂ ಅಧಿಕ ಜನರು ಸೇರುವ ಯಾವುದೇ ರೀತಿಯ ಕಾರ್ಯಕ್ರಮವನ್ನು ಆಯೋಜಿಸುವುದಾದರೆ ಮುಂಚಿತವಾಗಿ ಸ್ಥಳೀಯ ಆಡಳಿತ ಸಂಸ್ಥೆಯಿಂದ ಅನುಮತಿ ಪಡೆಯುವುದು, ತ್ಯಾಜ್ಯಗಳನ್ನು ಘನತ್ಯಾಜ್ಯ ನಿರ್ವಹಣೆಯ

ನಿಯಮಾನುಸಾರ ಮೂಲದಲ್ಲೇ ವಿಂಗಡಿಸಿ ಸ್ಥಳೀಯ ಆಡಳಿತ ಸಂಸ್ಥೆಯ ನಿರ್ದೇಶನದಂತೆ ವೈಜ್ಞಾನಿಕವಾಗಿ ವಿಲೇವಾರಿ ಮಾಡತಕ್ಕದ್ದು.

7. ರಸ್ತೆ ಬದಿಯ ವ್ಯಾಪಾರಸ್ಥರೂ ಕೂಡ ಈ ಮೇಲಿನ ನಿಯಮವನ್ನು ಪಾಲಿಸತಕ್ಕದ್ದು.
8. ಸ್ಥಳೀಯ ನಿವಾಸಿಗಳು, ಮಾರುಕಟ್ಟೆ ಮತ್ತು ಸಂಘಗಳು ಸಂಸ್ಥೆಗಳು ಈ ನಿಯಮದಂತೆ ಅಗತ್ಯ ಕ್ರಮವನ್ನು ಕೈಗೊಂಡಿರುವ ಕುರಿತು ಸ್ಥಳೀಯ ಆಡಳಿತ ಸಂಸ್ಥೆಗೆ ಖಾತರಿ ಪಡಿಸುವುದು.

**2. ಸ್ಥಳೀಯ ಸರಕಾರದ ಜವಾಬ್ದಾರಿ ಮತ್ತು ಕರ್ತವ್ಯಗಳು**[21]

1. ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 6 ತಿಂಗಳ ಒಳಗಾಗಿ ಸ್ಥಳೀಯ ಆಡಳಿತ ಸಂಸ್ಥೆಗಳು ನಿಯಮಾನುಸಾರ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿ ಯೋಜನೆಯನ್ನು ರೂಪಿಸುವುದು.
2. ಮೂಲದಲ್ಲಿ ಪ್ರತ್ಯೇಕಿಸಲ್ಪಟ್ಟ ಕಸವನ್ನು ಮನೆ–ಮನೆಗಳಿಂದ ಸಂಗ್ರಹಿಸುವುದು.
3. ತ್ಯಾಜ್ಯ ಸಂಗ್ರಹಣೆಗೆ ಅನುಕೂಲವಾಗುವ ರೀತಿಯಲ್ಲಿ ನಿಯಮಗಳನ್ನು ರೂಪಿಸುವುದು.
4. ಪ್ರತ್ಯೇಕಿಸಲ್ಪಟ್ಟ ಕಸಗಳನ್ನು ಸುಲಭವಾಗಿ ಸಾಗಿಸಲು ಅನುಕೂಲ ಮಾಡಿಕೊಡುವುದು.
5. ಮನೆಗಳಲ್ಲಿ ಉತ್ಪತ್ತಿಯಾಗುವ ಅಪಾಯಕಾರಿ ತ್ಯಾಜ್ಯಗಳು ಮತ್ತು ಕಸಗಳನ್ನು ಸಂಗ್ರಹಿಸಲು ಸುಸಜ್ಜಿತ ಕೊಠಡಿಗಳಿಗೆ ವ್ಯವಸ್ಥೆ ಕಲ್ಪಿಸುವುದು.
6. ಕಸ ಸಂಗ್ರಹಣಕಾರರಿಗೆ ಕಸವನ್ನು ಸುಡದಂತೆ, ಕಸ ನಿರ್ವಹಣೆ ಕುರಿತು ತರಬೇತಿ ನೀಡುವುದು.
7. ಮಾರುಕಟ್ಟೆ ಸಮೀಪವಿರುವಂತೆ ಘನತ್ಯಾಜ್ಯ ಘಟಕಗಳನ್ನು ನಿರ್ಮಿಸಿ ಗೊಬ್ಬರ ತಯಾರಿಕೆಗೆ ಮುಂದಾಗುವುದು.
8. ಭಾರತೀಯ ರಸ್ತೆ ಪ್ರಾಧಿಕಾರದ ಮಾರ್ಗಸೂಚಿಯಂತೆ ಪ್ಲಾಸ್ಟಿಕ್ ತ್ಯಾಜ್ಯವನ್ನು ಟಾರಿನೊಡನೆ ರಸ್ತೆ ಕಾಮಗಾರಿಗೆ ಬಳಸುವುದು.
9. ತ್ಯಾಜ್ಯ ನಿರ್ವಹಣಾ ವ್ಯವಸ್ಥೆಗಾಗಿ ಪ್ರತೀ ಗ್ರಾಮ ಪಂಚಾಯತ್‌ನಲ್ಲಿ ಕನಿಷ್ಠ 1–2 ಎಕರೆ ಜಮೀನು ಕಾಯ್ದಿರಿಸುವುದು.

**4. ಧಾರ್ಮಿಕ ದತ್ತಿ ಇಲಾಖೆಗೆ ಸಂಬಂಧಿಸಿದಂತೆ**

ಧಾರ್ಮಿಕ ದತ್ತಿ ಅಧ್ಯಕ್ಷರ ಕಾರ್ಯಾಲಯ ಪತ್ರ ಸಂಖ್ಯೆ ಎಡಿಎಮ್/11/ಇತರ/ಸಿಆರ್/318/10–11, ದಿನಾಂಕ 4/10/2010, ಪರಿಸರ ಸಂರಕ್ಷಣೆ ಕಾಯ್ದೆ 1986 ಮತ್ತು ಸರಕಾರಿ

ಆದೇಶ ಸಂಖ್ಯೆ ಅಪಜೆ/138/ಇಪಿಸಿ/2010, ಬೆಂಗಳೂರು ದಿನಾಂಕ 20/10/2010 ರ ಅನ್ವಯ ದೇವಸ್ಥಾನಗಳು ಮತ್ತು ಧಾರ್ಮಿಕ ಕ್ಷೇತ್ರಗಳು ಹಾಗೂ ಅಲ್ಲಿನ ವ್ಯಾಪ್ತಿಯಿಂದ 100 ಮೀಟರ್ ಪರಿಧಿಯೊಳಗಿನ ಪರಿಸರದಲ್ಲಿ ಪ್ಲಾಸ್ಟಿಕ್ ಉತ್ಪಾದನೆಗಳ ಬಳಕೆ, ಮಾರಾಟ ಮತ್ತು ವಿಲೇವಾರಿಯನ್ನು ಸಂಪೂರ್ಣವಾಗಿ ನಿಷೇಧಿಸಲು ಕ್ರಮ ಕೈಗೊಳ್ಳುವುದು.

ಸ್ವಚ್ಛ ಮಂದಿರ ಅಭಿಯಾನದಲ್ಲಿ ಬರುವ ರಾಜ್ಯದ ಸಮೂಹ ಎ, ಬಿ ಮತ್ತು ಸಿ ಪ್ರವರ್ಗಗಳ ದೇವಾಲಯಗಳಲ್ಲಿ ಪ್ರಧಾನವಾಗಿ ಈ ಕೆಳಗೆ ನಮೂದಿಸಿರುವ 5 ಅಂಶಗಳು ಸೇರಿರುತ್ತವೆ.

1. ಧಾರ್ಮಿಕ ದತ್ತಿ ಇಲಾಖೆ ವ್ಯಾಪ್ತಿಗೆ ಒಳಪಡುವ ದೇವಾಲಯಗಳನ್ನು ಪ್ಲಾಸ್ಟಿಕ್ ಮುಕ್ತ ದೇವಾಲಯಗಳನ್ನಾಗಿ ಮಾರ್ಪಡಿಸುವುದು.
2. ದೇವಾಲಯದಲ್ಲಿ ಉತ್ಪನ್ನವಾಗುವ ಹಸಿ ತ್ಯಾಜ್ಯವನ್ನು ದೇವಾಲಯದ ಮಟ್ಟದಲ್ಲಿಯೇ ಸ್ವಯಂ ನಿರ್ವಹಣೆ ಅಥವಾ ಸ್ವಯಂ ವಿಲೇವಾರಿ ಮಾಡುವುದು.
3. ಆಧ್ಯಾತ್ಮಿಕ ಸಂಸ್ಥೆಗಳು, ಶಾಲಾ–ಕಾಲೇಜುಗಳು ಮತ್ತು ವಿವಿಧ ಸಂಘ–ಸಂಸ್ಥೆಗಳು ಆಸಕ್ತ ಸ್ವಯಂಸೇವಕರ ಸಹಭಾಗಿತ್ವದಿಂದ ಧಾರ್ಮಿಕ ದತ್ತಿ ಇಲಾಖೆ ದೇವಸ್ಥಾನಗಳನ್ನು ಸ್ವಚ್ಛ ಗೊಳಿಸುವುದು.
4. ದೇವಾಲಯಗಳಿಗೆ ಹೊಂದಿಕೊಂಡಂತೆ ಇರುವ ಕೆರೆಗಳನ್ನು ಪುನರುಜ್ಜೀವನಗೊಳಿಸುವುದು.
5. ದೇವಾಲಯಗಳಲ್ಲಿ ಜಾಗ ಇದ್ದ ಕಡೆ ಕಳೆಯನ್ನು ಸ್ವಚ್ಛಗೊಳಿಸಿ ಹೂವಿನ ಗಿಡ ನೆಟ್ಟು, ಉದ್ಯಾನವನ ನಿರ್ಮಿಸುವುದು.

**5. ದಕ್ಷಿಣ ಕನ್ನಡ ಜಿಲ್ಲಾ ಸ್ವಚ್ಛತಾ ನೀತಿ–2017 ರ ತ್ಯಾಜ್ಯ ವಿಲೇವಾರಿಯ ವಿಧಾನಗಳು**

**1. ಹಸಿ ಕಸ ವಿಲೇವಾರಿಯ ವಿವಿಧ ವಿಧಾನಗಳು**[22]: ಜಿಲ್ಲೆಯಾದ್ಯಂತ ಎಲ್ಲಾ ಗ್ರಾಮ ಪಂಚಾಯತ್ ವ್ಯಾಪ್ತಿಯ ಮನೆ, ಅಂಗನವಾಡಿ, ಶಾಲೆ, ವಾಣಿಜ್ಯ ಕೇಂದ್ರ, ವಾಣಿಜ್ಯ ಸಂಕೀರ್ಣಗಳು, ವಸತಿ ಸಂಕೀರ್ಣಗಳು, ಸರಕಾರಿ ಮತ್ತು ಸರ್ಕಾರೇತರ ಕಛೇರಿಗಳು, ಧಾರ್ಮಿಕ ಕೇಂದ್ರಗಳು ಹಾಗೂ ಸಂಘ ಸಂಸ್ಥೆಗಳು ಭೂಮಿಯಲ್ಲಿ ಕರಗುವಂತಹ ಹಸಿ ಕಸ(ಭೂಮಿಯಲ್ಲಿ ವಿಘಟನೆಗೊಳ್ಳುವ)ವನ್ನು ಕೃಷಿಗೆ ನೇರ ಬಳಕೆಯಲ್ಲಿ, ಸಾಕು ಪ್ರಾಣಿಗಳಿಗೆ ಆಹಾರವಾಗಿ, ಗೊಬ್ಬರ ಗುಂಡಿ (ಪಿಟ್ ಕಾಂಪೋಸ್ಟ್), ಕೊಳವೆ ಗೊಬ್ಬರ (ಪೈಪ್ ಕಾಂಪೋಸ್ಟ್), ಎರೆಹುಳು ಗೊಬ್ಬರ (ವರ್ಮಿ ಕಾಂಪೋಸ್ಟ್) ಘಟಕ, ಜೈವಿಕ ಗೊಬ್ಬರ (ಬಯೋ ಕಾಂಪೋಸ್ಟ್), ಜೈವಿಕ ಅನಿಲ (ಬಯೋ

ಗ್ಯಾಸ್) ಗಳಿಗೆ ಬಳಕೆ ಮಾಡುವ ಮೂಲಕ ಯಾವುದೇ ರೀತಿಯಲ್ಲಿ ಪರಿಸರ ಮಲೀನವಾಗದಂತೆ ವಿಲೇವಾರಿ ಮಾಡುವುದು.

2. **ದ್ರವತ್ಯಾಜ್ಯ ವಿಲೇವಾರಿಯ ವಿವಿಧ ವಿಧಾನಗಳು:** ಜಿಲ್ಲೆಯಾದ್ಯಂತ ಎಲ್ಲಾ ಗ್ರಾಮ ಪಂಚಾಯತ್ ವ್ಯಾಪ್ತಿಯ ಮನೆ, ಅಂಗನವಾಡಿ, ಶಾಲೆ, ವಾಣಿಜ್ಯ ಕೇಂದ್ರ, ವಾಣಿಜ್ಯ ಸಂಕೀರ್ಣಗಳು, ವಸತಿ ಸಂಕೀರ್ಣಗಳು, ಸರಕಾರಿ ಮತ್ತು ಸರ್ಕಾರೇತರ ಕಛೇರಿಗಳು, ಧಾರ್ಮಿಕ ಕೇಂದ್ರಗಳು ಹಾಗೂ ಸಂಘ ಸಂಸ್ಥೆಗಳ ವಠಾರದಲ್ಲಿ ಉತ್ಪತ್ತಿಯಾಗುವ ದ್ರವ ತ್ಯಾಜ್ಯವನ್ನು ಪರಿಸರಕ್ಕೆ ಹಾನಿಯಾಗದಂತೆ ಕೈ ತೋಟಕ್ಕೆ ಬಳಕೆ, ಇಂಗು ಗುಂಡಿ ಹಾಗೂ ಪಟ್ಟಣ ಪ್ರದೇಶದ ಗುಣ ಲಕ್ಷಣ ಹೊಂದಿರುವ ಗ್ರಾಮ ಪಂಚಾಯತ್‌ಗಳಲ್ಲಿ ದ್ರವ ತ್ಯಾಜ್ಯ ಸಂಸ್ಕರಣಾ ಘಟಕದ ಮೂಲಕ ಸಮರ್ಪಕವಾಗಿ ವಿಲೇವಾರಿ ಮಾಡುವುದು.

3. **ಒಣಕಸ (ಜೈವಿಕವಲ್ಲದ ತ್ಯಾಜ್ಯ) ವಿಲೇವಾರಿಯ ವಿಧಾನ:** ಜಿಲ್ಲೆಯಾದ್ಯಂತ ಎಲ್ಲಾ ಗ್ರಾಮ ಪಂಚಾಯತ್ ವ್ಯಾಪ್ತಿಯ ಮನೆ, ಅಂಗನವಾಡಿ, ಶಾಲೆ, ವಾಣಿಜ್ಯ ಕೇಂದ್ರ, ವಾಣಿಜ್ಯ ಸಂಕೀರ್ಣಗಳು, ವಸತಿ ಸಂಕೀರ್ಣಗಳು, ಸರಕಾರಿ ಮತ್ತು ಸರ್ಕಾರೇತರ ಕಛೇರಿಗಳು, ಧಾರ್ಮಿಕ ಕೇಂದ್ರಗಳು ಹಾಗೂ ಸಂಘ ಸಂಸ್ಥೆಗಳಲ್ಲಿ ಉತ್ಪತ್ತಿಯಾಗುವ ತ್ಯಾಜ್ಯವನ್ನು ಮೂಲದಲ್ಲಿಯೇ ವಿಂಗಡಿಸಿ, ಪ್ಲಾಸ್ಟಿಕ್ ತ್ಯಾಜ್ಯವನ್ನು ಶುಚಿ ಹಾಗೂ ಶುಷ್ಕವಾಗಿ ಶೇಖರಿಸಿಟ್ಟು, ನಿಯಮಿತವಾಗಿ ವಾರ್ಡ್ ಮಟ್ಟದಲ್ಲಿ ಸಂಗ್ರಹಿಸಿ ನಿರ್ದಿಷ್ಟ ಅವಧಿಯೊಳಗೆ ಸ್ಥಳೀಯ ಗುಜರಿ ವ್ಯಾಪಾರಿಗಳಿಗೆ ನೀಡುವುದು ಅಥವಾ ಗ್ರಾಮ ಪಂಚಾಯತ್ ಮಟ್ಟದಲ್ಲಿ ನಿರ್ಮಿಸಲಾದ ಪ್ಲಾಸ್ಟಿಕ್ ತ್ಯಾಜ್ಯ ಸಂಗ್ರಹಣಾ ಶೆಡ್ ನಲ್ಲಿ ಶೇಖರಿಸಿಟ್ಟು ಸ್ಥಳೀಯ ಗುಜರಿ ವ್ಯಾಪಾರಿಗಳಿಗೆ ನೀಡುವುದು ಅಥವಾ ಜಿಲ್ಲಾ ಪಂಚಾಯತ್‌ನಿಂದ ಈಗಾಗಲೇ ನಿಗದಿಪಡಿಸಿದ ಹೋಬಳಿವಾರು ಮಾರ್ಗ ನಕ್ಷೆಯಂತೆ ತಿಂಗಳಿಗೊಮ್ಮೆ ಮರುಬಳಕೆ ಘಟಕಕ್ಕೆ ಕಳುಹಿಸುವುದು.

4. **ಇ–ತ್ಯಾಜ್ಯ ವಿಲೇವಾರಿಯ ವಿಧಾನ:** ಜಿಲ್ಲೆಯಾದ್ಯಂತ ಎಲ್ಲಾ ಗ್ರಾಮ ಪಂಚಾಯತ್ ವ್ಯಾಪ್ತಿಯ ಮನೆ, ಅಂಗನವಾಡಿ, ಶಾಲೆ, ವಾಣಿಜ್ಯ ಕೇಂದ್ರ, ವಾಣಿಜ್ಯ ಸಂಕೀರ್ಣಗಳು, ವಸತಿ ಸಂಕೀರ್ಣಗಳು, ಸರಕಾರಿ ಮತ್ತು ಸರ್ಕಾರೇತರ ಕಛೇರಿಗಳು, ಧಾರ್ಮಿಕ ಕೇಂದ್ರಗಳು ಹಾಗೂ ಸಂಘ ಸಂಸ್ಥೆಗಳಲ್ಲಿ ಉತ್ಪತ್ತಿಯಾಗುವ ಇ–ತ್ಯಾಜ್ಯ (ವಿದ್ಯುನ್ಮಾನ ಉಪಕರಣ) ಗಳನ್ನು ಗ್ರಾಮ ಪಂಚಾಯತ್ ಮಟ್ಟದಲ್ಲಿ ಪ್ರತ್ಯೇಕವಾಗಿ ಸಂಗ್ರಹಿಸಿಟ್ಟು ವರ್ಷದಲ್ಲಿ ಒಂದು ಸಲ ಮರುಬಳಕೆ ಘಟಕಕ್ಕೆ ರವಾನಿಸುವುದು.

**6. ಅನುಷ್ಠಾನ ಕಾರ್ಯ ತಂತ್ರಗಳು**[23]

ಈ ಯೋಜನೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡಂತೆ ವಾರ್ಡುವಾರು, ಗ್ರಾಮ ಪಂಚಾಯತ್, ತಾಲೂಕು ಮತ್ತು ಜಿಲ್ಲಾ ಹಂತದ ಸಮಿತಿಗಳನ್ನು ರಚಿಸುವುದು.

**1. ವಾರ್ಡ್‌ವಾರು ಉಪಸಮಿತಿ:** ಪಂಚಾಯತ್ ವಾರ್ಡ್ ಸದಸ್ಯರು–ಅಧ್ಯಕ್ಷರು, ಅಂಗನವಾಡಿ ಶಿಕ್ಷಕರು ಹಾಗೂ ಆಶಾ ಕಾರ್ಯ ಕರ್ತೆಯರು– ಸದಸ್ಯರು, ಸ್ವ–ಸಹಾಯ ಹಾಗೂ ಸ್ವಯಂ ಸೇವಾ ಸಂಘದ ಸದಸ್ಯರು, ಸಾಮಾಜಿಕ ಕಾರ್ಯದಲ್ಲಿ ತೊಡಗಿಸಿಕೊಂಡವರು, ಶಾಲಾ ಶಿಕ್ಷಕರು/ ಮುಖ್ಯೋಪಾಧ್ಯಾಯರು, ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷರು ಮತ್ತು ಪ್ರತೀ 10 ಮನೆಗಳಿಗೆ ಒಬ್ಬರಂತೆ ಉಪಸಮಿತಿ ಸದಸ್ಯರ ಸಂಖ್ಯೆಯನ್ನು ಸೀಮಿತಗೊಳಿಸುವುದು.

**ಆ. ವಾರ್ಡ್ ಉಪಸಮಿತಿಯ ಪ್ರಕಾರ್ಯಗಳು:** ಪ್ರತೀ ಮನೆಯ ವಿಳಾಸ ಹಾಗೂ ಸಂಪರ್ಕ ವ್ಯವಸ್ಥೆ ಕುರಿತು ಮಾಹಿತಿಯನ್ನು ದಾಖಲಿಸಿಕೊಳ್ಳುವುದು, ಮನೆ–ಮನೆಗೆ ನೇರ ಭೇಟಿಯ ಮೂಲಕ ಮಾಹಿತಿ ನೀಡುವುದು, ಪ್ರತಿ ಮನೆಯ ಕಸ ಉತ್ಪತ್ತಿಯ ವಿಧಗಳು ಮತ್ತು ಪ್ರಮಾಣದ ಕುರಿತು ಮಾಹಿತಿಯನ್ನು ದಾಖಲಾತಿ ಮಾಡಿ ಇಟ್ಟು ಕೊಳ್ಳುವುದು, ಪ್ರಸ್ತುತ ಕಸದ ವಿಲೇವಾರಿ ಕುರಿತು ಮಾಹಿತಿ ಹೊಂದುವುದು, ವಾರ್ಡ್‌ಗಳಲ್ಲಿ ಸಾಕ್ಷ್ಯಚಿತ್ರಗಳನ್ನು ತೋರಿಸುವುದು, ಕರಪತ್ರಗಳನ್ನು ಎಲ್ಲ ಮನೆಗಳಿಗೆ ಹಂಚುವುದು, ವಾರಕ್ಕೊಮ್ಮೆ/15 ದಿನಗಳಿಗೊಮ್ಮೆ ಸಮಿತಿ ಸಭೆಯನ್ನು ಸೇರುವುದು, ನಿರಂತರ ಅನುಸರಣೆಯನ್ನು ಮಾಡುವುದು, ಸಮಾರಂಭಗಳ ಪೂರ್ವದಲ್ಲಿಯೇ ಘನ ತ್ಯಾಜ್ಯ ವಸ್ತುಗಳ ವಿಲೇವಾರಿ ಕುರಿತು ಮಾಹಿತಿ ನೀಡುವುದು, ಸ್ವಚ್ಛತೆ ಕುರಿತು ಕಾರ್ಯಾಗಾರವನ್ನು ಏರ್ಪಡಿಸುವುದು, ಆಗಾಗ ಶಾಲೆ ಅಂಗನವಾಡಿಗಳಿಗೆ ಭೇಟಿ ನೀಡಿ ಪ್ಲಾಸ್ಟಿಕ್ ಕುರಿತು ಜಾಗೃತಿ ಮೂಡಿಸುವುದು, ಸ್ಥಳೀಯ ಗುಜರಿ ವ್ಯಾಪಾರಿಗಳೊಂದಿಗೆ ಸಂಪರ್ಕ ಇಟ್ಟುಕೊಂಡು ವಾರ್ಡ್ ಮಟ್ಟದಲ್ಲಿಯೇ ಪ್ಲಾಸ್ಟಿಕ್ ತ್ಯಾಜ್ಯಗಳನ್ನು ವಿಲೇವಾರಿ ಮಾಡಲು ಒತ್ತು ನೀಡುವುದು, ಬಲ್ಕ್ ಮೆಸೇಜ್‌ಗಳ ಮೂಲಕ ಎಲರ್ಟ್ ಮಾಡುವುದು. ಆ ದಿನದ ಸಂಗ್ರಹಣಾ ಸ್ಥಳಗಳ ಬಗ್ಗೆ ಮುನ್ಸೂಚನೆ ನೀಡುವುದು, ಶಾಲಾ ಮಟ್ಟದ ಸ್ಪರ್ಧೆಗಳಲ್ಲಿ ಸ್ವಚ್ಛತಾ ಸಂಬಂಧಿ ಸ್ಪರ್ಧೆಗಳನ್ನು ಏರ್ಪಡಿಸುವುದು (ಉದಾ: ಕಸದಿಂದ ರಸ), ಸ್ಥಳೀಯ ಸಂಪನ್ಮೂಲ ವ್ಯಕ್ತಿಗಳನ್ನು ಕರೆಸಿ ತ್ಯಾಜ್ಯ ಉತ್ಪತ್ತಿ ಮತ್ತು ಅವುಗಳ ಸಂಸ್ಕರಣೆಯ ಕುರಿತು ಕೌಶಲ್ಯಾಧಾರಿತ ತರಬೇತಿಗಳನ್ನು ನೀಡುವುದು, ಧ್ವನಿವರ್ಧಕಗಳನ್ನು ಬಳಸಿ ಮುದ್ರಿತ ಜಾಗೃತಿ ಮಾಹಿತಿಯನ್ನು ಆಗಾಗ (ವಾರಕ್ಕೆ 3 ಬಾರಿ) ಪ್ರಚುರ ಪಡಿಸುವುದು, ಗ್ರಾಮೀಣ ಮಟ್ಟದಲ್ಲಿ ಆಯೋಜಿಸಲಾಗುವ ಪ್ರತೀ ಕಾರ್ಯಕ್ರಮದಲ್ಲಿ ಸ್ವಚ್ಛತೆಗಾಗಿ 10 ನಿಮಿಷ ಅವಕಾಶವನ್ನು ನೀಡುವಂತೆ ಮಾಡುವುದು ಮತ್ತು ಸ್ಥಳೀಯವಾಗಿ ಯಾವುದೇ ವ್ಯಕ್ತಿಗಳು ಪ್ಲಾಸ್ಟಿಕ್ ಕುರಿತು ಅರಿವು ಮೂಡಿಸುತ್ತಿದ್ದಲ್ಲಿ ಅವರಿಗೆ ವೇದಿಕೆ ಕಲ್ಪಿಸಿ, ಅವರಿಂದ ಜನರಿಗೆ ಮಾಹಿತಿ ಕೊಡಿಸುವುದು.

**3. ಗ್ರಾಮ ಪಂಚಾಯತ್ ಹಂತದ ಸಮಿತಿ ರಚನೆ:** ಈ ಸಮಿತಿಯಲ್ಲಿ ಗ್ರಾಮ ಪಂಚಾಯತ್ ಅಧ್ಯಕ್ಷರು–ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರಾಗಿ ಗ್ರಾಮ ಪಂಚಾಯತ್ ಸರ್ವ ಸದಸ್ಯರು–

ಸದಸ್ಯರು, ಪಂಚಾಯತ್ ವ್ಯಾಪ್ತಿಯ ತಾ.ಪಂ ಹಾಗೂ ಜಿ.ಪಂ ಸದಸ್ಯರು–ಸದಸ್ಯರು, ಅಂಗನವಾಡಿ ಮೇಲ್ವಿಚಾರಕರು–ಸದಸ್ಯರು, ಶಿಕ್ಷಣ ಇಲಾಖೆಯ ಸಿಆರ್‌ಪಿ (ಕ್ಲಸ್ಟರ್ ರಿಸೋರ್ಸ್ ಪರ್ಸನ್)–ಸದಸ್ಯರು, ಆರೋಗ್ಯ ಕಾರ್ಯಕರ್ತೆಯರು–ಸದಸ್ಯರು, ಸಾಕ್ಷರತಾ ಪ್ರೇರಕರು–ಸದಸ್ಯರು, ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮೀಣ ಅಭಿವೃದ್ಧಿ ಯೋಜನೆಯ ಸೇವಾ ಪ್ರತಿನಿಧಿ–ಸದಸ್ಯರು, ಆರಕ್ಷಕ ಠಾಣಾ ಸಿಬ್ಬಂದಿ–ಸದಸ್ಯರು, ಸ್ವಯಂಸೇವಾ ಸಂಘ ಸಂಸ್ಥೆ ಮತ್ತು ಸ್ವ–ಸಹಾಯ ಸಂಘದ ಒಕ್ಕೂಟದ ಅಧ್ಯಕ್ಷರು, ಸ್ತ್ರೀ ಶಕ್ತಿ ಗೊಂಚಲು ಅಧ್ಯಕ್ಷರು–ಸದಸ್ಯರು, ಪಂಚಾಯತ್ ಅಭಿವೃದ್ಧಿ ಅಧಿಕಾರಿ–ಸದಸ್ಯ ಕಾರ್ಯದರ್ಶಿ ಮತ್ತು ಗ್ರಾಮ ಕರಣಿಕರಿರುತ್ತಾರೆ.

**ಈ. ಗ್ರಾಮ ಪಂಚಾಯತ್ ಸಮಿತಿ ಪ್ರಕಾರ್ಯಗಳು:** ಸಭೆ ಸಮಾರಂಭಗಳು ಮುಗಿದ ನಂತರ ನಿಗದಿತ ಅವಧಿಯ ಒಳಗೆ ತಳಿರು ತೋರಣ, ಬ್ಯಾನರ್, ಬಂಟಿಂಗ್ಸ್‌ಗಳನ್ನು ತೆಗೆಯಲು ಕಟ್ಟುನಿಟ್ಟಿನ ಕ್ರಮ ಜರುಗಿಸಬೇಕು. ಗ್ರಾಮ ಪಂಚಾಯತ್ ಸಮಿತಿಯ ಪ್ರತೀ ಸದಸ್ಯರು ಕಾರ್ಯ ತಂತ್ರವನ್ನು ತಮ್ಮ ಮನೆಯಲ್ಲಿ ಅಳವಡಿಸಿಕೊಳ್ಳುವುದು. ಪಂಚಾಯತ್ ಮಟ್ಟದ ಸಮಿತಿ ಮೂಲಕ ಮೇಲ್ವಿಚಾರಣೆ ಮಾಡುವುದು. ವಾರ್ಡ್‌ವಾರ್ ಉಪ ಸಮಿತಿಗಳಿಗೆ ಅಗತ್ಯ/ಸಕಾಲಿಕ ನೆರವು ನೀಡುವುದು. ಹಂತ–ಹಂತವಾಗಿ ಸಭೆಗಳನ್ನು ಪ್ಲಾಸ್ಟಿಕ್ ಜಾಗೃತಿಯಲ್ಲಿ ತೊಡಗಿಸಿಕೊಳ್ಳುವಂತೆ ಮಾಡುವುದು. ಸ್ಥಳೀಯ ಸಂಸ್ಥೆಗಳನ್ನು ಪ್ಲಾಸ್ಟಿಕ್ ಜಾಗೃತಿಯಲ್ಲಿ ತೊಡಗಿಕೊಳ್ಳುವಂತೆ ಮಾಡುವುದು. ಸ್ಥಳೀಯ ದೂರದರ್ಶನ ಮಾಧ್ಯಮಗಳಲ್ಲಿ ಪ್ಲಾಸ್ಟಿಕ್ ಕುರಿತು ಜಾಗೃತಿ ಮಾಹಿತಿ ನೀಡುವುದು. ಸ್ವಸಹಾಯ ಸಂಘದ ಸದಸ್ಯರನ್ನು ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನದ ಮೂಲಕ ಆದಾಯ ಉತ್ಪನ್ನ ಚಟುವಟಿಕೆಯಲ್ಲಿ ತೊಡಗಿಸಿ ಬಟ್ಟೆ ಚೀಲ ತಯಾರಿಸಲು ಉತ್ತೇಜಿಸುವುದು. ಗ್ರಾ.ಪಂ ಅನುದಾನದಲ್ಲಿ ಸ್ವಚ್ಛತೆಗೆ ಸಂಬಂಧಿಸಿದಂತೆ ಬಟ್ಟೆ ಚೀಲ ಖರೀದಿಗೆ ಕನಿಷ್ಠ ಅನುದಾನ ಕಾದಿರಿಸಿಟ್ಟುಕೊಳ್ಳುವುದು. ಸ್ಥಳೀಯ ಗುಜರಿ ವ್ಯಾಪಾರಿಗಳೊಂದಿಗೆ ಸಂಪರ್ಕ ಇಟ್ಟು ಕೊಳ್ಳುವುದು. ಕಾರ್ಯತಂತ್ರದ ಅನುಷ್ಠಾನದ ಕುರಿತು ಚರ್ಚಿಸುವುದು ಮತ್ತು ಪ್ರತಿಯೊಂದು ಯೋಜನೆಯಲ್ಲಿ ಕನಿಷ್ಠ ಶೇಕಡ 5 ಅನುದಾನವನ್ನು ಸ್ವಚ್ಛತೆಗಾಗಿ ಮೀಸಲಿರಿಸುವುದು.

**4. ತಾಲೂಕು ಹಂತದ ಸಮಿತಿ:** ಈ ಸಮಿತಿಯಲ್ಲಿ ತಾಲೂಕು ಪಂಚಾಯತ್ ಅಧ್ಯಕ್ಷರು–ಅಧ್ಯಕ್ಷರು, ತಾಲೂಕು ಪಂಚಾಯತ್ ಸರ್ವ ಸದಸ್ಯರುಗಳು–ಸದಸ್ಯರು, ತಹಶೀಲ್ದಾರರು–ಸದಸ್ಯರು, ತಾಲೂಕು ಮಟ್ಟದ ಎಲ್ಲ ಇಲಾಖಾ ಅಧಿಕಾರಿಗಳು–ಸದಸ್ಯರು, ಪೋಲೀಸ್ ಅಧಿಕಾರಿಗಳು–ಸದಸ್ಯರು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಸಹಾಯಕ ಪರಿಸರ ಅಧಿಕಾರಿ–ಸದಸ್ಯರು, ಸ್ತ್ರೀ ಶಕ್ತಿ ಬ್ಲಾಕ್ ಸೊಸೈಟಿ ಅಧ್ಯಕ್ಷರು–ಸದಸ್ಯರು, ಧರ್ಮಸ್ಥಳ ಸ್ವಸಹಾಯ ಸಂಘದ ತಾಲೂಕು ಒಕ್ಕೂಟದ ಅಧ್ಯಕ್ಷರು ಹಾಗೂ ಯೋಜನಾಧಿಕಾರಿಗಳು–ಸದಸ್ಯರು, ಸ್ವಯಂ ಸೇವಾ ಸಂಘದ

ಪದಾಧಿಕಾರಿಗಳು–ಸದಸ್ಯರು ಮತ್ತು ತಾಲೂಕು ಕಾರ್ಯ ನಿರ್ವಾಹಕ ಅಧಿಕಾರಿ–ಸದಸ್ಯ ಕಾರ್ಯದರ್ಶಿ.

**5. ಜಿಲ್ಲಾ ಹಂತದ ಸಮಿತಿ:** ಜಿಲ್ಲಾ ಮಟ್ಟದ ನೀರು ಮತ್ತು ನೈರ್ಮಲ್ಯ ಸಮಿತಿಯಲ್ಲಿ ಜಿಲ್ಲಾ ಪಂಚಾಯತ್ ಅಧ್ಯಕ್ಷರು–ಅಧ್ಯಕ್ಷರು, ಸಂಸದರು, ಎಲ್ಲಾ ಶಾಸಕರುಗಳು, ಮತ್ತು ಎಲ್ಲಾ ವಿಧಾನ ಪರಿಷತ್ ಸದಸ್ಯರು, ಜಿಲ್ಲಾ ಪಂಚಾಯತ್‌ನ ಎಲ್ಲಾ ಸ್ಥಾಯಿ ಸಮಿತಿಗಳ ಅಧ್ಯಕ್ಷರುಗಳು, ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಉಪ ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಜಂಟಿ ಕೃಷಿ ನಿರ್ದೇಶಕರು, ಜಿಲ್ಲಾ ವಾರ್ತಾಧಿಕಾರಿ, ಗೊತ್ತುಪಡಿಸಿದ ಸ್ವಯಂಸೇವಾ ಸಂಘ ಸಂಸ್ಥೆಗಳ ಪ್ರತಿನಿಧಿಗಳು ಸದಸ್ಯರಾಗಿದ್ದು, ಕಾರ್ಯಪಾಲಕ ಅಭಿಯಂತರರು, ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ– ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ.

ಜಿಲ್ಲಾ ಹಂತದ ಸಮಿತಿಗೆ ಈ ಪದಾಧಿಕಾರಿಗಳ ಜೊತೆ ಜಿಲ್ಲಾಧಿಕಾರಿಗಳು, ಉಪ ಕಾರ್ಯದರ್ಶಿ/ನೋಡಲ್ ಅಧಿಕಾರಿ, ಜಿಲ್ಲಾ ಪೊಲೀಸ್ ಅಧೀಕ್ಷಕರು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು/ಪರಿಸರ ಅಧಿಕಾರಿ ಹಾಗೂ ಎಲ್ಲಾ ಇಲಾಖೆಗಳ ಜಿಲ್ಲಾ ಮಟ್ಟದ ಅಧಿಕಾರಿಗಳು, ಜಿಲ್ಲಾ ನೆರವು ಘಟಕದ ಜಿಲ್ಲಾ ಸಂಯೋಜಕರು ಮತ್ತು ಸಮಾಲೋಚಕರು, ಸ್ತ್ರೀ ಶಕ್ತಿ ಸ್ವಸಹಾಯ, ಸ್ವಯಂಸೇವಾ ಸಂಘದ ಜಿಲ್ಲಾ ಮಟ್ಟದ ಅಧ್ಯಕ್ಷರು ಹಾಗೂ ಸಮಾಜ ಸೇವಕರು– ಇವರನ್ನು ಸದಸ್ಯರಾಗಿ ಸೇರ್ಪಡೆಗೊಳಿಸಲಾಗಿದೆ.

**6. ತಾಲೂಕು/ಜಿಲ್ಲಾ ಹಂತದ ಸಮಿತಿಯ ಪ್ರಕಾರ್ಯಗಳು**

- ತಾಲೂಕು/ಜಿಲ್ಲಾ ಹಂತದ ಸಮಿತಿಯ ಪ್ರತೀ ಸದಸ್ಯರು ಕಾರ್ಯತಂತ್ರವನ್ನು ತಮ್ಮ ಮನೆಯಲ್ಲಿ ಅಳವಡಿಸುವುದು.
- ತಾಲೂಕು/ಜಿಲ್ಲಾ ಪಂಚಾಯತ್ ಹಂತದ ಸದಸ್ಯವಾರು ಸಮಿತಿ ಮೂಲಕ ಮೇಲ್ವಿಚಾರಣೆ ಮಾಡುವುದು ಮತ್ತು ಅಧೀನ ಗ್ರಾಮ ಪಂಚಾಯತ್‌ಗಳಿಗೆ ಅಗತ್ಯ/ಸಕಾಲಿಕ ನೆರವು ನೀಡುವುದು.
- ಹಂತ–ಹಂತವಾಗಿ ಸಭೆಗಳನ್ನು ನಡೆಸುವುದು. ಕಾರ್ಯಕ್ರಮದ ಅನುಷ್ಠಾನದ ಕುರಿತು ಚರ್ಚಿಸುವುದು.

- ಸ್ಥಳೀಯ ಸಂಸ್ಥೆಗಳನ್ನು ಪ್ಲಾಸ್ಟಿಕ್ ಜಾಗೃತಿಯಲ್ಲಿ ತೊಡಗಿಕೊಳ್ಳುವಂತೆ ಮಾಡುವುದು.
- ಸ್ಥಳೀಯ ದೂರದರ್ಶನ ಮಾಧ್ಯಮಗಳಲ್ಲಿ ಪ್ಲಾಸ್ಟಿಕ್ ಕುರಿತು ಜಾಗೃತಿ ಮಾಹಿತಿ ನೀಡುವುದು.
- ಗುಜರಿ ವ್ಯಾಪಾರಿಗಳು, ಮರುಬಳಕೆ ಸಂಸ್ಥೆಗಳು, ಗ್ರಾಮ ಪಂಚಾಯತ್ ಮಟ್ಟದಲ್ಲಿ ಸಂಗ್ರಹಿಸುವ ಪ್ಲಾಸ್ಟಿಕ್ ಖರೀದಿಸುವುದು.
- ತಾಲೂಕು ಹಂತದಲ್ಲಿ ಸಭೆಯನ್ನು ಹಮ್ಮಿಕೊಂಡು ಕಾರ್ಯ ತಂತ್ರದ ಅನುಷ್ಠಾನದ ಕುರಿತು ಚರ್ಚಿಸುವುದು.
- ನಿಷೇಧಿತ ಪ್ಲಾಸ್ಟಿಕ್ ವಸ್ತುಗಳಿಗೆ ಪರ್ಯಾಯವಾಗಿ ಪರಿಸರ ಸ್ನೇಹಿಯಾಗಿರುವ ವಸ್ತುಗಳನ್ನು ತಯಾರಿಸಲು ಮತ್ತು ಬಳಸಲು ಉತ್ತೇಜನ ನೀಡುವುದು.
- ಜಿಲ್ಲಾ ಪಂಚಾಯತ್ ಕ್ಷೇತ್ರ ಮಟ್ಟದಲ್ಲಿ ಒಬ್ಬರು ಪೊಲೀಸ್ ಅಧಿಕಾರಿ, ಜಿ.ಪಂ. ಸದಸ್ಯರು, ಆಯಾ ಕ್ಷೇತ್ರದ ತಾಲೂಕು ಪಂಚಾಯತ್ ಸದಸ್ಯರು ಮತ್ತು ಪ್ರಸಿದ್ಧ, ಪ್ರಖ್ಯಾತ ವ್ಯಕ್ತಿಗಳಿರುವ ಪ್ರಚಾರ ತಂಡ ರಚಿಸುವುದು.
- ಪ್ರತಿಯೊಂದು ಯೋಜನೆಯಲ್ಲಿ ಕನಿಷ್ಠ 5% ಅನುದಾನವನ್ನು ಸ್ವಚ್ಛತೆಗಾಗಿ ಮೀಸಲಿರಿಸುವುದು.

**7. ಜಾಗೃತಿ ಕಾರ್ಯಕ್ರಮಗಳು**[24]

ವಾರ್ಡ್, ಗ್ರಾಮ ಪಂಚಾಯತ್, ತಾಲೂಕು ಮತ್ತು ಜಿಲ್ಲಾ ಹಂತದಲ್ಲಿ ಹಮ್ಮಿಕೊಳ್ಳುವ ಜಾಗೃತಿ ಕಾರ್ಯಕ್ರಮಗಳು: ಮಾಹಿತಿ ಕರಪತ್ರಗಳ ಪ್ರಕಟಣೆ, ಭಿತ್ತಿ ಚಿತ್ರಗಳು, ಸ್ವಚ್ಛತಾ ಜಾಥಾ, ಸಮಾವೇಶಗಳನ್ನು ಹಮ್ಮಿಕೊಳ್ಳುವುದು, ಪತ್ರಿಕಾ ಪ್ರಕಟಣೆ/ ಶ್ರವಣ/ ದೃಶ್ಯ ಮಾಧ್ಯಮಗಳ ಮೂಲಕ, ಬೀದಿ ನಾಟಕ ತಂಡವನ್ನು ಗೊತ್ತು ಪಡಿಸುವುದು/ ಪ್ರದರ್ಶಿಸುವುದು, ಗೋಡೆ ಬರಹಗಳನ್ನು ಬರೆಸಲು ಬರಹಗಾರರನ್ನು ಗೊತ್ತು ಪಡಿಸುವುದು, ಸ್ಥಳೀಯ ಭಾಷೆಗಳಲ್ಲಿ ಪ್ಲಾಸ್ಟಿಕ್ ಜಾಗೃತಿ ಗೀತೆಗಳನ್ನು ರಚಿಸುವುದು, ಶಾಲಾ ಮಕ್ಕಳಿಗೆ ವಾರದಲ್ಲಿ ಯಾವುದಾದರೂ ಒಂದು ದಿನ ಐಚ್ಛಿಕವಾಗಿ ತರಗತಿ ಅವಧಿಯ ಮಧ್ಯದಲ್ಲಿ ಸ್ವಚ್ಛತಾ ಮಾಹಿತಿಯನ್ನು ನೀಡುವುದು, ಶಾಲೆಗಳಲ್ಲಿ ನಡೆಯುವ ಪ್ರತಿ ಅಸೆಂಬ್ಲಿಯಲ್ಲಿ ಮತ್ತು ಪ್ರತೀ ದಿನ ಅಂಗನವಾಡಿ ಕೇಂದ್ರದಲ್ಲಿ ಮಕ್ಕಳಿಗೆ ಪರಿಸರ ಸಂರಕ್ಷಣೆ ಹಾಗೂ ನೈರ್ಮಲ್ಯಕ್ಕೆ ಸಂಬಂಧಿಸಿದಂತೆ ಘೋಷಣೆಗಳನ್ನು ಮತ್ತು ಹಾಡುಗಳನ್ನು ಹೇಳಲು ರೂಢಿಗತಗೊಳಿಸುವುದು, ಪ್ಲಾಸ್ಟಿಕ್ ಜಾಗೃತಿ ಸ್ಟಿಕ್ಕರ್‌ಗಳ ಪೂರೈಕೆ ಹಾಗೂ ಸರಕಾರಿ ವಾಹನಗಳಿಗೆ ಅಂಟಿಸುವುದು, ಸಾಮಾಜಿಕ ಜಾಲತಾಣಗಳನ್ನು ಪರಿಣಾಮಕಾರಿ ಯಾಗಿ ಬಳಕೆ ಮಾಡುವುದು, ಯಾವುದೇ ಸರಕಾರಿ ಫೈಲ್, ಬಿಲ್‌ಗಳಲ್ಲಿ ನೈರ್ಮಲ್ಯ/ಸ್ವಚ್ಛತೆ (ಪ್ಲಾಸ್ಟಿಕ್) ಕುರಿತು ಜಾಗೃತಿ ವಾಕ್ಯವನ್ನು ಹಾಕುವುದು, ಕಾರ್ಯತಂತ್ರವನ್ನು ಯಶಸ್ವಿಯಾಗಿ

ಅನುಷ್ಠಾನಗೊಳಿಸಿದ ವಾರ್ಡ್ ಮಟ್ಟದ ಉಪಸಮಿತಿ/ಗ್ರಾ.ಪಂ./ವ್ಯಕ್ತಿ/ ಸ್ವಯಂ ಸೇವಾ ಸಂಘ-ಸಂಸ್ಥೆಗಳನ್ನು ಗುರುತಿಸುವುದು, ಜಾನಪದ ಹಾಡುಗಳ ಮೂಲಕ ಸ್ವಚ್ಛತಾ ಜಾಗೃತಿ, ತಾಲೂಕು ಮಟ್ಟದಲ್ಲಿ ಎಲ್ಲಾ ಉಪ ಸಮಿತಿ ಅಧ್ಯಕ್ಷರು/ಪ್ರತೀ ಗ್ರಾಮ ಪಂಚಾಯತ್‌ಗೆ ಇಬ್ಬರು ಸಂಪನ್ಮೂಲ ವ್ಯಕ್ತಿಗಳಿಗೆ ಪ್ಲಾಸ್ಟಿಕ್ ಕಾರ್ಯ ತಂತ್ರದ ಬಗ್ಗೆ ತರಬೇತಿ ನೀಡುವುದು, ತಾಲೂಕು ಪಂಚಾಯತ್ ಸದಸ್ಯವಾರು ಉಸ್ತುವಾರಿ ಸಮಿತಿ ರಚನೆ, ಸ್ಥಳೀಯ ಸಂಘ ಸಂಸ್ಥೆಗಳನ್ನು ಈ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವುದು, ತಾಲೂಕು ಹಂತದಲ್ಲಿ ತರಬೇತುಗೊಂಡ ಸಂಪನ್ಮೂಲ ವ್ಯಕ್ತಿಗಳಿಂದ ವಾರ್ಡ್‌ವಾರು ಉಪಸಮಿತಿ ಸದಸ್ಯರಿಗೆ ಗ್ರಾಮ ಪಂಚಾಯತ್ ಮಟ್ಟದಲ್ಲಿ ಕಾರ್ಯತಂತ್ರದ ಬಗ್ಗೆ ತರಬೇತಿ, ಸಮಾಜ ಕಾರ್ಯ/ಎನ್‌ಎಸ್‌ಎಸ್ ತಂಡದ ವಿದ್ಯಾರ್ಥಿಗಳನ್ನು ಪರಿಣಾಮಕಾರಿಯಾಗಿ ಬಳಸುವುದು ಮತ್ತು ಮಂದಿರ, ಮಸೀದಿ ಮತ್ತು ಚರ್ಚ್‌ಗಳಲ್ಲಿ ಸ್ವಚ್ಛತಾ ಸಂದೇಶ ಹಾಗೂ ಆಯಾ ಅಧ್ಯಕ್ಷರ ಜತೆಗೆ ಚರ್ಚಿಸಿ ಸೂಚನಾ ಫಲಕಗಳಲ್ಲಿ ಸ್ವಚ್ಛತಾ ಮಾಹಿತಿ ಪ್ರಕಟಣೆ.

**8. ವಾರ್ಡ್, ಗ್ರಾಮ ಪಂಚಾಯತ್, ತಾಲೂಕು ಮತ್ತು ಜಿಲ್ಲಾ ಹಂತದ ಸಮಿತಿಗಳ ಜವಾಬ್ದಾರಿ ಮತ್ತು ಕರ್ತವ್ಯಗಳು**

ವಾರ್ಡ್‌ಗಳಲ್ಲಿ ಭೌಗೋಳಿಕ ಸನ್ನಿವೇಶಕ್ಕೆ ಸಂಬಂಧಿಸಿದಂತೆ ವಾರ್ಡ್ ಸಮಿತಿಯ ಸದಸ್ಯರಿಗನು ಗುಣವಾಗಿ ಮನೆಗಳನ್ನು ಹಂಚಿಕೊಳ್ಳುವುದು. ಸಮಿತಿಯ ಪ್ರತಿ ಸದಸ್ಯರಿಗೆ ನಿಗದಿಪಡಿಸಿದ 10 ಮನೆಗಳಿಗೆ ನಿರಂತರ ಒಂದು ತಿಂಗಳು ಭೇಟಿ ನೀಡಿ ತ್ಯಾಜ್ಯವನ್ನು ಮೂಲದಲ್ಲಿಯೇ ವಿಂಗಡಿಸಿ, ಹಸಿ ಕಸವನ್ನು ಗೊಬ್ಬರವನ್ನಾಗಿಸಲು ಮತ್ತು ಒಣ ಕಸಗಳನ್ನು ಶುಚಿ ಮತ್ತು ಶುಷ್ಕವಾಗಿ ಸಂಗ್ರಹಿಸಿಡಲು ತರಬೇತಿ ನೀಡುವುದು. ಸಮಿತಿಯು ನಿರ್ದಿಷ್ಟವಾಗಿ ಪ್ರತಿ ಮನೆಯವರನ್ನು ನೇರ ಹಾಗೂ ನಿರಂತರ ಸಂಪರ್ಕದಲ್ಲಿಟ್ಟು ಕೊಳ್ಳುವುದು. ವಾರ/15 ದಿನಗಳಿಗೊಮ್ಮೆ ನಿರ್ದಿಷ್ಟ ಸಂಗ್ರಹಣಾ ಸ್ಥಳ ಮತ್ತು ದಿನಾಂಕವನ್ನು ಗೊತ್ತು ಪಡಿಸುವುದು ಮತ್ತು ಈ ಬಗ್ಗೆ ತಮ್ಮ ವ್ಯಾಪ್ತಿಯ ಮನೆಗಳಿಗೆ ಮಾಹಿತಿಯನ್ನು ನೀಡುವುದು. ಸಾರ್ವಜನಿಕ ಸ್ಥಳಗಳಲ್ಲಿ 50 ಮಂದಿಗಿಂತಲೂ ಅಧಿಕ ಜನರು ಸೇರುವ ಯಾವುದೇ ಸಾಮಾಜಿಕ/ ಧಾರ್ಮಿಕ ಕಾರ್ಯಕ್ರಮಗಳು ನಡೆಯುವ ಸಂದರ್ಭಗಳಲ್ಲಿ ಮುಂಚಿತವಾಗಿ ಸ್ಥಳೀಯ ಆಡಳಿತ ಸಂಸ್ಥೆಯ ಅನುಮತಿ ಪಡೆದು ತ್ಯಾಜ್ಯಗಳನ್ನು ಸ್ಥಳೀಯ ಆಡಳಿತ ಸಂಸ್ಥೆಯ ನಿರ್ದೇಶನದಂತೆ ವೈಜ್ಞಾನಿಕವಾಗಿ ವಿಲೇವಾರಿ ಮಾಡುವ ಕುರಿತು ಮಾಹಿತಿಯನ್ನು ಒದಗಿಸುವುದು. ಉಪ ಸಮಿತಿಯ ನೇತೃತ್ವದಲ್ಲಿ ವಾರ್ಡ್ ಮಟ್ಟದಲ್ಲಿ ಗ್ರಾಮ

ಪಂಚಾಯತ್ ವತಿಯಿಂದ ವ್ಯವಸ್ಥೆ ಮಾಡಲಾದ ಪ್ಲಾಸ್ಟಿಕ್ ಸಂಗ್ರಹಣಾ ಕೇಂದ್ರದಲ್ಲಿ ವಾರಕ್ಕೊಮ್ಮೆ ಸಂಗ್ರಹಿಸಿ ನಂತರ ತಿಂಗಳಿಗೊಮ್ಮೆ ವಾಹನದಲ್ಲಿ ಪಂಚಾಯತ್ ಮಟ್ಟದ ಪ್ಲಾಸ್ಟಿಕ್ ಸಂಗ್ರಹಣಾ ಗೋದಾಮಿಗೆ ತಲುಪಿಸುವುದು. ನಿಗದಿತ ಅವಧಿಯೊಳಗೆ ಗ್ರಾಮ ಪಂಚಾಯತ್ ಮಟ್ಟದಲ್ಲಿ ಸಂಗ್ರಹಿಸಿದ ಪ್ಲಾಸ್ಟಿಕ್ ತ್ಯಾಜ್ಯವನ್ನು ತಾಲೂಕು ಮಟ್ಟದ ಸಮಿತಿ ಹಾಗೂ ಜಿಲ್ಲಾ ಮಟ್ಟದ ಸಮಿತಿ ಮರುಬಳಕೆ ಘಟಕಕ್ಕೆ ಕಳುಹಿಸಲು ಸಹಕರಿಸುವುದು/ ವ್ಯವಸ್ಥೆ ಮಾಡುವುದು. ತ್ಯಾಜ್ಯ ನಿರ್ವಹಣಾ ವ್ಯವಸ್ಥೆಗಾಗಿ ಪ್ರತೀ ಗ್ರಾಮ ಪಂಚಾಯತ್‌ನಲ್ಲಿ ಕನಿಷ್ಠ 1–3 ಎಕರೆ ಜಮೀನು ಕಾಯ್ದಿರಿಸುವುದು. ಯಾವುದೇ ರೀತಿಯ ತ್ಯಾಜ್ಯವು ನದಿ, ಕೆರೆ ಇತ್ಯಾದಿ ನೀರಿನ ಮೂಲಗಳಿಗೆ ಸೇರದಂತೆ ನಿಗಾ ವಹಿಸುವುದು. ಸಾಮಾಜಿಕ ಹೊಣೆಗಾರಿಕೆಯಲ್ಲಿ ಕಾರ್ಯತಂತ್ರದ ಅನುಷ್ಠಾನಕ್ಕೆ ಒತ್ತು ನೀಡುವುದು.

**ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಸೂಚಿಸಿರುವ ತ್ಯಾಜ್ಯ ನಿರ್ವಹಣಾ ಕ್ರಮಗಳು**

ಪೇಟೆ ವ್ಯಾಪ್ತಿಗೆ ಬರುವ ಎಲ್ಲಾ ಕಟ್ಟಡಗಳಿಂದ ಕಸವನ್ನು ಸಂಗ್ರಹಿಸುವುದು, ಮೂಲದಿಂದಲೇ ಕಸ ವಿಂಗಡನೆ ಕಡ್ಡಾಯಗೊಳಿಸುವುದು, ಪ್ರತೀದಿನ ಹಸಿಕಸ ಸಂಗ್ರಹಿಸುವುದು, ವಾರಕ್ಕೊಮ್ಮೆ ಒಣಕಸ ಸಂಗ್ರಹ. ಗ್ರಾಮ ಪಂಚಾಯತು ವ್ಯಾಪ್ತಿಯ ಪ್ರತಿ ಮನೆ, ಶಾಲೆ ಹಾಗೂ ಅಂಗನವಾಡಿ ಗಳಿಂದ ಒಣಕಸ ಸಂಗ್ರಹಿಸುವುದು. ಒಣಕಸ ಸ್ವಚ್ಛವಾಗಿರುವಂತೆ ಹಾಗೂ ಶುಷ್ಕವಾಗಿರುವಂತೆ ಕ್ರಮ ಕೈಗೊಳ್ಳುವುದು ಮತ್ತು ಶೇಖರಿಸಿ ಇಡಲು ವ್ಯವಸ್ಥೆ ಮಾಡುವುದು. ಗೋದಾಮು ಇಲ್ಲದಿರುವ ಗ್ರಾಮ ಪಂಚಾಯತ್‌ಗಳು ದಿನಾಂಕ ನಿಗದಿಪಡಿಸಿ ನೇರವಾಗಿ ಗುಜರಿ ವ್ಯಾಪಾರಿಗಳಿಗೆ ನೀಡುವುದು.

**ಘನತ್ಯಾಜ್ಯ ಘಟಕ ಹೊಂದಿರದ ಮತ್ತು ಜಮೀನು ಇಲ್ಲದ ಗ್ರಾಮ ಪಂಚಾಯತ್‌ಗಳು ಕೈಗೊಳ್ಳಬೇಕಾದ ಕ್ರಮಗಳು**[25]

ಮೂಲದಿಂದಲೇ ಕಸ ವಿಂಗಡನೆ ಮಾಡುವುದನ್ನು ಕಡ್ಡಾಯಗೊಳಿಸುವುದು. ಪ್ರತಿಯೊಂದು ಅಂಗಡಿ, ಶಾಲೆ ಹಾಗೂ ಅಂಗನವಾಡಿಗಳಲ್ಲಿ ಪೈಪ್ ಕಾಂಪೋಸ್ಟ್‌ನ್ನು ಅಳವಡಿಸುವುದು. ಮನೆ ಯಲ್ಲಿ ಉತ್ಪತ್ತಿಯಾದ ಹಸಿ ಕಸವನ್ನು ಪೈಪ್ ಕಾಂಪೋಸ್ಟ್ ಅಥವಾ ತಿಪ್ಪೆಗುಂಡಿ ಮೂಲಕ ವಿಲೇವಾರಿ ಮಾಡಿ ಸಾವಯವ ಗೊಬ್ಬರ ಪಡೆಯುವುದು. 15 ದಿನಕ್ಕೊಮ್ಮೆ ಅಥವಾ ತಿಂಗಳಿಗೊಮ್ಮೆ ಒಣಕಸವನ್ನು ಮನೆ ಹಾಗೂ ಅಂಗಡಿಗಳಿಂದ ಸಂಗ್ರಹಿಸುವುದು. ಒಣಕಸ ಸ್ವಚ್ಛವಾಗಿದ್ದು ಶುಷ್ಕ ವಾಗಿರುವಂತೆ ಕ್ರಮ ಕೈಗೊಳ್ಳುವುದು ಮತ್ತು ಇದನ್ನು ಪಂಚಾಯತ್ ಮಟ್ಟದಲ್ಲಿ ಶೇಖರಿಸಿ ಇಡಲು ಶೆಡ್ ವ್ಯವಸ್ಥೆ ಮಾಡುವುದು ಮತ್ತು ನೇರವಾಗಿ ಸ್ಥಳೀಯ ಗುಜುರಿ ವ್ಯಾಪಾರಿಗೆ ಸಂಗ್ರಹಿಸಿದ ಒಣಕಸ, ಪ್ಲಾಸ್ಟಿಕ್‌ನ್ನು ನೀಡುವುದು.

## 6.5. ಅಧ್ಯಯನ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣಾ ನೀತಿ/ನಿಯಮ/ಕಾಯಿದೆಗಳಿಗೆ ಸಂಬಂಧಿಸಿದ ವಿಶ್ಲೇಷಣೆ

ತ್ಯಾಜ್ಯ ನಿರ್ವಹಣೆಯು ಮೂಲದಲ್ಲಿ ತ್ಯಾಜ್ಯ ಸಂಗ್ರಹ, ವಿಭಜನೆ. ಸಾಗಾಟ ಮತ್ತು ಬೇರೆ ಬೇರೆ ವಿಲೇವಾರಿ ವಿಧಾನಗಳನ್ನು ಒಳಗೊಂಡಿದ್ದು ನಿರ್ವಹಣೆಯ ಯಶಸ್ಸು ಅದಕ್ಕೆ ಸಂಬಂಧಿಸಿದ ನೀತಿ/ನಿಯಮ/ಕಾಯಿದೆಗಳ ಅನುಷ್ಠಾನ ಮತ್ತು ಅವುಗಳ ಬಗ್ಗೆ ಜನರಿಗಿರುವ ತಿಳುವಳಿಕೆಯನ್ನು ಅವಲಂಬಿಸಿದೆ. ನಿಯಮಾವಳಿಗಳ ಅನುಷ್ಠಾನ ಸಮರ್ಪಕವಾಗಬೇಕಾದರೆ ಜನರಿಗೆ ನಿಯಮಾವಳಿಗಳ ಬಗ್ಗೆ ತಿಳುವಳಿಕೆ ಅಗತ್ಯ. ಮುಂದಿನ ಭಾಗದಲ್ಲಿ ನೀತಿ/ನಿಯಮ/ ಕಾಯಿದೆಗಳಿಗೆ ಸಂಬಂಧಿಸಿದ ವಿವಿಧ ಅಂಶಗಳ ಬಗ್ಗೆ ಜನರಿಗಿರುವ ತಿಳುವಳಿಕೆಯ ಕುರಿತಾಗಿ ವಿಶ್ಲೇಷಣೆ ಮಾಡಲಾಗಿದೆ.

ಕೋಷ್ಟಕ 6.1ರಲ್ಲಿ ತ್ಯಾಜ್ಯ ನಿರ್ವಹಣೆಯ ಅರಿವು ಹೊಂದಿರುವ ಮತ್ತು ಹೊಂದಿಲ್ಲದವರ ವಿವರಗಳನ್ನು ವಯಸ್ಸಿಗೆ ಅನುಗುಣವಾಗಿ ವಿಶ್ಲೇಷಿಸಲಾಗಿದೆ.

**ಕೋಷ್ಟಕ: 6.1**

**ಒಟ್ಟು ಮಾಹಿತಿದಾರರ ಪೈಕಿ ವಯಸ್ಸಿಗನುಗುಣವಾಗಿ ನಿಯಮಾವಳಿಗಳ ಅರಿವು ಹೊಂದಿರುವವರು ಮತ್ತು ಹೊಂದಿಲ್ಲದವರ ವಿವರ**

| ವಯಸ್ಸು | ನಿಯಮಾವಳಿಗಳ ಅರಿವಿದೆ | ಶೇಕಡ | ನಿಯಮಾವಳಿಗಳ ಅರಿವಿಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| **30ಕ್ಕಿಂತ ಕಡಿಮೆ** | 28 | 7 | 28 | 7 | 56 | 14 |
| **30–50** | 96 | 23 | 125 | 30 | 221 | 54 |
| **50ಕ್ಕಿಂತ ಮೇಲ್ಪಟ್ಟು** | 55 | 13 | 78 | 19 | 133 | 32 |
| **ಒಟ್ಟು** | **179** | **43** | **231** | **57** | **410** | **100** |

ವಯಸ್ಸಿಗೆ ಅನುಗುಣವಾಗಿ ವಿಶ್ಲೇಷಿಸಿದಾಗ 30ಕ್ಕಿಂತ ಕಡಿಮೆ ವಯಸ್ಸಿನವರಲ್ಲಿ ಶೇಕಡ 50ರಷ್ಟು ಮಂದಿಗೆ ನಿಯಮಾವಳಿಗಳ ಅರಿವು ಇಲ್ಲದಿರುವುದು ಕಂಡು ಬಂದಿದೆ. ಆದರೆ ಈ ಪ್ರಮಾಣ 30–50 ವಯಸ್ಸಿನವರಲ್ಲಿ ಶೇಕಡ 43 ಇದ್ದು, 50ಕ್ಕಿಂತ ಮೇಲ್ಪಟ್ಟವರಲ್ಲಿ 41 ಶೇಕಡ ಮಾತ್ರ ಇದೆ. ಅಂಕಿ–ಅಂಶಗಳ ಪ್ರಕಾರ ಒಟ್ಟು ಸರಾಸರಿ ಶೇಕಡ 43 ಜನರು ನಿಯಮಾವಳಿಗಳ ಮೂಲಭೂತ ಅಂಶಗಳ ಬಗ್ಗೆ ತಿಳಿವಳಿಕೆ ಹೊಂದಿದ್ದಾರೆ.

ಅಧ್ಯಯನದ ಪ್ರಕಾರ 30ಕ್ಕಿಂತ ಕಡಿಮೆ ವಯಸ್ಸಿನವರಲ್ಲಿ ನಿಯಮಾವಳಿಗಳ ಬಗ್ಗೆ ಹೆಚ್ಚು ಅರಿವಿರುವುದು ಕಂಡು ಬಂದಿದೆ. ಸಾಕ್ಷರತಾ ಪ್ರಮಾಣ ಹೆಚ್ಚಾಗಿರುವುದು ಹಾಗೂ ಕೇಂದ್ರ,

ರಾಜ್ಯ ಮತ್ತು ಸ್ಥಳೀಯ ಸರಕಾರಗಳು ಕಳೆದ ನಾಲ್ಕೈದು ವರ್ಷಗಳಿಂದ ಹೆಚ್ಚಿನ ಪ್ರಚಾರ ಕೈಗೊಂಡಿರುವುದು ಇದಕ್ಕೆ ಕಾರಣವಾಗಿದೆ ಎನ್ನುವ ಅಭಿಪ್ರಾಯ ಜನರಿಂದ ವ್ಯಕ್ತವಾಗಿದೆ. ಸ್ಥಳೀಯ ಸಂಸ್ಥೆಗಳು ತಮ್ಮ ಕಛೇರಿ ಆವರಣಗಳಲ್ಲಿ ನಿಯಮಾವಳಿಗಳಿಗೆ ಸಂಬಂಧಿಸಿದ ಪ್ರಮುಖ ಅಂಶಗಳನ್ನು ಗೋಡೆ ಬರಹದ ಮೂಲಕ ಮಾಹಿತಿ ಒದಗಿಸಿರುವುದು ಇದಕ್ಕೆ ಪ್ರಮುಖ ಕಾರಣವಾಗಿರಬಹುದು ಎಂಬ ಅಭಿಪ್ರಾಯಕ್ಕೆ ಬರಲಾಗಿದೆ.

ತ್ಯಾಜ್ಯ ನಿರ್ವಹಣೆಯಲ್ಲಿ ಕುಟುಂಬದ ಸಹಕಾರ ಅತೀ ಅಗತ್ಯ. ನಿಯಮಾವಳಿಗಳ ಬಗ್ಗೆ ಮನೆ ಸದಸ್ಯರಿಗೆ ಅರಿವಿರಬೇಕಾದುದು ನಿರ್ವಹಣೆ ದೃಷ್ಟಿಯಿಂದ ಅನುಕೂಲ. ಕೋಷ್ಟಕ 6.2ರಲ್ಲಿ ಪುರುಷರಿಗೆ ಮತ್ತು ಮಹಿಳೆಯರಿಗೆ ನಿಯಮಾವಳಿಗಳ ಕುರಿತಾಗಿರುವ ಅರಿವಿನ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ.

**ಕೋಷ್ಟಕ: 6.2**

**ಒಟ್ಟು ಮಾಹಿತಿದಾರರಲ್ಲಿ ನಿಯಮಾವಳಿಗಳ ಅರಿವನ್ನು ಹೊಂದಿರುವ ಮತ್ತು ಹೊಂದಿಲ್ಲದ ಪುರುಷರು ಹಾಗೂ ಮಹಿಳೆಯರ ವಿವರ**

| ಲಿಂಗ | ಹೌದು | ಶೇಕಡ | ಇಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| **ಪುರುಷ** | 133 | 32 | 166 | 40 | 299 | 73 |
| **ಮಹಿಳೆ** | 46 | 11 | 65 | 17 | 111 | 27 |
| **ಒಟ್ಟು** | **179** | **43** | **231** | **57** | **410** | **100** |

ಮಹಿಳೆಯರಿಗಿಂತ ಪುರುಷರಿಗೆ ತ್ಯಾಜ್ಯ ನಿರ್ವಹಣೆಯ ನಿಯಮಾವಳಿಗಳ ಬಗ್ಗೆ ಹೆಚ್ಚು ಅರಿವಿರುವುದು ಕಂಡು ಬಂದಿದೆ. ಒಟ್ಟು 410 ಮಾದರಿಗಳಲ್ಲಿ 179 ಅಂದರೆ 43 ಶೇಕಡ ಜನರಿಗೆ ನಿಯಮಾವಳಿಗಳ ಅರಿವಿದ್ದು ಉಳಿದ 231 ಮಂದಿಗೆ ಅಂದರೆ ಶೇಕಡ 57ರಷ್ಟು ಜನರಿಗೆ ಅರಿವಿಲ್ಲದಿರುವುದು ಕಂಡು ಬಂದಿದೆ. ಶೇಕಡ 44 ಮಂದಿ ಪುರುಷರು ಮತ್ತು ಶೇಕಡ 41 ಮಂದಿ ಮಹಿಳೆಯರು ನಿಯಮಾವಳಿಗಳ ಬಗ್ಗೆ ಮಾಹಿತಿಯನ್ನು ಹೊಂದಿದ್ದಾರೆ.

ತ್ಯಾಜ್ಯ ನಿರ್ವಹಣೆಯು ಸಮರ್ಪಕವಾಗಿ ನಡೆಯದಿರುವುದಕ್ಕೆ ಹಲವಾರು ಅಂಶಗಳು ಕಾರಣವಾಗಿವೆ. ಶೇಕಡ 50ಕ್ಕಿಂತಲೂ ಕಡಿಮೆ ಜನರು ನಿಯಮಾವಳಿಗಳ ಬಗ್ಗೆ ಅರಿವನ್ನು ಹೊಂದಿರುವುದು ಪ್ರಮುಖ ಕಾರಣಗಳಲ್ಲಿ ಒಂದಾಗಿದೆ ಎಂದು ಈ ಮೂಲಕ ಕಂಡುಬರುತ್ತದೆ.

ಕೋಷ್ಟಕ 6.1ರಲ್ಲಿ ವಿವಿಧ ವಯೋಮಿತಿಯವರಿಗೆ ನಿಯಮಾವಳಿಗಳ ಬಗ್ಗೆ ಹೊಂದಿರುವ ಅರಿವಿನ ಬಗ್ಗೆ ಮಾಹಿತಿ ನೀಡಲಾಗಿದೆ. ಕೋಷ್ಟಕ 6.2ರಲ್ಲಿ ನಿಯಮಾವಳಿಗಳ ಅರಿವಿರುವ

ಪುರುಷರು ಮತ್ತು ಮಹಿಳೆಯರ ಪ್ರಮಾಣವನ್ನು ವಿಶ್ಲೇಷಿಸಲಾಗಿದೆ.ಕೋಷ್ಟಕ 6.3ರಲ್ಲಿ ನಿಯಮಾವಳಿಗಳ ಅರಿವನ್ನು ಹೊಂದಿರುವ ಬಗ್ಗೆ ವಿವಿಧ ವರ್ಗಗಳ ಕುರಿತು ವಿಶ್ಲೇಷಿಸಲಾಗಿದೆ.

**ಕೋಷ್ಟಕ: 6.3**

**ಒಟ್ಟು ಮಾಹಿತಿದಾರರಲ್ಲಿ ನಿಯಮಾವಳಿಗಳ ಅರಿವು ಹೊಂದಿರುವ ಮತ್ತು ಹೊಂದಿಲ್ಲದಿರುವ ವಿವಿಧ ವರ್ಗಗಳು**

| ವರ್ಗ | ಹೌದು | ಶೇಕಡ | ಇಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಸಾಮಾನ್ಯ | 121 | 30 | 104 | 26 | 225 | 55 |
| ಹಿಂದುಳಿದ | 37 | 9 | 70 | 17 | 107 | 26 |
| ಪರಿಶಿಷ್ಟ ಜಾತಿ | 12 | 3 | 31 | 8 | 43 | 10 |
| ಪರಿಶಿಷ್ಟ ಪಂಗಡ | 9 | 2 | 26 | 7 | 35 | 9 |
| ಒಟ್ಟು | **179** | **43** | **231** | **57** | **410** | **100** |

ಕ್ಷೇತ್ರ ಕಾರ್ಯದ ಪ್ರಕಾರ ಸಾಮಾನ್ಯ ವರ್ಗದ 225 ಪ್ರತಿಕ್ರಿಯೆದಾರರಲ್ಲಿ 121 ಜನರಿಗೆ ಅಂದರೆ 54 ಶೇಕಡ ಜನರು ನಿಯಮಾವಳಿಗಳ ಅರಿವಿದೆ ಎಂದು ಪ್ರತಿಕ್ರಿಯಿಸಿದ್ದಾರೆ. ಹಿಂದುಳಿದ ವರ್ಗದ 107 ಪ್ರತಿಕ್ರಿಯೆದಾರರಲ್ಲಿ ಕೇವಲ 35 ಶೇಕಡ ಜನ ಅರಿವಿದೆ' ಎಂದಿದ್ದಾರೆ. ಹಾಗೆಯೇ ಪರಿಶಿಷ್ಟ ಜಾತಿಯ 28 ಶೇಕಡ ಮತ್ತು ಪರಿಶಿಷ್ಟ ಪಂಗಡದ 25 ಶೇಕಡ ಜನರು ಮಾತ್ರ ನಿಯಮಾವಳಿಗಳ ಬಗ್ಗೆ ಪ್ರಾಥಮಿಕ ಮಾಹಿತಿಯನ್ನು ಹೊಂದಿದ್ದಾರೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬಹುಪಾಲು ಜನರಿಗೆ ನಿಯಮಾವಳಿಗಳ ಬಗ್ಗೆ ಮಾಹಿತಿ ಇಲ್ಲ. ಸರಾಸರಿ ಶೇಕಡ 30 ರಷ್ಟು ಜನರು ಮಾತ್ರ ತಿಳಿವಳಿಕೆ ಹೊಂದಿರುತ್ತಾರೆ. ತ್ಯಾಜ್ಯ ನಿರ್ವಹಣೆಯಲ್ಲಿ ನಾಗರಿಕರ ಸಾಮಾಜಿಕ ಅಂಶಗಳು ಪ್ರಭಾವ ಬೀರಿರುವುದು ಈ ಮೂಲಕ ಕಂಡು ಬಂದಿದೆ.

ಶೈಕ್ಷಣಿಕ ಮಟ್ಟ ಮತ್ತು ತ್ಯಾಜ್ಯ ನಿರ್ವಹಣೆಗಿರುವ ಸಂಬಂಧವನ್ನು ಗುರುತಿಸುವ ದೃಷ್ಟಿಯಿಂದ ಶೈಕ್ಷಣಿಕ ಮಟ್ಟ ಮತ್ತು ನಿಯಮಾವಳಿಗಳ ಅರಿವಿನ ಪ್ರಮಾಣವನ್ನು ಕೋಷ್ಟಕ 6.4ರಲ್ಲಿ ವಿಶ್ಲೇಷಿಸಲಾಗಿದೆ.

ಕೋಷ್ಟಕ: 6.4

ಒಟ್ಟು ಮಾಹಿತಿದಾರರಲ್ಲಿ ವಿವಿಧ ಶೈಕ್ಷಣಿಕ ಮಟ್ಟದ ಜನರಲ್ಲಿ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ನಿಯಮಾವಳಿಗಳ ಅರಿವು ಹೊಂದಿರುವವರು ಮತ್ತು ಹೊಂದಿಲ್ಲದಿರುವವರು

| ಶಿಕ್ಷಣ | ಹೌದು | ಶೇಕಡ | ಇಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಪ್ರಾಥಮಿಕ | 24 | 6 | 43 | 10 | 67 | 16 |
| ಪ್ರೌಢ ಶಾಲೆ | 45 | 11 | 84 | 20 | 129 | 31 |
| ಪದವಿಪೂರ್ವ | 42 | 10 | 61 | 15 | 103 | 25 |
| ಪದವಿ | 45 | 11 | 33 | 8 | 78 | 19 |
| ಸ್ನಾತಕೋತ್ತರ | 21 | 5 | 12 | 3 | 33 | 8 |
| ಒಟ್ಟು | **177** | **43** | **233** | **57** | **410** | **100** |

ಶೈಕ್ಷಣಿಕ ಮಟ್ಟವನ್ನು ಪ್ರಾಥಮಿಕ, ಪ್ರೌಢಶಾಲೆ, ಪದವಿಪೂರ್ವ, ಪದವಿ ಹಾಗೂ ಸ್ನಾತಕೋತ್ತರ ಎಂಬುದಾಗಿ ವಿಭಾಗಿಸಲಾಗಿದೆ.

ಪ್ರಾಥಮಿಕ ಶಿಕ್ಷಣವನ್ನು ಹೊಂದಿರುವ ಒಟ್ಟು 67 ಮಾದರಿಗಳಲ್ಲಿ 24 ಅಂದರೆ ಶೇಕಡ 36 ಜನರು ಅರಿವನ್ನು ಹೊಂದಿದ್ದಾರೆ. ಪ್ರೌಢಶಿಕ್ಷಣ ಪಡೆದಿರುವ 129 ಮಾದರಿಗಳಲ್ಲಿ 45 ಅಂದರೆ 35 ಶೇಕಡ ಜನರು, ಪದವಿಪೂರ್ವ ಶಿಕ್ಷಣ ಪಡೆದ 103 ಮಾದರಿಗಳಲ್ಲಿ 42 ಅಂದರೆ ಶೇಕಡ 40 ಜನರು, ಪದವಿ ಶಿಕ್ಷಣ ಹೊಂದಿರುವ 78 ಮಾದರಿಗಳಲ್ಲಿ 45 ಅಂದರೆ ಶೇಕಡ 58 ಜನರು ಮತ್ತು ಸ್ನಾತಕೋತ್ತರ ಶಿಕ್ಷಣವನ್ನು ಪಡೆದ 33 ಮಾದರಿಗಳಲ್ಲಿ 21 ಅಂದರೆ 64 ಶೇಕಡ ಜನರು ನಿಯಮಾವಳಿಗಳ ಬಗ್ಗೆ ಪ್ರಾಥಮಿಕ ಜ್ಞಾನವನ್ನು ಹೊಂದಿದ್ದಾರೆ.

ಅಂಕಿ–ಅಂಶಗಳ ಆಧಾರದಲ್ಲಿ ವಿಶ್ಲೇಷಿಸಿದಾಗ ಪದವಿ ಹಾಗೂ ಸ್ನಾತಕೋತ್ತರ ಶಿಕ್ಷಣ ಪಡೆದವರಲ್ಲಿ ನಿಯಮಾವಳಿಗಳ ಬಗ್ಗೆ ಹೆಚ್ಚಿನವರಿಗೆ ಅರಿವಿರುವುದು ಕಂಡುಬರುತ್ತದೆ. ಪ್ರಾಥಮಿಕ, ಪ್ರೌಢ ಮತ್ತು ಪದವಿಪೂರ್ವ ಶಿಕ್ಷಣ ಪಡೆದವರ ಪ್ರತಿಕ್ರಿಯೆದಾರರಲ್ಲಿ ನಿಯಮಾವಳಿಗಳ ಅರಿವಿರುವವರ ಪ್ರಮಾಣ ಕಡಿಮೆ ಇದೆ.

ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆ ಸ್ವಚ್ಛತೆಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿಲ್ಲದಿರುವುದು ಅಂಕಿ–ಅಂಶಗಳ ವಿಶ್ಲೇಷಣೆಯಲ್ಲಿ ಕಂಡುಬಂದಿದೆ. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದ ಪಾಠ

ಮತ್ತು ಪಠ್ಯೇತರ ಚಟುವಟಿಕೆಗಳಲ್ಲಿ ಪರಿಸರ ಶಿಕ್ಷಣ, ಸ್ವಚ್ಛತೆ, ತ್ಯಾಜ್ಯ ನಿರ್ವಹಣೆ, ಜಲ ಸಂರಕ್ಷಣೆ ಮುಂತಾದ ವಿಷಯಗಳನ್ನು ಆದ್ಯತೆ ಮೇರೆಗೆ ಅಳವಡಿಸಿಕೊಳ್ಳಬೇಕಾಗಿದೆ. ವಿದ್ಯಾರ್ಥಿಗಳಿಗೆ ಅರಿವು ಮೂಡಿಸುವ ಕಾರ್ಯ ಶೈಕ್ಷಣಿಕ ಚಟುವಟಿಕೆಯ ಭಾಗವಾಗಿದ್ದರೆ ಮಾತ್ರ ಇದು ಪರಿಣಾಮಕಾರಿಯಾದೀತು. ಎಲ್ಲಾ ಸಾರ್ವಜನಿಕ ಸಂಸ್ಥೆಗಳ ಗುಣಮಟ್ಟವನ್ನು ಅಳೆಯುವಾಗ ಸ್ವಚ್ಛತೆ ಮತ್ತು ಪರಿಸರ ಸಂರಕ್ಷಣೆಗೆ ಸಂಬಂಧಿಸಿದ ಮಾನದಂಡಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಬೇಕು.

ತ್ಯಾಜ್ಯ ನಿರ್ವಹಣೆಯ ನಿಯಮಗಳ ಅರಿವಿನ ಪ್ರಮಾಣವನ್ನು ವಿವಿಧ ಧರ್ಮಗಳ ನೆಲೆಯಲ್ಲಿ ವಿಶ್ಲೇಷಿಸಿದಾಗ ದೊರೆತ ಮಾಹಿತಿಯನ್ನು ಕೋಷ್ಟಕ 6.5ರಲ್ಲಿ ನೀಡಲಾಗಿದೆ.

**ಕೋಷ್ಟಕ: 6.5**

**ಒಟ್ಟು ಮಾಹಿತಿದಾರರಲ್ಲಿ ವಿವಿಧ ಧರ್ಮಗಳ ಜನರಲ್ಲಿ ನಿಯಮಾವಳಿಗಳ ಅರಿವಿರುವವರು ಮತ್ತು ಇಲ್ಲದವರು**

| ಧರ್ಮ | ಹೌದು | ಶೇಕಡ | ಇಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಹಿಂದು | 142 | 35 | 180 | 44 | 322 | 79 |
| ಮುಸ್ಲಿಂ | 9 | 2 | 30 | 7 | 39 | 10 |
| ಕ್ರೈಸ್ತ | 25 | 6 | 22 | 5 | 47 | 11 |
| ಇತರ(ಜೈನ) | ಇಲ್ಲ | 0 | 2 | 0 | 02 | 0 |
| ಒಟ್ಟು | **176** | **43** | **234** | **57** | **410** | **100** |

ಒಟ್ಟು 322 ಹಿಂದು ಧರ್ಮಕ್ಕೆ ಸೇರಿದ ಪ್ರತಿಕ್ರಿಯೆದಾರರಲ್ಲಿ ಶೇಕಡ 35 ಅಂದರೆ 142 ಜನರು ಅರಿವಿದೆ ಎಂದಿದ್ದಾರೆ. ಮುಸ್ಲಿಂ ಪ್ರತಿಕ್ರಿಯೆದಾರರಲ್ಲಿ 23 ಶೇಕಡ ಮತ್ತು ಕ್ರೈಸ್ತರಲ್ಲಿ 53 ಶೇಕಡ ಜನರು ನಿಯಮಾವಳಿಗಳ ಅರಿವಿದೆ ಎಂದು ಪ್ರತಿಕ್ರಿಯಿಸಿದ್ದಾರೆ. ಕ್ರೈಸ್ತರಲ್ಲಿ ನಿಯಮಾವಳಿಗಳ ಬಗ್ಗೆ ಅರಿವಿರುವವರು ಅಧಿಕ ಸಂಖ್ಯೆಯಲ್ಲಿದ್ದರೆ, ಮುಸ್ಲಿಮರಲ್ಲಿ ಅತ್ಯಂತ ಕಡಿಮೆ ಇದೆ. ಇದು ಪರಿಶಿಷ್ಟ ಜಾತಿ (ಶೇ.28) ಮತ್ತು ಪರಿಶಿಷ್ಟ ಪಂಗಡ (ಶೇ.25)ಕ್ಕಿಂತಲೂ ಕಡಿಮೆ ಪ್ರಮಾಣವನ್ನು ಹೊಂದಿದೆ.

ನಗರ ಮತ್ತು ನಗರ ಸ್ಥಳೀಯ ಸಂಸ್ಥೆಗಳ ಆಡಳಿತ ವ್ಯವಸ್ಥೆಗಳಲ್ಲಿ ಅನೇಕ ವ್ಯತ್ಯಾಸಗಳಿವೆ. ಹಾಗೆಯೇ ಜನರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳಲ್ಲಿ ಬಹಳಷ್ಟು ವ್ಯತ್ಯಾಸಗಳು ಕಂಡು ಬರುತ್ತವೆ. ಮೂಲಭೂತ ಸೌಕರ್ಯಗಳ ಕೊರತೆ ಗ್ರಾಮೀಣ ಭಾಗಗಳಲ್ಲಿ ಅಧಿಕ ಪ್ರಮಾಣದಲ್ಲಿದೆ. ಉದ್ಯೋಗ ಹಾಗೂ ಆದಾಯದ ನೆಲೆಯಲ್ಲಿಯೂ ಗ್ರಾಮೀಣ ಭಾಗ ನಗರಕ್ಕಿಂತ ಹಿಂದುಳಿದಿದೆ. ಶೈಕ್ಷಣಿಕ ಅಂಶಗಳನ್ನು ಗಮನಿಸಿದಾಗಲೂ ಸಾಕ್ಷರತಾ ಮಟ್ಟ ಮತ್ತು ಉನ್ನತ ಶಿಕ್ಷಣ ಪಡೆದವರ

ಪ್ರಮಾಣ ನಗರ ವ್ಯಾಪ್ತಿಯಲ್ಲಿ ಅಧಿಕವಿರುವುದು ಅಂಕಿ ಅಂಶಗಳಿಂದ ತಿಳಿದು ಬಂದಿದೆ.[26] ಕೋಷ್ಟಕ 6.6ರಲ್ಲಿ ತ್ಯಾಜ್ಯ ನಿರ್ವಹಣೆ ಬಗ್ಗೆ ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ವಾಸಿಸುವ ಜನರಿಗಿರುವ ಅರಿವಿನ ಕುರಿತು ವಿಶ್ಲೇಷಿಸಲಾಗಿದೆ.

**ಕೋಷ್ಟಕ: 6.6.**

**ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣೆಯ ನಿಯಮಾವಳಿಗಳ ಅರಿವನ್ನು ಹೊಂದಿರುವ ಒಟ್ಟು ಮಾಹಿತಿದಾರರ ಪ್ರಮಾಣ**

| | ಧರ್ಮ | ಹೌದು | ಶೇಕಡ | ಇಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|---|
| 1 | ಹೌದು | 70 | 35 | 107 | 51 | 177 | 43 |
| 2 | ಇಲ್ಲ | 130 | 65 | 103 | 49 | 233 | 57 |
| | ಒಟ್ಟು | **200** | **100** | **210** | **100** | **410** | **100** |

ಅಂಕಿ–ಅಂಶಗಳ ಪ್ರಕಾರ ಸರಾಸರಿ 43 ಶೇಕಡ ಜನರಿಗೆ ಮಾತ್ರ ಅರಿವಿದ್ದು ಅವರಲ್ಲಿ ಗ್ರಾಮೀಣ ಪ್ರದೇಶದ 35 ಶೇಕಡ ಮತ್ತು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ 51 ಶೇಕಡ ಜನರು ನಿಯಮಾವಳಿಗಳ ಅರಿವನ್ನು ಹೊಂದಿದ್ದಾರೆ.

ಕೃಷಿಕರು ಹೆಚ್ಚಾಗಿ ಗ್ರಾಮೀಣ ಪ್ರದೇಶಗಳಲ್ಲಿ ತಾವೇ ಸ್ವಂತ ನಿರ್ವಹಣಾ ವ್ಯವಸ್ಥೆಗಳನ್ನು ಮಾಡಿಕೊಂಡಿರುವ ಕಾರಣದಿಂದ ಸ್ಥಳೀಯ ಸಂಸ್ಥೆಗಳ ಅವಲಂಬನೆ ಕಡಿಮೆ ಇದೆ. ಗ್ರಾಮೀಣ ಪ್ರದೇಶದ ಜನರಿಗೆ ಸ್ಥಳೀಯ ಸಂಸ್ಥೆಗಳು ಮಾಹಿತಿಗಳನ್ನು ಕ್ಲಪ್ತ ಸಮಯಕ್ಕೆ ಸೂಕ್ತ ರೀತಿಯಲ್ಲಿ ತಲುಪಿಸಲು ವಿಫಲವಾಗಿವೆ. ಹೆಚ್ಚಿನ ಗ್ರಾಮೀಣ ಸಂಸ್ಥೆಗಳ ವ್ಯಾಪ್ತಿಗಳಲ್ಲಿ ತ್ಯಾಜ್ಯ ಸಂಗ್ರಹಣಾ ಘಟಕಗಳಿಲ್ಲದಿರುವುದು ಹಾಗೂ ಪ್ರತಿನಿತ್ಯ ತ್ಯಾಜ್ಯ ಸಂಗ್ರಹ ವ್ಯವಸ್ಥೆ ಇಲ್ಲದಿರುವುದರಿಂದ ಜನರಿಗೆ ಅರಿವು ಕಡಿಮೆಯಾಗಿದೆ ಎಂದು ಅಭಿಪ್ರಾಯಪಡಬಹುದು. ಶೈಕ್ಷಣಿಕ ಹಿನ್ನಡೆ, ಸಾರಿಗೆ ಸಂಪರ್ಕದ ಕೊರತೆ ಹಾಗೂ ಮಾಧ್ಯಮದ ಬಳಕೆ ಕಡಿಮೆ ಇರುವುದು ನಿಯಮಾವಳಿಗಳ ಬಗ್ಗೆ ತಿಳಿವಳಿಕೆ ಮೂಡಿಸಲು ಅಡ್ಡಿಯಾಗಿರುವ ಅಂಶಗಳೆಂದು ತಿಳಿದು ಬಂದಿದೆ.

ಗ್ರಾಮೀಣ ಮತ್ತು ನಗರದ ಪ್ರತಿಕ್ರಿಯೆದಾರರಲ್ಲಿ ತ್ಯಾಜ್ಯ ನಿರ್ವಹಣೆಯ ನಿಯಮಾವಳಿಗಳ ಕುರಿತಾಗಿ ಹೊಂದಿರುವ ಅರಿವಿನ ಬಗ್ಗೆ 'ಲಿಕರ್ಟ್ ಸ್ಕೇಲ್' ಮಾನದಂಡದಲ್ಲಿ ವಿಶ್ಲೇಷಿಸಿದಾಗ ದೊರೆತ ಮಾಹಿತಿಯನ್ನು ಕೋಷ್ಟಕ 6.7ರಲ್ಲಿ ನೀಡಲಾಗಿದೆ.

### ಕೋಷ್ಟಕ 6.7

### ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ಕಾನೂನು/ನಿಯಮಾವಳಿಗಳ ಬಗ್ಗೆ ಗ್ರಾಮೀಣ ಮತ್ತು ನಗರದ ಒಟ್ಟು ಮಾಹಿತಿದಾರರ ಪ್ರತಿಕ್ರಿಯೆ

| | ಪ್ರತಿಕ್ರಿಯೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಸರಾಸರಿ |
|---|---|---|---|---|---|---|---|
| 1 | ದೃಢವಾಗಿ ಸಮ್ಮತಿಸುತ್ತೇನೆ | 10 | 5 | 6 | 3 | 16 | 4 |
| 2 | ಸಮ್ಮತಿಸುತ್ತೇನೆ | 36 | 18 | 38 | 18 | 74 | 18 |
| 3 | ಏನೂ ಹೇಳಲಾರೆ | 26 | 13 | 57 | 27 | 83 | 20 |
| 4 | ಸಮ್ಮತಿಸುವುದಿಲ್ಲ | 74 | 37 | 65 | 31 | 139 | 34 |
| 5 | ದೃಢವಾಗಿ ಸಮ್ಮತಿಸುವುದಿಲ್ಲ | 54 | 27 | 44 | 21 | 98 | 24 |
| | ಒಟ್ಟು | **200** | **100** | **210** | **100** | **410** | **100** |

ಗ್ರಾಮೀಣ ವ್ಯಾಪ್ತಿಯ ಕ್ಷೇತ್ರಕಾರ್ಯದ ಮಾಹಿತಿ ಪ್ರಕಾರ ಕೇವಲ 5 ಶೇಕಡ ಜನರು ಮಾತ್ರ 'ಜನರಿಗೆ ನಿಯಮಾವಳಿಗಳ ಅರಿವಿರಬಹುದು' ಎಂದು ಧೃಢವಾಗಿ ಸಮ್ಮತಿಸಿದ್ದಾರೆ. ನಗರವಾಸಿಗಳಲ್ಲಿ ಕೇವಲ 3 ಶೇಕಡ ಜನ ಧೃಢವಾಗಿ ಸಮ್ಮತಿಸಿದ್ದಾರೆ. ಅಂದರೆ ಸರಾಸರಿ 4 ಶೇಕಡ ಜನ ಮಾತ್ರ ಧೃಢವಾಗಿ ಸಮ್ಮತಿಸಿದ್ದಾರೆ. ಉಳಿದಂತೆ 18 ಶೇಕಡ ಗ್ರಾಮೀಣ ಹಾಗೂ 18 ಶೇಕಡ ನಗರ ಪ್ರತಿಕ್ರಿಯೆದಾರರು ನಿಯಮಾವಳಿಗಳ ಬಗ್ಗೆ ಅರಿವಿದೆ ಎಂದು ಸಮ್ಮತಿಸಿದ್ದಾರೆ. ಒಟ್ಟು 410ರಲ್ಲಿ 90 ಜನ ಅಂದರೆ 22 ಶೇಕಡ ಜನ ನಿಯಮಾವಳಿಗಳ ಬಗ್ಗೆ ಜನರಿಗೆ ಅರಿವಿದೆ ಎಂದು ಅಭಿಪ್ರಾಯಪಟ್ಟರೆ 78 ಶೇಕಡ ಜನ ಅರಿವಿಲ್ಲ ಎಂಬ ಅಭಿಪ್ರಾಯ ನೀಡಿದ್ದಾರೆ.

ವಿವಿಧ ಸಾಮಾಜಿಕ ಹಾಗೂ ಆರ್ಥಿಕ ದೃಷ್ಟಿಕೋನಗಳಿಂದ ವಿಶ್ಲೇಷಿಸಿದಾಗ ಜನಸಾಮಾನ್ಯರಿಗೆ ನಿಯಮಾವಳಿಗಳ ಬಗ್ಗೆ ಹೆಚ್ಚಿನ ಅರಿವಿಲ್ಲದಿರುವುದು ಕಂಡುಬಂದಿದೆ. ಸ್ಥಳೀಯ ಸಂಸ್ಥೆಗಳು ಮತ್ತು ಸರ್ಕಾರ ವಿವಿಧ ಮಾಧ್ಯಮಗಳ ಮೂಲಕಹಾಗೂ ಜನಜಾಗೃತಿ ಕಾರ್ಯಕ್ರಮಗಳ ಮೂಲಕ ತಿಳುವಳಿಕೆ ನೀಡಿದ್ದರೂ, ಅನುಷ್ಠಾನದ ಹಂತದಲ್ಲಿ ವಿಫಲವಾಗಿರುವುದು ಕಂಡುಬರುತ್ತದೆ.

ಈಗಾಗಲೇ ಜಾರಿಯಲ್ಲಿರುವ ನಿಯಮಾವಳಿಗಳ ಬಗ್ಗೆ ಬಹುಪಾಲು ಜನರಿಗೆ ಅರಿವಿಲ್ಲ ದಿದ್ದರೂ, ಹಲವರು ಹೊಸ ಕಠಿಣ ಕಾನೂನು/ನಿಯಮಾವಳಿಗಳ ಅಗತ್ಯವಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಬಗ್ಗೆ ಕೋಷ್ಟಕ 6.8ರಲ್ಲಿ ಪ್ರತಿಕ್ರಿಯೆದಾರರ ಅಭಿಪ್ರಾಯ ನೀಡಲಾಗಿದೆ.

**ಕೋಷ್ಟಕ 6.8**

**ಹೊಸ ಕಠಿಣ ಕಾನೂನು/ನಿಯಮಾವಳಿಗಳ ಅಗತ್ಯತೆ ಬಗ್ಗೆ ದಕ್ಷಿಣ ಕನ್ನಡ ಜಿಲ್ಲಾ ಗ್ರಾಮೀಣ ಮತ್ತು ನಗರದ ಒಟ್ಟು ಪ್ರತಿಕ್ರಿಯೆದಾರರ ಅಭಿಪ್ರಾಯ**

| | ಪ್ರತಿಕ್ರಿಯೆ | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಸರಾಸರಿ |
|---|---|---|---|---|---|---|---|
| 1 | ದೃಢವಾಗಿ ಸಮ್ಮತಿಸುತ್ತೇನೆ | 24 | 12 | 50 | 24 | 74 | 18 |
| 2 | ಸಮ್ಮತಿಸುತ್ತೇನೆ | 130 | 65 | 122 | 58 | 252 | 61 |
| 3 | ಏನೂ ಹೇಳಲಾರೆ | 46 | 23 | 38 | 18 | 84 | 21 |
| 4 | ಸಮ್ಮತಿಸುವುದಿಲ್ಲ | 00 | 00 | 00 | 00 | 00 | 00 |
| 5 | ದೃಢವಾಗಿ ಸಮ್ಮತಿಸುವುದಿಲ್ಲ | 00 | 00 | 00 | 00 | 00 | 00 |
| | ಒಟ್ಟು | **200** | **100** | **210** | **100** | **410** | **100** |

ಹೊಸ ಕಠಿಣ ನಿಯಮಾವಳಿಗಳ ಅಗತ್ಯವಿದೆಯೆಂದು ಗ್ರಾಮೀಣ ಪ್ರತಿಕ್ರಿಯೆದಾರರಲ್ಲಿ ಶೇಕಡ 12ರಷ್ಟು ಮಂದಿ ಅಭಿಪ್ರಾಯ ಪಟ್ಟರೆ, ನಗರದ ಶೇಕಡ 24ರಷ್ಟು ಮಂದಿ ಹೊಸ ಕಾನೂನು ರೂಪಿಸಬೇಕೆಂದು ತಿಳಿಸಿದ್ದಾರೆ. ಒಟ್ಟು 326 ಅಂದರೆ 80 ಶೇಕಡ ಜನರು ಪ್ರಸ್ತುತ ಜಾರಿಯಲ್ಲಿರುವ ನಿಯಮಾವಳಿ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿದ್ದಾರೆ. ಆದರೆ ಜಾರಿಯಲ್ಲಿರುವ ಕಾನೂನುಗಳು ತೀರಾ ಅನುಪಯುಕ್ತ ಎಂಬ ನಿರ್ಧಾರಕ್ಕೆ ಯಾರೂ ಬಂದಿರುವುದಿಲ್ಲ. ಉಳಿದ 20 ಶೇಕಡ ಜನರು 'ಏನೂ ಹೇಳಲಾರೆ' ಎಂದಿದ್ದಾರೆ.

ಅಂಕಿ-ಅಂಶಗಳನ್ನು ವಿಶ್ಲೇಷಿಸಿದಾಗ ಜಾರಿಯಲ್ಲಿರುವ ನಿಯಮಾವಳಿಗಳಲ್ಲಿ ಹೆಚ್ಚಿನ ಲೋಪದೋಷಗಳು ಕಂಡುಬರುವುದಿಲ್ಲ. ಆದರೆ ಅನುಷ್ಠಾನದ ಕೊರತೆ ಬಗ್ಗೆ ಅಸಮಾಧಾನವಿದೆ. ಜಾರಿಯಲ್ಲಿರುವ ಕಾನೂನು/ನಿಯಮಗಳ ಸಮರ್ಪಕ ಅನುಷ್ಠಾನದ ಮೂಲಕ ಉತ್ತಮ ತ್ಯಾಜ್ಯ ನಿರ್ವಹಣೆ ಸಾಧ್ಯ ಎಂಬ ಅಭಿಪ್ರಾಯವನ್ನು ನೀಡಿದ್ದಾರೆ. ಕೋಷ್ಟಕ 6.9ರಲ್ಲಿ ಲಿಕರ್ಟ್ ಸ್ಕೇಲ್ ಮಾನದಂಡದಲ್ಲಿ ಜಾರಿಯಲ್ಲಿರುವ ಕಾನೂನು/ನಿಯಮಾವಳಿಗಳ ಸಮರ್ಪಕ ಅನುಷ್ಠಾನದ ಮೂಲಕ ಉತ್ತಮ ತ್ಯಾಜ್ಯ ನಿರ್ವಹಣೆ ಸಾಧ್ಯವೇ ಎಂಬುದನ್ನು ಗ್ರಾಮೀಣ ಮತ್ತು ನಗರ ವ್ಯಾಪ್ತಿಯಲ್ಲಿ ನಡೆಸಿದ ಕೌಟುಂಬಿಕ ಕ್ಷೇತ್ರಕಾರ್ಯದ ಆಧಾರದಲ್ಲಿ ವಿಶ್ಲೇಷಿಸಲಾಗಿದೆ.

ಕೋಷ್ಟಕ: 6.9

ಜಾರಿಯಲ್ಲಿರುವ ಕಾನೂನು/ನಿಯಮಾವಳಿಗಳ ಸಮರ್ಪಕ ಅನುಷ್ಠಾನದ ಮೂಲಕ ಉತ್ತಮ ತ್ಯಾಜ್ಯ ನಿರ್ವಹಣೆ ಸಾಧ್ಯವೇ ಎಂಬುವುದರ ಬಗ್ಗೆ ಒಟ್ಟು ಮಾಹಿತಿದಾರರ ಅಭಿಪ್ರಾಯ

| ಪ್ರತಿಕ್ರಿಯೆ | | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಸರಾಸರಿ |
|---|---|---|---|---|---|---|---|
| 1 | ದೃಢವಾಗಿ ಸಮ್ಮತಿಸುತ್ತೇನೆ | 30 | 15 | 50 | 24 | 80 | 19 |
| 2 | ಸಮ್ಮತಿಸುತ್ತೇನೆ | 104 | 52 | 80 | 38 | 184 | 45 |
| 3 | ಏನೂ ಹೇಳಲಾರೆ | 60 | 30 | 46 | 22 | 106 | 26 |
| 4 | ಸಮ್ಮತಿಸುವುದಿಲ್ಲ | 4 | 2 | 29 | 14 | 33 | 08 |
| 5 | ದೃಢವಾಗಿ ಸಮ್ಮತಿಸುವುದಿಲ್ಲ | 2 | 1 | 5 | 3 | 7 | 02 |
| ಒಟ್ಟು | | **200** | **100** | **210** | **100** | **410** | **100** |

ಕೇಂದ್ರ ಪರಿಸರ ಮತ್ತು ಅರಣ್ಯ ಸಚಿವಾಲಯವು ಜುಲೈ 28, 1989 ರಲ್ಲಿ ಅಪಾಯಕಾರಿ ತ್ಯಾಜ್ಯ (ನಿರ್ವಹಣೆ ಮತ್ತು ನಿಭಾಯಿಸುವುದು) ನಿಯಮವನ್ನು ಜಾರಿಗೆ ತಂದಿದೆ. ಗೃಹತ್ಯಾಜ್ಯಗಳಲ್ಲಿ ಅಪಾಯಕಾರಿ ತ್ಯಾಜ್ಯಗಳಾದ ಬಣ್ಣದ ಡಬ್ಬಿಗಳು, ಬ್ಯಾಟರಿಗಳು, ಕ್ರಿಮಿನಾಶಕ, ಕೀಟನಾಶಕಗಳ ಡಬ್ಬಿಗಳು ಇತ್ಯಾದಿಗಳನ್ನು ಸರಿಯಾದ ರೀತಿಯಲ್ಲಿ ನಿರ್ವಹಣೆ ಮಾಡದೆ ಹೋದರೆ ಮಾನವನ ಆರೋಗ್ಯ ಹಾಗೂ ಪರಿಸರಕ್ಕೆ ಹಾನಿಕಾರ (ಅರಬಿ ಯು., 2009).[27]

ಜನರಿಗೆ ಅಪಾಯಕಾರಿ ತ್ಯಾಜ್ಯಗಳಾದ ಕ್ರಿಮಿನಾಶಕ, ಕೀಟನಾಶಕಗಳು, ಅವುಗಳ ಉಪಯೋಗಿಸಿದ ಬಾಟಲಿಗಳು, ಬ್ಯಾಟರಿ, ರಾಸಾಯನಿಕಗಳು ಮುಂತಾದುವುಗಳ ನಿರ್ವಹಣೆ ಬಗ್ಗೆ ಅರಿವಿರಬೇಕಾಗಿರುವುದು ಅಗತ್ಯ. ವಯಸ್ಸಿಗೆ ಅನುಗುಣವಾಗಿ ಜನರಿಗೆ ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ಇರುವ ಅರಿವಿನ ಕುರಿತು ಕೋಷ್ಟಕ 6.10ರಲ್ಲಿ ಮಾಹಿತಿ ಪಡೆಯಲಾಗಿದೆ.

ಕೋಷ್ಟಕ: 6.10

ದ.ಕ.ಜಿಲ್ಲಾ ವ್ಯಾಪ್ತಿಯಲ್ಲಿ ವಯಸ್ಸಿಗನುಗುಣವಾಗಿ ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ಅರಿವು ಹೊಂದಿರುವ ಪ್ರತಿಕ್ರಿಯೆದಾರರು

| ವಯಸ್ಸು | ಅರಿವು ಇದೆ | ಶೇಕಡ | ಅರಿವು ಇಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| **30ಕ್ಕಿಂತ ಕಡಿಮೆ** | 28 | 7 | 28 | 7 | 56 | 14 |
| **30–50** | 107 | 26 | 114 | 28 | 221 | 54 |
| **50ಕ್ಕಿಂತ ಮೇಲ್ಪಟ್ಟು** | 51 | 12 | 82 | 20 | 133 | 32 |
| ಒಟ್ಟು | **186** | **45** | **224** | **55** | **410** | **100** |

ಮೇಲಿನ ಕೋಷ್ಟಕದ ಪ್ರಕಾರ ಕೇವಲ ಶೇಕಡ 45 ಜನರಿಗೆ ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ಅರಿವಿದ್ದು ಇದರಲ್ಲಿ 30ಕ್ಕಿಂತ ಕಡಿಮೆ ವಯಸ್ಸಿನವರಲ್ಲಿ ಶೇಕಡ 50ರಷ್ಟು ಅರಿವಿರುವುದು ಕಂಡು ಬಂದಿದೆ. ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ಅರಿವು ಮೂಡಿಸುವ ಕಾರ್ಯದಲ್ಲಿ ಸ್ಥಳೀಯ ಸೇವಾ ಸಂಸ್ಥೆಗಳೂ ಕೈಜೋಡಿಸಿರುವುದು ಕ್ಷೇತ್ರಕಾರ್ಯದಲ್ಲಿ ಕಂಡು ಬಂದಿದೆ. ಇದಲ್ಲದೆ ಸರಕಾರಗಳೂ ರೇಡಿಯೋ, ಟಿ.ವಿ, ದಿನಪತ್ರಿಕೆ ಮುಂತಾದ ಮಾಧ್ಯಮಗಳ ಮೂಲಕ ಅರಿವು ಮೂಡಿಸಿರುವುದು ತಿಳಿದು ಬಂದಿದೆ.

ಹಳೆಯಂಗಡಿ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ನಡೆಸಿದ ಕೌಟುಂಬಿಕ ಕ್ಷೇತ್ರಕಾರ್ಯದಲ್ಲಿ ಅಪಾಯಕಾರಿ ತ್ಯಾಜ್ಯಗಳ ಅರಿವಿಲ್ಲದೆ ಓರ್ವ ಮಹಿಳೆ ತೊಂದರೆಗೊಳಗಾದ ನಿದರ್ಶನ ಕಂಡು ಬಂದಿದೆ. ಅವರು ತಮ್ಮ ಮನೆಯನ್ನು ಸ್ವಚ್ಛಗೊಳಿಸುವಾಗ ಹಿಂದೆ ಯಾವುದೋ ಒಂದು ಸಂದರ್ಭದಲ್ಲಿ ತಮ್ಮ ಅತ್ತೆಗೆ ತಂದ ಮಾತ್ರೆಗಳ ಒಂದು ಬಾಟಲಿಯನ್ನು ಬೆಂಕಿಗೆ ಹಾಕಿ ಸುಟ್ಟಿದ್ದರು. ಉಪಯೋಗಿಸಿ ಉಳಿದ ಕೆಲವು ಮಾತ್ರೆಗಳು ಆ ಬಾಟಲಿಯಲ್ಲಿದ್ದು ಅದು ಬೆಂಕಿಯಲ್ಲಿ ಒಮ್ಮೇಲೆ ಸ್ಫೋಟಗೊಂಡು ಮಹಿಳೆ ಗಂಭೀರವಾಗಿ ಗಾಯಗೊಂಡಿದ್ದರು. ಅಪಾಯಕಾರಿ ತ್ಯಾಜ್ಯಗಳನ್ನು ಅರಿವಿಲ್ಲದೆ ಸುಡುವುದು, ನೀರಿಗೆ ಬಿಸಾಡುವುದು ಅಥವಾ ಮಣ್ಣಿನಲ್ಲಿ ಹೂಳುವುದರಿಂದ ಅನೇಕ ರೀತಿಯ ತೊಂದರೆಗಳುಂಟಾಗುತ್ತವೆ. ಇದರ ಬಗ್ಗೆ ಸೂಕ್ತ ಅರಿವು ಮೂಡಿಸುವ ಅಗತ್ಯವಿರುವುದು ಅಧ್ಯಯನದಲ್ಲಿ ಕಂಡು ಬಂದಿದೆ.

ಪುರುಷರಲ್ಲಿ ಮತ್ತು ಮಹಿಳೆಯರಲ್ಲಿ ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ತಿಳಿವಳಿಕೆ ಹೊಂದಿರುವ ಪ್ರಮಾಣವನ್ನು ಕೋಷ್ಟಕ 6.11ರಲ್ಲಿ ವಿಶ್ಲೇಷಿಸಲಾಗಿದೆ.

**ಕೋಷ್ಟಕ: 6.11**

**ದ.ಕ.ಜಿಲ್ಲಾ ವ್ಯಾಪ್ತಿಯಲ್ಲಿ ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ಅರಿವಿರುವ ಪುರುಷ ಮತ್ತು ಮಹಿಳಾ ಮಾಹಿತಿದಾರರರು**

| ಲಿಂಗ | ಹೌದು | ಶೇಕಡ | ಇಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಪುರುಷ | 139 | 34 | 160 | 39 | 299 | 73 |
| ಮಹಿಳೆ | 47 | 11 | 64 | 16 | 111 | 27 |
| ಒಟ್ಟು | **186** | **45** | **224** | **55** | **410** | **100** |

ಒಟ್ಟು 410 ಮಾದರಿಯಲ್ಲಿ 45 ಶೇಕಡ ಜನರಿಗೆ ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ಅರಿವಿದ್ದು ಅವರಲ್ಲಿ 42 ಶೇಕಡದಷ್ಟು ಮಹಿಳೆಯರು ಮತ್ತು 46 ಶೇಕಡದಷ್ಟು ಪುರುಷರು ತಿಳಿವಳಿಕೆಯನ್ನು ಹೊಂದಿದ್ದಾರೆ.

ಜನರು ನಿಯಮಾವಳಿಗಳ ಬಗ್ಗೆ ಸರಾಸರಿ ಶೇಕಡ 43ರಷ್ಟು ಅರಿವನ್ನು ಹೊಂದಿದ್ದರೆ, ಶೇಕಡ 45 ರಷ್ಟು ಮಂದಿ ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ತಿಳಿದಿದ್ದಾರೆ. ಅಪಾಯಕಾರಿ ತ್ಯಾಜ್ಯಗಳು ಮನೆಗಳಲ್ಲಿ ಬೇರೆಬೇರೆ ರೀತಿಯಲ್ಲಿ ಉತ್ಪಾದನೆಯಾಗುತ್ತಿದ್ದು ಅವುಗಳ ಅಪಾಯಗಳನ್ನು ಅನುಭವಗಳಿಂದ ಪಡೆದುಕೊಂಡಿರುವುದು ಕಂಡುಬಂದಿದೆ. ಆದರೂ ನಿಯಮಾವಳಿಗಳ ಜೊತೆಗೆ ಅಪಾಯಕಾರಿ ತ್ಯಾಜ್ಯಗಳ ಬಗ್ಗೆಯೂ ಸ್ಥಳೀಯ ಸರಕಾರಗಳು ಅರಿವು ಮೂಡಿಸಬೇಕಾಗಿದೆ.

ಹೆಸಾರ್ಡಸ್ ವೇಸ್ಟ್ (ಮೆನೇಜ್‌ಮೆಂಟ್ ಆಂಡ್ ಹ್ಯಾಂಡ್‌ಲಿಂಗ್) ಅಮೆಂಡ್ಮೆಂಟ್ ರೂಲ್ಸ್ 2003ರ ಪ್ರಕಾರ ಇ–ವೇಸ್ಟ್ ಎನ್ನುವುದು ಎಲ್ಲಾ ತರಹದ ನಿರುಪಯೋಗಿ ಇಲೆಕ್ಟ್ರಾನಿಕ್ ಉಪಕರಣಗಳು, ಅಂದರೆ ಕಂಪ್ಯೂಟರ್ಸ್, ದೂರದರ್ಶನ, ರೆಫ್ರಿಜರೇಟರ್, ಮೊಬೈಲ್, ಡಿಜಿಟಲ್ ಕ್ಯಾಮೆರ, ಸಿಡಿ ಇತ್ಯಾದಿ. ವಿಜ್ಞಾನ–ತಂತ್ರಜ್ಞಾನದ ಕ್ಷಿಪ್ರ ಬೆಳವಣಿಗೆಯಿಂದಾಗಿ ಇಲೆಕ್ಟ್ರಾನಿಕ್ ವಸ್ತುಗಳು ಬಹುಬೇಗ ಮೌಲ್ಯವನ್ನು ಕಳೆದುಕೊಳ್ಳುತ್ತವೆ. ಇದು ಇ–ತ್ಯಾಜ್ಯದ ಪ್ರಮಾಣ ಗಣನೀಯವಾಗಿ ಹೆಚ್ಚಾಗಲು ಕಾರಣವಾಗಿದೆ (ಹ್ಯಾನ್ಸ್ ಮತ್ತು ಜಯಶೀಲ, 2009).[28]

ಇಲೆಕ್ಟ್ರಾನಿಕ್ ತ್ಯಾಜ್ಯಗಳು ಅಪಾಯಕಾರಿ ತ್ಯಾಜ್ಯಗಳ ಪಟ್ಟಿಗೆ ಸೇರುತ್ತವೆ (ಹಣಕಾಸು ಸಚಿವಾಲಯ, 2009).[29] ಆದುದರಿಂದ ಜನಸಾಮಾನ್ಯರು ಇದರ ಬಗ್ಗೆ ಜಾಗ್ರತೆ ವಹಿಸಬೇಕಾಗುತ್ತದೆ. ಕೋಷ್ಟಕ 6.12ರಲ್ಲಿ ಅಪಾಯಕಾರಿ ಮತ್ತು ಇ–ತ್ಯಾಜ್ಯಗಳ ಬಗ್ಗೆ ತಿಳುವಳಿಕೆ ಹೊಂದಿರುವ/ಹೊಂದಿಲ್ಲದ ಗ್ರಾಮೀಣ ಮತ್ತು ನಗರವಾಸಿಗಳ ಬಗ್ಗೆ ಮಾಹಿತಿ ನೀಡಲಾಗಿದೆ.

**ಕೋಷ್ಟಕ: 6.12**

**ದ.ಕ.ಜಿಲ್ಲಾ ವ್ಯಾಪ್ತಿಯಲ್ಲಿ ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ಅರಿವಿರುವ ಗ್ರಾಮೀಣ ಮತ್ತು ನಗರ ಪ್ರತಿಕ್ರಿಯೆದಾರರು**

| ಅರಿವು | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| 1 ಇದೆ | 72 | 36 | 113 | 54 | 185 | 45 |
| 2 ಇಲ್ಲ | 128 | 64 | 97 | 46 | 225 | 55 |
| **ಒಟ್ಟು** | **200** | **100** | **210** | **100** | **410** | **100** |

**ಇಲೆಕ್ಟ್ರಾನಿಕ್ ತ್ಯಾಜ್ಯಗಳ ಬಗ್ಗೆ ಅರಿವಿರುವ ಗ್ರಾಮೀಣ ಮತ್ತು ನಗರ ಪ್ರತಿಕ್ರಿಯೆದಾರರು**

| ಅರಿವು | ಗ್ರಾಮೀಣ | ಶೇಕಡ | ನಗರ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| 1 ಇದೆ | 36 | 18 | 73 | 35 | 109 | 27 |
| 2 ಇಲ್ಲ | 164 | 82 | 137 | 65 | 301 | 73 |
| **ಒಟ್ಟು** | **200** | **110** | **210** | **100** | **410** | **100** |

ಅಪಾಯಕಾರಿ ತ್ಯಾಜ್ಯಗಳ ಅರಿವಿನ ಪ್ರಮಾಣವನ್ನು ವಿಶ್ಲೇಷಿಸಿದಾಗ ಗ್ರಾಮೀಣ ಪ್ರದೇಶದ ಒಟ್ಟು 200 ಪ್ರತಿಕ್ರಿಯೆದಾರರಲ್ಲಿ 72 ಅಂದರೆ 36 ಶೇಕಡ ಪ್ರತಿಕ್ರಿಯೆದಾರರಿಗೆ ಮಾತ್ರ ಅಪಾಯ ಕಾರಿ ತ್ಯಾಜ್ಯಗಳ ಬಗ್ಗೆ ತಿಳಿದಿದ್ದು ಅವುಗಳ ಪ್ರತ್ಯೇಕ ನಿರ್ವಹಣೆಗೆ ಆದ್ಯತೆ ನೀಡುತ್ತಿದ್ದಾರೆ. ಅದರಂತೆ 210 ನಗರದ ಪ್ರತಿಕ್ರಿಯೆದಾರರಲ್ಲಿ 113 ಅಂದರೆ 54 ಶೇಕಡ ಜನರಿಗೆ ಅರಿವಿದೆ.

ಪ್ರತಿಕ್ರಿಯೆದಾರರಿಗೆ ಇಲೆಕ್ಟ್ರಾನಿಕ್ ತ್ಯಾಜ್ಯಗಳ ಬಗ್ಗೆ ಹೊಂದಿರುವ ಜ್ಞಾನವನ್ನು ಪರೀಕ್ಷಿಸಿದಾಗ ಗ್ರಾಮೀಣ ಪ್ರದೇಶದ 200ರಲ್ಲಿ 36 ಅಂದರೆ ಕೇವಲ 18 ಶೇಕಡ ಜನರಿಗೆ ಮಾತ್ರ ಇಲೆಕ್ಟ್ರಾನಿಕ್ ತ್ಯಾಜ್ಯಗಳ ಬಗ್ಗೆ ಅರಿವಿದೆ. ಆದರೆ ನಗರ ಪ್ರದೇಶದ 210 ಪ್ರತಿಕ್ರಿಯೆದಾರರಲ್ಲಿ 73 ಜನರು ಅಂದರೆ 35 ಶೇಕಡ ಜನರಿಗೆ ಇಲೆಕ್ಟ್ರಾನಿಕ್ ತ್ಯಾಜ್ಯಗಳ ಅಪಾಯದ ಬಗ್ಗೆ ಅರಿವಿದೆ. ಒಟ್ಟು 410 ಪ್ರತಿಕ್ರಿಯೆದಾರರಲ್ಲಿ ಸರಾಸರಿ 27 ಶೇಕಡ ಜನರು ಮಾತ್ರ ಇಲೆಕ್ಟ್ರಾನಿಕ್ ತ್ಯಾಜ್ಯದ ಬಗ್ಗೆ ತಿಳುವಳಿಕೆ ಹೊಂದಿದ್ದಾರೆ.

ಎಲೆಕ್ಟ್ರಾನಿಕ್ ವಸ್ತುಗಳ ಬಳಕೆಯ ಪ್ರಮಾಣ ಶೇಕಡ 100ರಷ್ಟು ಇದೆ. ಪ್ರಮುಖವಾಗಿ ಟಿ.ವಿ., ಫ್ರಿಡ್ಜ್, ವಾಷಿಂಗ್ ಮೆಷಿನ್, ಮೊಬೈಲ್ ಫೋನ್, ಕ್ಯಾಲಿಕ್ಯುಲೇಟರ್, ಕಂಪ್ಯೂಟರ್, ಪ್ರಿಂಟರ್, ಎ.ಸಿ, ಚಾರ್ಜರ್, ರಿಮೋಟ್ ಕಂಟ್ರೋಲ್ ಸೇರಿದಂತೆ ಇನ್ನಿತರ ಅನೇಕ ಇಲೆಕ್ಟ್ರಾನಿಕ್ ಉಪಕರಣಗಳು ದಿನಬಳಕೆಯ ಅಗತ್ಯ ವಸ್ತುಗಳಾಗಿವೆ. ಹೆಚ್ಚಿನ ವಸ್ತುಗಳು ದೀರ್ಘಕಾಲ ಬಾಳಿಕೆ ಬರದಿರವುವು ಹಾಗೂ ದುರಸ್ಥಿಯಾಗದೇ ಇರುವುದರಿಂದ ಇ ತ್ಯಾಜ್ಯಗಳ ಪ್ರಮಾಣ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಹೆಚ್ಚುತ್ತಲೇ ಇದೆ. ಗ್ರಾಮೀಣ ಪ್ರದೇಶಗಳಿಗೆ ಹೋಲಿಸಿದರೆ ನಗರಗಳಲ್ಲಿ ಇವುಗಳ ಬಳಕೆ ಅಧಿಕವಾಗಿರುವುದು ಕಂಡುಬರುತ್ತದೆ. ತಿಳುವಳಿಕೆ ದೃಷ್ಟಿಯಿಂದ ವಿಶ್ಲೇಷಣೆ ಮಾಡಿದಾಗಲೂ ನಗರ ವಾಸಿಗಳಿಗೆ ಗ್ರಾಮೀಣ ಜನರಿಗಿಂತ ಹೆಚ್ಚು ತಿಳಿವಳಿಕೆ ಇರುವುದು ಕಂಡುಬಂದಿದೆ.

ಕೋಷ್ಟಕ 6.13ರಲ್ಲಿ ಇಲೆಕ್ಟ್ರಾನಿಕ್ ತ್ಯಾಜ್ಯಗಳ ಬಗ್ಗೆ ತಿಳುವಳಿಕೆ ಹೊಂದಿರುವ/ಹೊಂದಿಲ್ಲದ ಪುರುಷರು ಮತ್ತು ಮಹಿಳೆಯರ ಬಗ್ಗೆ ಮಾಹಿತಿ ನೀಡಲಾಗಿದೆ.

**ಕೋಷ್ಟಕ: 6.13**

**ದ.ಕ.ಜಿಲ್ಲಾ ವ್ಯಾಪ್ತಿಯಲ್ಲಿ ಇಲೆಕ್ಟ್ರಾನಿಕ್ ತ್ಯಾಜ್ಯಗಳ ಬಗ್ಗೆ ಮಾಹಿತಿ ಹೊಂದಿರುವ ಪುರುಷ ಮತ್ತು ಮಹಿಳಾ ಪ್ರತಿಕ್ರಿಯೆದಾರರು**

| ಲಿಂಗ | ಹೌದು | ಶೇಕಡ | ಇಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಪುರುಷ | 90 | 22 | 209 | 51 | 299 | 73 |
| ಮಹಿಳೆ | 20 | 5 | 91 | 22 | 111 | 27 |
| ಒಟ್ಟು | **110** | **27** | **200** | **73** | **410** | **100** |

ಒಟ್ಟು 410 ಮಾದರಿಯಲ್ಲಿ ಶೇಕಡ 27ರಷ್ಟು ಮಹಿಳೆಯರು ಮತ್ತು ಶೇಕಡ 73ರಷ್ಟು ಪುರುಷರಿದ್ದು ಒಟ್ಟು 27 ಶೇಕಡ ಮಾಹಿತಿದಾರರಿಗೆ ಮಾತ್ರ ಎಲೆಕ್ಟ್ರಾನಿಕ್ ತ್ಯಾಜ್ಯಗಳ ಬಗ್ಗೆ ತಿಳಿದಿದೆ. ತಿಳುವಳಿಕೆ ಹೊಂದಿರುವವರಲ್ಲಿ ಕೇವಲ 18 ಶೇಕಡ ಮಹಿಳೆಯರು ಮತ್ತು 30 ಶೇಕಡ ಪುರುಷರು. ಇಲೆಕ್ಟ್ರಾನಿಕ್ ತ್ಯಾಜ್ಯಗಳ ಬಗ್ಗೆ ಮಹಿಳೆಯರಿಗಿಂತ ಪುರುಷರಿಗೆ ಹೆಚ್ಚಿನ ಅರಿವಿರುವುದು ಕಂಡು ಬಂದಿದೆ.

ಸಾಮಾನ್ಯವಾಗಿ ಇಲೆಕ್ಟ್ರಾನಿಕ್ ಉಪಕರಣಗಳ ಬಳಕೆಯನ್ನು ಮಹಿಳೆಯರು ಮತ್ತು ಪುರುಷರು ಹೆಚ್ಚು ಕಡಿಮೆ ಸಮಾನವಾಗಿ ಬಳಕೆ ಮಾಡುತ್ತಿದ್ದು, ಇವುಗಳ ತ್ಯಾಜ್ಯ ನಿರ್ವಹಣೆ ಬಗ್ಗೆ ಎಲ್ಲರಿಗೂ ಅರಿವಿರಬೇಕಾದುದು ಅವಶ್ಯಕ. ಎಲೆಕ್ಟ್ರಾನಿಕ್ ಉಪಕರಣಗಳ ಪೂರೈಕೆದಾರರು ಬಳಕೆಯ ಬಗ್ಗೆ ಜನಜಾಗೃತಿ ಮೂಡಿಸುವುದರೊಂದಿಗೆ ತ್ಯಾಜ್ಯ ಸಂಗ್ರಹ ಮತ್ತು ಪುನರುತ್ಪಾದನೆಗೆ ಪ್ರತ್ಯೇಕ ವ್ಯವಸ್ಥೆಯನ್ನು ಹೊಂದುವಂತೆ ಕಾನೂನನ್ನು ರೂಪಿಸಬೇಕಾಗಿದೆ.

ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡುವುದು ತ್ಯಾಜ್ಯ ನಿರ್ವಹಣೆಯ ಪ್ರಮುಖ ಭಾಗವಾಗಿದೆ (ಆನಂದ್ ಸುಭಾಶ್ 2010).[30] ಇವರು ತ್ಯಾಜ್ಯ ವಿಭಜನೆಯನ್ನು ಕಡ್ಡಾಯಗೊಳಿಸ ಬೇಕೆಂದು ಸಲಹೆ ನೀಡಿದ್ದಾರೆ. ತ್ಯಾಜ್ಯ ವಿಭಜನೆಯು ಮನೆಯಿಂದ ಕೊನೆಯ ಭೂಭರ್ತಿ ಅಥವಾ ನಿರ್ವಹಣೆ ಹಂತದವರೆಗೆ ಮುಂದುವರಿಯಬೇಕು. ಸಾವಯವ ತ್ಯಾಜ್ಯಗಳನ್ನು ಗೊಬ್ಬರವಾಗಿ ಉಪಯೋಗಿಸಬೇಕು. ಕಡಿಮೆ ಆದಾಯ ಹೊಂದಿದ ಹಾಗೂ ಹಿಂದುಳಿದ ಪ್ರದೇಶಗಳ ತ್ಯಾಜ್ಯ ನಿರ್ವಹಣೆಗೆ ಆದ್ಯತೆ ನೀಡಬೇಕು ಎಂದಿದ್ದಾರೆ. ಹಾಗೆಯೇ ಖಾನ್ ಮತ್ತು ಇಕ್ಬಾಲ್ ಮತ್ತು ಹಸನ್ ನವೇದ್ (2003)[31] ಇವರು ತ್ಯಾಜ್ಯ ಉತ್ಪಾದನೆಯನ್ನು ಮೂಲದಲ್ಲಿ ಕಡಿತಗೊಳಿಸಬೇಕೆಂದು ತಿಳಿಸಿದ್ದಾರೆ. ಮನೆಗಳಲ್ಲಿ ತ್ಯಾಜ್ಯ ವಿಭಜನೆ ಸಮರ್ಪಕವಾಗಿ ನಡೆದರೆ ತ್ಯಾಜ್ಯ ನಿರ್ವಹಣೆಯ ಮುಂದಿನ ಹಂತಗಳು ಸುಗಮವಾಗಿ ನಡೆಯುತ್ತವೆ ಎಂದಿದ್ದಾರೆ. ಮೂಲದಲ್ಲಿ ಕಸವಿಂಗಡಣೆ ಕಡ್ಡಾಯಗೊಳಿಸುವುದನ್ನು ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ತನ್ನ ತ್ಯಾಜ್ಯ ನಿರ್ವಹಣಾ ಕ್ರಮಗಳಲ್ಲಿ ಸೂಚಿಸಿದೆ. ಕೋಷ್ಟಕ 6.14ರಲ್ಲಿ ವಿವಿಧ ವರ್ಗಗಳ ಜನರು ಮೂಲದಲ್ಲಿ ತ್ಯಾಜ್ಯ ವಿಭಜನೆಯನ್ನು ಮಾಡುವ ಪ್ರಮಾಣವನ್ನು ನೀಡಲಾಗಿದೆ.

**ಕೋಷ್ಟಕ: 6.14**

**ದ.ಕ.ಜಿಲ್ಲಾ ವ್ಯಾಪ್ತಿಯಲ್ಲಿ ಮನೆಯಲ್ಲಿ ತ್ಯಾಜ್ಯ ವಿಭಜನೆ ಮಾಡುವ/ಮಾಡದಿರುವ ವಿವಿಧ ವರ್ಗಗಳ ಮಾಹಿತಿದಾರರು**

| ವರ್ಗ | ಹೌದು | ಶೇಕಡ | ಇಲ್ಲ | ಶೇಕಡ | ಒಟ್ಟು | ಶೇಕಡ |
|---|---|---|---|---|---|---|
| ಸಾಮಾನ್ಯ | 167 | 41 | 58 | 14 | 225 | 55 |
| ಹಿಂದುಳಿದ | 66 | 16 | 41 | 10 | 107 | 26 |
| ಪರಿಶಿಷ್ಟ ಜಾತಿ | 31 | 8 | 12 | 3 | 43 | 10 |
| ಪರಿಶಿಷ್ಟ ಪಂಗಡ | 23 | 6 | 12 | 3 | 35 | 9 |
| **ಒಟ್ಟು** | **287** | **70** | **123** | **30** | **410** | **100** |

ಒಟ್ಟು 225 ಸಾಮಾನ್ಯ ವರ್ಗದ ಪ್ರತಿಕ್ರಿಯೆದಾರರಲ್ಲಿ 167 ಜನರು ಅಂದರೆ ಶೇಕಡ 24ರಷ್ಟು ಜನರು ಮನೆಯಲ್ಲಿಯೇ ಸಾವಯವ ತ್ಯಾಜ್ಯವನ್ನು ಇತರ ತ್ಯಾಜ್ಯಗಳಿಂದ ಬೇರ್ಪಡಿಸಿ ವಿಲೇವಾರಿ ಮಾಡುತ್ತಾರೆ. ಈ ಪ್ರಮಾಣವು ಹಿಂದುಳಿದ ವರ್ಗಗಳಲ್ಲಿ 62 ಶೇಕಡ, ಪರಿಶಿಷ್ಟ ಜಾತಿಯಲ್ಲಿ 72 ಶೇಕಡ ಮತ್ತು ಪರಿಶಿಷ್ಟ ಪಂಗಡಗಳಲ್ಲಿ 66 ಶೇಕಡ ಇದೆ.

ವಿವಿಧ ವರ್ಗಗಳ ಪ್ರತಿಕ್ರಿಯೆಯನ್ನು ಅವಲೋಕಿಸಿದಾಗ ವಿಭಜನೆ ಮಾಡುವ ಪ್ರಮಾಣ ಸಾಮಾನ್ಯ ವರ್ಗದಲ್ಲಿ ಅತೀ ಹೆಚ್ಚು ಕಂಡು ಬಂದರೂ, ಇತರ ವರ್ಗಗಳಲ್ಲಿಯೂ ತೀರ ಕಡಿಮೆ ಪ್ರಮಾಣದಲ್ಲಿಲ್ಲ. ಎಲ್ಲಾ ವರ್ಗದ ಬಹುಪಾಲು ಜನರು ಅಂದರೆ ಸರಾಸರಿ 70 ಶೇಕಡ ಜನರು ಮೂಲದಲ್ಲಿ ವಿಭಜನೆಗೆ ಆದ್ಯತೆಯನ್ನು ನೀಡುತ್ತಾರೆ.

ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಸ್ಥಳೀಯ ಸರ್ಕಾರ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು ಕಂಡುಬಂದಿದೆ. ಕೆಲವು ಗ್ರಾಮ ಪಂಚಾಯತ್‌ಗಳು ಹಾಗೂ ನಗರ ಸ್ಥಳೀಯ ಸಂಸ್ಥೆಗಳು ಹಸಿಕಸ ಹಾಗೂ ಒಣಕಸ ಬೇರ್ಪಡಿಸಲು ಬಕೆಟ್‌ಗಳನ್ನು ನೀಡಿವೆ. ಕ್ಲಪ್ತ ಸಮಯದಲ್ಲಿ ವಿಭಜಿಸಿದ ತ್ಯಾಜ್ಯಗಳನ್ನು ವಿಲೇವಾರಿ ಮಾಡುವ ವ್ಯವಸ್ಥೆ ಇರುವ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಜನರು ವಿಭಜನೆಗೆ ಆದ್ಯತೆ ನೀಡಿರುವುದು ಕಂಡುಬಂದಿದೆ.

**ಪರಾಮರ್ಶನ ಗ್ರಂಥಗಳು ಮತ್ತು ಕೊನೆ ಟಿಪ್ಪಣಿಗಳು**

1. ರಾವ್, ಎಂ. ಎಸ್. ಮತ್ತು ಸುಲ್ತಾನಾ, ರಜಿಯಾ. (2012). ಸೋಲಿಡ್ ವೇಸ್ಟ್ ಎಂಡ್ ಹೆಜಾರ್ಡಸ್ ವೇಸ್ಟ್ ಮೆನೇಜ್‌ಮೆಂಟ್. ಬಿ ಎಸ್ ಪಬ್ಲಿಕೇಷನ್ಸ್, ಹೈದರಾಬಾದ್. ಪು. 35–36

2. ಪಾವ್ಸ್, ಟಿ. ವಿಲಿಯಮ್ಸ್. (2005). ವೇಸ್ಟ್ ಟ್ರೀಟ್‌ಮೆಂಟ್ ಆಂಡ್ ಡಿಸ್‌ಪೋಸಲ್. ವಿಲೆ ಇಂಡಿಯ ಪ್ರೈ. ಲಿಮಿಟೆಡ್, ನ್ಯೂಡೆಲ್ಲಿ. ಪು.3

3. ಅದೇ, ಪು.4–7

4. ಅದೇ, ಪು.8–9

5. ಅದೇ, ಪು.54

6. ಅದೇ, ಪು.55

7. ಖಾದಿಲ್‌ಕಾರ್, ಮತ್ತು ಸುಜಾತ, ಎಸ್. (2011). ಎನಾಲಿಸಿಸ್ ಆಫ್ ಪಾರ್ಟಿಸಿಪೇಟರಿ ಎಪ್ರೋಚ್ ಇನ್ ಸೋಲಿಡ್ ವೆಸ್ಟ್ ಮೆನೇಜ್‌ಮೆಂಟ್. ಸದರ್ನ್ ಇಕನಾಮಿಸ್ಟ್, ಫೆಬ್ರವರಿ. ಪು.25–30

8. ಘನತ್ಯಾಜ್ಯ ವಸ್ತುಗಳ ನಿರ್ವಹಣೆ–ಕಲಿಕೆ ಕಾರ್ಯಕ್ರಮ ಕೈಪಿಡಿ, (2009). ಪ್ರಕಟಪಡಿಸಿದವರು: ಆಡಳಿತ ತರಬೇತಿ ಸಂಸ್ಥೆ ಆವರಣ, ಲಲಿತ ಮಹಲ್ ರಸ್ತೆ, ಮೈಸೂರು–11, ಪು.24

9. ಅದೇ, ಪು.25–28

10. ಅದೇ, ಪು.29

11. ಅದೇ, ಪು.29–30

12. ಅದೇ, ಪು.30

13. ಅದೇ, ಪು.30–31

14. ಅದೇ, ಪು.31–32

15. ಸಿಟಿ ಆಫ್ ಮ್ಯಾಂಗಲೂರ್ಸ್ ಎಸೋಸಿಯೇಶನ್, ಕರ್ನಾಟಕ, 6.11.2009. ಪು.5.

16. ಅದೇ, ಪು.8

17. ಅದೇ. ಪು.9–11

18. ಅದೇ, ಪು.12

19. ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು–ಸ್ವಚ್ಛತಾ ನೀತಿ, 2017, ಪು.1–2

20. ಅದೇ, ಪು.3

21. ಅದೇ, ಪು.4

22. ಅದೇ, ಪು.5

23. ಅದೇ, ಪು.5

24. ಅದೇ, ಪು.6

25. ಅದೇ, ಪು.4

26. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ. (2015). ದಕ್ಷಿಣ ಕನ್ನಡ ಜಿಲ್ಲೆಯ ಅಂಕಿಅಂಶಗಳ ನೋಟ–2014–15. ದ.ಕ. ಮಂಗಳೂರು. ಪು.20

27. ಅರಬಿ ಯು., "ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಇನ್ ಮೆಟ್ರೋಪೋಲಿಟನ್ ಸಿಟೀಸ್: ದ ಕೇಸ್ ಆಫ್ ಮಂಗಳೂರ್", ಪಿ.ಎಸ್.ಎನ್.ರಾವ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಅಡ್ಮಿನಿಸ್ಟ್ರೇಷನ್(ಸಂ.), ಅರ್ಬನ್ ಗವರ್ನೆನ್ಸ್ ಆ್ಯಂಡ್ ಮೆನೇಜ್‌ಮೆಂಟ್–ಇಂಡಿಯನ್ ಇನಿಷಿಯೇಟಿವ್ಸ್, ನ್ಯೂಡೆಲ್ಲಿ: ಕಾನಿಷ್ಕ ಪಬ್ಲಿಕೇಷನ್ಸ್, 2009. ಪು.126–127.

28. ಜಯಶೀಲ ಮತ್ತು ವಿ. ಬಾಸಿಲ್, ಹ್ಯಾನ್ಸ್ (2009), ಇ–ವೇಸ್ಟ್ ಮೆನೇಜ್‌ಮೆಂಟ್ ಇನ್ ಇಂಡಿಯ: ಪ್ರೋಬ್ಲೆಮ್ಸ್ ಎಂಡ್ ಸೊಲ್ಯೂಷನ್ಸ್. ನಗರಲೋಕ. 40, ಸಂಖ್ಯೆ.3, ಪು. 52–58.

29. ಹಣಕಾಸು ಸಚಿವಾಲಯ, ಭಾರತ ಸರಕಾರ, 2009.

30. ಆನಂದ್, ಸುಭಾಶ್. (2010). ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್. ಮಿತ್ತಲ್ ಪಬ್ಲಿಕೇಶನ್ಸ್, ನ್ಯೂಡೆಲ್ಲಿ. ಪು.87–134.

31. ಖಾನ್, ಎಚ್. ಇಕ್ಬಾಲ್ ಮತ್ತು ಆಶನ್, ನವೇದ್. (2003). ಟೆಕ್ಸ್ಟ್‌ಬುಕ್ ಆಫ್ ಸೋಲಿಡ್ ವೇಸ್ಟ್ ಮೆನೇಜ್‌ಮೆಂಟ್ ಸಿಬಿಎಸ್ ಪಬ್ಲಿಷರ್ಸ್ ಆಂಡ್ ಡಿಸ್ಟ್ರಿಬ್ಯೂಟರ್ಸ್ ಪ್ರೈಲಿಮಿಟೆಡ್, ನ್ಯೂಡೆಲ್ಲಿ. ಪು.26–28.

# ಅಧ್ಯಾಯ: ಏಳು

# ಅಧ್ಯಯನದ ಫಲಿತಗಳು

7.1 ಅಧ್ಯಯನದ ಫಲಿತಗಳು

7.2 ಸಲಹೆ ಸೂಚನೆಗಳು

7.3 ಸಂಶೋಧನಾ ಅವಕಾಶಗಳು

7.4 ಕೊನೆ ಮಾತು

ಅಧ್ಯಾಯ: ಏಳು

# ಅಧ್ಯಯನದ ಫಲಿತಗಳು

**ಪೀಠಿಕೆ**

ಈ ಅಧ್ಯಯನದಲ್ಲಿ 'ಘನತ್ಯಾಜ್ಯ ನಿರ್ವಹಣೆಯ ಆರ್ಥಿಕತೆ'ಯನ್ನು ಅರ್ಥೈಸಿಕೊಳ್ಳಲು ಮೂರು ಪ್ರಮುಖ ಉದ್ದೇಶಗಳನ್ನಿಟ್ಟುಕೊಳ್ಳಲಾಗಿದೆ. ಉದ್ದೇಶಗಳಿಗನುಗುಣವಾಗಿ ಪ್ರಾಥಮಿಕ ಮತ್ತು ಆನುಷಂಗಿಕ ಮೂಲಗಳಿಂದ ಮಾಹಿತಿಗಳನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಲಾಗಿದೆ. ಅಧ್ಯಾಯ ನಾಲ್ಕರಲ್ಲಿ ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ಅಧ್ಯಯನ ಕುರಿತಾದ ವಿಶ್ಲೇಷಣೆ ಇದೆ. ಅಧ್ಯಾಯ ಐದರಲ್ಲಿ ಘನತ್ಯಾಜ್ಯ ನಿರ್ವಹಣೆಯ ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳ ಅಧ್ಯಯನ ಬಗ್ಗೆ ಚರ್ಚಿಸಲಾಗಿದೆ ಹಾಗೂ ಅಧ್ಯಾಯ ಆರರಲ್ಲಿ ಘನತ್ಯಾಜ್ಯ ನಿರ್ವಹಣೆಯ ನೀತಿ ನಿಯಮಗಳ ಅಧ್ಯಯನಕ್ಕೆ ಸಂಬಂಧಿಸಿದ ಮಾಹಿತಿ ಇದೆ. ಈ ಮೂರು ಅಧ್ಯಾಯಗಳಲ್ಲಿರುವ ವಿಶ್ಲೇಷಣೆಗಳ ಆಧಾರದಲ್ಲಿ ಈ ಕೆಳಗಿನ ಫಲಿತಗಳನ್ನು ಕಾಣಬಹುದು.

## 7.1 ಅಧ್ಯಯನದ ಫಲಿತಗಳು

❖ ತ್ಯಾಜ್ಯ ವಿಭಜನೆಗೆ ನಗರ ಸ್ಥಳೀಯ ಸಂಸ್ಥೆಗಳು ಗ್ರಾಮೀಣ ಸ್ಥಳೀಯ ಸಂಸ್ಥೆಗಳಿಗಿಂತ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತವೆ ಎನ್ನುವುದು ಸಾಮಾನ್ಯ ಗ್ರಹಿಕೆಯಾದರೂ, ನಗರ ಹಾಗೂ ಗ್ರಾಮೀಣ ಸ್ಥಳೀಯ ಸರಕಾರಗಳು ಸಮಾನ ಆದ್ಯತೆ ನೀಡುತ್ತಿರುವುದು ಅಧ್ಯಯನದಲ್ಲಿ ಕಂಡು ಬರುತ್ತದೆ. ಒಟ್ಟು ಆಯ್ದ 21 ಗ್ರಾಮೀಣ ಸ್ಥಳೀಯ ಸಂಸ್ಥೆಗಳಲ್ಲಿ (ಪಂಚಾಯತ್‌ಗಳಲ್ಲಿ) 16 ಪಂಚಾಯತ್‌ಗಳು ಮೂಲದಲ್ಲಿ ಹಾಗೂ ವಿಲೇವಾರಿ ಜಾಗದಲ್ಲಿ ತ್ಯಾಜ್ಯ ವಿಭಜನೆಗೆ ಕ್ರಮ ಕೈಗೊಂಡಿದ್ದಾರೆ. ಅಂದರೆ ಶೇಕಡ 76 ರಷ್ಟು ಸಂಸ್ಥೆಗಳು ವಿಭಜನೆ ಮಾಡಿದರೆ

ಉಳಿದ 24 ಶೇಕಡದಷ್ಟು ಯಾವುದೇ ರೀತಿಯಲ್ಲಿ ವಿಭಜನೆ ಮಾಡದೆ ಕೇವಲ ಸಂಗ್ರಹಿಸಿ ಭೂಭರ್ತಿ ಮಾಡುವುದರ ಮೂಲಕ ಅವೈಜ್ಞಾನಿಕ ಕ್ರಮದಲ್ಲಿ ವಿಲೇವಾರಿ ಕೆಲಸ ನಿರ್ವಹಿಸುತ್ತಿವೆ. ನಗರ ಸ್ಥಳೀಯ ಸಂಸ್ಥೆಗಳ ಚಿತ್ರಣವೂ ಇದಕ್ಕಿಂತ ಭಿನ್ನವಾಗಿಲ್ಲ. ಅವುಗಳಲ್ಲಿಯೂ ಶೇಕಡ 75 ಅಂದರೆ 8 ರಲ್ಲಿ 6 ಸಂಸ್ಥೆಗಳು ವಿಭಜನೆಯನ್ನು ಮಾಡುತ್ತಿದ್ದು ಉಳಿದ 2 ಸಂಸ್ಥೆಗಳು (ಶೇಕಡ 25) ವಿಭಜನೆಗೆ ಆದ್ಯತೆ ನೀಡದಿರುವುದು ಅಧ್ಯಯನದಲ್ಲಿ ಕಂಡುಬಂದಿದೆ.

❖ ತ್ಯಾಜ್ಯ ವಿಭಜನೆಗೆ ಸ್ಥಳೀಯ ಸರಕಾರ ಆದ್ಯತೆ ನೀಡಿದೆಯೇ ಎನ್ನುವ ಪ್ರಶ್ನೆಗೆ ಎಷ್ಟು ಮಂದಿ ಸಂಗ್ರಹಕಾರರು ತ್ಯಾಜ್ಯ ವಿಭಜಿಸಿ ಕೊಡಲು ಹೇಳುತ್ತಾರೆ ಎನ್ನುವುದರ ಮೂಲಕ ಉತ್ತರ ಕಂಡುಕೊಳ್ಳಲಾಗಿದೆ. ಗ್ರಾಮೀಣ ಪ್ರದೇಶದಲ್ಲಿ 96 ಶೇಕಡ ಮಾಹಿತಿದಾರರ ಪ್ರಕಾರ ಸಂಗ್ರಹಕಾರರು ತಮ್ಮ ಮನೆಯಲ್ಲಿ ತ್ಯಾಜ್ಯವನ್ನು ವಿಭಜಿಸಿ ಕೊಡಲು ಒತ್ತಾಯಿಸುತ್ತಿದ್ದು, ನಗರ ಪ್ರದೇಶದಲ್ಲಿ ಇದರ ಪ್ರಮಾಣ 58 ಶೇಕಡ ಇದೆ. ಹೋಲಿಕೆ ಮಾಡಿದಾಗ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ನಗರ ಸ್ಥಳೀಯ ಸಂಸ್ಥೆಗಳಿಗಿಂತ ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಹೆಚ್ಚಿನ ಆದ್ಯತೆ ನೀಡಿರುವುದು ಕಾಣುತ್ತದೆ. ಒಟ್ಟು ಸರಾಸರಿ 72 ಶೇಕಡ ಮಾಹಿತಿದಾರರು ತಮ್ಮಲ್ಲಿ ಸಂಗ್ರಹಕ್ಕೆ ಬರುವವರು ತ್ಯಾಜ್ಯ ವಿಭಜಿಸಿ ಕೊಡುವಂತೆ ಒತ್ತಾಯಿಸುತ್ತಿರುವುದಾಗಿ ತಿಳಿಸಿದ್ದಾರೆ.

❖ ಒಟ್ಟು 55 ಶೇಕಡ ಸಾಮಾನ್ಯ ವರ್ಗದ ಜನರಲ್ಲಿ ಅಂದರೆ 225ರಲ್ಲಿ 167 ಮಂದಿ ಮನೆಯಲ್ಲಿ ತ್ಯಾಜ್ಯ ವಿಭಜಿಸುವುದಾಗಿ ತಿಳಿಸಿದ್ದಾರೆ. ಶೇಕಡಾವಾರು ಕ್ರಮದಲ್ಲಿ ಹೇಳುವುದಾದರೆ 74 ಶೇಕಡ ಜನರು ವಿಂಗಡಿಸುವುದಾಗಿ ಹಾಗೂ 26 ಶೇಕಡ ಜನರು ಮೂಲದಲ್ಲಿ ವಿಭಜನೆಗೆ ಯಾವುದೇ ಕ್ರಮ ಕೈಗೊಂಡಿಲ್ಲ ಎಂದಿದ್ದಾರೆ. ಹಿಂದುಳಿದ ವರ್ಗದವರಲ್ಲಿ 66 ಮಂದಿ ವಿಂಗಡಿಸುವುದಾಗಿ ಹೇಳಿದರೆ ಉಳಿದ 21 ಮಂದಿ ವಿಭಜನೆಯನ್ನು ಅನುಸರಿಸುವುದಿಲ್ಲ ಎಂದಿದ್ದಾರೆ. ಶೇಕಡಾವಾರು ಪ್ರಮಾಣದಲ್ಲಿ ವಿಭಜಿಸುವವರು 62 ಶೇಕಡ. ಪರಿಶಿಷ್ಟ ಜಾತಿಯಲ್ಲಿ 72 ಶೇಕಡ ವಿಂಗಡಿಸಿದರೆ, ಪರಿಶಿಷ್ಟ ಪಂಗಡದಲ್ಲಿ 65 ಶೇಕಡ ಜನ ವಿಂಗಡಣೆ ನಡೆಸುತ್ತಾರೆ. ಒಟ್ಟು 410 ಪ್ರತಿಕ್ರಿಯೆದಾರರಲ್ಲಿ 287 ಅಂದರೆ ಸರಾಸರಿ 70 ಶೇಕಡ ಜನರು ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಆದ್ಯತೆ ನೀಡುತ್ತಿರುವುದು ಅಂಕಿ-ಅಂಶಗಳಿಂದ ತಿಳಿಯುತ್ತದೆ. ವರ್ಗಗಳ ನಡುವೆ ಹೋಲಿಕೆ ಮಾಡಿದಾಗ ಅತೀ ಹೆಚ್ಚು ಸಾಮಾನ್ಯ ವರ್ಗದಲ್ಲಿ ಕಂಡು ಬಂದರೂ, ಇತರ ವರ್ಗಗಳಲ್ಲಿ ನಿರ್ಲಕ್ಷ್ಯ ಕಂಡು ಬರುವುದಿಲ್ಲ. ಆದ್ದರಿಂದ ತ್ಯಾಜ್ಯ ವಿಂಗಡಣೆಯ ಮೇಲೆ ಜಾತಿ-ವರ್ಗಗಳ ಪ್ರಭಾವ ಕಡಿಮೆ ಇರುವುದು ಅಧ್ಯಯನದಲ್ಲಿ ಕಂಡುಬರುತ್ತದೆ.

- ಒಟ್ಟು ಪ್ರತಿಕ್ರಿಯೆದಾರರಲ್ಲಿ 79 ಶೇಕಡ ಹಿಂದುಗಳು, 10 ಶೇಕಡ ಮುಸ್ಲಿಮರು ಮತ್ತು 11 ಶೇಕಡ ಕ್ರೈಸ್ತರು. ಒಟ್ಟು 322 ಹಿಂದುಗಳಲ್ಲಿ 239 ಮಂದಿ ವಿಭಜನೆ ಮಾಡುವವರು, ಅಂದರೆ 74 ಶೇಕಡ, 39 ಮುಸ್ಲಿಮರಲ್ಲಿ 17 ಮಂದಿ, ಅಂದರೆ 44 ಶೇಕಡ ಮತ್ತು 47 ಕ್ರೈಸ್ತರಲ್ಲಿ 30 ಮಂದಿ ಅಂದರೆ 64 ಶೇಕಡ ಮೂಲದಲ್ಲಿ ವಿಂಗಡಣೆ ನಡೆಸುತ್ತಾರೆ. ಧರ್ಮಗಳ ನಡುವೆ ಹೋಲಿಕೆ ಮಾಡಿದಾಗ ಮುಸ್ಲಿಮರಲ್ಲಿ ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡುವವರ ಪ್ರಮಾಣ ತುಂಬಾ ಕಡಿಮೆ ಇದೆ.
- ಕ್ಷೇತ್ರ ಕಾರ್ಯದಲ್ಲಿ ಸಂದರ್ಶನ ಮಾಡಿದ ಒಟ್ಟು 67 ಮಂದಿ ಪ್ರಾಥಮಿಕ ಶಿಕ್ಷಣ ಪಡೆದವರಲ್ಲಿ 40 ಮಂದಿ ಅಂದರೆ 60 ಶೇಕಡ ತ್ಯಾಜ್ಯ ವಿಭಜನೆಯನ್ನು ಅನುಸರಿಸುವವರು. ಪ್ರೌಢ ಶಿಕ್ಷಣ ಪಡೆದವರಲ್ಲಿ 63 ಶೇಕಡ ಮೂಲದಲ್ಲಿ ವಿಭಜಿಸುತ್ತಿರುವುದಾಗಿ ತಿಳಿಸಿದ್ದಾರೆ. ಪದವಿ ಶಿಕ್ಷಣ ಪಡೆದವರಲ್ಲಿ ಇದು ಇನ್ನೂ ಹೆಚ್ಚಿದ್ದು 76 ಶೇಕಡ ಇದೆ. ಸ್ನಾತಕೋತ್ತರ ಪದವೀಧರರು ಮೂಲದಲ್ಲಿ ಕಸ ವಿಂಗಡಣೆಗೆ ಇನ್ನೂ ಹೆಚ್ಚು ಆದ್ಯತೆ ನೀಡುತ್ತಿದ್ದು ಅದು 85 ಶೇಕಡ ಇದೆ. ಮೇಲಿನ ಅಂಕಿ–ಅಂಶವನ್ನು ಗಮನಿಸಿದಾಗ ಶೈಕ್ಷಣಿಕ ಅರ್ಹತೆ ಹಾಗೂ ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡುವವರ ಸಂಖ್ಯೆಗೆ ನೇರ ಸಂಬಂಧವಿರುವುದು ಕಂಡು ಬರುತ್ತದೆ. ಸರಕಾರಗಳು ತ್ಯಾಜ್ಯ ವಿಭಜನೆಗೆ ಸಂಬಂಧಿಸಿ ಕೈಗೊಂಡ ಕಾನೂನಾತ್ಮಕ ಹಾಗೂ ಇತರ ಕ್ರಮಗಳು ಹೆಚ್ಚು ಶಿಕ್ಷಣ ಪಡೆದವರ ಮೇಲೆ ಹೆಚ್ಚು ಪ್ರಭಾವ ಬೀರಿರುವುದು ಇದಕ್ಕೆ ಕಾರಣವಿರಬಹುದೆಂದು ಊಹಿಸಬಹುದು. ತ್ಯಾಜ್ಯ ನಿರ್ವಹಣೆಯ ಅನುಷ್ಠಾನಕ್ಕೆ ಜನರಲ್ಲಿ ಜಾಗೃತಿ ಮೂಡಿಸುವುದು ಹೆಚ್ಚು ಪರಿಣಾಮಕಾರಿ ಎಂಬುದು ಮೇಲಿನ ಅಂಕಿ–ಅಂಶಗಳಿಂದ ತಿಳಿದು ಬರುತ್ತದೆ.
- ಒಟ್ಟು 225 ಸಾಮಾನ್ಯ ವರ್ಗದ ಪ್ರತಿಕ್ರಿಯೆದಾರರಲ್ಲಿ 167 ಜನರು ಅಂದರೆ ಶೇಕಡ 24 ರಷ್ಟು ಜನರು ಮನೆಯಲ್ಲಿಯೇ ಸಾವಯವ ತ್ಯಾಜ್ಯವನ್ನು ಇತರ ತ್ಯಾಜ್ಯಗಳಿಂದ ಬೇರ್ಪಡಿಸಿ ವಿಲೇವಾರಿ ಮಾಡುತ್ತಾರೆ. ಈ ಪ್ರಮಾಣವು ಹಿಂದುಳಿದ ವರ್ಗಗಳಲ್ಲಿ 62 ಶೇಕಡ, ಪರಿಶಿಷ್ಟ ಜಾತಿಯಲ್ಲಿ 72 ಶೇಕಡ ಮತ್ತು ಪರಿಶಿಷ್ಟ ಪಂಗಡಗಳಲ್ಲಿ 66 ಶೇಕಡ ಇದೆ.
- ಮೂಲದಲ್ಲಿ ಕಸ ವಿಂಗಡಣೆ ಕಡ್ಡಾಯಗೊಳಿಸುವುದನ್ನು ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ತನ್ನ ತ್ಯಾಜ್ಯ ನಿರ್ವಹಣಾ ಕ್ರಮಗಳಲ್ಲಿ ಸೂಚಿಸಿದೆ. ಆದರೆ ವಿವಿಧ ವರ್ಗಗಳ ಪ್ರತಿಕ್ರಿಯೆಯನ್ನು ಅವಲೋಕಿಸಿದಾಗ ವಿಭಜನೆ ಮಾಡುವ ಪ್ರಮಾಣ ಸಾಮಾನ್ಯ ವರ್ಗದಲ್ಲಿ ಅತೀ ಹೆಚ್ಚು ಕಂಡು ಬಂದರೂ, ಇತರ ವರ್ಗಗಳಲ್ಲಿಯೂ ತೀರಾ ಕಡಿಮೆ ಪ್ರಮಾಣದಲ್ಲಿಲ್ಲ. ಎಲ್ಲಾ

ವರ್ಗದ ಬಹುಪಾಲು ಜನರು ಅಂದರೆ ಸರಾಸರಿ 70 ಶೇಕಡ ಜನರು ಮೂಲದಲ್ಲಿ ವಿಭಜನೆಗೆ ಆದ್ಯತೆಯನ್ನು ನೀಡುತ್ತಾರೆ.

❖ ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಸ್ಥಳೀಯ ಸರ್ಕಾರ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವುದು ಕಂಡು ಬಂದಿದೆ. ಕೆಲವು ಗ್ರಾಮ ಪಂಚಾಯತ್‌ಗಳು ಹಾಗೂ ನಗರ ಸ್ಥಳೀಯ ಸಂಸ್ಥೆಗಳು ಹಸಿಕಸ ಹಾಗೂ ಒಣಕಸ ಬೇರ್ಪಡಿಸಲು ಬಕೆಟ್‌ಗಳನ್ನು ನೀಡಿವೆ. ಕ್ಲಪ್ತ ಸಮಯದಲ್ಲಿ ವಿಭಜಿಸಿದ ತ್ಯಾಜ್ಯಗಳನ್ನು ವಿಲೇವಾರಿ ಮಾಡುವ ವ್ಯವಸ್ಥೆ ಇರುವ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಜನರು ವಿಭಜನೆಗೆ ಆದ್ಯತೆ ನೀಡಿರುವುದು ಕಂಡುಬಂದಿದೆ.

❖ ಜನರಲ್ಲಿ ತ್ಯಾಜ್ಯದಿಂದ ಉಂಟಾಗುವ ಸಮಸ್ಯೆಗಳ ಬಗ್ಗೆ ಸಾಕಷ್ಟು ಅರಿವಿರುವುದು ಕಂಡು ಬಂದರೂ ಬೇಜವಾಬ್ದಾರಿ ಹಾಗೂ ಉದಾಸೀನತೆಯಿಂದ ಪ್ಲಾಸ್ಟಿಕ್ ಸಹಿತವಾದ ಅನೇಕ ಗೃಹತ್ಯಾಜ್ಯಗಳನ್ನು ರಸ್ತೆ ಬದಿ/ತೋಡುಗಳಿಗೆ, ಹಾಳು ಬಾವಿಗಳಿಗೆ, ಸೇತುವೆಗಳ ಕೆಳಗೆ, ನದಿಗಳಿಗೆ ಎಸೆಯುವುದನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಉದಾಹರಣೆಗೆ ಬಜ್ಪೆ ಪಂಚಾಯತ್ ವ್ಯಾಪ್ತಿಯಲ್ಲಿ ಜನರು ತೋಡಿಗೆ ಪ್ಲಾಸ್ಟಿಕ್ ವಸ್ತುಗಳನ್ನು ಎಸೆಯುವುದರಿಂದ ತೊಟ್ಟಿಲ ಗುರಿ ಪ್ರದೇಶದ ರೈತರ ಕೃಷಿಗೆ ಹಾನಿಯಾಗಿರುವುದರ ಬಗ್ಗೆ ದೂರು ದಾಖಲಾಗಿದೆ. ನರಿಮೊಗರು ಪಂಚಾಯತ್ ವ್ಯಾಪ್ತಿಯಲ್ಲಿ ಪ್ಲಾಸ್ಟಿಕ್ ಸೌಧ ನಿರ್ಮಿಸಿದರೂ ಜನರು ಅದನ್ನು ಉಪಯೋಗಿಸದೇ ಇರುವುದು ಒಂದೆಡೆಯಾದರೆ ಕಟೀಲು ಪರಿಸರದಲ್ಲಿ ನಿರ್ಮಿಸಿದ ಪ್ಲಾಸ್ಟಿಕ್ ಸೌಧಕ್ಕೆ ಜನರು ಸತ್ತ ಪ್ರಾಣಿಗಳನ್ನು ಬಿಸಾಡುವುದರಿಂದ ಸಂಗ್ರಹಕಾರರಿಗೆ ತೊಂದರೆಯಾಗಿರುವುದು ಕಂಡು ಬಂದಿದೆ. ಜನರು ವಾಹನಗಳಲ್ಲಿ ಸಂಚರಿಸುವಾಗ ದನ, ಹಂದಿ, ಕೋಳಿ, ಕುರಿ ಮುಂತಾದ ಮಾಂಸದ ತ್ಯಾಜ್ಯಗಳನ್ನು ಮತ್ತಿತರ ಗೃಹ ತ್ಯಾಜ್ಯಗಳನ್ನು ನದಿಗೆ ಎಸೆಯುವುದರಿಂದ ನದಿ ನೀರು ಮಲೀನಗೊಂಡಿರುವುದರ ಬಗ್ಗೆ ಬೇರೆ ಬೇರೆ ಸ್ಥಳೀಯ ಸಂಸ್ಥೆಗಳಲ್ಲಿ ಚರ್ಚೆಗೆ ಬಂದಿರುತ್ತದೆ.

❖ ಸಾರ್ವಜನಿಕ ಸ್ಥಳಗಳಲ್ಲಿ ಎಲ್ಲೆಂದರಲ್ಲಿ ತ್ಯಾಜ್ಯ ಎಸೆಯುವುದನ್ನು ತಡೆಗಟ್ಟಲು ತಪ್ಪಿತಸ್ಥರಿಗೆ ಅನೇಕ ಸ್ಥಳೀಯ ಸಂಸ್ಥೆಗಳು ದಂಡ ವಿಧಿಸುತ್ತಿವೆ. ಒಟ್ಟು ಆಯ್ದ 21 ಗ್ರಾಮ ಪಂಚಾಯತ್‌ಗಳಲ್ಲಿ 17 ಗ್ರಾಮ ಪಂಚಾಯತ್‌ಗಳು ದಂಡ ವಿಧಿಸುತ್ತಿವೆ. ಅಂದರೆ ಶೇಕಡ 81ರಷ್ಟು ಪಂಚಾಯತ್‌ಗಳು ಈ ಕ್ರಮಕ್ಕೆ ಮುಂದಾದರೆ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಶೇಕಡ 87.5 ರಷ್ಟು ಸಂಸ್ಥೆಗಳು ದಂಡ ವಿಧಿಸುತ್ತಿವೆ. ನಾಗರಿಕ ಶಿಸ್ತು ಮೂಡಿಸುವಲ್ಲಿ ದಂಡ ವಿಧಿಸುವುದು ಜನ ವಿರೋಧಿಯಾಗಲಾರದು ಎಂಬುದು ಜನರ ಪ್ರತಿಕ್ರಿಯೆಯಿಂದ

ವ್ಯಕ್ತವಾಗಿದೆ. ಜನರಿಗೆ ಜಾಗೃತಿ ಹಾಗೂ ಜವಾಬ್ದಾರಿ ಮೂಡಿಸುವ ದೃಷ್ಟಿಯಲ್ಲಿ ತಪ್ಪಿಸ್ಥರಿಗೆ ದಂಡ ವಿಧಿಸುವುದು ಸೂಕ್ತ ಕ್ರಮವೆಂದು ಕ್ಷೇತ್ರಕಾರ್ಯದಲ್ಲಿ ಜನ ಅಭಿಪ್ರಾಯ ಪಟ್ಟಿದ್ದಾರೆ.

- ಕೆಲವು ಸ್ಥಳೀಯ ಸಂಸ್ಥೆಗಳು ಸ್ವಂತ ಭೂಮಿಯನ್ನು ಹೊಂದಿದ್ದರೆ ಇನ್ನು ಕೆಲವು ಸಂಸ್ಥೆಗಳು ಖಾಸಗಿ ಸಂಸ್ಥೆಗಳೊಂದಿಗೆ ಒಪ್ಪಂದ ಮಾಡಿಕೊಂಡಿವೆ. ಕಿನ್ನಿಗೋಳಿ-ಮೆನ್ನಬೆಟ್ಟು ನಂತಹ ಕೆಲವು ಸ್ಥಳೀಯ ಸಂಸ್ಥೆಗಳು ಜಂಟಿಯಾಗಿ ತ್ಯಾಜ್ಯ ನಿರ್ವಹಣೆ ಮಾಡಿದರೆ ಉಳ್ಳಾಲ-ಬಂಟ್ವಾಳದಂತಹ ನಗರ ಸ್ಥಳೀಯ ಸಂಸ್ಥೆಗಳು ಮಂಗಳೂರು ನಗರಪಾಲಿಕೆಗೆ ಬಾಡಿಗೆ ನೀಡಿ ತಮ್ಮ ಕಸವನ್ನು ವಿಲೇವಾರಿ ಮಾಡುತ್ತವೆ. ಒಟ್ಟು ಆಯ್ಕೆ ಮಾಡಿದ 21 ಗ್ರಾಮ ಪಂಚಾಯತ್‌ಗಳಲ್ಲಿ 1 ಪಂಚಾಯತ್ ಖಾಸಗಿ ಸಂಸ್ಥೆಯ ಜಾಗವನ್ನು ಉಪಯೋಗಿ ಸಿದರೆ ಉಳಿದ 5 ಗ್ರಾಮ ಪಂಚಾಯತ್‌ಗಳು ಸ್ವಂತ ಜಾಗವನ್ನು ಹೊಂದಿಲ್ಲ. ಅಂದರೆ 71 ಶೇಕಡ ಗ್ರಾಮ ಪಂಚಾಯತ್‌ಗಳು ಸ್ವಂತ ಸಂಗ್ರಹಣಾ ಘಟಕ ಹಾಗೂ ಭೂಭರ್ತಿ ಪ್ರದೇಶಗಳನ್ನು ಹೊಂದಿವೆ. ಶೇಕಡ 75ರಷ್ಟು ನಗರ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ವಿಲೇ ವಾರಿಗೆ ಸ್ವಂತ ಜಮೀನು ಹೊಂದಿವೆ. ಒಟ್ಟು ಸರಾಸರಿ 73 ಶೇಕಡ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ವಿಲೇವಾರಿಗಾಗಿ ಸ್ವಂತ ಜಮೀನನ್ನು ಹೊಂದಿವೆ.

- ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿ ಪ್ರಕಾರ ಆಯ್ಕೆ ಮಾಡಿದ 21 ಗ್ರಾಮಪಂಚಾಯತ್‌ಗಳಲ್ಲಿ 13 ಗ್ರಾಮ ಪಂಚಾಯತ್‌ಗಳು ಅಂದರೆ 62 ಶೇಕಡ ಗ್ರಾಮ ಪಂಚಾಯತ್‌ಗಳು ಮಾತ್ರ ಗೊಬ್ಬರ ತಯಾರಿಕಾ ಘಟಕಗಳನ್ನು ಹೊಂದಿದ್ದು ಉಳಿದ ಗ್ರಾಮ ಪಂಚಾಯತ್‌ಗಳು ತ್ಯಾಜ್ಯಗಳನ್ನು ಯಾವುದೇ ರೀತಿಯಲ್ಲಿ ಬಳಸದೆ ಭೂಭರ್ತಿ ಮೂಲಕ ವಿಲೇವಾರಿ ಮಾಡುತ್ತಿವೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿ 8ರಲ್ಲಿ 4 ನಗರ ಸಂಸ್ಥೆಗಳು ಗೊಬ್ಬರ ತಯಾರಿಕಾ ಘಟಕಗಳನ್ನು ಹೊಂದಿದ್ದು, ಉಳಿದಂತೆ ಎರಡು ನಗರ ಸ್ಥಳೀಯ ಸಂಸ್ಥೆಗಳು ಸ್ವಂತ ಜಾಗವನ್ನು ಹೊಂದಿಲ್ಲ. ಈ ಅಂಕಿ-ಅಂಶಗಳನ್ನು ಗಮನಿಸಿದಾಗ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ನಗರ ಸ್ಥಳೀಯ ಸಂಸ್ಥೆಗಳಿಗಿಂತ ತ್ಯಾಜ್ಯ ಮರುಬಳಕೆಯಲ್ಲಿ ಹೆಚ್ಚಿನ ದಕ್ಷತೆಯನ್ನು ಹೊಂದಿವೆ ಎನ್ನುವ ಅಭಿಪ್ರಾಯಕ್ಕೆ ಬರಲಾಗಿದೆ.

- ಅಂಕಿ-ಅಂಶಗಳ ಪ್ರಕಾರ ಸರಾಸರಿ 6 ಶೇಕಡದಷ್ಟು ಪಂಚಾಯತ್‌ಗಳು ಮಾತ್ರ ಶೇಕಡ 70ಕ್ಕಿಂತ ಹೆಚ್ಚು ಸಾವಯವ ತ್ಯಾಜ್ಯವನ್ನು ಗೊಬ್ಬರ ತಯಾರಿಕೆಯಲ್ಲಿ ಬಳಸುತ್ತಿವೆ. ಗಮನಾರ್ಹವಾದ ಅಂಶವೆಂದರೆ ಶೇಕಡ 70ಕ್ಕಿಂತಲೂ ಹೆಚ್ಚು ಸಾವಯವ ತ್ಯಾಜ್ಯವನ್ನು ಗೊಬ್ಬರ ತಯಾರಿಕೆಯಲ್ಲಿ ಬಳಸುತ್ತಿರುವುದು ಗ್ರಾಮೀಣ ಸ್ಥಳೀಯ ಸಂಸ್ಥೆಗಳು.

❖ ಗ್ರಾಮೀಣ ಪ್ರದೇಶದ ಒಟ್ಟು 200 ಪ್ರತಿಕ್ರಿಯೆದಾರರಲ್ಲಿ 164 ಅಂದರೆ ಶೇಕಡ 82ರಷ್ಟು ಮಂದಿಗೆ ತಮ್ಮ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದಂತೆ ನಡೆಯುವ ಕೆಲಸಗಳ ಬಗ್ಗೆ ಅಂದರೆ ತ್ಯಾಜ್ಯ ಸಂಗ್ರಹ, ಸಾಗಾಟ ಮತ್ತು ವಿಲೇವಾರಿಗೆ ಸಂಬಂಧಿಸಿದ ಮಾಹಿತಿ ಇದೆ. ನಗರ ಪ್ರದೇಶದ 210 ಪ್ರತಿಕ್ರಿಯೆದಾರರಲ್ಲಿ ಶೇಕಡ 89 ಮಂದಿಗೆ ಈ ಬಗ್ಗೆ ತಿಳುವಳಿಕೆ ಇದೆ. ಒಟ್ಟು ಸರಾಸರಿ 86 ಶೇಕಡ ಜನರು ತಿಳುವಳಿಕೆ ಹೊಂದಿದವರಾಗಿದ್ದಾರೆ. ಈ ಮೂಲಕ ಸ್ಥಳೀಯ ಸಂಸ್ಥೆಗಳು ತಾವು ನಿರ್ವಹಿಸುವ ಕೆಲಸದ ಬಗ್ಗೆ ಜನರಿಗೆ ತಿಳಿಸಲು ಯಶಸ್ವಿಯಾಗಿರುವುದು ತಿಳಿದು ಬರುತ್ತದೆ. ಇದರೊಂದಿಗೆ ಜನರೂ ತಮ್ಮ ವ್ಯಾಪ್ತಿಯ ಸ್ಥಳೀಯ ಸಂಸ್ಥೆಗಳ ಕಾರ್ಯವೈಖರಿಯನ್ನು ಗಮನಿಸುತ್ತಿದ್ದಾರೆ ಎಂದು ಅಭಿಪ್ರಾಯಕ್ಕೆ ಬರಬಹುದು. ಒಟ್ಟಿನಲ್ಲಿ ತ್ಯಾಜ್ಯ ನಿರ್ವಹಣೆ ಎಷ್ಟು ಮುಖ್ಯವೋ ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಜನರಿಗೆ ಒದಗಿಸುವುದೂ ಅಷ್ಟೇ ಮುಖ್ಯ. ಈ ಮೂಲಕ ಹೆಚ್ಚಿನ ಜನಜಾಗೃತಿ ಮೂಡಿಸಲು ಸಹಾಯವಾಗುತ್ತದೆ ಮತ್ತು ಸ್ಥಳೀಯ ಸಂಸ್ಥೆಗಳು ನಾಗರಿಕರಿಂದ ಹೆಚ್ಚಿನ ಸಹಕಾರವನ್ನು ಅಪೇಕ್ಷಿಸಬಹುದು.

❖ ಗ್ರಾಮೀಣ ಪ್ರದೇಶದಲ್ಲಿ ಶೇಕಡ 42ರಷ್ಟು ಮಂದಿ ಕಸ ವಿಂಗಡಿಸಲು ಬಕೆಟನ್ನು ಸ್ಥಳೀಯ ಸಂಸ್ಥೆ ಒದಗಿಸಬೇಕೆಂದು ಅಭಿಪ್ರಾಯಪಟ್ಟರೆ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ 210 ಪ್ರತಿಕ್ರಿಯೆದಾರರಲ್ಲಿ 113 ಮಂದಿಗೆ ಅಂದರೆ 54 ಶೇಕಡ ಜನರು ಬಕೆಟ್ ಒದಗಿಸಬೇಕೆಂದು ಬಯಸುತ್ತಾರೆ. ಕೆಲವರು ಬಕೆಟ್ ಪಡೆಯಲು ನಿರಾಕರಿಸುತ್ತಿದ್ದು, ತ್ಯಾಜ್ಯ ಸಂಗ್ರಹಕಾರರು ಪ್ರತಿನಿತ್ಯ ಬರದಿರುವುದರಿಂದ ಮೀನು, ಕೋಳಿ ಮುಂತಾದ ಮಾಂಸದ ತ್ಯಾಜ್ಯಗಳನ್ನು ಇವುಗಳಲ್ಲಿ ಸಂಗ್ರಹಿಸಿಡುವುದರಿಂದ ದುರ್ವಾಸನೆ ಹಾಗೂ ಆರೋಗ್ಯದ ಸಮಸ್ಯೆ ಎದುರಿಸಬೇಕಾಗಿದೆ ಎಂದು ತಿಳಿಸಿದ್ದಾರೆ.

❖ ಸ್ಥಳೀಯ ಸಂಸ್ಥೆಗಳು ತಮ್ಮ ಕಛೇರಿಗಳ ವ್ಯಾಪ್ತಿಯಲ್ಲಿ ಗೋಡೆ ಬರಹ ಹಾಗೂ ಫಲಕಗಳ ಮೂಲಕ ನಿಯಮಾವಳಿಗಳು ಮತ್ತು ಸೂಚನೆಗಳನ್ನು ಪ್ರದರ್ಶಿಸಿರುವುದು ಕಂಡು ಬರುತ್ತದೆ. ಜನರು ಅನಧಿಕೃತವಾಗಿ ತ್ಯಾಜ್ಯ ಎಸೆಯುವ ಸಾರ್ವಜನಿಕ ಸ್ಥಳಗಳಲ್ಲಿಯೂ ಎಚ್ಚರಿಕೆ ಫಲಕಗಳನ್ನು ಹಾಕಿರುವುದನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಎಚ್ಚರಿಕೆ ಫಲಕಗಳು ಅಗತ್ಯ ಮತ್ತು ಪರಿಣಾಮಕಾರಿ ಎನ್ನುವುದು ಗ್ರಾಮೀಣ ಮತ್ತು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಬರುವ ಪ್ರತಿಕ್ರಿಯೆದಾರರ ಅಭಿಪ್ರಾಯಗಳಿಂದ ವ್ಯಕ್ತವಾಗಿದೆ.

❖ ಈ ಜನಾಭಿಪ್ರಾಯದ ಮೂಲಕ ತಿಳಿದು ಬರುವುದೇನೆಂದರೆ ಅಗತ್ಯವಿರುವಲ್ಲಿ ಮತ್ತೆ ಸಾರ್ವಜನಿಕ ತೊಟ್ಟಿಗಳನ್ನು ಅಳವಡಿಸಬೇಕು. ಇಲ್ಲದೇ ಹೋದರೆ ಜನರಿಗೆ ಅನಧಿಕೃತ

ಜಾಗಗಳಲ್ಲಿ ತ್ಯಾಜ್ಯ ಎಸೆಯಲು ಅನುವು ಮಾಡಿ ಕೊಟ್ಟಂತಾಗುತ್ತದೆ. ಸಾರ್ವಜನಿಕ ತೊಟ್ಟಿಗಳನ್ನು ಸಂಪೂರ್ಣವಾಗಿ ತೆಗೆದು ಹಾಕುವುದರಿಂದ ಪ್ರವಾಸಿಗರು ಹಾಗೂ ಪ್ರಯಾಣಿಕರು ತ್ಯಾಜ್ಯ ಹಾಕಲು ಜಾಗವಿಲ್ಲದೆ ಸಾರ್ವಜನಿಕ ಸ್ಥಳಗಳಲ್ಲಿ ಎಸೆಯಬೇಕಾಗುತ್ತದೆ.

- ❖ ಸರಾಸರಿ 86 ಶೇಕಡದಷ್ಟು ಗ್ರಾಮೀಣ ವ್ಯಾಪ್ತಿಯ ಜನರು ಜಾಥಾ, ಬೀದಿ ನಾಟಕ, ಜಾಹೀರಾತು, ಮುಂತಾದ ಜನಜಾಗೃತಿ ಕಾರ್ಯಕ್ರಮಗಳು ಅಗತ್ಯ ಎನ್ನುವ ಅಭಿಪ್ರಾಯ ನೀಡಿದ್ದಾರೆ. ಕೇವಲ 14 ಶೇಕಡ ಜನರು ಈ ಬಗ್ಗೆ 'ತಟಸ್ಥ' ಪ್ರತಿಕ್ರಿಯೆ ನೀಡಿದರೆ, ಯಾರೊಬ್ಬರೂ 'ಅನುಪಯುಕ್ತ' ಎನ್ನುವ ಅಭಿಪ್ರಾಯಕ್ಕೆ ಬಂದಿಲ್ಲ. ನಗರ ಪ್ರದೇಶದಲ್ಲೂ ಜನರು ಜನ ಜಾಗೃತಿ ಕಾರ್ಯಕ್ರಮಗಳ ಪರವಾಗಿದ್ದು 29 ಶೇಕಡ ಜನರು ದೃಢವಾಗಿ ಸಮ್ಮತಿಸಿದರೆ, 62 ಶೇಕಡ ಮಂದಿ ಸಮ್ಮತಿಯನ್ನು ವ್ಯಕ್ತಪಡಿಸಿದ್ದಾರೆ. ಈ ದತ್ತಾಂಶದ ಮೂಲಕ ಜನಜಾಗೃತಿ ಕಾರ್ಯಕ್ರಮಗಳ ಅವಶ್ಯಕತೆ ಇರುವುದು ತಿಳಿದು ಬರುತ್ತದೆ.
- ❖ ತ್ಯಾಜ್ಯ ನಿರ್ವಹಣಾ ಅಭಿಯಾನದಲ್ಲಿ ನಗರ ಸ್ಥಳೀಯ ಸರಕಾರಗಳ ವ್ಯಾಪ್ತಿಯಲ್ಲಿ ಜನಸಾಮಾನ್ಯರ ಭಾಗವಹಿಸುವಿಕೆ ಕಡಿಮೆ ಇರುವುದು ಕಂಡು ಬರುತ್ತದೆ. ಗ್ರಾಮೀಣ ಪ್ರದೇಶದಲ್ಲಿ 43 ಶೇಕಡ ಜನ ಭಾಗವಹಿಸಿಲ್ಲ ಎಂದು ಪ್ರತಿಕ್ರಿಯೆ ನೀಡಿದರೆ ನಗರ ವ್ಯಾಪ್ತಿಯ ಮಾಹಿತಿದಾರರಲ್ಲಿ 60 ಶೇಕಡ ಜನ ಭಾಗವಹಿಸಿಲ್ಲ ಎಂದಿದ್ದಾರೆ. ಹಾಗೆಯೇ ಕಾರಣಗಳನ್ನು ವಿಶ್ಲೇಷಿಸಿದಾಗ ಆರೋಗ್ಯ ದೃಷ್ಟಿಯಿಂದ ಭಾಗವಹಿಸುವವರ ಸಂಖ್ಯೆ ಹೆಚ್ಚಿದ್ದು, ನಂತರದ ಕಾರಣ ಪರಿಸರ ಸಂರಕ್ಷಣೆಯಾಗಿದೆ. ಜನರು ಆರೋಗ್ಯ ಮತ್ತು ಪರಿಸರ ಸಂರಕ್ಷಣೆಗೆ ಆದ್ಯತೆ ನೀಡುತ್ತಿರುವುದು ಈ ಮೂಲಕ ವ್ಯಕ್ತವಾಗಿದೆ. ಗ್ರಾಮೀಣ ಮತ್ತು ನಗರ ಪ್ರದೇಶಗಳ ವ್ಯಾಪ್ತಿಯಲ್ಲಿ ಜನಾಭಿಪ್ರಾಯದ ಪ್ರಮಾಣ ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿದೆ.
- ❖ ಪ್ರಾಥಮಿಕ ಶಿಕ್ಷಣ ಪಡೆದವರಲ್ಲಿ ಕೇವಲ 1 ಶೇಕಡ ಮಾತ್ರ ಅವೈಜ್ಞಾನಿಕ ಕ್ರಮವನ್ನು (ರಸ್ತೆ ಬದಿ/ಚರಂಡಿ/ಬಯಲು ಪ್ರದೇಶಗಳು ಎಸೆಯುವುದು) ಅನುಸರಿಸಿರುವುದು ಕಂಡು ಬಂದರೆ, ಪ್ರೌಢ ಶಿಕ್ಷಣ ಪಡೆದವರಲ್ಲಿ 2 ಶೇಕಡ ಮತ್ತು ಪದವಿಪೂರ್ವ ಶಿಕ್ಷಣ ಪಡೆದವರಲ್ಲಿ 1 ಶೇಕಡ ಇದೆ. ಉಳಿದಂತೆ ಪದವಿ ಹಾಗೂ ಸ್ನಾತಕೋತ್ತರ ಪದವಿ ಪಡೆದವರಲ್ಲಿ ಅವೈಜ್ಞಾನಿಕ ಕ್ರಮವನ್ನು ಅನುಸರಿಸುವವರು ಕಂಡು ಬಂದಿಲ್ಲ. ಶೈಕ್ಷಣಿಕ ಅರ್ಹತೆ ಹಾಗೂ ತ್ಯಾಜ್ಯ ಹೊರ ಹಾಕುವ ವಿಧಾನಕ್ಕೆ ಧನಾತ್ಮಕ ಸಂಬಂಧವಿರುವುದು ಈ ಮೂಲಕ ಧೃಢಪಟ್ಟಿದೆ.
- ❖ ದಿನನಿತ್ಯ ಉತ್ಪಾದನೆಯಾಗುವ ಘನತ್ಯಾಜ್ಯಗಳಲ್ಲಿ ಬಹುಪಾಲು ಅಹಾರ ತ್ಯಾಜವಾಗಿದ್ದು, ಇದರ ಉತ್ಪಾದನೆಯ ಪ್ರಮಾಣಕ್ಕೂ ಜನರ ಆಹಾರ ಪದ್ಧತಿಗೂ ಇರುವ ಸಂಬಂಧ

ಅಧ್ಯಯನಗಳಿಂದ ತಿಳಿದುಬರುತ್ತದೆ. ಒಟ್ಟು 410 ಪ್ರತಿಕ್ರಿಯೆದಾರರಲ್ಲಿ 10 ಶೇಕಡ ಶುದ್ಧ ಸಸ್ಯಾಹಾರಿಗಳಾದರೆ, 60 ಶೇಕಡ ಮಿಶ್ರಾಹಾರಿಗಳು. ಉಳಿದ 8 ಶೇಕಡ ಗರಿಷ್ಠ ಸಸ್ಯಾಹಾರ ಹಾಗೂ 22 ಶೇಕಡ ಗರಿಷ್ಠ ಮಾಂಸಾಹಾರಿಗಳು. ಸಾಮಾನ್ಯವಾಗಿ ಸರಾಸರಿ ದಿನಕ್ಕೆ ಕನಿಷ್ಠ ಎರಡು ಸಲ ಮಾಂಸಾಹಾರವನ್ನು ಸೇವಿಸುವವರನ್ನು 'ಗರಿಷ್ಠ ಮಾಂಸಾಹಾರ' ಎಂದು ವರ್ಗೀಕರಿಸಲಾಗಿದೆ. ಹಾಗೆಯೇ ಸರಾಸರಿ ದಿನಕ್ಕೆ ಕನಿಷ್ಠ ಎರಡು ಸಲ ಸಸ್ಯಾಹಾರವನ್ನು ಸೇವಿಸುವವರನ್ನು 'ಗರಿಷ್ಠ ಸಸ್ಯಾಹಾರ' ಗುಂಪಿಗೆ ಸೇರಿಸಲಾಗಿದೆ. ಅಂಕಿ ಅಂಶದಲ್ಲಿ ಕಂಡು ಬಂದಂತೆ ಒಟ್ಟು 63 ಶೇಕಡ ಜನ ಪ್ರತಿನಿತ್ಯ 1 ಕಿ. ಗ್ರಾಂ ಗಿಂತ ಕಡಿಮೆ ಘನತ್ಯಾಜ್ಯ ಉತ್ಪಾದಿಸುತ್ತಾರೆ. ದಿನನಿತ್ಯ 3 ಕಿ.ಗ್ರಾಂ.ಗಿಂತ ಹೆಚ್ಚು ತ್ಯಾಜ್ಯ ಉತ್ಪಾದಿಸುವವರಲ್ಲಿ 'ಗರಿಷ್ಠ ಮಾಂಸಾಹಾರ' ಮತ್ತು 'ಮಿಶ್ರಾಹಾರ' ಗುಂಪಿನವರು ಮಾತ್ರ ಒಳಗೊಂಡಿದ್ದಾರೆ. ಒಟ್ಟು ಅಂಕಿ-ಅಂಶವನ್ನು ತೆಗೆದುಕೊಂಡರೆ 95 ಶೇಕಡ ಜನ ಪ್ರತಿನಿತ್ಯ 1 ರಿಂದ 3 ಕಿ.ಗ್ರಾಂ ತನಕ ಘನತ್ಯಾಜ್ಯವನ್ನು ಉತ್ಪಾದನೆ ಮಾಡುತ್ತಾರೆ.

- ❖ ತ್ಯಾಜ್ಯ ಉತ್ಪಾದನಾ ಪ್ರಮಾಣಕ್ಕೂ ಆರ್ಥಿಕ ಸ್ಥಿತಿಗತಿಗೂ ನೇರ ಸಂಬಂಧವಿರುವುದನ್ನು ಈ ಅಧ್ಯಯನ ಗುರುತಿಸಿದೆ. ಆದಾಯ ಹೆಚ್ಚಿದಂತೆ ತ್ಯಾಜ್ಯ ಉತ್ಪಾದನಾ ಪ್ರಮಾಣವೂ ಹೆಚ್ಚುತ್ತದೆ ಎನ್ನುವುದು ಅಧ್ಯಯನಗಳಿಂದ ತಿಳಿದು ಬಂದಿದೆ. ಆದಾಯ ಹೆಚ್ಚಿದಷ್ಟು ಜನರು ಗ್ರಾಹಕ ವಸ್ತುಗಳನ್ನು ಕೊಂಡುಕೊಳ್ಳುವ ಪ್ರಮಾಣ ಹೆಚ್ಚಾಗುತ್ತದೆ. ಅತೀ ಗ್ರಾಹಕತೆಯ ಪರಿಣಾಮವೇ ಅಧಿಕ ತ್ಯಾಜ್ಯ ಉತ್ಪಾದನೆ.

- ❖ ತ್ಯಾಜ್ಯ ನಿರ್ವಹಣೆಗಾಗಿ ಜನರಿಂದ ಶುಲ್ಕ ಸಂಗ್ರಹಿಸುವುದು ಸ್ಥಳೀಯ ಸಂಸ್ಥೆಗಳಿಗೆ ದೊಡ್ಡ ಸವಾಲು. ಕೆಲವರು ತ್ಯಾಜ್ಯ ನಿರ್ವಹಣೆಯನ್ನು ತಮ್ಮ ಸ್ವಂತ ಖಾಸಗಿ ಜಾಗಗಳಲ್ಲಿ ನಿರ್ವಹಿಸಿದರೆ, ಇನ್ನು ಕೆಲವರು ಸ್ಥಳೀಯ ಸಂಸ್ಥೆಯನ್ನೇ ಅವಲಂಬಿಸಿರುತ್ತಾರೆ. ಪ್ರತಿಯೊಂದು ಸ್ಥಳೀಯ ಸಂಸ್ಥೆಯ ವ್ಯಾಪ್ತಿಯಲ್ಲಿ ಈ ಎರಡೂ ವರ್ಗದ ಜನರನ್ನು ಕಾಣಬಹುದು.

- ❖ ತ್ಯಾಜ್ಯ ನಿರ್ವಹಣೆಗೆ ಶುಲ್ಕ ನೀಡಲು ಸಿದ್ಧವಿರುವ 308 ಪ್ರತಿಕ್ರಿಯೆದಾರರಲ್ಲಿ 188 ಮಂದಿ ಅಂದರೆ 61 ಶೇಕಡ ಜನ ತಿಂಗಳಿಗೊಮ್ಮೆ ತ್ಯಾಜ್ಯ ಶುಲ್ಕ ನೀಡಲು ಸಿದ್ಧರಿದ್ದಾರೆ. ವಾರ್ಷಿಕ ಶುಲ್ಕ ನೀಡಲು 119 ಮಂದಿ ಅಂದರೆ 39 ಶೇಕಡ ಜನ ಇಚ್ಛಿಸಿದ್ದಾರೆ. ಬಹುತೇಕ ಜನರು ವಾರಕ್ಕೊಮ್ಮೆ ಶುಲ್ಕ ನೀಡಲು ಒಪ್ಪಿಗೆಯನ್ನು ಸೂಚಿಸಿರುವುದಿಲ್ಲ. ಉದ್ಯೋಗದ ಆಧಾರದಲ್ಲಿ ವಿಶ್ಲೇಷಣೆ ಮಾಡಿದಾಗ ಶುಲ್ಕ ಪಾವತಿ ಮಾಡುವ 14 ಮಂದಿ ಕೃಷಿಕರಲ್ಲಿ 12 ಮಂದಿ ಅಂದರೆ 86 ಶೇಕಡ ಜನ ತಿಂಗಳಿಗೊಮ್ಮೆ ಪಾವತಿಸಲು ಸಿದ್ಧವಿರುವುದಾಗಿ ತಿಳಿಸಿದ್ದಾರೆ. ಆದರೆ ಖಾಸಗಿ ಹಾಗೂ ಸರ್ಕಾರಿ ನೌಕರರು ಮತ್ತು ವ್ಯಾಪಾರ/ ಉದ್ದಿಮೆ

ನಡೆಸುವವರು ವಾರ್ಷಿಕ ಶುಲ್ಕ ಪಾವತಿಗೂ ಸಿದ್ಧರಿದ್ದಾರೆ. ಒಟ್ಟು ಪ್ರತಿಕ್ರಿಯೆದಾರರ ಅಭಿಪ್ರಾಯವನ್ನು ವಿಶ್ಲೇಷಿಸಿದಾಗ ತ್ಯಾಜ್ಯ ಸಂಗ್ರಹ ಶುಲ್ಕವನ್ನು ಮಾಸಿಕ ಅಥವಾ ವಾರ್ಷಿಕ ಅವಧಿಗೆ ವಿಧಿಸಿದರೆ ಜನರಿಗೆ ಹೆಚ್ಚಿನ ಅನಾನುಕೂಲವಾಗದು ಎಂದು ತಿಳಿದು ಬರುತ್ತದೆ.

- ಶೇಕಡ 13ರಷ್ಟು ಸ್ಥಳೀಯ ಸಂಸ್ಥೆಗಳು ಮಾತ್ರ ತಮ್ಮ ಆದಾಯದ ಅಂದಾಜು 5 ಶೇಕಡಕ್ಕಿಂತ ಕಡಿಮೆ ಹಣವನ್ನು ತ್ಯಾಜ್ಯ ನಿರ್ವಹಣೆಗೆ ಖರ್ಚು ಮಾಡುತ್ತಿವೆ. ಅಂದರೆ ಶೇಕಡ 17ರಷ್ಟು ಸ್ಥಳೀಯ ಸಂಸ್ಥೆಗಳು 5ರಿಂದ 10 ಶೇಕಡ ಖರ್ಚು ಮಾಡುತ್ತಿವೆ. ದೊರೆತ ಅಂಕಿ–ಅಂಶಗಳ ಪ್ರಕಾರ ಶೇಕಡ 59ರಷ್ಟು ಸ್ಥಳೀಯ ಸಂಸ್ಥೆಗಳು ಶೇಕಡ 20 ಕ್ಕಿಂತಲೂ ಅಧಿಕ ಆದಾಯದ ಭಾಗವನ್ನು ತ್ಯಾಜ್ಯ ನಿರ್ವಹಣೆಗೆ ಉಪಯೋಗಿಸುತ್ತಿವೆ.

- ತ್ಯಾಜ್ಯ ನಿರ್ವಹಣೆಯ ಆರ್ಥಿಕ ಹೊರೆ ಗ್ರಾಮೀಣ ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚಿದ್ದು, ಹೆಚ್ಚಿನ ಪಂಚಾಯತ್‌ಗಳು ಹಣಕಾಸಿನ ಕೊರತೆಯನ್ನು ಎದುರಿಸುತ್ತಿವೆ. ಒಟ್ಟು 21 ಗ್ರಾಮ ಪಂಚಾಯತ್‌ಗಳಲ್ಲಿ 15 ಪಂಚಾಯತ್‌ಗಳು ಅಂದರೆ ಶೇಕಡ 71ರಷ್ಟು ಗ್ರಾಮ ಪಂಚಾಯತ್‌ಗಳು ತಮ್ಮ ಒಟ್ಟು ಆದಾಯದಲ್ಲಿ ಶೇಕಡ 20ಕ್ಕಿಂತಲೂ ಹೆಚ್ಚು ಹಣವನ್ನು ತ್ಯಾಜ್ಯ ನಿರ್ವಹಣಾ ಕಾರ್ಯಕ್ಕೆ ವಿನಿಯೋಗಿಸುತ್ತಿವೆ. ಒಟ್ಟಾರೆ ನಗರ ಸ್ಥಳೀಯ ಸಂಸ್ಥೆಗಳಿಗೆ ಹೋಲಿಸಿದರೆ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ತಮ್ಮ ಆದಾಯದಲ್ಲಿ ಹೆಚ್ಚಿನ ಭಾಗ ತ್ಯಾಜ್ಯ ನಿರ್ವಹಣೆಗೆ ಬಳಕೆ ಮಾಡುತ್ತಿರುವುದು ಕಂಡುಬಂದಿದೆ. ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಕಡಿಮೆ ಆದಾಯ ಹೊಂದಿರುವುದು ಹಾಗೂ ನಗರ ಸ್ಥಳೀಯ ಸಂಸ್ಥೆಗಳು ಅಧಿಕ ಆದಾಯ ಹೊಂದಿರುವುದು ಇದಕ್ಕೆ ಕಾರಣವಾದರೂ, ಗ್ರಾಮೀಣ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ನಿರ್ವಹಣೆಗೆ ಹೆಚ್ಚಿನ ಆದ್ಯತೆ ನೀಡುತ್ತಿವೆ ಎಂಬುದನ್ನು ಈ ಮೂಲಕ ಕಂಡುಕೊಳ್ಳಬಹುದು.

- ಒಟ್ಟು 21 ಗ್ರಾಮ ಪಂಚಾಯತ್‌ಗಳಲ್ಲಿ 12 ಗ್ರಾಮ ಪಂಚಾಯತ್‌ಗಳು ಶುಲ್ಕ ವಿಧಿಸಿದರೆ, 9 ಗ್ರಾಮ ಪಂಚಾಯತ್‌ಗಳು ಇತರ ಮೂಲಗಳಿಂದ ವೆಚ್ಚದ ಹೊಂದಾಣಿಕೆ ಮಾಡುತ್ತಿವೆ. ಅಂದರೆ ಶೇಕಡ 57ರಷ್ಟು ಪಂಚಾಯತ್‌ಗಳು ಮಾತ್ರ ಶುಲ್ಕ ಸಂಗ್ರಹ ಮಾಡುತ್ತಿವೆ. ಶೇಕಡ 90ರಷ್ಟು ನಗರ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ಉತ್ಪಾದನೆಯ ಪ್ರಮಾಣಕ್ಕನುಗುಣವಾಗಿ ಶುಲ್ಕ ಸಂಗ್ರಹಿಸುತ್ತಿವೆ. ವಾಣಿಜ್ಯ ಚಟುವಟಿಕೆಗಳಿಗೆ ವಿಧಿಸುವ ಶುಲ್ಕ ಮನೆಗಳಿಗೆ ವಿಧಿಸುವ ಶುಲ್ಕಕ್ಕಿಂತ ಸಾಮಾನ್ಯವಾಗಿ ಹೆಚ್ಚಿದ್ದು ಮನೆ ಮತ್ತು ವಾಣಿಜ್ಯ ಕಟ್ಟಡಗಳ ವಿಸ್ತೀರ್ಣವನ್ನು ಹಾಗೂ ವಾಣಿಜ್ಯ ಚಟುವಟಿಕೆಗಳ ವಿಧಗಳನ್ನು ಪರಿಗಣಿಸಿ ದರವನ್ನು ನಿಗದಿಪಡಿಸಿರುವುದು ಕಂಡು ಬಂದಿದೆ. ನಗರ ಸ್ಥಳೀಯ ಸಂಸ್ಥೆಗಳಲ್ಲಿ ಶುಲ್ಕ ವಿಧಿಸುವ ಪ್ರಮಾಣ 87.5 ಶೇಕಡವಿದ್ದು ಗ್ರಾಮ ಪಂಚಾಯತ್‌ಗಳಿಗಿಂತ ನಗರ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ಶುಲ್ಕ

ಸಂಗ್ರಹದಲ್ಲಿ ಮುಂದಿರುವುದು ಕಂಡು ಬಂದರೂ ಜಿಲ್ಲೆಯಲ್ಲಿರುವ ನಗರ ಸಂಸ್ಥೆಗಳಲ್ಲಾಗಲಿ ಅಥವಾ ಗ್ರಾಮೀಣ ನಗರ ಸ್ಥಳೀಯ ಸಂಸ್ಥೆಗಳಲ್ಲಾಗಲಿ ಶುಲ್ಕ/ತೆರಿಗೆ ವಿಧಿಸುವ ವಿಚಾರದಲ್ಲಿ ಏಕ ರೀತಿಯ ನಿಯಮ ಜಾರಿಯಲ್ಲಿರದಿರುವುದರಿಂದ ಅಗತ್ಯವಿರುವಷ್ಟು ಶುಲ್ಕ ಸಂಗ್ರಹಿಸಲು ಸ್ಥಳೀಯ ಸಂಸ್ಥೆಗಳಿಗೆ ತೊಡಕಾಗಿರುವುದು ಮತ್ತು ಇದರಿಂದಾಗಿ ತ್ಯಾಜ್ಯ ನಿರ್ವಹಣೆಗೆ ಹಣಕಾಸಿನ ಕೊರತೆ ಎದುರಾಗಿರುವುದು ಕಂಡುಬಂದಿದೆ.

❖ ಗ್ರಾಮೀಣ ಪ್ರದೇಶದಲ್ಲಿ 200ರಲ್ಲಿ 166 ಮಾಹಿತಿದಾರರು ಅಂದರೆ ಶೇಕಡ 83ರಷ್ಟು ಮಂದಿ ಶುಲ್ಕ ನೀಡಲು ಸಿದ್ಧರಿದ್ದಾರೆ. ಉಳಿದ ಶೇಕಡ 17ರಷ್ಟು ಜನ ವಿವಿಧ ಕಾರಣ ಗಳಿಗೋಸ್ಕರ ಶುಲ್ಕ ನೀಡಲು ವಿರೋಧ ವ್ಯಕ್ತಪಡಿಸಿದ್ದಾರೆ. ನಗರ ಪ್ರದೇಶದ ಜನರಲ್ಲಿ ಶೇಕಡ 81 ಮಂದಿ ಶುಲ್ಕ ನೀಡಲು ಸಿದ್ಧರಿದ್ದಾರೆ. ನಗರ ಪ್ರದೇಶಕ್ಕೆ ಹೋಲಿಸಿದರೆ ಗ್ರಾಮೀಣ ಪ್ರದೇಶದ ಜನರೇ ಶುಲ್ಕ ನೀಡಲು ಹೆಚ್ಚು ಆಸಕ್ತರಾಗಿದ್ದಾರೆ. ಸರಾಸರಿ 81 ಶೇಕಡ ಜನರು ಶುಲ್ಕ ನೀಡಲು ಸಿದ್ಧರಿರುವುದನ್ನು ಗಮನಿಸಿದರೆ, ತ್ಯಾಜ್ಯ ನಿರ್ವಹಣೆಗೆ ಸ್ಥಳೀಯ ಸಂಸ್ಥೆಗಳು ಹಣಕಾಸಿನ ಕೊರತೆ ಅನುಭವಿಸಬೇಕಾಗಿಲ್ಲ ಎನ್ನುವುದು ತಿಳಿದುಬರುತ್ತದೆ. ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಸರಾಸರಿ ಶುಲ್ಕ ಪಾವತಿಸುವ ಪ್ರಮಾಣ ಗ್ರಾಮೀಣ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಗಿಂತ ಹೆಚ್ಚಿದೆ.

❖ ಕ್ಷೇತ್ರಕಾರ್ಯದಲ್ಲಿ ಕಂಡುಬಂದಂತೆ ಎಲ್ಲಾ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ಶುಲ್ಕ ಸಂಗ್ರಹಿಸು ವುದಿಲ್ಲ. ಶುಲ್ಕ ಸಂಗ್ರಹಿಸುವ ಸ್ಥಳೀಯ ಸಂಸ್ಥೆಗಳು ಕೆಲವು ಕಡೆ ವಾರಕ್ಕೊಮ್ಮೆ, ತಿಂಗಳಿಗೊಮ್ಮೆ, ವಾರ್ಷಿಕ ಹೀಗೆ ಬೇರೆ ಬೇರೆ ಅವಧಿಗೊಮ್ಮೆ ಶುಲ್ಕ ಸಂಗ್ರಹ ಮಾಡುತ್ತಾರೆ. ಸಾಕಷ್ಟು ಸಿಬ್ಬಂದಿ ಕೊರತೆ ಇರುವ ಕಾರಣ ಕೆಲವು ಪಂಚಾಯತ್‌ಗಳು ವಾರ್ಷಿಕ ತೆರಿಗೆ ಪಾವತಿ ಸಂದರ್ಭದಲ್ಲಿ ವಸೂಲಿ ಮಾಡುತ್ತಾರೆ. ತ್ಯಾಜ್ಯ ಶುಲ್ಕವು ಬಳಕೆದಾರರ ಉದ್ದೇಶ ಹಾಗೂ ಕಟ್ಟಡದ ವಿಸ್ತೀರ್ಣವನ್ನು ಅವಲಂಬಿಸಿದೆ. ಸಾಮಾನ್ಯವಾಗಿ ಗೃಹ ಬಳಕೆದಾರರಿಗೆ ವಾಣಿಜ್ಯ ಬಳಕೆದಾರರಿಗಿಂತ ಕಡಿಮೆ ಶುಲ್ಕ ವಿಧಿಸಲಾಗುತ್ತಿದೆ. ಕೆಲವು ಸ್ಥಳೀಯ ಸಂಸ್ಥೆಗಳು ವಾಣಿಜ್ಯ ಚಟುವಟಿಕೆಗಳಿಗೆ ದರ ನಿಗದಿ ಮಾಡಿ ಅದರ ಪ್ರಕಾರ ಶುಲ್ಕ ಸಂಗ್ರಹ ಮಾಡುತ್ತಿವೆ. ಇಂತಹ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಶುಲ್ಕದ ದರದ ಬಗ್ಗೆ ಪಾವತಿದಾರರಲ್ಲಿ ಯಾವುದೇ ಗೊಂದಲಗಳಿಲ್ಲ ಮತ್ತು ಸ್ಥಳೀಯ ಸಂಸ್ಥೆಗೆ ವಾರ್ಷಿಕವಾಗಿ ಸಂಗ್ರಹವಾಗುವ ಶುಲ್ಕ ರೂಪದ ಒಟ್ಟು ಆದಾಯವನ್ನು ಅಂದಾಜಿಸಲು ಸಾಧ್ಯವಾಗುತ್ತದೆ.

❖ ತ್ಯಾಜ್ಯ ನಿರ್ವಹಣೆಯಲ್ಲಿ ಸಾಮಾಜಿಕ ಅಂಶಗಳು ಪ್ರಭಾವ ಬೀರಿರುವುದು ಪ್ರತಿಕ್ರಿಯೆದಾರರ ವಯಸ್ಸು, ಲಿಂಗ, ಶೈಕ್ಷಣಿಕ ಮಾನದಂಡ, ವರ್ಗ ಮತ್ತು ಧರ್ಮಗಳ ಅಧಾರದಲ್ಲಿ ವಿಶ್ಲೇಷಿಸಿದಾಗ ದೊರೆತ ಫಲಿತಗಳಿಂದ ಸಾಬೀತಾಗಿದೆ.

- ಅಧ್ಯಯನದ ಪ್ರಕಾರ 30ಕ್ಕಿಂತ ಕಡಿಮೆ ವಯಸ್ಸಿನವರಲ್ಲಿ ನಿಯಮಾವಳಿಗಳ ಬಗ್ಗೆ ಹೆಚ್ಚು ಅರಿವಿರುವುದು ಕಂಡು ಬಂದಿದೆ. ಈ ವಯಸ್ಸಿನವರಲ್ಲಿ ಸಾಕ್ಷರತಾ ಪ್ರಮಾಣ ಹೆಚ್ಚಾಗಿರುವುದು ಹಾಗೂ ಕೇಂದ್ರ, ರಾಜ್ಯ ಮತ್ತು ಸ್ಥಳೀಯ ಸರಕಾರಗಳು ಕಳೆದ ನಾಲ್ಕೈದು ವರ್ಷಗಳಿಂದ ಹೆಚ್ಚಿನ ಪ್ರಚಾರ ಕೈಗೊಂಡಿರುವುದು ಇದಕ್ಕೆ ಕಾರಣವಾಗಿದೆ ಎನ್ನುವ ಅಭಿಪ್ರಾಯ ಜನರಿಂದ ವ್ಯಕ್ತವಾಗಿದೆ. ಸ್ಥಳೀಯ ಸಂಸ್ಥೆಗಳು ತಮ್ಮ ಕಛೇರಿ ಆವರಣಗಳಲ್ಲಿ ನಿಯಮಾವಳಿಗಳಿಗೆ ಸಂಬಂಧಿಸಿದ ಪ್ರಮುಖ ಅಂಶಗಳನ್ನು ಗೋಡೆ ಬರಹದ ಮೂಲಕ ಮಾಹಿತಿ ಒದಗಿಸಿರುವುದು ಪ್ರತಿಕ್ರಿಯೆದಾರರಲ್ಲಿ ಜಾಗೃತಿ ಮೂಡಿಸಿದೆ.
- ಮಹಿಳೆಯರಿಗಿಂತ ಪುರುಷರಿಗೆ ತ್ಯಾಜ್ಯ ನಿರ್ವಹಣೆಯ ನಿಯಮಾವಳಿಗಳ ಬಗ್ಗೆ ಹೆಚ್ಚು ಅರಿವಿರುವುದು ತಿಳಿದುಬರುತ್ತದೆ. ಒಟ್ಟು 410 ಮಾದರಿಗಳಲ್ಲಿ 179 ಅಂದರೆ 43 ಶೇಕಡ ಜನರಿಗೆ ನಿಯಮಾವಳಿಗಳ ಅರಿವಿದ್ದು ಉಳಿದ 231 ಮಂದಿಗೆ ಅಂದರೆ ಶೇಕಡ 57 ರಷ್ಟು ಜನರಿಗೆ ಅರಿವಿಲ್ಲದಿರುವುದು ಕಂಡು ಬಂದಿದೆ. ಶೇಕಡ 44 ಮಂದಿ ಪುರುಷರು ಮತ್ತು ಶೇಕಡ 41 ಮಂದಿ ಮಹಿಳೆಯರು ನಿಯಮಾವಳಿಗಳ ಬಗ್ಗೆ ಮಾಹಿತಿಯನ್ನು ಹೊಂದಿದ್ದಾರೆ. ತ್ಯಾಜ್ಯ ನಿರ್ವಹಣೆಯು ಸಮರ್ಪಕವಾಗಿ ನಡೆಯದಿರುವುದಕ್ಕೆ ಶೇಕಡ 50ಕ್ಕಿಂತಲೂ ಕಡಿಮೆ ಜನರು ನಿಯಮಾವಳಿಗಳ ಬಗ್ಗೆ ಅರಿವನ್ನು ಹೊಂದಿರುವುದು ಪ್ರಮುಖ ಕಾರಣಗಳಲ್ಲಿ ಒಂದಾಗಿದೆ ಎಂದು ಈ ಮೂಲಕ ಕಂಡುಬರುತ್ತದೆ.
- ಹಾಗೆಯೇ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬಹುಪಾಲು ಜನರಿಗೆ ನಿಯಮಾವಳಿಗಳ ಬಗ್ಗೆ ಮಾಹಿತಿ ಇಲ್ಲ. ಸರಾಸರಿ ಶೇಕಡ 30ರಷ್ಟು ಜನರು ಮಾತ್ರ ತಿಳಿವಳಿಕೆ ಹೊಂದಿರುತ್ತಾರೆ.
- ಶೈಕ್ಷಣಿಕ ಮಾನದಂಡದಲ್ಲಿ ವಿಶ್ಲೇಷಿಸಿದಾಗ ಪದವಿ ಹಾಗೂ ಸ್ನಾತಕೋತ್ತರ ಶಿಕ್ಷಣ ಪಡೆದವರಲ್ಲಿ ನಿಯಮಾವಳಿಗಳ ಬಗ್ಗೆ ಹೆಚ್ಚಿನ ಅರಿವಿರುವುದು ಕಂಡುಬರುತ್ತದೆ. ಪ್ರಾಥಮಿಕ, ಪ್ರೌಢ ಮತ್ತು ಪದವಿಪೂರ್ವ ಶಿಕ್ಷಣ ಪಡೆದ ಪ್ರತಿಕ್ರಿಯೆದಾರರಲ್ಲಿ ನಿಯಮಾವಳಿಗಳ ಅರಿವಿನ ಪ್ರಮಾಣ ಕಡಿಮೆ ಇರುವುದು ಕಂಡುಬಂದಿದೆ.
- ಒಟ್ಟು 322 ಹಿಂದು ಧರ್ಮಕ್ಕೆ ಸೇರಿದ ಪ್ರತಿಕ್ರಿಯೆದಾರರಲ್ಲಿ ಶೇಕಡ 35 ಅಂದರೆ 142 ಜನರು ಅರಿವಿದೆ ಎಂದಿದ್ದಾರೆ. ಮುಸ್ಲಿಂ ಧರ್ಮದ ಪ್ರತಿಕ್ರಿಯೆದಾರರಲ್ಲಿ 23 ಶೇಕಡ ಮತ್ತು ಕ್ರೈಸ್ತರಲ್ಲಿ 53 ಶೇಕಡ ಜನರು ನಿಯಮಾವಳಿಗಳ ಅರಿವಿದೆ ಎಂದು ಪ್ರತಿಕ್ರಿಯಿಸಿದ್ದಾರೆ. ಕ್ರೈಸ್ತರಲ್ಲಿ ನಿಯಮಾವಳಿಗಳ ಬಗ್ಗೆ ಅರಿವಿರುವವರು ಅಧಿಕ ಸಂಖ್ಯೆಯಲ್ಲಿದ್ದರೆ, ಮುಸ್ಲಿಮರಲ್ಲಿ ಅತ್ಯಂತ ಕಡಿಮೆ ಇದೆ. ಇದು ಪರಿಶಿಷ್ಟ ಜಾತಿಯ (28%) ಮತ್ತು ಪರಿಶಿಷ್ಟ ಪಂಗಡದ (25%)ಗಿಂತಲೂ ಕಡಿಮೆ ಪ್ರಮಾಣವನ್ನು ಹೊಂದಿದೆ.

❖ ಕೃಷಿಕರು ಹೆಚ್ಚಾಗಿ ಗ್ರಾಮೀಣ ಪ್ರದೇಶಗಳಲ್ಲಿ ತಾವೇ ಸ್ವಂತ ನಿರ್ವಹಣಾ ವ್ಯವಸ್ಥೆಗಳನ್ನು ಮಾಡಿಕೊಂಡಿರುವ ಕಾರಣದಿಂದ ಸ್ಥಳೀಯ ಸಂಸ್ಥೆಗಳ ಅವಲಂಬನೆ ಕಡಿಮೆ ಇದೆ. ಗ್ರಾಮೀಣ ಪ್ರದೇಶದ ಜನರಿಗೆ ಸ್ಥಳೀಯ ಸಂಸ್ಥೆಗಳು ಮಾಹಿತಿಗಳನ್ನು ಕ್ಲಪ್ತ ಸಮಯಕ್ಕೆ ಸೂಕ್ತ ರೀತಿಯಲ್ಲಿ ತಲುಪಿಸಲು ವಿಫಲವಾಗಿವೆ. ಹೆಚ್ಚಿನ ಗ್ರಾಮೀಣ ಸಂಸ್ಥೆಗಳ ವ್ಯಾಪ್ತಿಗಳಲ್ಲಿ ತ್ಯಾಜ್ಯ ಸಂಗ್ರಹಣಾ ಘಟಕಗಳಿಲ್ಲದಿರುವುದು ಹಾಗೂ ಪ್ರತಿನಿತ್ಯ ತ್ಯಾಜ್ಯ ಸಂಗ್ರಹ ವ್ಯವಸ್ಥೆ ಇಲ್ಲದಿರುವುದರಿಂದ ಜನರಿಗೆ ಅರಿವು ಕಡಿಮೆಯಾಗಿದೆ ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಶೈಕ್ಷಣಿಕ ಹಿನ್ನಡೆ, ಸಾರಿಗೆ ಸಂಪರ್ಕದ ಕೊರತೆ ಹಾಗೂ ಮಾಧ್ಯಮದ ಬಳಕೆ ಕಡಿಮೆ ಇರುವುದು ನಿಯಮಾವಳಿಗಳ ಬಗ್ಗೆ ತಿಳಿವಳಿಕೆ ಮೂಡಿಸಲು ಅಡ್ಡಿಯಾಗಿರುವ ಅಂಶಗಳೆಂದು ತಿಳಿದು ಬಂದಿದೆ.

❖ ಹೊಸ ಕಠಿಣ ನಿಯಮಾವಳಿಗಳ ಅಗತ್ಯವಿದೆಯೆಂದು ಗ್ರಾಮೀಣ ಪ್ರತಿಕ್ರಿಯೆದಾರರಲ್ಲಿ ಶೇಕಡ 12ರಷ್ಟು ಮಂದಿ ಅಭಿಪ್ರಾಯ ಪಟ್ಟರೆ, ನಗರದ ಶೇಕಡ 24ರಷ್ಟು ಮಂದಿ ಹೊಸ ಕಾನೂನು ರೂಪಿಸಬೇಕೆಂದು ತಿಳಿಸಿದ್ದಾರೆ. ಒಟ್ಟು 410ರಲ್ಲಿ 326 ಅಂದರೆ 80 ಶೇಕಡ ಜನರು ಪ್ರಸ್ತುತ ಜಾರಿಯಲ್ಲಿರುವ ನಿಯಮಾವಳಿ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿದ್ದಾರೆ. ಆದರೆ ಜಾರಿಯಲ್ಲಿರುವ ಕಾನೂನುಗಳು ತೀರಾ ಅನುಪಯುಕ್ತ ಎಂಬ ನಿರ್ಧಾರಕ್ಕೆ ಯಾರೂ ಬಂದಿರುವುದಿಲ್ಲ. ಉಳಿದ 20 ಶೇಕಡ ಜನರು 'ಏನೂ ಹೇಳಲಾರೆ' ಎಂದಿದ್ದಾರೆ.

❖ ಒಟ್ಟು ಅಂಕಿ–ಅಂಶಗಳನ್ನು ವಿಶ್ಲೇಷಿಸಿದಾಗ ಜಾರಿಯಲ್ಲಿರುವ ನಿಯಮಾವಳಿಗಳಲ್ಲಿ ಹೆಚ್ಚಿನ ಲೋಪದೋಷಗಳು ಕಂಡು ಬರುವುದಿಲ್ಲ. ಆದರೆ ಅನುಷ್ಠಾನದ ವಿಧಾನಗಳ ಬಗ್ಗೆ ಅಸಮಾಧಾನವಿದೆ. ಜಾರಿಯಲ್ಲಿರುವ ಕಾನೂನು/ನಿಯಮಗಳ ಸಮರ್ಪಕ ಅನುಷ್ಠಾನದ ಮೂಲಕ ಉತ್ತಮ ತ್ಯಾಜ್ಯ ನಿರ್ವಹಣೆ ಸಾಧ್ಯ ಎಂಬ ಅಭಿಪ್ರಾಯವನ್ನು ನೀಡಿದ್ದಾರೆ.

❖ ಒಟ್ಟು ಶೇಕಡ 45 ಜನರಿಗೆ ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ಅರಿವಿದ್ದು ಇದರಲ್ಲಿ 30ಕ್ಕಿಂತ ಕಡಿಮೆ ವಯಸ್ಸಿನವರಲ್ಲಿ ಶೇಕಡ 50ರಷ್ಟು ಅರಿವಿರುವುದು ಕಂಡು ಬಂದಿದೆ. ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ಅರಿವು ಮೂಡಿಸುವ ಕಾರ್ಯದಲ್ಲಿ ಸ್ಥಳೀಯ ಸೇವಾ ಸಂಸ್ಥೆಗಳೂ ಕೈಜೋಡಿಸಿರುವುದು ಕ್ಷೇತ್ರಕಾರ್ಯದಲ್ಲಿ ತಿಳಿದುಬರುತ್ತದೆ. ಇದಲ್ಲದೆ ಸರಕಾರಗಳೂ ರೇಡಿಯೋ, ಟಿ.ವಿ., ದಿನಪತ್ರಿಕೆ ಮುಂತಾದ ಮಾಧ್ಯಮಗಳ ಮೂಲಕ ಅರಿವು ಮೂಡಿಸಿರುವುದನ್ನು ಜನ ಗುರುತಿಸಿದ್ದಾರೆ.

❖ ಜನರು ನಿಯಮಾವಳಿಗಳ ಬಗ್ಗೆ ಸರಾಸರಿ ಶೇಕಡ 43ರಷ್ಟು ಅರಿವನ್ನು ಹೊಂದಿದ್ದರೆ, ಶೇಕಡ 45ರಷ್ಟು ಮಂದಿ ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ತಿಳಿದಿದ್ದಾರೆ. ಅಪಾಯಕಾರಿ

ತ್ಯಾಜ್ಯಗಳು ಮನೆಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಉತ್ಪಾದನೆಯಾಗುತ್ತಿದ್ದು ಅವುಗಳ ಅಪಾಯಗಳನ್ನು ಅನುಭವಗಳಿಂದ ಪಡೆದುಕೊಂಡಿರುವುದು ಕಂಡು ಬಂದಿದೆ.

- ಅಪಾಯಕಾರಿ ತ್ಯಾಜ್ಯಗಳ ಅರಿವಿನ ಪ್ರಮಾಣವನ್ನು ವಿಶ್ಲೇಷಿಸಿದಾಗ ಗ್ರಾಮೀಣ ಪ್ರದೇಶದ ಒಟ್ಟು 200 ಪ್ರತಿಕ್ರಿಯೆದಾರರಲ್ಲಿ 72 ಅಂದರೆ 36 ಶೇಕಡ ಪ್ರತಿಕ್ರಿಯೆದಾರರಿಗೆ ಮಾತ್ರ ಅಪಾಯಕಾರಿ ತ್ಯಾಜ್ಯಗಳ ಬಗ್ಗೆ ತಿಳಿದಿದ್ದು ಅವುಗಳ ಪ್ರತ್ಯೇಕ ನಿರ್ವಹಣೆಗೆ ಆದ್ಯತೆ ನೀಡುತ್ತಿದ್ದಾರೆ. ಅದರಂತೆ 210 ನಗರದ ಪ್ರತಿಕ್ರಿಯೆದಾರರಲ್ಲಿ 113 ಅಂದರೆ 54 ಶೇಕಡ ಜನರಿಗೆ ಅರಿವಿದೆ.

- ಎಲೆಕ್ಟ್ರಾನಿಕ್ ವಸ್ತುಗಳ ಬಳಕೆಯ ಪ್ರಮಾಣ ಜನರಲ್ಲಿ ಶೇಕಡ 100ರಷ್ಟು ಇದ್ದು ಪ್ರಮುಖವಾಗಿ ಟಿ.ವಿ., ಫ್ರಿಡ್ಜ್, ವಾಷಿಂಗ್‌ಮೆಷಿನ್, ಮೊಬೈಲ್ ಫೋನ್, ಕ್ಯಾಲಿಕ್ಯುಲೇಟರ್, ಕಂಪ್ಯೂಟರ್, ಪ್ರಿಂಟರ್, ಎ.ಸಿ, ಚಾರ್ಜರ್, ರಿಮೋಟ್ ಕಂಟ್ರೋಲ್ ಸೇರಿದಂತೆ ಇನ್ನಿತರ ಅನೇಕ ಇಲೆಕ್ಟ್ರಾನಿಕ್ ಉಪಕರಣಗಳು ದಿನಬಳಕೆಯ ಅಗತ್ಯ ವಸ್ತುಗಳಾಗಿವೆ. ಹೆಚ್ಚಿನ ವಸ್ತುಗಳು ಧೀರ್ಘಕಾಲ ಬಾಳಿಕೆ ಬರದವು ಹಾಗೂ ದುರಸ್ಥಿಯಾಗದೇ ಇರುವುದರಿಂದ ಇ–ತ್ಯಾಜ್ಯಗಳ ಪ್ರಮಾಣ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಹೆಚ್ಚುತ್ತಲೇ ಇದೆ.

- ಗ್ರಾಮೀಣ ಪ್ರದೇಶಗಳಿಗೆ ಹೋಲಿಸಿದರೆ ನಗರಗಳಲ್ಲಿ ಇವುಗಳ ಬಳಕೆ ಅಧಿಕವಾಗಿರುವುದು ಕಂಡುಬರುತ್ತದೆ. ತಿಳುವಳಿಕೆ ದೃಷ್ಟಿಯಿಂದ ವಿಶ್ಲೇಷಣೆ ಮಾಡಿದಾಗಲೂ ನಗರ ವಾಸಿಗಳಿಗೆ ಗ್ರಾಮೀಣ ಜನರಿಗಿಂತ ಹೆಚ್ಚು ತಿಳಿವಳಿಕೆ ಇರುವುದು ಕಂಡುಬಂದಿದೆ. ಹಾಗೆಯೇ ಇಲೆಕ್ಟ್ರಾನಿಕ್ ತ್ಯಾಜ್ಯಗಳ ಬಗ್ಗೆ ಮಹಿಳೆಯರಿಗಿಂತ ಪುರುಷರಿಗೆ ಹೆಚ್ಚಿನ ಅರಿವಿರುವುದು ಕಂಡು ಬಂದಿದೆ.

- ಎಲೆಕ್ಟ್ರಾನಿಕ್ ವಸ್ತುಗಳ ಮಾರಾಟಗಾರರು ಹಾಗೂ ಉತ್ಪಾದಕರು ಗ್ರಾಹಕರಿಗೆ ವಸ್ತುಗಳನ್ನು ಮಾರಾಟ ಮಾಡುವ ಸಂದರ್ಭಗಳಲ್ಲಿ ಬಳಕೆಯ ಬಗ್ಗೆ ಮಾತ್ರ ಮಾಹಿತಿ ನೀಡುತ್ತಾರೆ ಹಾಗೂ ಸೇವೆಯನ್ನು ಒದಗಿಸುತ್ತಾರೆ. ಆದರೆ ಉಪಯೋಗಕ್ಕೆ ಬಾರದ ಎಲೆಕ್ಟ್ರಾನಿಕ್ ವಸ್ತುಗಳನ್ನು ಸಂಗ್ರಹಿಸುವ ಕೆಲಸವನ್ನು ಮಾಡುವುದಿಲ್ಲ.

- ಪ್ರತಿಕ್ರಿಯೆದಾರರು ಮತ್ತು ಜನಸಾಮಾನ್ಯರು ಹೆಚ್ಚುತ್ತಿರುವ ಫ್ಲೆಕ್ಸ್, ಬ್ಯಾನರ್, ಬಂಟಿಂಗ್ಸ್‌ಗಳ ಬಗ್ಗೆ ಆತಂಕ ವ್ಯಕ್ತಪಡಿಸಿದ್ದಾರೆ. ಅವದಿ ಮೀರಿದ ಬ್ಯಾನರ್/ಬಂಟಿಂಗ್ಸ್/ಫ್ಲೆಕ್ಸ್‌ಗಳನ್ನು ಸಂಬಂಧಪಟ್ಟವರು ತೆರವುಗೊಳಿಸದೇ ಇರುವುದು ಸ್ವಚ್ಛತೆ ಮತ್ತು ಆರೋಗ್ಯದ ದೃಷ್ಟಿಯಿಂದ ತೊಂದರೆಯಾಗುತ್ತದೆ ಎಂದಿದ್ದಾರೆ. ಸ್ಥಳೀಯ ಸರ್ಕಾರಗಳು ಇವುಗಳ ನಿಯಂತ್ರಣಕ್ಕೆ ಸೂಕ್ತ ಕ್ರಮಕೈಗೊಳ್ಳಬೇಕೆಂದು ಒತ್ತಾಯಿಸುತ್ತಿದ್ದಾರೆ.

❖ ಕಸದ ಸಮಸ್ಯೆಗಳ ಪರಿಹಾರಕ್ಕೆ ಜನಸಾಮಾನ್ಯರು ನ್ಯಾಯಾಂಗದ ಮೊರೆ ಹೋಗುತ್ತಿರುವುದು ಹಾಗೂ ನ್ಯಾಯಾಲಯದ ಆದೇಶಗಳು ಬಂದನಂತರ ಸ್ಥಳೀಯ ಸಂಸ್ಥೆಗಳು ಎಚ್ಚೆತ್ತು ಕೊಳ್ಳುತ್ತಿರುವುದು ದೇಶಾದಾದ್ಯಂತ ಕಂಡುಬರುತ್ತಿದೆ. ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ನಿರ್ವಹಣೆಗೆ ಹೆಚ್ಚಿನ ಕಾಳಜಿ ನೀಡುತ್ತಿದ್ದರೆ, ನ್ಯಾಯಾಂಗದ ಮಧ್ಯ ಪ್ರವೇಶ ಅದಕ್ಕೆ ಇರಲಿಲ್ಲ.

## 7.2 ಸಲಹೆ ಸೂಚನೆಗಳು

- 'ಘನತ್ಯಾಜ್ಯ ನಿರ್ವಹಣೆಯ ಆರ್ಥಿಕತೆ' ಕುರಿತು ನಡೆಸಿದ ಅಧ್ಯಯನಕ್ಕೆ ಸಂಬಂಧಿಸಿ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಅಂಕಿ-ಅಂಶಗಳು, ಅವುಗಳ ವಿಶ್ಲೇಷಣೆ, ಸಾಹಿತ್ಯ ಸಮೀಕ್ಷೆಯಲ್ಲಿ ಉದ್ದೇಶಕ್ಕೆ ಸಂಬಂಧಿಸಿ ಕಂಡು ಬಂದ ಫಲಿತಗಳು, ವರದಿಗಳು, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅಧಿಕಾರಿಗಳು ಹಾಗೂ ಪ್ರತಿಕ್ರಿಯೆದಾರರರು ನೀಡಿರುವ ಅಭಿಪ್ರಾಯಗಳು ಮತ್ತು ಅಧ್ಯಯನಕ್ಕೆ ಪೂರಕವಾಗಿ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯ ಸಂಗ್ರಹ, ಸಾಗಾಟ, ವಿಲೇವಾರಿ ಮುಂತಾದ ಪ್ರಕ್ರಿಯೆಗಳನ್ನು ಅವಲೋಕಿಸಿದಾಗ ಗಮನಕ್ಕೆ ಬಂದ ಸಂಗತಿಗಳ ಆಧಾರದಲ್ಲಿ ತ್ಯಾಜ್ಯ ನಿರ್ವಹಣೆಯ ವ್ಯವಸ್ಥೆಯನ್ನು ಉತ್ತಮಪಡಿಸಲು ಈ ಕೆಳಗಿನ ಸಲಹೆಗಳನ್ನು ನೀಡಲಾಗಿದೆ.
- ಅನಧಿಕೃತ ಸ್ಥಳಗಳಲ್ಲಿ ತ್ಯಾಜ್ಯ ಎಸೆಯುವುದನ್ನು ತಡೆಗಟ್ಟಲು ಸ್ಥಳೀಯ ಸರ್ಕಾರಗಳು ನಿರ್ದಾಕ್ಷಿಣ್ಯವಾಗಿ ದಂಡ/ಶಿಕ್ಷೆ ವಿಧಿಸಬೇಕು. ಮುನ್ಸಿಪಾಲ್ ಘನತ್ಯಾಜ್ಯ ನಿಯಮ 2000ದಲ್ಲಿ ಪುರಸಭಾ ವ್ಯಾಪ್ತಿಯಲ್ಲಿ ಘನತ್ಯಾಜ್ಯ ವಸ್ತುಗಳನ್ನು ಸಮುದ್ರದಲ್ಲಿ, ನದಿಗಳಲ್ಲಿ, ಖಾಲಿ ಪ್ರದೇಶಗಳಲ್ಲಿ ಎಸೆಯುವಂತಿಲ್ಲ ಎಂದು ತಿಳಿಸಿದರೂ, ತಪ್ಪಿತಸ್ಥರಿಗೆ ವಿಧಿಸಬೇಕಾದ ದಂಡ/ ಶಿಕ್ಷೆಯ ಬಗ್ಗೆ ಸ್ಪಷ್ಟತೆ ಇಲ್ಲ. ಆದ್ದರಿಂದ ನಾಗರಿಕರು ಎಸಗುವ ತಪ್ಪಿಗೆ ಅನುಗುಣವಾಗಿ ರಾಜ್ಯದಾದ್ಯಂತ ಏಕರೀತಿಯ ದಂಡ ಶಿಕ್ಷೆ ವಿಧಿಸುವ ಕಾನೂನು ಜಾರಿ ಮಾಡುವ ಅವಶ್ಯಕತೆ ಇದೆ.
- ಪ್ರತಿಯೊಂದು ಸ್ಥಳೀಯ ಸಂಸ್ಥೆಯು ಜಂಟಿಯಾಗಿ ಅಥವಾ ಪ್ರತ್ಯೇಕವಾಗಿ ತಮ್ಮ ಸ್ಥಳೀಯ ಸಂಸ್ಥೆಯ ಜನಸಂಖ್ಯೆಗೆ ಅನುಗುಣವಾಗಿ ಸ್ವಂತ ಜಮೀನು ಹೊಂದುವಂತೆ ಕಾನೂನು ರೂಪಿಸಬೇಕು. ಭೂಭರ್ತಿ ಪ್ರದೇಶಗಳ ಸ್ಥಾಪನೆಗೆ ಜನರು ವಿರೋಧ ವ್ಯಕ್ತ ಪಡಿಸುವ ಕಾರಣ ಭೂಭರ್ತಿ ಪ್ರದೇಶಗಳ ವಿಕೇಂದ್ರಿಕರಣ ಮಾಡಬೇಕು. ಅಂದರೆ ಪ್ರತೀ ಸ್ಥಳೀಯ ಪಂಚಾಯತ್ ವ್ಯಾಪ್ತಿಯಲ್ಲಿ ಕನಿಷ್ಟ 2 ಸಂಗ್ರಹ/ ಭೂಭರ್ತಿ ಘಟಕಗಳನ್ನು ಸ್ಥಾಪಿಸಬೇಕು. ಸ್ಥಳೀಯ ಮಟ್ಟದಲ್ಲಿ ಉತ್ಪಾದನೆಯಾಗುವ ತ್ಯಾಜ್ಯವನ್ನು ಅಲ್ಲಿಯೇ ವಿಲೇವಾರಿಗೊಳಿಸುವ

ಯೋಜನೆಯನ್ನು ತಯಾರಿಸಬೇಕು. ತ್ಯಾಜ್ಯ ಉತ್ಪಾದನೆಯಲ್ಲಿ ಎಲ್ಲರೂ ಪಾಲುದಾರರು, ಹಾಗೆಯೇ ನಿರ್ವಹಣೆಯಲ್ಲೂ ಎಲ್ಲರೂ ಪಾಲುದಾರರಾಗಬೇಕು. ತ್ಯಾಜ್ಯ ಉತ್ಪಾದಕರು ಒಂದು ಪ್ರದೇಶದವರಾದರೆ ಅದರ ಸಮಸ್ಯೆ ಅನುಭವಿಸುವವರು ಇನ್ನೊಂದು ಪ್ರದೇಶದ ನಾಗರಿಕರಾಗಬಾರದು.

- ನಗರ ಸ್ಥಳೀಯ ಸಂಸ್ಥೆಗಳಿಗಿಂತ ಗ್ರಾಮೀಣ ಸ್ಥಳೀಯ ಸಂಸ್ಥೆಗಳು ಹೆಚ್ಚು ದಕ್ಷತೆಯಿಂದ ಕಾರ್ಯ ನಿರ್ವಹಿಸುತ್ತಿರುವುದು ಕಂಡು ಬರುವುದಕ್ಕೆ ತ್ಯಾಜ್ಯ ಉತ್ಪಾದನಾ ಪ್ರಮಾಣ, ಜನಸಂಖ್ಯೆ ಹಾಗೂ ವ್ಯಾಪ್ತಿ ಕಾರಣವಾಗಿದೆ. ಈ ದೃಷ್ಟಿಯಿಂದ ನಗರ ಸ್ಥಳೀಯ ಸಂಸ್ಥೆಗಳು ಎರಡು–ಮೂರು ವಾರ್ಡುಗಳಿಗೆ ಒಂದರಂತೆ ನಿರ್ವಹಣಾ ಘಟಕವನ್ನು ಸ್ಥಾಪಿಸುವುದು ಹೆಚ್ಚು ಪರಿಣಾಮಕಾರಿಯಾದೀತು. ನಗರ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ನಿರ್ವಹಣಾ ವ್ಯವಸ್ಥೆಯನ್ನು ವಿಕೇಂದ್ರೀಕರಣಗೊಳಿಸಬೇಕು. ಆದರೆ ನಿರ್ವಹಣಾ ನೀತಿ ಏಕರೀತಿ ಯಾಗಿರಬೇಕು.

- ಸ್ಥಳೀಯ ಸಂಸ್ಥೆಗಳು ತಮ್ಮ ವ್ಯಾಪ್ತಿಯಲ್ಲಿ ಉತ್ಪಾದನೆಯಾಗುವ ಒಟ್ಟು ಸಾವಯವ (ಹಸಿಕಸ) ಹಾಗೂ ಸಾವಯವವಲ್ಲದ(ಒಣಕಸ) ಕಸದ ಪ್ರಮಾಣವನ್ನು ಅಂದಾಜಿಸಬೇಕು. ತಮ್ಮಲ್ಲಿ ಉತ್ಪಾದನೆಯಾಗುವ ಸಾವಯವ ತ್ಯಾಜ್ಯದಲ್ಲಿ ಕನಿಷ್ಟ ಶೇಕಡ 50ಕ್ಕಿಂತ ಹೆಚ್ಚಿನ ಪ್ರಮಾಣದ ತ್ಯಾಜ್ಯವನ್ನು ಗೊಬ್ಬರ ತಯಾರಿಕೆಯಲ್ಲಿ ಬಳಕೆಯಾಗುವಂತೆ ನೋಡಿಕೊಳ್ಳಬೇಕು. ಈಗಾಗಲೇ ಸರಕಾರವು ಗೊಬ್ಬರ ತಯಾರಿಕಾ ಘಟಕಗಳಿಗೆ ಅನುದಾನ ನೀಡುತ್ತಿದ್ದು, ಅದು ಸದುಪಯೋಗವಾಗುವಂತೆ ನೋಡಿಕೊಳ್ಳಬೇಕು. ಪ್ರತಿ ವರ್ಷ ಪಂಚಾಯತ್ ಮಟ್ಟದಲ್ಲಿ ತ್ಯಾಜ್ಯ ಬಳಕೆಯ ಲೆಕ್ಕ ಪರಿಶೋಧನೆ ಮಾಡಲು ಸಮಿತಿಯನ್ನು ರಚಿಸಬೇಕು.

- ಈಗಾಗಲೇ ತ್ಯಾಜ್ಯ ವಿಭಜನೆ ದೃಷ್ಟಿಯಿಂದ ನಾಗರಿಕರಿಗೆ ಬಕೆಟನ್ನು ಒದಗಿಸಿರುವ ಪ್ರದೇಶಗಳಲ್ಲಿ ಅದರ ಯಶಸ್ಸಿನ ಬಗ್ಗೆ ಯಾವುದೇ ಪ್ರತ್ಯೇಕ ಅಧ್ಯಯನ ನಡೆದಿಲ್ಲವಾದರೂ, ಮೂಲದಲ್ಲಿ ತ್ಯಾಜ್ಯ ವಿಭಜನೆಗೆ ಪ್ರೋತ್ಸಾಹ ನೀಡುವ ದೃಷ್ಟಿಯಿಂದ ಇದೊಂದು ಉತ್ತಮ ನಿರ್ಧಾರ. ಆದರೆ ಬಕೆಟ್ ಒದಗಿಸಿರುವ ಸ್ಥಳೀಯ ಸಂಸ್ಥೆಗಳು ಪ್ರತಿನಿತ್ಯ ಹಸಿಕಸವನ್ನು ಸಂಗ್ರಹಿಸುವತ್ತ ಗಮನಹರಿಸಬೇಕು. ಅದರಂತೆ ಕಾಲಕಾಲಕ್ಕೆ ಒಣಕಸವನ್ನು ಸಂಗ್ರಹಿಸಲು ವ್ಯವಸ್ಥೆ ಮಾಡಬೇಕು. ಒಣಕಸ ಅಥವಾ ಸಾವಯವವಲ್ಲದ ತ್ಯಾಜ್ಯವನ್ನು ಮರುಬಳಕೆಯಾಗುವ ತ್ಯಾಜ್ಯ ಹಾಗೂ ನಿರುಪಯುಕ್ತ ಭೂಭರ್ತಿಗೆ ಹೋಗುವ ತ್ಯಾಜ್ಯ ಎಂದು ವಿಭಜಿಸಿ ಪ್ರತ್ಯೇಕ ಡಬ್ಬಿ ಅಥವಾ ಬಕೆಟ್‌ನಲ್ಲಿ ಶೇಖರಿಸಿಡಬೇಕು. ನಿರುಪಯುಕ್ತ ಹಾಗೂ ಅಪಾಯಕಾರಿ ತ್ಯಾಜ್ಯಗಳನ್ನು (ಆಸ್ಪತ್ರೆ ತ್ಯಾಜ್ಯ ಹೊರತುಪಡಿಸಿ) ಶೇಖರಿಸಿಡಲು ಕೆಲವು ಕಡೆ ಕೆಂಪು ಬಣ್ಣದ ಬಕೆಟ್‌ಗಳನ್ನು

ನೀಡಲಾಗಿದೆ. ಸಾರ್ವಜನಿಕ ಸ್ಥಳಗಳಲ್ಲಿ ಈ ರೀತಿಯ ತ್ಯಾಜ್ಯ ಸಂಗ್ರಹ ಬಕೆಟ್‌ಗಳನ್ನು ಅಳವಡಿಸಿ, ಅವುಗಳನ್ನು ಜನರು ಯಾವ ಉದ್ದೇಶಕ್ಕೆ ಬಳಸಬೇಕೆಂದು ಅವರಿಗೆ ತಿಳುವಳಿಕೆ ನೀಡಬೇಕು.

- ಭೂಭರ್ತಿಗೆ ಅಧಿಕ ಪ್ರಮಾಣದಲ್ಲಿ ತ್ಯಾಜ್ಯ ಹೋಗುವುದನ್ನು ತಡೆಗಟ್ಟಲು ಕಡ್ಡಾಯವಾಗಿ ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡಬೇಕು. ತ್ಯಾಜ್ಯ ಸಂಗ್ರಹಕಾರರನ್ನು ಹಾಗೂ ನಾಗರಿಕರನ್ನು ಈ ಬಗ್ಗೆ ಸ್ಥಳೀಯ ಸಂಸ್ಥೆಗಳು ಸುಶಿಕ್ಷಿತರನ್ನಾಗಿಸಬೇಕು. ಇದರಿಂದ ಭೂಭರ್ತಿಗೆ ಹೆಚ್ಚಿನ ಜಾಗದ ಅವಶ್ಯಕತೆ ಇರುವುದಿಲ್ಲ ಮತ್ತು ತ್ಯಾಜ್ಯಗಳ ಮರುಬಳಕೆಯಿಂದ ಸ್ಥಳೀಯ ಸಂಸ್ಥೆಗಳಿಗೆ ಆದಾಯವೂ ಬರಬಹುದು.
- ಸರಾಸರಿ 70 ಶೇಕಡ ಜನ ಎಚ್ಚರಿಕೆ ಫಲಕಗಳನ್ನು ಗಮನಿಸಿರುವುದರಿಂದ ಅಗತ್ಯವಿರುವಲ್ಲಿ ಇನ್ನಷ್ಟು ಎಚ್ಚರಿಕೆ ಫಲಕಗಳನ್ನು ಅಳವಡಿಸುವುದು ಸೂಕ್ತ.
- ಬೇರೆ ಬೇರೆ ಮಾಧ್ಯಮಗಳಲ್ಲಿ ಜಾಹೀರಾತು ಹಾಗೂ ಬೇರೆ ಬೇರೆ ಸಾರ್ವಜನಿಕ ಕಾರ್ಯಕ್ರಮಗಳ ಮೂಲಕ ಎಲ್ಲಾ ವರ್ಗದ ಜನರಿಗೆ ಜಾಗೃತಿ ಹಾಗೂ ತಿಳುವಳಿಕೆ ಮೂಡಿಸಬೇಕಾಗಿದೆ. ಈ ಕೆಲಸದಲ್ಲಿ ಸರಕಾರ ಮಾತ್ರವಲ್ಲದೆ ಸ್ವಯಂಸೇವಾ ಸಂಸ್ಥೆಗಳು, ಶಾಲಾ ಕಾಲೇಜುಗಳು, ಹಾಗೂ ಖಾಸಗಿ ವಾಣಿಜ್ಯ ಸಂಸ್ಥೆಗಳು ಕೈ ಜೋಡಿಸಿದರೆ ಹೆಚ್ಚು ಪರಿಣಾಮಕಾರಿಯಾಗಬಹುದು.
- ಜನರನ್ನು ಅಭಿಯಾನದಲ್ಲಿ ಭಾಗವಹಿಸುವಂತೆ ಪ್ರೇರೇಪಿಸಲು ಆರೋಗ್ಯ ಮತ್ತು ಪರಿಸರ ಸಂರಕ್ಷಣೆ ಉದ್ದೇಶಗಳ ಬಗ್ಗೆ ಹೆಚ್ಚು ಪ್ರಚಾರ ನೀಡಬೇಕು.
- ತ್ಯಾಜ್ಯ ನಿರ್ವಹಣೆ ಮತ್ತು ಆದಾಯಕ್ಕೆ ನೇರ ಸಂಬಂಧವಿರುವುದರಿಂದ ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಹೆಚ್ಚು ಆದಾಯ ಹೊಂದಿರುವವರು ತ್ಯಾಜ್ಯ ನಿರ್ವಹಣೆಗೆ ಹೆಚ್ಚು ವ್ಯಯಿಸುವುದು ಸೂಕ್ತ. ಹೆಚ್ಚು ಆದಾಯ ಹೊಂದಿದವರು ಶುಲ್ಕದಿಂದ ತಪ್ಪಿಸಿಕೊಳ್ಳದಂತೆ ಸ್ಥಳೀಯಾಡಳಿತ ಎಚ್ಚರಿಕೆ ವಹಿಸಬೇಕು ಮತ್ತು ಅವರು ಹೆಚ್ಚು ತ್ಯಾಜ್ಯ ಉತ್ಪಾದಕರಾದ ಕಾರಣ ಹೆಚ್ಚಿನ ಕೊಡುಗೆ ಸಲ್ಲಿಸಬೇಕು. ಹಾಗೆಯೇ ಎಲ್ಲರಿಗೂ ಶುಲ್ಕ ವಿಧಿಸುವ ಅಗತ್ಯತೆ ಇದ್ದು, ಇದು ಕೇವಲ ವೆಚ್ಚ ನಿಭಾವಣೆ ಮಾತ್ರವಲ್ಲದೆ ಪ್ರತಿಯೊಬ್ಬರಲ್ಲೂ ಜವಾಬ್ದಾರಿಯನ್ನು ಮೂಡಿಸುತ್ತದೆ.
- ವಾರಕ್ಕೊಮ್ಮೆ ಶುಲ್ಕ ವಿಧಿಸುವ ಪದ್ಧತಿಯಿದ್ದರೆ ಅವುಗಳನ್ನು ಮಾಸಿಕ ಅಥವಾ ವಾರ್ಷಿಕ ಶುಲ್ಕವಾಗಿ ಪರಿವರ್ತಿಸಬೇಕು. ಇದರಿಂದ ಶುಲ್ಕ ಸಂಗ್ರಹಣಾ ವೆಚ್ಚ ಕಡಿಮೆಯಾಗುತ್ತದೆ

ಮತ್ತು ಪಾವತಿದಾರರಿಗೂ ಅನುಕೂಲವಾಗುತ್ತದೆ. ಈ ದೃಷ್ಟಿಯಿಂದ ಶುಲ್ಕದ ಮೊತ್ತ, ಸ್ಥಳ ಮತ್ತು ಪಾವತಿಸುವ ಕೊನೆ ದಿನಾಂಕಗಳನ್ನು ನಾಗರಿಕರಿಗೆ ಮುಂಚಿತವಾಗಿ ತಿಳಿಸಬೇಕು.

- ಕನಿಷ್ಠ ಜಿಲ್ಲಾ ವ್ಯಾಪ್ತಿಯಲ್ಲಾದರೂ ಏಕ ರೀತಿಯ ತ್ಯಾಜ್ಯ ಸಂಗ್ರಹಣಾ ಶುಲ್ಕ ನಿರ್ಧಾರ ವಾಗಬೇಕು ಹಾಗೂ ಜಿಲ್ಲಾಡಳಿತವು ಆಯಾಯ ಸ್ಥಳೀಯ ಸಂಸ್ಥೆಗಳಲ್ಲಿ ಉತ್ಪಾದನೆ ಯಾಗುವ ತ್ಯಾಜ್ಯಕ್ಕೆ ಅನುಗುಣವಾಗಿ ಅನುದಾನವನ್ನು ನೀಡಬೇಕು. ಶುಲ್ಕ ಸಂಗ್ರಹದಿಂದ ಜನರ ಜವಾಬ್ದಾರಿಯೂ ಹೆಚ್ಚುತ್ತದೆ.

- ತ್ಯಾಜ್ಯ ಶುಲ್ಕ ವಿಧಿಸುವಾಗ ಸರಕಾರಗಳು ಜನರ ಕಟ್ಟಡಗಳ ವಿಸ್ತೀರ್ಣವನ್ನು ಪರಿಗಣಿಸದೆ, ಅವರ ಆದಾಯವನ್ನು ಪರಿಗಣಿಸಿ ಶುಲ್ಕ ವಿಧಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ಪ್ರಸ್ತುತ ಹೆಚ್ಚಿನ ಸ್ಥಳೀಯ ಸಂಸ್ಥೆಗಳು ಜನರು ಹೊಂದಿರುವ ಕಟ್ಟಡದ ವಿಸ್ತೀರ್ಣ ಮತ್ತು ವಾಣಿಜ್ಯ ಚಟುವಟಿಕೆಯ ವಿಧದ ಆಧಾರದಲ್ಲಿ ಶುಲ್ಕ ನಿರ್ಧಾರ ಮಾಡುತ್ತಿವೆ. ಆದಾಯ ಹೆಚ್ಚಿರುವವರು ಹೆಚ್ಚು ಅನುಭೋಗ ಮಾಡುವುದರಿಂದ ಅವರು ಉತ್ಪಾದನೆ ಮಾಡುವ ತ್ಯಾಜ್ಯದ ಪ್ರಮಾಣವು ಹೆಚ್ಚಿರುತ್ತದೆ ಎಂಬುದು ಸಾಮಾನ್ಯ ಗ್ರಹಿಕೆ. ಈ ದೃಷ್ಟಿಯಿಂದಲೂ ತ್ಯಾಜ್ಯ ಶುಲ್ಕ ನಿರ್ಧಾರ ಮಾಡುವಾಗ ಆದಾಯದ ಪರಿಗಣನೆಯೇ ಹೆಚ್ಚು ಸೂಕ್ತವೆನಿಸುತ್ತದೆ. ಪ್ರಸ್ತುತ ವಾಣಿಜ್ಯ ಉದ್ದೇಶಗಳಿಗೆ ತ್ಯಾಜ್ಯ ಶುಲ್ಕ ವಿಧಿಸುವ ಸ್ಥಳೀಯ ಸಂಸ್ಥೆಗಳು ಕೇವಲ ಕಟ್ಟಡಗಳ ವಿಸ್ತೀರ್ಣ ಮತ್ತು ಯಾವ ರೀತಿಯ ವಾಣಿಜ್ಯ ಚಟುವಟಿಕೆ (ಹೋಟೇಲ್, ಬೇಕರಿ, ಮಾಲ್, ಮೀನು–ಮಾಂಸ ಅಂಗಡಿಗಳು, ತರಕಾರಿ ಅಂಗಡಿ, ಜೀನಸು ಅಂಗಡಿ, ಟೈಲರ್, ಸಲೂನ್, ಗೂಡಂಗಡಿ ಇತ್ಯಾದಿ) ನಡೆಸುತ್ತಾರೆ ಎನ್ನುವುದರ ಆಧಾರದಲ್ಲಿ ದರ ನಿಗದಿ ಮಾಡಿವೆ. ಜನರ ಅದಾಯ, ವಾಣಿಜ್ಯ ಚಟುವಟಿಕೆಗಳ ವಿಧ, ಕಟ್ಟಡಗಳ ವಿಸ್ತೀರ್ಣ ಇವುಗಳನ್ನು ಗಮನದಲ್ಲಿಟ್ಟುಕೊಂಡು ಶುಲ್ಕ ವಿಧಿಸಬಹುದಾಗಿದೆ. ಆಸ್ಪತ್ರೆ, ಕೈಗಾರಿಕೆಗಳು, ಮಾಲ್‌ಗಳು ಮುಂತಾದ ದೊಡ್ಡ ವಾಣಿಜ್ಯ ಚಟುವಟಿಕೆಗಳನ್ನು ನಡೆಸುವವರು ಸ್ವಂತ ನಿರ್ವಹಣಾ ವ್ಯವಸ್ಥೆಯನ್ನು ಹೊಂದುವಂತೆ ಸ್ಥಳೀಯಾಡಳಿತಗಳು ನಿಯಮಾವಳಿಗಳನ್ನು ರೂಪಿಸಬೇಕು ಮತ್ತು ಅವುಗಳಿಗೆ ಶುಲ್ಕ ವಿನಾಯಿತಿಯನ್ನು ನೀಡಬೇಕು.

- ಸ್ಥಳೀಯ ಸಂಸ್ಥೆಗಳು ಜನರಿಗೆ ನಿಯಮಾವಳಿಗಳ ಅರಿವನ್ನು ಮೂಡಿಸುವ ಕೆಲಸಕ್ಕೆ ಆದ್ಯತೆ ನೀಡಬೇಕು. ಜನರಿಗೆ ಸ್ಥಳೀಯ ಸಂಸ್ಥೆಗಳ ಮೂಲಕ ದೊರಕುವ ಹಲವಾರು ಸೌಲಭ್ಯಗಳನ್ನು ಒದಗಿಸುವ ಸಂದರ್ಭಗಳನ್ನು ಮಾಹಿತಿ ನೀಡಲು ಬಳಸಿಕೊಳ್ಳಬಹುದು. ಉದಾಹರಣೆಗೆ ಭೂ ಪರಿವರ್ತನೆ, ಮನೆ/ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿ ಅನುಮತಿ ನೀಡುವ

ಸಂದರ್ಭಗಳಲ್ಲಿ, ಸರಕಾರದಿಂದ ಸಿಗುವ ಸವಲತ್ತುಗಳನ್ನು ನೀಡುವಾಗ ಮುಂತಾದ ಸಮಯದಲ್ಲಿ ತ್ಯಾಜ್ಯ ನಿರ್ವಹಣೆಯನ್ನು ಸಮರ್ಪಕವಾಗಿ ನಿರ್ವಹಿಸುವ ಬಗ್ಗೆ ಫಲಾನುಭವಿಗಳು ಪ್ರಮಾಣಪತ್ರ ಸಲ್ಲಿಸುವಂತೆ ಕೋರಬೇಕು.

- ತ್ಯಾಜ್ಯ ನಿರ್ವಹಣೆಯ ನೀತಿ ನಿಯಮಾವಳಿಗಳನ್ನು ಜನರಿಗೆ ತಲುಪಿಸುವಾಗ ಬೇರೆ ಬೇರೆ ವರ್ಗಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಮುಖ್ಯವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮನೆ ಮನೆಗಳಿಗೆ ಮಾಹಿತಿ ಒದಗಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.

- ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆ ಸ್ವಚ್ಛತೆಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿಲ್ಲದಿರುವುದು ಅಂಕಿ–ಅಂಶಗಳ ವಿಶ್ಲೇಷಣೆಯಲ್ಲಿ ಕಂಡುಬಂದಿದೆ. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದ ಪಾಠ ಮತ್ತು ಪಠ್ಯೇತರ ಚಟುವಟಿಕೆಗಳಲ್ಲಿ ಪರಿಸರ ಶಿಕ್ಷಣ, ಸ್ವಚ್ಛತೆ, ತ್ಯಾಜ್ಯ ನಿರ್ವಹಣೆ, ಜಲ ಸಂರಕ್ಷಣೆ ಮುಂತಾದ ವಿಷಯಗಳನ್ನು ಆದ್ಯತೆ ಮೇರೆಗೆ ಅಳವಡಿಸಿಕೊಳ್ಳಬೇಕಾಗಿದೆ. ವಿದ್ಯಾರ್ಥಿಗಳಿಗೆ ಅರಿವು ಮೂಡಿಸುವ ಕಾರ್ಯ ಶೈಕ್ಷಣಿಕ ಚಟುವಟಿಕೆಯ ಭಾಗವಾಗಿದ್ದರೆ ಮಾತ್ರ ಇದು ಪರಿಣಾಮಕಾರಿಯಾದೀತು. ಎಲ್ಲಾ ಸಾರ್ವಜನಿಕ ಸಂಸ್ಥೆಗಳ ಗುಣಮಟ್ಟವನ್ನು ಅಳೆಯುವಾಗ ಸ್ವಚ್ಛತೆ ಮತ್ತು ಪರಿಸರ ಸಂರಕ್ಷಣೆಗೆ ಸಂಬಂಧಿಸಿದ ಮಾನದಂಡಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಬೇಕು. ಸಾರ್ವಜನಿಕ ಸಂಸ್ಥೆ/ಕಟ್ಟಡ/ಉದ್ದಿಮೆಗಳಿಗೆ ಪರವನಿಗೆ ಮತ್ತು ನವೀಕರಣ ಸಂದರ್ಭದಲ್ಲಿ ಸ್ವಚ್ಛತಾ ಮಾನದಂಡ ಅನುಸರಿಸುವುದನ್ನು ಕಡ್ಡಾಯ ಗೊಳಿಸಬೇಕು.

- ಮುಸ್ಲಿಮರಲ್ಲಿ ತ್ಯಾಜ್ಯ ನಿರ್ವಹಣೆಗೆ ಸಂಬಂಧಿಸಿದ ನಿಯಮಾವಳಿಗಳ ಅರಿವು ಕಡಿಮೆ ಜನರಿಗೆ ಇರುವುದು ಕಂಡು ಬಂದಿರುವುದರಿಂದ ಮುಸ್ಲಿಮರು ಅಧಿಕ ಸಂಖ್ಯೆಯಲ್ಲಿರುವ ಸ್ಥಳೀಯ ಸಂಸ್ಥೆಗಳು ಇವರಲ್ಲಿ ಅರಿವು ಮೂಡಿಸಲು ಧಾರ್ಮಿಕ ಕೇಂದ್ರಗಳ ಮೂಲಕ ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.

- ತ್ಯಾಜ್ಯಗಳ ಮೂಲ, ಸಂಗ್ರಹಣಾ ವಿಧಾನ, ಪರಿಮಾಣಗಳಿಗೆ ಅನುಗುಣವಾಗಿ ಜಾರಿಯಲ್ಲಿರುವ ನಿಯಮಾವಳಿಗಳನ್ನು ತಿದ್ದುಪಡಿಗೊಳಪಡಿಸಿ, ವಿವಿಧ ಹಂತಗಳಲ್ಲಿ ಕಟ್ಟುನಿಟ್ಟಾಗಿ ಜಾರಿಗೊಳಿಸಬೇಕು.

- ಜನರಿಗೆ ಅಪಾಯಕಾರಿ ತ್ಯಾಜ್ಯಗಳಾದ ಕ್ರಿಮಿನಾಶಕ, ಕೀಟನಾಶಕಗಳು, ಅವುಗಳನ್ನು ಉಪಯೋಗಿಸಿದ ಬಾಟಲಿಗಳು, ಬ್ಯಾಟರಿ, ರಾಸಾಯನಿಕಗಳು ಮುಂತಾದುವುಗಳ ನಿರ್ವಹಣೆ ಬಗ್ಗೆ ಅರಿವಿರಬೇಕಾಗಿರುವುದು ಅಗತ್ಯ.

- ನಿಯಮಾವಳಿಗಳ ಬಗ್ಗೆ ಅರಿವು ಮೂಡಿಸುವ ಸಂದರ್ಭದಲ್ಲಿ ಅಪಾಯಕಾರಿ ತ್ಯಾಜ್ಯಗಳ ಬಗ್ಗೆಯೂ ಸ್ಥಳೀಯ ಸರಕಾರಗಳು ಅರಿವು ಮೂಡಿಸಬೇಕಾಗಿದೆ.
- ಪ್ರತಿಯೊಂದು ಇಲೆಕ್ಟ್ರಾನಿಕ್ ವಸ್ತುಗಳ ಮಾರಾಟ ಮಳಿಗೆಯಲ್ಲಿ ಕಡ್ಡಾಯವಾಗಿ ಅನುಪಯುಕ್ತ ವಸ್ತುಗಳ ಸಂಗ್ರಹ ಕೊಠಡಿ ಇರಬೇಕು ಮತ್ತು ಗ್ರಾಹಕರಿಂದ ಸೂಕ್ತ ಬೆಲೆ ನೀಡಿ ಅವುಗಳನ್ನು ಕೊಂಡುಕೊಳ್ಳುವ ವ್ಯವಸ್ಥೆ ಇರಬೇಕು. ಗ್ರಾಹಕರಿಗೆ ಉಪಯೋಗಕ್ಕೆ ಬಾರದ ವಸ್ತುಗಳನ್ನು ಯಾವ ರೀತಿಯಲ್ಲಿ, ಹೇಗೆ ವಿಲೇವಾರಿ ಮಾಡಬೇಕೆಂಬ ಬಗ್ಗೆ ತಿಳಿವಳಿಕೆಯನ್ನು ಕಂಪೆನಿಗಳು ನೀಡಬೇಕು. ಕನಿಷ್ಠ ತಾಲೂಕಿಗೆ ಒಂದರಂತೆ ಇವುಗಳ ಸಂಗ್ರಹಕ್ಕೆ ವ್ಯವಸ್ಥೆ ಕಲ್ಪಿಸಬೇಕು. ತಾಲೂಕು ಕೇಂದ್ರಗಳಲ್ಲಿ ಹಾಗೂ ಇಲೆಕ್ಟ್ರಾನಿಕ್ ಮಳಿಗೆಗಳಲ್ಲಿ ಸಂಗ್ರಹವಾದ ತ್ಯಾಜ್ಯಗಳನ್ನು ಮರುತ್ಪಾದನಾ ಘಟಕಗಳಿಗೆ ಸಾಗಿಸಲು ಜಿಲ್ಲಾಡಳಿತ ಅಥವಾ ಸಂಬಂಧಪಟ್ಟ ಇಲಾಖೆ ಸೂಕ್ತ ಕ್ರಮ ಕೈಗೊಳ್ಳಬೇಕು.
- ತ್ಯಾಜ್ಯ ನಿರ್ವಹಣೆಯ ಪರಿವೀಕ್ಷಣೆಗೆ (ವೇಸ್ಟ್ ಮೆನೇಜ್‌ಮೆಂಟ್ ಟಾಸ್ಕ್ ಫೋರ್ಸ್) ಪರಿವೀಕ್ಷಕ ದಳವನ್ನು ನಗರಪಾಲಿಕೆ ಸ್ಥಾಪಿಸಬೇಕು.
- ಸಾಮಾನ್ಯವಾಗಿ ಇಲೆಕ್ಟ್ರಾನಿಕ್ ಉಪಕರಣಗಳ ಬಳಕೆಯನ್ನು ಮಹಿಳೆಯರು ಮತ್ತು ಪುರುಷರು ಹೆಚ್ಚು ಕಡಿಮೆ ಸಮಾನವಾಗಿ ಬಳಕೆ ಮಾಡುತ್ತಿದ್ದು, ಇವುಗಳ ತ್ಯಾಜ್ಯ ನಿರ್ವಹಣೆ ಬಗ್ಗೆ ಎಲ್ಲರಿಗೂ ಅರಿವಿರಬೇಕಾದುದು ಅವಶ್ಯಕ. ಎಲೆಕ್ಟ್ರಾನಿಕ್ ಉಪಕರಣಗಳ ಪೂರೈಕೆದಾರರು ಬಳಕೆಯ ಬಗ್ಗೆ ಜನಜಾಗೃತಿ ಮೂಡಿಸುವುದರೊಂದಿಗೆ ತ್ಯಾಜ್ಯ ಸಂಗ್ರಹ ಮತ್ತು ಪುನರುತ್ಪಾದನೆಗೆ ಪ್ರತ್ಯೇಕ ವ್ಯವಸ್ಥೆಯನ್ನು ಹೊಂದುವಂತೆ ಕಾನೂನನ್ನು ರೂಪಿಸಬೇಕಾಗಿದೆ.
- ಸ್ಥಳೀಯ ಸಂಸ್ಥೆಗಳು ಪ್ರತಿನಿತ್ಯ ಮೂಲದಲ್ಲಿ ಬೇರ್ಪಡಿಸಿದ ಕಸವನ್ನು ಸಂಗ್ರಹಿಸುವ ವ್ಯವಸ್ಥೆ ಮಾಡಬೇಕು. ಜಾರಿಯಲ್ಲಿರುವ ಎಲ್ಲಾ ನಿಯಮ/ನೀತಿ/ಕಾಯಿದೆಗಳಲ್ಲಿ ಮೂಲದಲ್ಲಿ ತ್ಯಾಜ್ಯ ವಿಭಜನೆ ಮಾಡಲು ಕಡ್ಡಾಯಗೊಳಿಸುವ ಅಂಶಗಳು ಅನುಷ್ಠಾನಗೊಳ್ಳುವಂತೆ ನೋಡಿಕೊಳ್ಳಬೇಕು ಹಾಗೂ ಅಗತ್ಯವಿರುವಲ್ಲಿ ಸೂಕ್ತ ತಿದ್ದುಪಡಿ ತರಬೇಕು.
- ಯಾವುದೇ ವಸ್ತುವನ್ನು ಉಪಯೋಗಿಸುವ ಮೊದಲು ಅದರ ಬಾಳ್ವಿಕೆ ಮತ್ತು ಅದರಿಂದ ಪರಿಸರದ ಮೇಲಾಗುವ ದುಷ್ಪರಿಣಾಮಗಳ ಬಗ್ಗೆ ಆಲೋಚಿಸಬೇಕು (Rethink) ಅನಗತ್ಯ ವಸ್ತುಗಳನ್ನು ತಿರಸ್ಕರಿಸಬೇಕು (Refuse). ಕೆಲವು ವಸ್ತುಗಳ ಉಪಯೋಗಗಳನ್ನು ಕಡಿತ ಗೊಳಿಸಬೇಕು (Reduce), ಪುನರುತ್ಪಾದನೆ/ಪುನರ್ಬಳಕೆಗೆ (Recycle) ಆದ್ಯತೆ ಕೊಡಬೇಕು, ವಸ್ತುಗಳ ಉಪಯೋಗದಲ್ಲಿ ಹಿಡಿತವಿರಬೇಕು (Regulate) ಮತ್ತು ನಿರಂತರ ಸಂಶೋಧನೆಗಳ (Research) ಕಡೆಗೂ ಗಮನಹರಿಸಬೇಕು.

- ಸಾರ್ವಜನಿಕ ಶೌಚಾಲಯ, ಬಸ್‌ಸ್ಟಾಂಡ್, ಹೋಟೇಲ್, ಬೇಕರಿಗಳ ಪಕ್ಕದಲ್ಲಿ ಕಸದ ತೊಟ್ಟಿಗಳನ್ನು (ಹಸಿಕಸ ಮತ್ತು ಒಣಕಸಕ್ಕೆ ಪ್ರತ್ಯೇಕ) ಕಡ್ಡಾಯವಾಗಿ ಅಳವಡಿಸಬೇಕು.
- ನದಿ, ತೋಡು, ಕೆರೆ, ಸೇತುವೆಗಳ ಕೆಳಗೆ ಮುಂತಾದ ಸಾರ್ವಜನಿಕ ಸ್ಥಳಗಳಲ್ಲಿ ಅನಧಿಕೃತವಾಗಿ ಕಸ ಹಾಕುವವರ ವಿರುದ್ಧ ಸ್ಥಳೀಯ ಸಂಸ್ಥೆಗಳು ಕಟ್ಟುನಿಟ್ಟಾದ ಕಾನೂನು ಕ್ರಮ ತೆಗೆದುಕೊಳ್ಳಬೇಕು. ಇಂತಹ ಸ್ಥಳಗಳಲ್ಲಿ ಕಣ್ಗಾವಲು ಕ್ಯಾಮರಾ ಅಳವಡಿಕೆ ಮಾಡಬೇಕು.
- ಸಾರ್ವಜನಿಕ ವಾಹನಗಳಲ್ಲಿ, ವಾಣಿಜ್ಯ ಕಟ್ಟಡ/ಸಂಕೀರ್ಣಗಳಲ್ಲಿ ಎಚ್ಚರಿಕೆ ಫಲಕವನ್ನು ಅಳವಡಿಸಬೇಕು. ಪ್ರಯಾಣದ ಸಮಯದಲ್ಲಿ ತ್ಯಾಜ್ಯ ಎಸೆಯುವುದನ್ನು ತಡೆಗಟ್ಟಲು ಬಸ್‌ಗಳಲ್ಲಿ ಹಾಗೂ ಸಾರ್ವಜನಿಕ ವಾಹನಗಳಲ್ಲಿ ಪ್ರತ್ಯೇಕ ತ್ಯಾಜ್ಯ ಸಂಗ್ರಹ ತೊಟ್ಟಿಯನ್ನು ಕಡ್ಡಾಯವಾಗಿ ಅಳವಡಿಸಬೇಕು. ವಿಮಾನಗಳಲ್ಲಿ ಹಾಗೂ ರೈಲ್ವೆ ಎ.ಸಿ.ಬೋಗಿಗಳಲ್ಲಿ ಮಾತ್ರ ಈ ವ್ಯವಸ್ಥೆ ಇದ್ದು, ರೈಲುಗಳ ದ್ವಿತೀಯ ದರ್ಜೆ ಮತ್ತು ಸಾಮಾನ್ಯ ಬೋಗಿಗಳಲ್ಲಿ ಕಸದ ತೊಟ್ಟಿಯನ್ನು ಅಳವಡಿಸಬೇಕು.
- ಇತ್ತೀಚೆಗೆ (ಜುಲೈ 2018) ಕರಾವಳಿ ಮೀನುಗಾರರ ಸಂಘಟನೆಯು ಸಮುದ್ರದಲ್ಲಿ ಮೀನುಗಾರಿಕೆಗೆ ತೆರಳುವ ದೋಣಿಗಳಲ್ಲಿ ಕಸದ ಬುಟ್ಟಿಗಳನ್ನು ಕಡ್ಡಾಯವಾಗಿ ಹೊಂದಿರಬೇಕು ಮತ್ತು ಸಮುದ್ರಕ್ಕೆ ಯಾವುದೇ ತ್ಯಾಜ್ಯಗಳನ್ನು ಎಸೆಯಬಾರದು ಎಂಬುದಾಗಿ ಎಚ್ಚರಿಕೆ ನೀಡಿದೆ. ಶಾಲಾ ವಾಹನಗಳಲ್ಲಿಯೂ ಕಸದ ತುಟ್ಟಿಗಳನ್ನು ಕಡ್ಡಾಯವಾಗಿ ಅಳವಡಿಸಬೇಕು ಮತ್ತು ನಿರ್ವಾಹಕರು/ಚಾಲಕರು ಮಕ್ಕಳಿಗೆ ಚಾಕಲೇಟ್ ಕಾಗದ, ಪ್ಲಾಸ್ಟಿಕ್ ಮುಂತಾದ ವಸ್ತುಗಳನ್ನು ವಾಹನದಿಂದ ಹೊರಗೆ ಎಸೆಯದಂತೆ ತಿಳುವಳಿಕೆ ನೀಡಬೇಕು.
- ಗುಟ್ಕಾ, ಶ್ಯಾಂಪೂ, ಎಣ್ಣೆ, ಉಪ್ಪಿನಕಾಯಿ, ಪಾನ್ ಬೀಡ, ಚಿಪ್ಸ್ ಹಾಗೂ ಇನ್ನಿತರ ವಸ್ತುಗಳನ್ನು ಸಣ್ಣ ಪ್ಲಾಸ್ಟಿಕ್ ಸೇಶೆಗಳಲ್ಲಿ ಮಾರುವುದನ್ನು ನಿಷೇಧಿಸಬೇಕು ಎನ್ನುವುದು ಜನಾಭಿಪ್ರಾಯ.
- ಪ್ರತಿ ವಾರ್ಡ್‌ಗೆ ಮತ್ತು ಪ್ರತಿ ವಿದ್ಯಾಸಂಸ್ಥೆಗೆ ಕನಿಷ್ಠ ತಲಾ ಒಂದು ಪ್ಲಾಸ್ಟಿಕ್ ಸೌಧ ಹೊಂದುವುದನ್ನು ಕಡ್ಡಾಯಗೊಳಿಸಬೇಕು.
- ದೂರು ಪೆಟ್ಟಿಗೆ/ಇ–ಮೇಲ್/ಫೋನ್–ಸಹಾಯವಾಣಿ/ಮಾಧ್ಯಮಗಳ ಬಳಕೆ/ಅದಾಲತ್ ಇತ್ಯಾದಿಗಳ ಅಳವಡಿಕೆ ಅಗತ್ಯ.

- ಪ್ರತೀ ಜಿಲ್ಲೆಗೆ ಒಂದು ತ್ಯಾಜ್ಯ ಸಂಶೋಧನಾ/ ತರಬೇತಿ/ಅಧ್ಯಯನ ಕೇಂದ್ರದ ಅವಶ್ಯಕತೆ. ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ತ್ಯಾಜ್ಯ ನಿರ್ವಹಣೆಯ ಅನುಷ್ಠಾನದ ಮೇಲ್ವಿಚಾರಣೆಗೆ ಜಿಲ್ಲಾ ಮಟ್ಟದ ವಿಚಕ್ಷಣ ದಳದ ಅವಶ್ಯಕತೆಯಿದೆ.
- ತ್ಯಾಜ್ಯ ಮರು ಬಳಕೆಯನ್ನು ಹೆಚ್ಚಿಸಲು ಮತ್ತು ವಿಭಜನೆಗೆ ಪ್ರೋತ್ಸಾಹಿಸಲು ಗುಜರಿ ವಸ್ತುಗಳ ಬೆಲೆ ನಿಗದೀಕರಣ ಮಾಡಬೇಕು., ಗುಜರಿ ವ್ಯಾಪಾರಿಗಳನ್ನು ಸಂಘಟಿಸುವುದು ಮತ್ತು ಅವರಿಗೆ ಪರವಾನಿಗೆ ಪತ್ರ ನೀಡುವುದು, ಮರುತ್ಪಾದನಾ ಘಟಕಗಳಿಗೆ ಸಹಾಯಧನ ನೀಡುವುದು, ತೆರಿಗೆ ವಿನಾಯಿತಿ ನೀಡುವುದು ಇತ್ಯಾದಿ ಅಗತ್ಯವಾಗಿದೆ.
- ತ್ಯಾಜ್ಯ ವಿಲೇವಾರಿಯ ವಿಕೇಂದ್ರೀಕರಣದ ಅಗತ್ಯ ಅಧ್ಯಯನದಲ್ಲಿ ಕಂಡು ಬಂದಿರುವುದರಿಂದ ಪ್ರತೀ ಸ್ಥಳೀಯ ಸಂಸ್ಥೆಯ ವ್ಯಾಪ್ತಿಯಲ್ಲಿ ಕನಿಷ್ಠ ಎರಡು ತ್ಯಾಜ್ಯ ವಿಲೇವಾರಿ/ಭೂಭರ್ತಿ/ ರಾಶಿ ಹಾಕುವ ಘಟಕಗಳನ್ನು ಸ್ಥಾಪಿಸಬೇಕು. ಇದರಿಂದ ತ್ಯಾಜ್ಯ ಸಾಗಾಟ ವೆಚ್ಚಗಳು ಕಡಿಮೆಯಾಗುವುದರ ಜೊತೆಗೆ ವೈಜ್ಞಾನಿಕವಾಗಿ ನಿರ್ವಹಣೆ ಮಾಡಲು ಸಾಧ್ಯ. ಸಾಮಾಜಿಕ ನ್ಯಾಯದ ದೃಷ್ಟಿಯಿಂದಲೂ ಇದರ ಅವಶ್ಯಕತೆಯಿದೆ.

## 7.3 ಸಂಶೋಧನಾ ಅವಕಾಶಗಳು

ತ್ಯಾಜ್ಯ ನಿರ್ವಹಣೆಯ ಸಮಸ್ಯೆ, ಸವಾಲು, ಸಾಧ್ಯತೆಗಳನ್ನು ಒಂದೇ ಅಧ್ಯಯನದಿಂದ ಅರಿಯು ವುದು ಕಷ್ಟ ಎಂಬುವುದನ್ನು ನಾವು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತೇವೆ. ತ್ಯಾಜ್ಯ ನಿರ್ವಹಣಾ ಕ್ಷೇತ್ರದಲ್ಲಿ ಇನ್ನಷ್ಟು ಸಂಶೋಧನೆಗಳು/ಅಧ್ಯಯನಗಳು ಆಗಬೇಕಾಗಿವೆ. ಇದು ಬಹಳ ವಿಸ್ತಾರವಾದ ಕ್ಷೇತ್ರವಾಗಿದ್ದು, ರಸಾಯನಶಾಸ್ತ್ರ, ಇಂಜಿನಿಯರಿಂಗ್, ಹವಾಮಾನ, ಆರೋಗ್ಯ ಸಹಿತ ವೈಜ್ಞಾನಿಕ ಸಂಶೋಧನೆಗಳಿಗೂ ವಿಪುಲ ಅವಕಾಶವಿದೆ. ಹಾಗೆಯೇ ಹಲವಾರು ಸಾಮಾಜಿಕ ಮತ್ತು ಆರ್ಥಿಕ ದೃಷ್ಟಿಕೋನಗಳಿಂದಲೂ ಸಂಶೋಧನೆಗಳನ್ನು ನಡೆಸಲು ವಿಪುಲ ಅವಕಾಶಗಳಿವೆ. ಸಮಾಜೋ-ಆರ್ಥಿಕ ವಿಷಯಗಳಲ್ಲಿ ಸಂಶೋಧನೆಗೆ ಯೋಗ್ಯವಾದ ಕೆಲವು ಕ್ಷೇತ್ರಗಳನ್ನು ಈ ಅಧ್ಯಯನವು ಗುರುತಿಸಿದೆ. ಅವುಗಳೆಂದರೆ:

- ಆರೋಗ್ಯ ಮತ್ತು ಪರಿಸರದ ದೃಷ್ಟಿಯಲ್ಲಿ ಘನತ್ಯಾಜ್ಯ ನಿರ್ವಹಣೆಯ ಪಾತ್ರ.
- ತ್ಯಾಜ್ಯ ನಿರ್ವಹಣಾ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವ ಪೌರಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ.
- ಗುಜರಿ ಹೆಕ್ಕುವವರು ಮತ್ತು ವ್ಯಾಪಾರಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ.

